# ಗೀತೆಯಲ್ಲಿ ಏನಿದೆ?

## ಎರಡನೇ ಭಾಗ

ಉಪಾಸನಾಕಾಂಡ (ಭಕ್ತಿಯೋಗ)

(೭ ರಿಂದ ೧೨ ಅಧ್ಯಾಯಗಳು)

ನಾರಾಯಣ



ಮಾರಾಟದ ಪೂರ್ಣಾಧಿಕಾರಿಗಳು

**ವಿಚಾರ ಸಾಹಿತ್ಯ, ಲಿಮಿಟೆಡ್**

ಬಳೇಪೇಟೆ, ಬೆಂಗಳೂರು ೨

# ಶ್ರೀಮದ್ಭಗವದ್ಗೀತಾ

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು
ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀ ಕೃಷ್ಣಾರ್ಜುನಸಂವಾದೇ
* * * ಯೋಗೋ ನಾಮ * * * ಅಧ್ಯಾಯಃ

ಎಂಬುದಾಗಿ ಪ್ರತಿ ಅಧ್ಯಾಯದ ಕೊನೆಯಲ್ಲೂ—ಶ್ರೀಮದ್ಭಗವದ್ಗೀತೆಯು ಉಪನಿಷತ್ತು ಎಂದೂ, ಬ್ರಹ್ಮವಿದ್ಯೆಎಂದೂ, ಯೋಗಶಾಸ್ತ್ರವೆಂದೂ, ಸ್ನೇಹಪರನಾದ ಶ್ರೀಕೃಷ್ಣನು ಕೇವಲ ಪ್ರೀತಿಯಿಂದ ಅರ್ಜುನನಿಗೆ ಸಂವಾದರೂಪದಲ್ಲಿ ಹೇಳಿದನೆಂದೂ ಉಲ್ಲೇಖವಿದೆ.

ಗೀತೆಯು ಉಪ+ನಿಷತ್—ಹತ್ತಿರಕ್ಕೆ ಸೇರಿಸುತ್ತದೆ; ಬ್ರಹ್ಮನ, ಆತ್ಮನ ಸನ್ನಿಧಿಗೆ ಒಯ್ಯುತ್ತದೆ. ವೇದಾಂತವಾದ ಉಪನಿಷತ್ತುಗಳಂತೆಯೇ ಇದೂ ಸರ್ವಶಕ್ತಿಯುಳ್ಳದ್ದಾಗಿದೆ. ಬ್ರಹ್ಮವಿದ್ಯಾಯಾಂ ಎಂದರೆ ಬ್ರಹ್ಮವಿಷಯಕವಾದ ಪರಾವಿದ್ಯೆಯನ್ನು ಒಳಗೊಂಡಿದೆ; ಮುಖ್ಯ ತತ್ತ್ವಜ್ಞಾನವಾಗಿದೆ. ಯೋಗಶಾಸ್ತ್ರೇ—ಪಡೆಯಬೇಕಾದ ಜ್ಞಾನವಿದ್ಯೆಯಾಗಿದೆ.

ಹೀಗೆಂದು ಪ್ರತಿ ಅಧ್ಯಾಯದ ಕೊನೆಯಲ್ಲೂ ವ್ಯಾಸರು ಒತ್ತಿ ಹೇಳಿದ್ದಾರೆ. ಇದು ಒಣ ವೇದಾಂತವಲ್ಲ; ಅಗತ್ಯವಾಗಿ ಹೊಂದಬೇಕಾದ ತಿಳಿವಳಿಕೆ: ಮುಖ್ಯವಾದ ಬ್ರಹ್ಮಾತ್ಮಜ್ಞಾನವನ್ನು ಒಳಕೊಂಡು, ಮಾರ್ಗದರ್ಶಿಯಾಗಿ, ಗುರಿ ಮುಟ್ಟಿಸುತ್ತದೆಂದು ಒತ್ತಿ ಹೇಳಿದ್ದಾರೆ.

# ಗೀತೆಯೊಳಗಿನ ವಿಷಯ

ಅಧ್ಯಾಯ ೧ ರಿಂದ ೬ :

**ಕರ್ಮಕಾಂಡ**

**'ತ್ವಂ' ಪದಾರ್ಥ ವಿವರಣೆ**

೧. ಅರ್ಜುನ ವಿಷಾದಯೋಗ
೨. ಸಾಂಖ್ಯಯೋಗ
೩. ಕರ್ಮಯೋಗ
೪. ಜ್ಞಾನಯೋಗ
೫. ಕರ್ಮಸಂನ್ಯಾಸಯೋಗ
೬. ಧ್ಯಾನಯೋಗ

ಅಧ್ಯಾಯ ೭ ರಿಂದ ೧೨ :

**ಉಪಾಸನಾಕಾಂಡ**

**'ತತ್' ಪದಾರ್ಥನಿರೂಪಣೆ**

೭. ಜ್ಞಾನವಿಜ್ಞಾನಯೋಗ
೮. ಅಕ್ಷರಬ್ರಹ್ಮಯೋಗ
೯. ರಾಜವಿದ್ಯಾರಾಜಗುಹ್ಯ ಯೋಗ
೧೦. ವಿಭೂತಿಯೋಗ
೧೧. ವಿಶ್ವರೂಪದರ್ಶನಯೋಗ
೧೨. ಭಕ್ತಿಯೋಗ

ಅಧ್ಯಾಯ ೧೩ ರಿಂದ ೧೮ :

**ಜ್ಞಾನಕಾಂಡ**

**'ಅಸಿ' ವಿವರಣೆ**

**ತತ್, ತ್ವಂ ಪದಾರ್ಥೈಕ್ಯ**

**ರೂಪಾರ್ಥ**

**ಸಂಯುಗ್ಧಿವಿವರಣೆ**

೧೩. ಕ್ಷೇತ್ರಕ್ಷೇತ್ರಜ್ಞವಿಭಾಗ ಯೋಗ
೧೪. ಗುಣತ್ರಯವಿಭಾಗಯೋಗ
೧೫. ಪುರುಷೋತ್ತಮಯೋಗ
೧೬. ದೈವಾಸುರ ಸಂಪದ್ವಿಭಾಗ ಯೋಗ
೧೭. ಶ್ರದ್ಧಾತ್ರಯ ವಿಭಾಗಯೋಗ
೧೮. ಮೋಕ್ಷಸನ್ಯಾಸಯೋಗ

# ಉಪಾಸನಾಕಾಂಡ ವಿವರ

## ವಿಷಯ ಒಳಗೊಂಡಿರುವ ೭-೧೨ ಅಧ್ಯಾಯಗಳು

ಮಧ್ಯಮ ಷಡಾಧ್ಯಾಯಗಳು–ಉಪಾಸ್ಯನಿಷ್ಠಾ, ತತ್ಪದಾರ್ಥನಿಷ್ಠಾ, ಭಗವದ್ಭಕ್ತಿನಿಷ್ಠಾವರ್ಣನ, ಭಗವಾನ್ ಪರಮಾನಂದ–ತತ್‌ಪದಾರ್ಥ ವಿವರಣೆ.

# ಪ ರಿ ಚ ಯ

ಭಗವದ್ಗೀತೆಯ ಮಧ್ಯದ ಆರು ಅಧ್ಯಾಯಗಳು, "ಉಪಾಸನಾ" ಕಾಂಡವೆಂದೂ, ತತ್ಪದಾರ್ಥ ನಿಷ್ಠಾ, ಭಗವದ್ಭಕ್ತಿ ನಿಷ್ಠಾವರ್ಣನೆ, ಭಗವನ್ ಪರಮಾನಂದ, ತತ್‌ಪದಾರ್ಥ ವಿವರಣೆಯೆಂದು ಭಾವಿಸಲಾಗಿದೆ; ಅಂತೇ ಭಾಗಿಸಲಾಗಿದೆ.

ಈ ಕಾಂಡದಲ್ಲಿ ಬ್ರಹ್ಮನ್ಯಾವುದು, ಅದರ ಲಕ್ಷಣ, ಯಾವ ನಿಷ್ಠೆಯಿಂದ ಬ್ರಹ್ಮನ ತಿಳಿವಾಗುತ್ತೆ, ರಾಜವಿದ್ಯಾ ರಾಜಗುಹ್ಯವಾದ ಪರಬ್ರಹ್ಮ ಸ್ವರೂಪ, ಬ್ರಹ್ಮ ಸೃಷ್ಟ್ಯಾದಿ ಸಾಕ್ಷಿತ್ವಾದಿ ಧರ್ಮ ಉಪಾಸನಾ ಭೇದ, ಮಂದ ಪ್ರಜ್ಞೆಯ ಮುಮುಕ್ಷುಗಳ ಉಪಾಸನಾ ಸಿದ್ಧಿಗಾಗಿ, ಆ ಉಪಾಸನಾ ಫಲ ಭಕ್ತಾನುಗ್ರಹಕವಾಗಿ ಪರಮಾತ್ಮನ ವಿಭೂತಿಗಳು-ಶ್ರೇಷ್ಠ ಪ್ರದರ್ಶಿತ ವಸ್ತು ಗ್ರಾಹ್ಯ, ಅಖಿಲ ಸೃಷ್ಟಿಯ ಕ್ರಿಯಾಪ್ರಕಾಶದ ವಿಶ್ವರೂಪದರ್ಶನ, ಸಗುಣ ನಿರ್ಗುಣೋಪಾಸಕರ ತಾರತಮ್ಯ ವಿಶೇಷಣ, ಅವರವರ ಬೇರೆ ಬೇರೆ ಸಾಧನಗಳು—ಇವೆಲ್ಲದರ ವಿವರಣೆಯಿದೆ.

ಉಪಾಸನಾ - ಅಂದರೆ ಉಪ+ಆಸನಾ - ಹತ್ತಿರಕೂಡುವುದು, ಸಾನಿಧ್ಯವೆಂದು ಗ್ರಹಿಸಬಹುದು. ಈ ಭಗವತ್ ಸಾನಿಧ್ಯಕ್ಕೆ ಉಪಾಸನೆಗೆ, ಉಪಾಸನವಸ್ತು, ಉಪಾಸಕ, ಉಪಾಸನೆ,—ಜ್ಞೇಯ, ಜ್ಞಾನ, ಜ್ಞಾನಿಯೆಂದು, ತ್ರಿಪುಟಿ ಅವಶ್ಯಕ. ಉಪಾಸನಾವಸ್ತು—ಪರಬ್ರಹ್ಮ ಸ್ವರೂಪ, ಉಪಾಸಕ ಭಕ್ತ, ಉಪಾಸನಾ ಭಕ್ತಿ, ಪ್ರತ್ಯೇಕ ಭಾವವಿದ್ದರೇ ಉಪಾಸನೆ ನಡೆವುದು. ಕೇವಲ ನಿರ್ಗುಣ ಬ್ರಹ್ಮನಲ್ಲಿ ಲೀನವಾದ ಜ್ಞಾನಿಗಳಿಗೆ ಈ ಭೇದ ಭಾವವಳಿದು ಈ ಮೂರರ ಪ್ರತ್ಯೇಕವು ಹೋಗಿಬಿಟ್ಟಿರುತ್ತದೆ. ಆದುದರಿಂದ ಉಪಾಸನಾ ಭೇದಗಳಲ್ಲಿ ನಿರ್ಗುಣೋಪಾಸನೆ, ಸಗುಣೋಪಾಸನೆ ಎಂದು ಭಾಗಮಾಡುವುದರಲ್ಲಿ ಅರ್ಥವೇ ಇಲ್ಲಾ. ಸಗುಣೋಪಾಸನೆ ಎಂಬ ಭಾವನೆಯುಲ್ಲಾದರೂ ಉಪಾಸನೆಗೆ ಅರ್ಥವುಂಟು. ಆದರೆ ನಿರ್ಗುಣೋಪಾಸನೆ ಎನ್ನು

ವುದೂ, ನಿರ್ಗುಣ ಬ್ರಹ್ಮೋಪಾಸನೆ ಎನ್ನುವ ಶಬ್ದಗಳಲ್ಲೇ ವಿರುದ್ಧ ಪದಗಳು ಸೇರಿಬಿಟ್ಟಿವೆ. ನಿರ್ಗುಣಬ್ರಹ್ಮವು ಎಂತು ಉಪಾಸನಾ ವಸ್ತುವಾಗಬಲ್ಲದು. ಅವರ ಭಾವನೆಯೇ ಇಲ್ಲ; ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೇ ಗ್ರಹಿಸಲಾರದ ಪರಾತ್ಪರ ವಸ್ತುವಿನ ಸಾನಿಧ್ಯವಾದರೂ ಎಂತು, ಯಾತರಿಂದ ಆದುದರಿಂದ. ಈ ಉಪಾಸನಾಕಾಂಡದಲ್ಲಿ ನಿರ್ಗುಣ ಬ್ರಹ್ಮದ ವಿಷಯವೇ ಬರುವುದಿಲ್ಲಾ. ಏನಿದ್ದರೂ ಭಗವಂತ, ಭಕ್ತ, ಭಕ್ತಿ.

ಅದಕ್ಕೇ ಬ್ರಹ್ಮಸೂತ್ರ ಭಾಷ್ಯದಲ್ಲಿ, "ಸಗುಣ ನಿರ್ಗುಣ ವಿದ್ಯಯೋಃ" ಎಂದೂ, "ಶ್ರವಣಾ ದ್ಯಾವೃತ್ಯಾ ನಿರ್ಗುಣಂ ಬ್ರಹ್ಮ, ಉಪಾಸನಾವೃತ್ತ್ಯಾ ಸಗುಣಂ ವಾ ಬ್ರಹ್ಮ, ಸಾಕ್ಷಾತ್ಕೃತ್ಯ ಜೀವತಃ, ಪಾಪ ಪುಣ್ಯಾಲೇಪಲಕ್ಷಣಾ ಜೀವನ್ಮುಕ್ತಿರಭಿಹಿತಾ।" ಎಂದು ಚತುರ್ಥಾಧ್ಯಾಯ (ಫಲಾಧ್ಯಾಯ) ಪ್ರಥಮಪಾದದ ಸಾರಾಂಶವಿದೆ. ನಿರ್ಗುಣ ಬ್ರಹ್ಮದ ವಿದ್ಯೆಯೇ-ಅರಿವೇ ಹೊರತು, ಉಪಾಸನೆ ಸಾಧ್ಯವಿಲ್ಲಾ. ಆ ಅರಿವು, ಅರಿಯಲಾರದ ಗುಣವೇ ಇಲ್ಲದ ಬ್ರಹ್ಮನೆಂಬ ಒಂದು ನಿರ್ಗುಣ ಬ್ರಹ್ಮದ ಸಂಕೇತವೇ ವಿನಾಃ ಮತ್ತೇನೂ ಇಲ್ಲಾ.

ಅದಕ್ಕೋಸ್ಕರವೇ ಆ ಜ್ಞಾನ ಪರಾಕಾಷ್ಠತೆಗೆ ಹೋಗಲಾರದ "ಮಂದ ಪ್ರಜ್ಞಾ ಮುಮುಕ್ಷುಗಳ ಉಪಾಸನಾ ಸಿದ್ಧಿಗಾಗಿ ಆ ಉಪಾಸನಾ ಫಲ ಭಕ್ತಾನುಗ್ರಹಾಕವಾಗಿ ಪರಮಾತ್ಮನ ವಿಭೂತಿಗಳು"- ಸಗುಣ ಬ್ರಹ್ಮ ಭಾವ. ಮಂದ ಪ್ರಜ್ಞರಾದರೂ ನಮ್ಮಂಥ ಕೆಲವು ಪಾಮರರಿಗೆ ಮುಮುಕ್ಷತ್ವ-ಬಂಧ ವಿಮೋಚನೆಗಾಗಿ ಕಾತುರತೆ ತೀವ್ರವಾಗಿರುತ್ತೆ. ಅಂಥಾ ಭಕ್ತರ, ಅಜ್ಞಾನಿ ಪಾಮರರ ಸಹಾಯಾರ್ಥವಾಗಿ ಉಪಾಸನಾ ಸಿದ್ಧಿಗಾಗಿ, ಉಪಾಸನಾ ಫಲಾನುಗ್ರಹಕ್ಕಾಗಿ, ಈ ಸಗುಣ ಬ್ರಹ್ಮಭಾವ. ಸಗುಣ ನಿರ್ಗುಣಾತೀತನಾದ ಕೇವಲ ನಿತ್ಯ ಶುದ್ಧ ಬುದ್ಧ ಸಚ್ಚಿದಾನಂದನು ಎಂತು, ಏನು, ಹೇಗೆಂದು ಗ್ರಹಿಸಲಾರದ ವಸ್ತುವು, ಸಗುಣ ವಿಭೂತಿಗಳಾಗಿ ಪ್ರಕಟಿತವಾಗಿವೆ. ಮಕ್ಕಳು ಪಾಠ ಕಲಿಯಲು ದಪ್ಪಕ್ಷರ ಚಿತ್ರ, ಆಕಾರ, ಆಟದ ಸಾಮಾನುಗಳಂತೆ, ಅರಿವಿನ ಅರಿವೇ ಇಲ್ಲದ ನಮಗೆ ಈ ಅಖಿಲ ಸೃಷ್ಟಿಯ ಮಾಯಾ ವಿಜೃಂಭ ವಿಶ್ವರೂಪ. ಆ ಸತ್

ಚಿತ್ ಆನಂದ ನಿರ್ಗುಣನು ನಾಮರೂಪವನ್ನು ಹೊಂದಿ ಸಗುಣ ಬ್ರಹ್ಮಾಕಾರನಾಗುವನು. ಇದೇ ಈ ಉಪಾಸನಾ ಕಾಂಡದಲ್ಲಿನ ವಿವರಣೆ, ಆ ಸಗುಣ ಬ್ರಹ್ಮ ಸ್ವರೂಪ ಈ ಜ್ಞಾನೇಂದ್ರಿಯಗಳಿಂದ ಹೇಗೆ ರೂಪಿಸಿ ಕಾಣಲು ಪ್ರಯತ್ನಿಸಬಹುದು, ಈ ಕರ್ಮೇಂದ್ರಿಯಗಳಿಂದ ಆ ಸಗುಣ ರೂಪಿಸಿದ ಸ್ವರೂಪವನ್ನು ಉಪಾಸಿನಬಹುದು, ಮನೋ ಬುದ್ಧಿ ಚಿತ್ತಾಹಂಕಾರಗಳನ್ನು ಅವನಲ್ಲಿ ಪ್ರವೇಶಿಸಿ ಹೇಗೇ ಈ ದ್ವಾರಾ, ನಾನು ನನ್ನದೆನ್ನುವುದೆಲ್ಲಾ ಮರೆತು, ನಾಮ ರೂಪ ದಾಟಿ, ಕೇವಲ ಆ ಸಚ್ಚಿದಾನಂದದಲ್ಲಿ ಲೀನವಾಗಬಹುದೆಂದು ನಿರೂಪಿಸಿದೆ.

ನಾನೂ, ನನ್ನದೂ, ಈ ಸುತ್ತಲಿನ ವಿಶ್ವ, ಹುಟ್ಟಿದೆ, ಇರುತ್ತೆ, ಸಾಯುತ್ತೆ, ಇದರ ಅಸ್ತಿತ್ವಕ್ಕೆ ಶಾಶ್ವತವಿಲ್ಲಾ, ಕಾಣುವುದೆಲ್ಲಾ ಸತ್ಯಲ್ಲಾ, ಮಾಯಾ, ಕ್ಷಣಿಕವೆಂದಾದರೂ, ನಾವು ಅದರಲ್ಲೇ ವ್ಯವಹರಿಸಿ, ವಿಹರಿಸಿ, ನಿತ್ಯ ಜೀವನವನ್ನು ಇರುವತನಕಲಾದರೂ ನಡೆಸಲೇ ಬೇಕಾಗಿದೆ. ಇವುಗಳಿಂದ ತಾವೇ ತಮ್ಮನ್ನೇ ಬೇರ್ಪಡಿಸಿಕೊಂಡು, ನೀರಿನಲ್ಲಿದ್ದರೂ, ನೀರಂಟದೆ ಕಮಲದೆಲೆಯಂತಿರುವ ಕೇವಲ ತತ್ವಜ್ಞಾನಿಗಳು ಕೂಡಾ, ಜೀವಿತ ಕಾಲದಲ್ಲಿ ಈ ಸಂಪರ್ಕ ತಪ್ಪಿಸಿ ಕೊಳ್ಳುವಂತಿಲ್ಲಾ. ಕೇವಲ ಜೀವಾನ್ಮುಕ್ತಾವಸ್ಥೆಯಲ್ಲಿ, ವಿದೇಹಿಗಳಾಗಿ, ಈ ದೇಹದಲ್ಲಿದ್ದರೂ, ದೇಹತಾವಲ್ಲಾ, ಎಂದು ದೇಹಿಗಳಾಗಿ ಬಾಲೋನ್ಮತ್ತ ಪಿಶಾಚಿವತ್ ಚರಿಸುವ ಮಹಾತ್ಮರು ನಮ್ಮ ಕಣ್ಣಿಗೆ ಬೀಳುವುದಿಲ್ಲಾ, ಬಿದ್ದರೂ, ಪ್ರಪಂಚಿಕರು ಗಮನಿಸುವುದೂ ಇಲ್ಲಾ. ಅವರ ಪ್ರಪಂಚವೇ ಬೇರೆ. ಅವರು ಇಹದಲ್ಲಿ ವಾಸಿಸಿದರೂ ಪರದ ಪ್ರಜೆಗಳು. ಅವರಾತ್ಮ ದೇಹ ವಾಸಿಯಾದರೂ, ಪರಾತ್ಪರದಲ್ಲಿ ಲೀನವಾಗಿದ್ದಾರೆ.

ಮಿಕ್ಕವರೆಲ್ಲಾ ಕೆಳ ಅಂತಸ್ತಿನವರು. ಅಂತಗಳೆಷ್ಟೋ. ಅವರೆಲ್ಲರ ಉದ್ಧಾರಕ್ಕಾಗಿ, ಮಾರ್ಗಕ್ಕಾಗಿ ಸಗುಣೋಪಾಸನೆ. ಇದೇ ಈ ನಮ್ಮ ಗೀತೆಯ ಸೊಗಸು; ಅದರಲ್ಲಿನ ಉಪದೇಶದ ವೈಶಿಷ್ಟ್ಯ. ಯಾವಾಗಲೂ "ಪಾಪಯೋನಯಃ" ಪಾಪ ಕಾರಣ ಉದ್ಭವ ಜೀವಿಗಳ, ಅಜ್ಞಾನಿಗಳ ಶ್ರೇಯಸ್ಸಿಗಾಗಿ, ಅವರನ್ನು ಮರೆಯದೆ, ಎಷ್ಟೋ ಪಂತಗಳಲ್ಲಿರುವ, ವಿವಿಧ ಅಂತಸ್ಥಿನ ಎಲ್ಲಾ ಸಾಧಕರಿಗೂ ಸಾಧನೋಪಾಯವಾಗಿ ಉಪ

ದೇಶ. ಇರುವ ಅಂತಸ್ತಿನಿಂದ ಜಾರದಂತೆ ಜಾಣ್ಮೆ, ಮೇಲಿರುವ ಹಂತಕ್ಕೇ ರಲು ಉಪಾಯ, ಒಂದು ಸಾಧ್ಯವಾಗದಿದ್ದರೆ, ಒಂದು ಮಾರ್ಗದಲ್ಲಡ ಚಣೆಯಾದರೆ ಇನ್ನೊಂದು ದಾರಿ, ಅಶಕ್ತರಿಗೆ, ಹೆದರಿದವರಿಗೆ, ಅನುಮಾನಗ್ರಸ್ತರಿಗೆ ಧೈರ್ಯ ಎಲ್ಲಾ ಅಡಕವಾಗಿದೆ. ಮಾನವ ಜನ್ಮ ಸಂಪತ್ತಿನಲ್ಲೇ, ಅವನ ಪವಿತ್ರತೆಯನ್ನು ಮರೆತು, ಕೇವಲ ಪಶುವೃತ್ತಿ ಗಳಿಗೆ ಬೀಳದೆ, ಮಾನವೀಯತೆಯನ್ನು ಮೊದಲು ಕಾಪಾಡಿಕೊಂಡ ರಲ್ಲವೇ, ಆಮೇಲೆ ಮಾನುಷ ಪ್ರಯತ್ನತೆಯಿಂದಲೇ "ದೈವಿ ಸಂಪತ್ತನ್ನು ಸಂಪಾದಿಸಲು ಪ್ರಯತ್ನಕ್ಕಾದರೂ ಆಸ್ಪದ, ಸಂಪಾದಿಸುತ್ತಾ ಹಂತ ವೇರುತ್ತಾ ಇಹದಲ್ಲೇ ಕೈಲಾಸವನ್ನು ಕಟ್ಟಿ, ಈ ಜೀವನವನ್ನೇ ಸ್ವರ್ಗ ವಾಗಿ ಕಲ್ಪಿಸಲೂ ಸಾಧ್ಯ–ಈ ಉತ್ತೇಜನವಿದೆ ಗೀತೆಯಲ್ಲಿ.

ಈ ಸೃಷ್ಟಿಯು ಮಾಯಾಜಾಲವಾದರೂ, ಕ್ಷಣಿಕವಾದರೂ, ಇದರಲ್ಲಿ ನಮಗೆ ಒಂದು ಜೀವಿತ ಅವಕಾಶವಿದೆ. ಅಲೆಗಳು ಎಷ್ಟೇ ಕ್ಷಣಿಕವಾದರೂ, ಹುಟ್ಟಿ, ಆಡಿ ಹೋಗುವವಾದರೂ, ಅದರಡಿ, ಅಗಾಧವಾದ ನಿಶ್ಚಲ, ಗಾಂಭೀರ್ಯ, ಸ್ಥಿರ ಸಮುದ್ರವಿದೆ. ಅಂತೇ ಈ ಸೃಷ್ಟಿಯ ಅಡಿಪಾಯ ವಾಗಿ ಭದ್ರವಾಗಿ, ಯಾವುದರಲ್ಲೇ ಹುಟ್ಟಿ, ಆಡಿ, ಹೋಗುವುದೋ ಅದೇ ಬ್ರಹ್ಮವು ಸತ್, ಚಿತ್, ಆನಂದವಾಗಿದೆ. ಈ ಸೃಷ್ಟಿ ಇರುವ ವರೆಗೆ, ನಡೆಯುತ್ತಿರುವಾಗ ಒಂದು ನಿಯಮ, ನ್ಯಾಯವಿದೆ. ಅದರಂತೆಯೇ ಧಾವಿಸಿದೆ. ಒಂದು ನಿಯಮ, ನ್ಯಾಯವಿರುವಾಗ ಅದರ ಪಾಲನೆಗೆ ಹೇಗೆ ಒಬ್ಬ ನ್ಯಾಯಾಧೀಶನಿರುವನೋ, ಅಂತೇ ಅಂತರ್ಯಾಮಿಯಾಗಿ, ಈ ನಿಯಮ ನ್ಯಾಯಗಳನ್ನು ಪಾಲಿಸುತ್ತಿರುವ ಸೃಷ್ಟಿಸಿದ ಸ್ವಾಮಿಯಿದ್ದಾನೆಂಬೇ ನಮ್ಮ ಸನಾತನ ಧರ್ಮದ ನಂಬಿಕೆ.

ಶ್ರೀ ರಾಮಕೃಷ್ಣರು ಒಂದಾವರ್ತಿ ವಿವೇಕಾನಂದರನ್ನು "ಪರಮಾತ್ಮನು ಅಮೃತ ಸಿಂಧುವಿನಂತೆ, ನೀನು ಅದರಲ್ಲಿ ಮುಳುಗಿ ತೇಲಿ ತೃಪ್ತನಾಗ ಲಿಚ್ಛಿಸುವುದಿಲ್ಲವೇ? ಒಂದು ಪಾತ್ರೆಯ ತುಂಬ ಸಕ್ಕರೆ ಪಾಕವಿದ್ದು ನೀನು ಒಂದು ನೊಣವಾದರೆ, ನಿನಗೆ ಪಾಕಭೋಗಾಶೆಯಾದರೆ, ನೀನು ಎಲ್ಲಿ ಕುಳಿತು ಅಮೃತ ಪಾನಮಾಡುವೆ?" ಎಂದು ಕೇಳಿದರು. ನಾನೊಂದಂಚಿ ನಲ್ಲಿರುವೆನು ಇಲ್ಲವಾದರೆ ನನ್ನಾಳತಪ್ಪಿ ನಾ ಅದರಲ್ಲೇ ಬಿದ್ದು ಮುಳುಗಿ

ಬಿಡುವೆನೆಂಬ ಹೆದರಿಕೆ" ಎಂದರು ವಿವೇಕಾನಂದರು. ಆಗ ಭಗವಾನರು- "ಕಂದಾ, ಪರಮಾತ್ಮನ ಕಡಲಿನಲ್ಲಿ ಧುಮುಕಿ ಮುಳುಗಿದರೆ, ಸಾವಿನ ಹೆದರಿಕೆಯಿಲ್ಲವೆನ್ನುವುದು ಮರೆತಿರುವೆ. ಸಚ್ಚಿದಾನಂದ ಸಾಗರವು ಅಮೃತ ಸಿಂಧುವು, ಅದು ಮೃತ್ಯುವಿಗೆಡೆಯಿಲ್ಲ, ಸತತ ಜೀವನಧಾರೆ. ಆದ್ದರಿಂದ ದೈವಭಕ್ತಿಯಲ್ಲಿ ನೀನು ಅತಿಕ್ರಮಿಸುವೆಯೆಂದು, ಮೂಢರಂತೆ ಭಾವಿಸಬೇಡ"ವೆಂದರು. ಈ ರಹಸ್ಯವನ್ನೇ ಗೀತೆಯು ಭಗವದುಪಾಸನೆ ಯಲ್ಲಿ ಒತ್ತಿ ಹೇಳಿವೆ. ಅಜೀರ್ಣವಾಗದಂತೆ, ಅಪಾಯವಾಗದಂತೆ ಸೇವಿಸಬಹುದಾದ ವಸ್ತುವೆಂದರೆ ಅಪಾರವಾದ ಅತಿಮಧುರವಾದ ಪರಮಾತ್ಮನ ಸಚ್ಚಿತಾನಂದ ಮಧು ಒಂದೇ. ಎಷ್ಟೇ ಬೇಕಾದರೂ ಆಸಕ್ತಿ ಯಿಂದ ಉಪಾಸಿಸಬಹುದು.

ನೀನೂ ಮಧುವೇ ಆಗಿ, ಪರಮಾತ್ಮನೂ ಮಧುವಾದರೆ ನೀನು ಅದನ್ನು ಸೇವನೆ ಮಾಡಲೆಂತು ಸಾಧ್ಯ ಎಂದು "ಅಹಂ ಬ್ರಹ್ಮಾಸ್ಮಿ, ತತ್ವಂ ಅಸಿ ಅಯಂ ಆತ್ಮಾ ಬ್ರಹ್ಮಾ" ಮುಂತಾದ ಮಹಾವಾಕ್ಯಗಳಿಂದ ಅದ್ವೈತ ತತ್ವ ನಿರ್ಣಯವಾಗಿ ತಾನೂ, ಪರಮಾತ್ಮನೂ ಒಂದೇ ಆದರೆ ಉಪಾಸನೆಯೆಂತು ಸಾಧ್ಯವೆಂದು ದ್ವೈತಿಗಳು, ಭಕ್ತರು ಕೇಳುತ್ತಾರೆ. ಈ ಉಪಾಸನೆ, ಭಗವದ್ಭಕ್ತಿ ಎಲ್ಲಿ ಕೈ ತಪ್ಪಿ ಬಿಡುತ್ತದೋ ಎಂದು, ಸಾರೂಪ್ಯವನ್ನು ಸಾಧನೆಯ ಕೊನೆಯ ಮೆಟ್ಟಲನ್ನು ನಿರಾಕರಿಸಿದ ಭಕ್ತರೂ ಇದ್ದಾರೆ. ಸಾನಿಧ್ಯವೇ ಸಾಕು, ಸದಾ ನಿನ್ನ ಸಮಾಗಮ, ಸಾನಿಧ್ಯದಲ್ಲೇ ಸೇವಾಭಾಗ್ಯ ಕೊಡು, ನಿನ್ನಿಂದಗಲಿ ವಿರಹ ತಾಪ ಸೈರಿಸಲಾರೆ ಎಂದು ಬೇಡಿದ್ದಾರೆ. ಉತ್ಪಾಲದೇವನು "ಭಕ್ತಿ ಲಕ್ಷ್ಮೀ ಸಮೃದ್ಧಾನಾಂ। ಕಿಮನ್ಯದುಪಯಾಚಿತಮ್। ಏತಯಾವಾದರಿದ್ರಾಣಾಂ ಕಿಮನ್ಯದುಪಯಾಚಿತಮ್ ॥"—ಭಕ್ತಿ ಲಕ್ಷ್ಮಿಯು ಸಮೃದ್ಧಿಯಾಗಿರು ವಾಗ ಇನ್ನೇನನ್ನು ಯಾಚಿಸುವುದಿದೆ, ಅದೇ ಇಲ್ಲದ ದಾರಿದ್ರ್ಯದಲ್ಲಿ, ಇನ್ನೇನನ್ನು ಯಾಚಿಸುವುದಿದೆ, ಭಕ್ತಿಯೇ ಭಕ್ತನ ಸದಾ ಯಾಚನೆ, ಅಂದಿದ್ದಾರೆ. ಅದೊಂದಿದ್ದರೆ ಸರ್ವ ಸಂಪತ್ತೂ, ಉಪಾಸನಾ. ಶ್ರೀ ರಾಮಾನುಜರು ಗದ್ಯತ್ರಯದಲ್ಲಿ "ತವಾನುಭೂತಿ ಸಂಭೂತ ಪ್ರೀತಿಕಾರಿ ತದಾ ಸತಾಂ । ದೇಹೀ ಮೇ ಕೃಪಯಾನಾಥ, ನಜಾನೇ ಗತಿಮನ್ಯಥಾ ॥"

ನಿನ್ನ ಅನುಭೂತಿಯಿಂದುಂಟಾಗಿರುವ ಪ್ರೀತಿಗೆ ಬೇಕಾಗಿರುವ ನಿನ್ನ ದಾಸ್ಯ ಸೇವೆಯನ್ನು ಕೃಪೆಯಿಂದ ಅನುಗ್ರಹಿಸು, ನಾಥ, ನನಗೆ ಇನ್ಯಾವ ಗತಿಯೂ ತಿಳಿಯದು-ಎಂದು ಬೇಡಿದ್ದಾರೆ. ಹಲಾಯುಧನು, ಶಿವ ಪಂಚಸ್ತವಿಯಲ್ಲಿ "ಬಂಧಚ್ಛೇದಾದಿಹ ತನುಬೃತಾಂ ಯತ್ತ್ವಯಾ ಸಾಕ ಪೈಕ್ಯಂ । ಸಾಚೇನ್ಮುಕ್ತಿಃ ಶಿವಕಿಮನಯಾ ಯಾತು ಯದ್ವಾಸ್ಥ ಕೂಪಂ। ತ್ವಂ ಮೇ ಸ್ವಾಮಿ, ಭವದನುಚರಃ ಶರ್ವ ಯತ್ಸರ್ವದಾಹಂ। ತಿದ್ಧಿ ಶ್ಲಾಘ್ಯಂ ಸ್ವಪತಿ ಪದವೀಂ ಕಾಮಯನ್ತೇ ನ ಭೃತ್ಯ ॥"—ಇಹ ಬಂಧನ ಛೇದನದಿಂದ ನಿನ್ನೊಡನೈಕ್ಯವಾಗುವುದೇ ಮನುಷ್ಯರಿಗೆ ಮುಕ್ತಿಯಾದರೆ, ಶಿವಾ, ಅದೇಕೆ ಬೇಕು, ಹಾಳುಭಾವಿಗೆಸೆ. ನೀನು ನನ್ನ ಸ್ವಾಮಿ, ಸರ್ವದಾ ನಾನು ನಿನ್ನ ಸೇವಕ (ಅನುಚರ-ಅನುಸರಿಸಿ ನಡೆವನು) ಇದೇ ಶ್ಲಾಘ್ಯವಾದುದು. ಸ್ವಪತಿಯು, (ಸ್ವಂತ ಸ್ವಾಮಿ) ಪದವಿಯನ್ನು ಭೃತ್ಯ (ಸೇವಕ,ನು ಯಾವಾಗಲೂ ಕಾಮಿಸು ವುದಿಲ್ಲಾ - ಎಂದು ಮುಕ್ತಿಪದವಿಯನ್ನೇ ಅಲ್ಲಗಳೆದು, ಭಗವಂತನ ಅನನ್ಯ ಸೇವೆಯನ್ನೇ ಯಾಚಿಸಿದ್ದಾನೆ. ಪ್ರತ್ಯೇಕ ವ್ಯಕ್ತಿತ್ವದಿಂದ ಭಗವದುಪಾಸನೆಯ ಆನಂದವನ್ನೇ ಮೋಕ್ಷಕ್ಕಧಿಕವಾಗಿ ಭಾವಿಸಿದ್ದಾರೆ. ಆದರೆ ನಾವು ಹೊಸದಾಗಿ ಅಮೃತವಾಗಬೇಕಾದುದೇ ಇಲ್ಲಾ, ಸೇರ ಬೇಕಾದುದೇ ಇಲ್ಲ ಅಮೃತಸಿಂಧುವಿನಲ್ಲಿ, ಆಗಲೇ ಅಮೃತ ಬಿಂದುಗಳು ನಾವು. ಶಿವನ ಕಿಂಚಿತ್ ಕಿಡಿಗಳು (Chips of the Old block) ಅವರರಿವಾಗಬೇಕಷ್ಟೆ. ಅರಿವಾದೊಡನೆಯೇ ಒಂದಾಗುವೆವು, ಪ್ರತ್ಯೇಕ ಭಾವವಳಿವುದು. ಇರುವ ನೈಜಸ್ಥಿತಿಯೇ ಅದು ; "ಅಹಂ ಬ್ರಹ್ಮಾಸ್ಮಿ, ಅಯಮಾತ್ಮಾ ಬ್ರಹ್ಮ, ತತ್ವಮಸಿ"ಯ ತಿಳುವನ್ನು ತಿಳಿಯದೆ ಪರದಾಡುತ್ತಿರುವೆವು. ಮಿಕ್ಕೆಲ್ಲಾ ಉಪಾಸನಾ, ಸಾಧನೆ, ಭಕ್ತಿ ಎಲ್ಲಾ ಇರುವುದು ಆ ತಿಳುವಿಗಾಗಿ, ನಿಜಸ್ಥಿತಿಯ ಅರಿವಿಗಾಗಿ.

ಈ ಉಪಾಸನೆಯ ಸೊಗಸೇನೆಂದರೆ, ತಪ್ಪುಹೆಜ್ಜೆ ಹಾಕಿಕೊಂಡು ತನ್ನೆಡೆಗೆ ಧಾವಿಸುತ್ತಿರುವ ಮಗುವನ್ನು ಕಂಡು ತಾಯಿಯು ಔಸರದಿಂದ ಅದರ ಹತ್ತಿರಕ್ಕೆ ಬಂದು ಬಾಚಿ ತಬ್ಬುವಂತೆ, ಭಕ್ತನು ಉಪಾಸನಾ ಪ್ರಯತ್ನದಿಂದ ಒಂದು ಹೆಜ್ಜೆಯನ್ನು ಭಗವಂತನ ಕಡೆಗಿಟ್ಟರೆ,

ಭಗವಂತನು ಭಕ್ತನ ಕಡೆಗೆ ಕೃಪೆಯಿಂದ ಎರಡು ಹೆಜ್ಜೆಯಿಟ್ಟು ಬರುತ್ತಾನೆ–ಮೀಳನಾಸಕ್ತಿಯಿಂದ; ಎಡವರಿನದಂತೆ ಬೀಳದಂತೆ ಆಸರೆಗಾಗಿ ಹತ್ತಿರವಿರಲು.

ಈ ಉಪಾಸನೆಯಲ್ಲಿ ಒಂದು ಹಿರಿಮೆಯಿದೆ. ಭಗವದುಪಾಸನೆಯಿಂದ ಸರ್ವ ಭೂತೋಪಾಸನೆಯೂ ಆಯಿತು, ಸ್ವಶ್ರೇಯಸ್ಸೂ ಆಯಿತು.

ಭಾಗವತದಲ್ಲಿ ಬ್ರಹ್ಮದೇವನು ಹೇಳುವಂತೆ "ಯಥಾಹಿ ಸ್ಕಂಧ ಶಾಖಾನಾಂ ತರೋರ್ಮೂಲಾ ವಿಸೇಚನಂ । ಏವ ಮಾರಾಧನಂ ವಿಷ್ಣೋಃ ಸರ್ವೇಷಾ ಮಾತ್ಮನಶ್ಚಹಿ ॥"—ಗಿಡದ ಮೂಲ (ಬೇರಿಗೆ) ಕ್ಕೆ ನೀರೆರೆದರೆ, ರಂಬೆ, ಎಲೆಗಳಿಗೆಲ್ಲಾ ತಂಪುಂಟಾಗುತ್ತದೆಯೋ ಅದೇ ರೀತಿ ದೇವಾರಾಧನೆಯಿಂದ, ಸರ್ವ ಭೂತಾರಾಧನೆಯೂ, ಆತ್ಮಾರಾಧನೆಯೂ ಆದಂತಾಯಿತು. ಒಂದು ವಿವಾಹ ಆಹ್ವಾನಪತ್ರವನ್ನು ಒಂದು ಅವಿಭಾಗ ಕುಂಟುಂಬದ ಯಜಮಾನನಿಗೆ ಕೊಟ್ಟರೆ, ಹೇಗೆ ಆಹ್ವಾನವನ್ನು ಕುಂಟುಂಬದ ಸಕಲರಿಗೂ ಕೊಟ್ಟಂತಾಯಿತೋ ಹೇಗೆ ಎಲ್ಲರಿಗೂ ಅದು ತಲುಪಿತೋ ಅಂತೇ. ಸರ್ವರಿಗೂ ಸ್ವಂತ ಆತ್ಮನಿಗೂ ಸೇವೆ ತಲುಪಬೇಕಾದರೆ ಎಲ್ಲರ ಯಜಮಾನನಿಗೆ ಸೇವೆ ಸಲ್ಲಿಸಬೇಕು. ಯಜಮಾನನನ್ನು ಬಿಟ್ಟು ಮಿಕ್ಕ ಇತರರಿಗೆ ಆಹ್ವಾನ ಬೇರೆ ಬೇರೆ ಕೊಟ್ಟರೂ, ಯಜಮಾನನ್ನು ಮರೆತುದರಪರಾಧವನ್ನು ತಮಗಾದ ಆಹ್ವಾನದಿಂದ ಅವರು ಕೂಡಾ ಮರೆಯರು ಈ ರೀತಿ ಮೂಲ ತತ್ವೋಪಾಸನೆಯ ಶ್ರೇಷ್ಠತೆಯನ್ನು ಸಕಲ ಮತಗಳೂ ಒಪ್ಪಿವೆ. ಎಲ್ಲ ಮತಗಳೂ ಆ ಮೂಲ ತತ್ವವನ್ನೇ ಒಂದಲ್ಲದೊಂದು ವಿಧದಲ್ಲಿ ಉಪಾಸಿಸುತ್ತಾರೆ. ಉಪಾಸನಾ ವಿಧಗಳಲ್ಲಿ ಕೊಂಚ ವ್ಯತ್ಯಾಸಗಳಿರಬಹುದೇ ಹೊರತು ಮೂಲ ತತ್ವದಲಿಲ್ಲಾ.

ಈ ರೀತಿ ಸರ್ವತತ್ವ ಮೂಲನಾದ ಸ್ವಾಮಿಯ ಉಪಾಸನೆಯಿಂದ ಇತರ ಮತಾವಲಂಬಿಗಳಲ್ಲಿ ಸಹಾನುಭೂತಿಯೂ ಉಂಟಾಗುತ್ತದೆ. ಅವರಿಗೆ ಆ ದೃಷ್ಟಿಕೋಣವನ್ನು ಕೊಟ್ಟು ಆ ಮಾರ್ಗ ದರ್ಶನವನ್ನು ತೋರಿರುವನೂ, ಅವರೂ ಬಂದು ಸೇರಬಯಸಿ ಸೇವಿಸುತ್ತಿರುವುದೂ, ಒಂದೇ ಮೂಲ ತತ್ವವೆಂಬ ಭಾವನೆಯಲ್ಲಿ ಸರ್ವರ ಸೋದರತ್ವ ಬರುತ್ತದೆ.

ಭಕ್ತ್ಯೋಪಾಸಕರು, ಯಾವ ಕಾಲದವರಾಗಲೀ, ದೇಶದವರಾಗಲೀ ಭೇದವೇ ಇಲ್ಲಾ. ಎಲ್ಲರೂ ಒಂದೇ ಪರಮಾತ್ಮನಲ್ಲೈಕ್ಯ.

ಈ ಉಪಾಸನಾಕಾಂಡದಲ್ಲಿನ ಮಹತ್ತರವಾದ ವಿಷಯಗಳನ್ನು ಅತಿ ಭಕ್ತಿ ವಿನಯಗಳಿಂದ ಉಪಾಸಿಸಲು ಪ್ರಯತ್ನಿಸಿದ್ದೇನೆ. ಸ್ವಾಮಿಯ ಅಮೋಘ ವಿಶ್ವರೂಪದರ್ಶನ, ಅಚಲಭಕ್ತಿಗಳ ಅಂಚಿನಲ್ಲೇ ನಿಂತು ಕಂಪಿತ ಹೃದಯದಿಂದ ಅಪಚಾರವಾಗದಂತೆ ತಿಳಿಯಲೆತ್ನಿಸಿದ್ದೇನೆ. ದೇವಾ ನಾನೆಲ್ಲಿಯ ಯಃಕಿಚಿತ್ ಪಾಮರ, ಎಂದು ಹೆಚ್ಚು ಹರಟೆ ಬಳಸಬಾರದೆಂದು ಬೋಧಿತನಾಗಿ ಭಕ್ತರ, ಸಂತರ, ಸಾಧುಗಳು, ಋಷಿಗಳ ಉಪನಿಷತ್ ವಚನಗಳನ್ನೇ ಹೆಚ್ಚಾಗಿ ಉಪಯೋಗಿಸಿ ವಿಷಯ ಗಳು ವಿವರಿಸಲು ಪ್ರಯತ್ನಿಸಿದ್ದೇನೆ. ಅಲ್ಲದೇ ನನ್ನ ತಿಳುವಿಗೆ ತಾನೇ ಅವು ಎಟುಕಬಲ್ಲವೇ? ಅವರ ವಿಸ್ತರಣಾ ಸಾಗರದಲ್ಲೇ ಲೀನವಾಗಿದ್ದೇನೆ. ಎಷ್ಟು ಅವನ್ನು ತಮ್ಮ ಅವಲೋಕನಕ್ಕೆ ತಂದೊಡ್ಡಿದರೂ ಸಾಲದಂತಾ ಗಿದೆ. ಆದರಿಂದ ಬೇಸರವಾಗಬಾರದು. ಓದಿ ಓದಿ ಮನನಮಾಡಿದಷ್ಟೂ ಅವುಗಳಲ್ಲಿನ ರಸ ಜಾಸ್ತಿ, ಸ್ವಾಮಿಯ ಪಾದತೊಳೆದ ಪಂಚಾಮೃತದ ರುಚಿ, ಅವರ ಭಾವಗಳನ್ನೇಲ್ಲಾ ನರಿತೋರಿಪೆಡೆ. ಅವರಮೃತವಾಕ್ಕೇ ಸೇರಿಸಿ ಬರೆದಿದ್ದೇನೆ.

ಈ ಉಪಾಸನಾಕಾಂಡವು ವಿಶ್ವರೂಪದರ್ಶನ ಕೊಟ್ಟು, ಭಕ್ತನ ದಿವ್ಯ ಕಥನದಲ್ಲಿ ಮುಕ್ತಾಯವಾಗಿದೆ. ಭಕ್ತಿಯಿಂದ ವಿಶ್ವದರ್ಶನಮಾಡಿದ ಉಪಾಸಕರಿಗೆ, ಸ್ವಾಮಿಯಧೀನ. ಸ್ವಾಮಿಯು ಹೇಗೆ ಭಕ್ತ ಪರಾಧೀನ ನೆಂದೂ, ಉಪಾಸಕ, ಉಪಾಸನಾ, ಉಪಾಸನ ವಿಷಯ ಬೇರೆ ಬೇರೆಯೇ ಅಲ್ಲವೆಂದೂ, ಭಕ್ತನಿಗೂ ದೇವನಿಗೂ ನಿಕಟಸಂಬಂಧವೆಂದೂ, ಅವರು ಬೇರೆ ಬೇರೆಯೇ ಅಲ್ಲವೆಂದೂ, ಉಪಾಸನದಲ್ಲಿ, ಕರ್ಮ, ಭಕ್ತಿ, ಧ್ಯಾನ ಸಮನ್ವಯವಿದೆಯೆಂದೂ ತೋರಲು ಒಂದು ಸೊಗಸಾದ ಶಿವಶರಣರ ಕಥೆ ಉಲ್ಲೇಖಿಸುತ್ತೇನೆ.

ಬಸವಣ್ಣನವರ ಕಾಲಕ್ಕೆನುಲಿಯ ಚಂದಯ್ಯನೆಂಬ ಶಿವಭಕ್ತನೊಬ್ಬ ನಿದ್ದನು. ನಮ್ಮ ಕನ್ನಡನಾಡನ್ನೂ, ಕನ್ನಡ ಭಾಷೆಯನ್ನೂ ಪವಿತ್ರ ಮಾಡಿದ ಆಗಿನ ಶಿವಶರಣರಲ್ಲೊಬ್ಬನು. ಆತನ ಜೀವನೋಪಾಯ

ಹಗ್ಗಹೊಸೆದು ಮಾರುವುದು, ಆತನ ಆತ್ಮೋಪಾಯ ಅತಿಥಿಸತ್ಕಾರ (ಜಂಗಮ ದಾಸೋಹ) ; ನಿರ್ಜೀವ ಕಲ್ಲು, ಸ್ಥಾವರ ದೇವರ ಪೂಜೆಗಿಂತ, ಜೀವಿತಬಲ್ಲ ಜಂಗಮರ ಸೇವೆಯೇ ಫಲಕಾರಿಯೆಂದು ದೃಢವಾಗಿ ನಂಬಿದ್ದನು. ಅತಿಥಿಯು ಕಾದಿರಬಹುದೆಂದು ಅವಸರದಿಂದ ಒಂದು ದಿನ ನದಿಯಲ್ಲಿ ಸ್ನಾನಮಾಡುತ್ತಿದ್ದಾಗ, ಅವನ ಮನಸ್ಸನ್ನು ಪರೀಕ್ಷಿಸಲೋಸುಗವೋ ಎಂಬಂತೆ ಅವನು ಕಟ್ಟಿದ್ದ ಇಷ್ಟಲಿಂಗವು ಜಾರಿ ನದಿಯಲ್ಲಿ ಬಿದ್ದುಬಿಟ್ಟಿತು. ತಡಕಿದರೆ ಹುಡುಕಿದರೆ ಸಿಕ್ಕದಿದ್ದ ಲಿಂಗವು ಔತುಕೊಂಡಿತೋ, ಕೊಚ್ಚಿಕೊಂಡು ಹೋಯಿತೋ ಅತಿಥಿಯನ್ನು ವೃಥಾ ಕಾಯಿಸುವುದು ಸರಿಯಲ್ಲವೆಂದು ಲಿಂಗವನ್ನೇ ಬಿಟ್ಟು, ಜಂಗಮ ದಾಸೋಹಕ್ಕೆಂದು ಹಾಗೆಯೇ ಔಸರದಲ್ಲಿ ಮನೆಗೆ ಹೊರಟ. ಮನಸ್ಸಿನ ದೃಢ ಸಂಕಲ್ಪವನ್ನು ನೋಡಿ ಮೆಚ್ಚಿ, ನಿರಾಕಾರ ದೇವನು, ಲಿಂಗಾಕಾರ ಬಿಟ್ಟು, ಮನುಷ್ಯಾಕಾರನಾಗಿ, ಆ ಭಕ್ತನನ್ನಗಲಿರಲಾರದೇ, ಅವನನ್ನೇ ಹಿಂಬಾಲಿಸಿ, "ಚಂದಯ್ಯ ನನ್ನನ್ನು ಸ್ವೀಕರಿಸು, ದಮ್ಮಯ್ಯ, ಬಿಟ್ಟು ಹೋಗಬೇಡ" ಎಂದು ಕೇಳಿಕೊಂಡನಂತೆ. ಚಂದಯ್ಯನಿಗೆ ಅತಿಥಿ ಸತ್ಕಾರದ ಔಸರ. ಅದನ್ನು ಮುಗಿಸುವವರೆಗೂ ಕಾದು ಲಿಂಗದೇವನು ಪ್ರಾರ್ಥಿಸುತ್ತಿರಲು, ಕೊನೆಯಲ್ಲಿ ಒಂದು ಪಂಚಾಯತಿಯನ್ನೇರ್ಪಡಿಸಿ, ಹೇಳಿದನಂತೆ "ಕಣ್ಣಿಯಮಾಡಬಲ್ಲರೆ–ಬಾರಾ" ಎಂದು. ನಿರಾಕಾರನಾದ ದೇವನನ್ನು ಲಿಂಗರೂಪದಿಂದ ಆಹ್ವಾಹನೆಮಾಡಿ ಪೂಜಿಸಿದ್ದನಷ್ಟೆ, ಮನುಷ್ಯಾಕಾರದಲ್ಲಿ ಬಂದವನನ್ನು ಇನ್ನು ಊಟಕ್ಕಿಟ್ಟು, ಸಾಕಿ ಸಲಹಬೇಕಲ್ಲ? ಕಾಯುಹೊತ್ತ ಮೇಲೆ ಕಾಯಿಕ ಮಾಡಬೇಡವೇ. ಜೀವನೋಪಾಯಕ್ಕೆ ಕಾಯಕ (ಕಸುಬು) ಮಾಡಲು ಶಕ್ತನಾಗಿ ಒಪ್ಪುವಂತಿದ್ದರೆ ತನ್ನೊಡನೆ ಬಾ, ಮನೆಯಲ್ಲಿರು ಎಂದು ಲಿಂಗದೇವನಿಗೇ ಕಟ್ಟು ವಿಧಿಸಿದನು. ಭಕ್ತ ಪರಾಧೀನ ಸ್ವಾಮಿ ಭಕ್ತನನ್ನೆಂತಗಲಿದ್ದಾನು. ಚಂದಯ್ಯನ ಮನೆಯಲ್ಲಿ ಹಗ್ಗವನ್ನು ಹೊಸೆಯುತ್ತ (ಕರ್ಮ, ಭಕ್ತಿ, ಜ್ಞಾನವೆಂಬ ಮೂರು ನೂಲಿನ ಹಗ್ಗವನ್ನು ಭಕ್ತರಾಸರಿಗೆ ಸಂಸಾರ ಸಾಗರದ ಒದ್ದಾಟದಲ್ಲಿರುವವರಿಗೆ ಆತುಕೊಂಡು ತನ್ನಲ್ಲಿಗೆ ಬರಲುಪಾಯವಾಗಿ) ಅವನ ಭೃತ್ಯನಾಗಿದ್ದನು. ಸ್ವಾಮಿಯ ದಾರಿದ್ರ್ಯ ಜೀವನವನ್ನು ಕಂಡು

ಮರುಗಿದ ಭೃತ್ಯ ಸೇವಕ ಲಿಂಗಸ್ವಾಮಿಯು ಒಂದು ದಿನ ಹೆಗ್ಗವನ್ನು ಮಾರುವುದಕ್ಕೆ ಹೋಗಿ, ಸಾವಿರ ಹೊನ್ನನ್ನು ತಂದು ಚಂದಯ್ಯ ನಿಗೊಪ್ಪಿಸಲು ಹೋದನು.

"ಹಾಗದ ಕಾಯಕವ ಮಾಡಿಕೊಂಡು ಹೆಣವಡ್ಡವ ತಾ ಎಂಬಲ್ಲಿ ಸತ್ಯಕಾಯಕವುಂಟೇ?" ಎಂದು ತರಾಟೆಗೇ ತೆಗೆದುಕೊಂಡ ಧಣಿಯನ್ನು ನೋಡಿ ಲಿಂಗದೇವ ಅವಾಕ್ಕಾದ. "ಸತ್ಯ ಶುದ್ಧ ಕಾಯಕದಲ್ಲಿ ಬಂದ ದ್ರವ್ಯದಲ್ಲಿ ಚಿತ್ತ ವಿಚ್ಛಂದವಾಗದಿರಬೇಕು. ನೇಮದ ಕೂಲಿಯಿಂದಿನ ನಿತ್ಯ ನೇಮದಲ್ಲಿ ಸಂದಿರಬೇಕು, ನೇಮದ ಕೂಲಿಯಬಿಟ್ಟು ಹೇಮ ದಾಸೆಗೆ ಕಾಮಿಸಿ, ದ್ರವ್ಯವ ಹಿಡಿದರೆ ತಾ ಮಾಡುವ ಸೇವೆ ನಷ್ಟವಯ್ಯ! ನಿನ್ನಾಸೆ ವೇಷದ ಪಾಶಕ್ಕೆ ನೀನೇ ಹೋಗು" ಎಂದು ಲಿಂಗದೇವನನ್ನು ಮನೆಬಿಟ್ಟು ಹೊರಡಿಸಿ, ಅಟ್ಟಿಯೋ ಬಿಟ್ಟನಂತೆ. ಸ್ವಾಮಿಯಾವಾಗಲೂ ಕೊಡುಗೈಯ್ಯಲ್ಲಿ ಹಿರಿಮೆಯುಗೈ. ಭಕ್ತನ ಕಿಂಚಿತ್ ಭಕ್ತಿಗೇ ಮೆಚ್ಚಿ ಐಶ್ವರ್ಯವನ್ನು ಹೇರುವನು. ಆ ಸಂಪತ್ತಿನ ಲೋಲಾಪ್ತಿಯಲ್ಲಿ ಭಕ್ತ ಕೆಟ್ಟಾನೆಂದು—ಚಂದಣ್ಣನ ಉಪದೇಶ ಸ್ವಾಮಿಗೆ ಅಂಟಿರಬೇಕು. ಈ ರೀತಿ ಉಪಾಸನೆಯಲ್ಲಿ ಕರ್ಮ, ಭಕ್ತಿ ಜ್ಞಾನ ಸಮನ್ವಯವಿರ ಬೇಕಲ್ಲವೇ.

# ಅಧ್ಯಾಯ ೭ : ಜ್ಞಾನವಿಜ್ಞಾನ ಯೋಗ

## ಯಾವ ನಿಷ್ಠೆಯಿಂದ ಬ್ರಹ್ಮನ ತಿಳಿವಾಗುತ್ತದೆ. ಆ ಬ್ರಹ್ಮ ಯಾವುದು, ಲಕ್ಷಣವಾವುದು, ಇವುಗಳ ನಿರೂಪಣೆ

**ಮಯ್ಯಾಸಕ್ತಮನಾಃ ಪಾರ್ಥ । ಯೋಗಂ ಯುಂಜನ್ಮದಾಶ್ರಯಃ ।**
**ಅಸಂಶಯಂ ಸಮಗ್ರಂ ಮಾಂ । ಯಥಾ ಜ್ಞಾಸ್ಯಸಿ ತಚ್ಛೃಣು ॥೧॥**

"ಉಪಸ್ಯಾನಿಷ್ಠಾ, ತತ್ಪದಾರ್ಥನಿಷ್ಠಾಪಾ, ಮಧ್ಯಮಾ ಷಡಧ್ಯಾಯೀ" ಎಂದು, ೭ ರಿಂದ ೧೨ ರವರಗಿನ ಮಧ್ಯದ ಭಗವದ್ಗೀತೆಯ ಆರು ಅಧ್ಯಾಯಗಳನ್ನು, "ಉಪಾಸನಾಕಾಂಡ, ತತ್ಪದಾರ್ಥ ನಿಷ್ಠೆಯಕಾಂಡ" ವೆಂದು ಕರೆದಿದ್ದಾರೆ. ಅದರಲ್ಲಿ ೭ ನೇ ಅಧ್ಯಾಯವು "ಜ್ಞಾನವಿಜ್ಞಾನ" ಯೋಗವೆಂದು ಕರೆಯಲ್ಪಟ್ಟಿದೆ. "ಮಾಂ ಸಮಗ್ರಂ ಯಥಾ ಜ್ಞಾಸ್ಯಸಿ" ಭಗವಂತನ ಸಮಗ್ರ ಪ್ರಭಾವ ಧೈರ್ಯ, ಕೀರ್ತಿ, ಬ್ರಹ್ಮವರ್ಚಸ್ಸು, ಸಂಪದ ಬ್ರಹ್ಮಜ್ಞಾನ, ದೃಢವೈರಾಗ್ಯ ಸಮುದಾಯವೇ, ಭಗವೆಂದೂ "ಭಗೋ ಸ್ಯಾಸ್ತೀತಿ ಭಗವಾನ್" ಎಂದೂ ಹೇಳಲ್ಪಟ್ಟಿದೆ. ಇಂಥಾ ಭಗವಂತನು–ತತ್ ಪದಾರ್ಥನ್ಯಾವುದೆಂದು ನಿರ್ಣಯಮಾಡುವುದೇ– "ಯಥಾಜ್ಞಾ" ಸರಿಯಾಗಿ ದೃಢಪಡಿಸುವ ಮಾರ್ಗ–ತತ್ ಶೃಣುವನ್ನು ಕೇಳೆಂದ ಭಗವಂತ.

ನನ್ನಲ್ಲಿಯೇ ಆಸಕ್ತಿಯುಳ್ಳ ಚಿತ್ತ (ಮನಸ್ಸು)ವುಳ್ಳ ನನ್ನನ್ನೇ ಆಶ್ರಯಿಸಿ ಯೋಗಧ್ಯಾನಮಾಡುವ ಪಾರ್ಥನೇ, ನನ್ನ ಸ್ವರೂಪವನ್ನು ನಿಸ್ಸಂಶಯವಾಗಿ ಸಂಪೂರ್ಣವಾಗಿ ತಿಳಿಯುವ ವಿಧಾನವನ್ನು ಹೇಳುವೆನು ಕೇಳು. ಅರ್ಜುನನು ಶ್ರೀಕೃಷ್ಣನನ್ನೇ ಸಂಪೂರ್ಣವಾಗಿ ಆಶ್ರಯಿಸಿ ಬಿಟ್ಟಿದ್ದಾನೆ. ಸಂದೇಹಯುಕ್ತನಾಗಿ ಪರಮಾತ್ಮನನ್ನು ಆಶ್ರಯಿಸಿ, ಆಸಕ್ತಿಯಿಂದ ಪರಮಾತ್ಮ ಏನು ಆಜ್ಞಾಪಿಸಿದರದನ್ನು ಮಾಡಲು ಕೋರಿದ್ದಾನೆ. ಅದರಿಂದ "ಅಸಂಶಯಂ" ಮತ್ತು "ಸಮಗ್ರಂ" ಒಟ್ಟಿನ ಮಾರ್ಗವನ್ನು ಬೋಧಿಸಲು ಉದ್ಯುಕ್ತನಾಗಿದ್ದಾನೆ ಸ್ವಾಮಿ. ಕೇಳಲು ಆಸಕ್ತಿಯಿದೆ ಅರ್ಜುನನ ಮನಸ್ಸಿನಲ್ಲಿ, ಅನ್ಯರಾರೂ ಗತಿಯಿಲ್ಲವೆಂದು

ಆಶ್ರಯಿಸಿದ್ದಾನೆ ಅರ್ಜುನ, ಹೇಳಿದಂತೆ ಮಾಡಲು ಸಿದ್ಧನಿದ್ದಾನೆ.— "ಯೋಗಂ ಯುಂಜನ್" ಆದ್ದರಿಂದ ಮಾಡುವ ಉಪದೇಶ ಗ್ರಹಿಸಲು ಹದವಾಗಿರುವ ಪಾತ್ರ ಪಾರ್ಥ.

**ಜ್ಞಾನಂ ತೇಽಹಂ ಸವಿಜ್ಞಾನ-ಮಿದಂ ವಕ್ಷ್ಯಾಮ್ಯಶೇಷತಃ ।**
**ಯಜ್ಜ್ಞಾತ್ವಾ ನೇಹ ಭೂಯೋಽನ್ಯತ್-ಜ್ಞಾತವ್ಯಮವಶಿಷ್ಯತೇ ॥೨॥**

ಇಪದಲ್ಲಿ ಯಾವ ವಿಷಯ ತಿಳಿದ ಮೇಲೆ ಪುನಃ ತಿಳಿಯಬೇಕಾದ ಮತ್ತಾವುದೂ ಉಳಿದಿರುವುದಿಲ್ಲವೋ ಅಂತಹ ವಿಜ್ಞಾನ ಸಹಿತವಾದ ಜ್ಞಾನದ ಸ್ವರೂಪವನ್ನು ಶೇಷವಿಲ್ಲದೇ ತಿಳಿಯಪೇಳುವೆನು. ಶಂಕರರು ಭಾಷ್ಯದಲ್ಲಿ 'ಅತೋ ವಿಶಿಷ್ಟಫಲತ್ವಾದ್ ದುರ್ಲಭಂ ಜ್ಞಾನಂ' ವಿಶಿಷ್ಟ ಫಲಗಳಿಗಿಂತ ದುರ್ಲಭವು ಜ್ಞಾನ ಎಂದು ಜ್ಞಾನವನ್ನು ಶ್ಲಾಘಿಸಿದ್ದಾರೆ. ಜ್ಞಾನದ ನಿಜಸ್ವರೂಪ ತಿಳಿವುದು ಕಷ್ಟ. ಎಷ್ಟೋ ಜನ ಅಜ್ಞಾನಿಗಳು, ಅಪೂರ್ಣ ಜ್ಞಾನಿಗಳು, ಜ್ಞಾನದ ನಿಜಸ್ವರೂಪ ತಿಳಿಯದೇ ತಾವು ಜ್ಞಾನ ಸಂಪಾದಿಸಿದ್ದೇವೆಂದು ತಿಳಿಯುತ್ತಾರೆ. ನಿಜವಾದ ಜ್ಞಾನಿ ತನಗಿನ್ನೂ ತಿಳಿಯದುದೆಷ್ಟೋ ಇದೆ ಎಂದು ಜ್ಞಾನಾರ್ಜನೆಗೆ ಸತತ ಪ್ರಯತ್ನ ನಡೆಸುತ್ತಿರುತ್ತಾನೆ. ಆನಂದಗಿರಿಗಳು ಟೀಕೆಯಲ್ಲಿ ಇದರಮೇಲೆ 'ಭಗವತತ್ತ್ವಜ್ಞಾನಸ್ಯ ವಿಶಿಷ್ಟ ಫಲತ್ವ ಮುಕ್ತ್ವಾಫಲಿತಮಾಹ'—ವಿಶಿಷ್ಟಫಲದ ಮುಕ್ತಾಫಲವು ಭಗವತತ್ತ್ವಜ್ಞಾನವೆಂದಿದ್ದಾರೆ. ಉಪನಿಷತ್ತುಗಳಲ್ಲೆಲ್ಲಾ ಈ ವಿದ್ಯೆಗೇ ಪ್ರಶ್ನೋತ್ತರಗಳು ತಾಂಡವಾಡುತ್ತಿವೆ. ಮುಂಡುಕೋಪನಿಷತ್ ೧, ೨, ೩ ರಲ್ಲಿ "ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ" ಎಂದು ಶೌನಕನು ಅಂಗೀರಸನನ್ನು ಪ್ರಶ್ನಿಸಿ-ಪೂರ್ಣ ಮುಂಡುಕೋಪನಿಷತ್ತನ್ನೇ ದಿವ್ಯ ಉತ್ತರವಾಗಿ ಪಡೆಯುತ್ತಾನೆ. ೧೨ ವರ್ಷ ವಿದ್ಯಾಭ್ಯಾಸ ಮುಗಿಸಿಕೊಂಡು ಬಂದ ಶ್ವೇತಕೇತುವನ್ನು ತಂದೆ ಅರುಣಿಯು "ಏನಾಶ್ರುತಗ್ ಶ್ರುತಂಭವತ್ಯ ಮತಂಮತಮ ವಿಜ್ಞಾತಂ ವಿಜ್ಞಾತ ಮಿತಿಕಥಂ" ಎಂದು ಏನು ಕೇಳಿದರೆ ಕೇಳಬೇಕಾದುದೆಲ್ಲಾ ಕೇಳಿದಂತೆಯೂ, ಏನು ತಿಳಿದರೆ ತಿಳಿಯಬೇಕಾದುದೆಲ್ಲಾ ತಿಳಿದಂತೆಯೂ ಆಗುತ್ತೆಯೋ ಅದನ್ನು ತಿಳಿದುಕೊಂಡು ಬಂದಿದ್ದೀಯಾ ಎಂದು ಕೇಳು

ತ್ತಾನೆ. ಮುಂದೆ ಅದೇ ಜ್ಞಾನದ ಅಂಕುರವಾಗಿ "ಮೃತ್ತಿಕೇತ್ಯುವ ಸತ್ಯಂ ಸರ್ವಂ ಮೃಣ್ಮಯಂ" ಎನ್ನುವ ಉಪದೇಶ ಕೊಡುತ್ತಾನೆ.

೧೮ ಶಾಸ್ತ್ರ ಪುರಾಣ ಪಂಡಿತನಾದ ನಾರದನೂ, ಸನತ್ಕುಮಾರರ ಹತ್ತಿರ ಬಂದು "ಶೋಕಸ್ಯ ಪಾರಂತಾರಯಿತ್ವಿತಿ" ಎಂದು ಕೇಳಿಕೊಂಡ ಜ್ಞಾನವಾದರೂ ಇದೇ. ಇಂದ್ರನು ಪ್ರಜಾಪತಿಯು ಹತ್ತಿರ ಬಂದು ೧೦೧ ವರ್ಷ ತಪಸ್ಸುಮಾಡಿ ಪಡೆದ ಜ್ಞಾನವಾದರೂ "ಯಾವುದು ತಿಳಿದ ಮೇಲೆ ಮತ್ಯಾವುದೂ ತಿಳಿಯಬೇಕಾದುದೇ ಇಲ್ಲವೋ ಆ ಬ್ರಹ್ಮ ಆತ್ಮ ಸ್ವರೂಪ." ಅಂಥಾ "ಸ್ವರೂಪ ಜ್ಞಾನ"ವನ್ನು ಹೇಳಹೊರಟ ಸ್ವಾಮಿ. ಇದೇ "ಪರಾವಿದ್ಯಾ" ಮಿಕ್ಕೆಲ್ಲವೂ "ಅಪರಾವಿದ್ಯ"ಗಳು. ಯಾವ ವಿದ್ಯೆಯಾಗಲೀ ಅದರ ವಿಷಯದಲ್ಲಿ (ಪ್ರಾಣಿ ಶಾಸ್ತ್ರ ವೈದ್ಯವಿದ್ಯ ಅರ್ಥವಿದ್ಯ) ವಿದ್ಯೆಯಾದರೂ "ಆತ್ಮವಿದ್ಯ" ಅಥವಾ ಪರಾವಿದ್ಯೆಯ ತುಲ್ಯದಲ್ಲಿ "ಅವಿದ್ಯೆ"ಯೇ, "ಅಪರಾವಿದ್ಯೆ"ಯೇ. ಕತ್ತಲಿನಲ್ಲಿ ಒಂದು ಬುಡ್ಡೀದೀಪ ಬೆಳಕಾಗಬಹುದು ಒಂದು ಎಲೆಕ್ಟ್ರಿಕ್ ದೀಪದ ಮುಂದೆ ಅದು ಮಾಸಲಾಗುವುದು. ಸೂರ್ಯೋದಯವಾದರೆ ಅದೇ ಬೆಳಕೇ ವಿನಾ ಈ ಎಲೆಕ್ಟ್ರಿಕ್ ದೀಪವೂ ಬೆಳಗದು. ಆ ಅದ್ಭುತ ಪ್ರಭೆಯಲ್ಲಿ ಇದೂ ಲೀನವಾಗುವುದು.

ಅಂತೆಯೇ ಯಾವ ವಿದ್ಯೆಯಾದರೂ ಉದರ ಪೋಷಣಕ್ಕೂ ಇಹ ವ್ಯಾಪಾರಕ್ಕೂ ವಿದ್ಯೆಯಾಗಿ ತತ್ಕಾಲಕ್ಕೆ ಪರಿಣಮಿಸಿದರೂ ಪರಾವಿದ್ಯೆಯ ಮುಂದೆ ಇವೆಲ್ಲಾ ಅವಿದ್ಯ ವಿದ್ಯೆಯೇ ಸರಿ. ಆ ತತ್ವಜ್ಞಾನವಾಗಿಬಿಟ್ಟರೆ ಮುಂದೆ ತಿಳಿಯಬೇಕಾದುದೇ ಇಲ್ಲಾ. ಎಲ್ಲಾ ತಿಳಿದಂತೆಯೇ. ಅದನ್ನೂ "ಅವಶಿಷ್ಯತೇ" ಕೊಂಚವೂ ಉಳಿಯದಂತೇ ಹೇಳಲು ಹೊರಟಿದ್ದಾನೆ ಸ್ವಾಮಿ.

**ಮನುಷ್ಯಾಣಾಂ ಸಹಸ್ರೇಷು । ಕಶ್ಚಿದ್ಯತತಿ ಸಿದ್ಧಯೇ ।**
**ಯತತಾಮಪಿ ಸಿದ್ಧಾನಾಂ । ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥೩॥**

ಸಹಸ್ರಾರು ಮನುಷ್ಯರಲ್ಲಿ ಯಾವನೋ ಒಬ್ಬನು ಜ್ಞಾನಕ್ಕಾಗಿ ಪ್ರಯತ್ನಿಸುತ್ತಾನೆ. ಹೀಗೆ ಯತ್ನಮಾಡುವ ಸಾಧಕರ ಸಹಸ್ರರ ಮಧ್ಯೆ ಯಥಾರ್ಥವಾದ ತತ್ವವನ್ನು ತಿಳಿಯುವವನು ಯಾವನೋ ಒಬ್ಬನಿರು

ವನು. ದುರ್ಲಭವೆಂದು ಶ್ರೀ ಶಂಕರರು ಹೇಳಿರುವ "ಮುಮುಕ್ಷುತ್ವಂ" ತತ್ವದರ್ಶನಕ್ಕೆ ಹಾತೊರೆಯುವವರು–ಈ ಸಾಧಕರೇ "ಸಿದ್ಧಯೇ."

ವಿವೇಕಚೂಡಾಮಣಿಯಲ್ಲಿ (೩ನೇ ಶ್ಲೋಕ)

> "ದುರ್ಲಭಂ ತ್ರಯಮೇವೈತ ದ್ದೇವಾನುಗ್ರಹ ಹೇತುಕಂ।
> ಮನುಷ್ಯತ್ವಂ, ಮುಮುಕ್ಷುತ್ವಂ, ಮಹಾಪುರುಷ ಸಂಶ್ರಯಃ ॥"

ಜ್ಞಾನ ಸಿದ್ಧಿಗಾಗಿ ಪ್ರಯತ್ನಿಸುವ ಸಹಸ್ರಾರು ಮನುಷ್ಯರಲ್ಲೊಬ್ಬರಲ್ಲಿ, ತತ್ವತಃ ಅವನನ್ನು ತಿಳಿಯಬೇಕಾದರೆ, ಅದಕ್ಕಾಗಿ ಹಾತೊರೆಯುವ "ಮುಮುಕ್ಷುತ್ವ"ವೂ ಸದ್ಗುರುವಿನಾಶ್ರಮವೂ (ಮಹಾಪುರುಷ ಸಂಶ್ರಯಃ) ಬೇಕು. ಇದನ್ನು ಪಡೆಯುವುದಕ್ಕೂ ದೇವಾನುಗ್ರಹವೇ ಕಾರಣ. ಈ ಅನುಗ್ರಹದಿಂದ ಆ ಜ್ಞಾನಾಭಿಲಾಷೆಯೂ, ಸದ್ಗುರು ಕೃಪೆಯೂ ಒದಗುವುದು. ಅಂತಹವರು ದುರ್ಲಭ, ಸಾವಿರ ಜನರಲ್ಲಿ ಯಾವನೋ ಒಬ್ಬ.

ಚೆನ್ನಬಸವದೇವರು "... ಕಷ್ಟಜೀವಿ ಮನುಜರೆಲ್ಲ ನೆಟ್ಟನೆ ಶಿವಜ್ಞಾನಿಗಳಾದಡೆ ಮುಂದೆ ಭವದ ಬಳ್ಳಿಗೆ ಬೀಜವೆಲ್ಲಿಹುದೋ ? ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ" ಎಂದು ಭಕ್ತಶರಣ ವಿರಳತ್ವ ಹೇಳಿದ್ದಾರೆ.

ಎಲ್ಲರು ಪ್ರಯತ್ನಪಡಬಹುದು. ಆದರೆ ಲಭ್ಯವಾಗುವುದು ಎಲ್ಲೊ ತಾನೇ ಅನುಗ್ರಹಿಸಿ ಕೃಪೆಮಾಡಿದ ಒಬ್ಬನಿಗೆ ಮಾತ್ರ "ಯಮೇವೈಷ ವೃಣುತೇತೇನಲಭ್ಯ" ಎಂದು ಕಠೋಪನಿಷತ್ತಿನಲ್ಲಿ ಹೇಳಿರುವಂತೆ "ಧಾತು ಪ್ರಸಾದಾತ್ ಮಹಿಮಾನಮೀಶಂ" ಎಂದು ಶ್ವೇತಾಶ್ವೆತರೋಪನಿಷತ್ತಿನಲ್ಲಿ ಹೇಳಿರುವಂತೆ.

ಮಹೋಪನಿಷತ್ ಮತ್ತು ವರಾಹ್ಯೋಪನಿಷತ್‌ಗಳಲ್ಲಿ ಹೇಳಿರುವಂತೆ

> "ದುರ್ಲಭೋವಿಷಯತ್ಯಾಗೋ ; ದುರ್ಲಭಂತತ್ವದರ್ಶನಂ ।
> ದುರ್ಲಭಾಸಹಜಾವಸ್ಥಾ, ಸದ್ಗುರೋಃ ಕರುಣಾವಿನಾ ॥

ಸದ್ಗುರುವಿನ ಕೃಪೆಯಿಲ್ಲದೆ ತತ್ವದರ್ಶನವಾಗಿ, ವಿಷಯ ತ್ಯಾಗವೂ ಸಹಜಾವಸ್ಥೆಯೂ ಲಭಿಸದು. ಇಲ್ಲಿ ಶ್ರೀಕೃಷ್ಣನೇ ಪರಮಗುರುವಾಗಿ

ತತ್ವದರ್ಶನವನ್ನು ಮಾಡಿಸಲು ನಿಂತಿದ್ದಾನೆ. ಅವನ ಪ್ರಸಾದದಿಂದ ಸಿದ್ಧಿಯಾಗಲು ಸಂದೇಹವೇ ಇಲ್ಲ.

**ಭೂಮಿರಾಪೋಽನಲೋ ವಾಯುಃ । ಖಂ ಮನೋ ಬುದ್ಧಿರೇವ ಚ ।**
**ಅಹಂಕಾರ ಇತೀಯಂ ಮೇ । ಭಿನ್ನಾ ಪ್ರಕೃತಿರಷ್ಟಧಾ ॥೪॥**

ಅಷ್ಟಪ್ರಕೃತಿಭೇದವನ್ನು ಮುಂಚೆ ಪೀಠಿಕೆಯಾಗಿ ತಿಳಿಸುತ್ತಾನೆ. ಭೂಮಿ, ಜಲ, ಅಗ್ನಿ, ವಾಯು, ಆಕಾಶ ಎಂಬ ಪಂಚಮಹಾಭೂತಗಳು, ಪಂಚೇಂದ್ರಿಯಗಳಿಂದ (ಜ್ಞಾನ ಮತ್ತು ಕರ್ಮ) ಯುಕ್ತವಾದ ಮನಸ್ಸು, ಬುದ್ಧಿ, ಅಹಂಕಾರ ಮಹಾತತ್ವಗಳೂ ನನಗಿಂತ ಭಿನ್ನವಾದವು. ಶಂಕರರು ಭಾಷ್ಯದಲ್ಲಿ "ಅಹಂಕಾರ ಏವಹಿ ಸರ್ವಸ್ಯ ಪ್ರವೃತ್ತಿ ಬೀಜಂ" ಸರ್ವದರ ಪ್ರವೃತ್ತಿಗೂ, ಅಹಂಕಾರವೇ ಬೀಜ ಉತ್ಪತ್ತಿ ಕಾರಣ ಎಂದಿದ್ದಾರೆ. ನಾನು ಎನ್ನುವ ಆಕಾರವೇ ಸರ್ವವ್ಯಾಪಾರೋತ್ಪನ್ನಕ್ಕೆ ಕಾರಣ–ಅದೇ ಚುಚ್ಚಿ ಮಾಡಿಸುವುದು ಕಾರ್ಯವನ್ನು. ಬ್ರಹ್ಮಾಂಡ ಪಿಂಡಾಡೋತ್ಪತ್ತಿಯಲ್ಲಿ ಪ್ರಥಮತಃ ಎಲ್ಲಾ ತತ್ವಗಳೂ, ಪಂಚಮಹಾ ಭೂತಗಳೂ "ಆತ್ಮಾವಾ ಇದಮೇಕ ಏವಾ ಅಗ್ರ ಆಸೀತ್ ನಾನ್ಯತ್ಕಿಂಚನ ಮಿಷತ್" ಎಂದು ಐತರೇಯೋಪನಿಷತ್ತಿನಲ್ಲಿ ಪ್ರತಿಯೊಂದೂ ಆ ಪುರುಷ ನಿಂದಲೇ ಉತ್ಪತ್ತಿಯಾದುದವೆಂದು ವಿವರಿಸಲ್ಪಟ್ಟಿದೆ. ಎಲ್ಲವೂ ಪ್ರಜ್ಞಾನವೇ, ಪ್ರಜ್ಞಾನವೇ ಬ್ರಹ್ಮ ಎಂದು ಕೊನೆಯಲ್ಲಿ ಸಾರಲ್ಪಟ್ಟಿದೆ.

**ಅಪರೇಯಮಿತಸ್ತ್ವನ್ಯಾಂ । ಪ್ರಕೃತಿಂ ವಿದ್ಧಿ ಮೇ ಪರಾಮ್ ।**
**ಜೀವಭೂತಾಂ ಮಹಾಬಾಹೋ । ಯಯೇದಂ ಧಾರ್ಯತೇ ಜಗತ್ ॥**

ಈ ಅಷ್ಟಭಿನ್ನಪ್ರಕೃತಿಯು ಅಪರವೆನಿಸುವುದು. ಅದಕ್ಕಿಂತ ಉತ್ಕೃಷ್ಟ ವಾದ "ಪರ" ಪ್ರಕೃತಿಯೇ ನಾನು. ಜೀವಭೂತವಾಗಿರುವ ಈ ಪರ ಪ್ರಕೃತಿಯು ನನ್ನ ಅಂಶ. ಈ ಜಗತ್ತನ್ನು ಧಾರಣೆ ಮಾಡಿರುವೆನು. ಪ್ರಕೃತಿಯನ್ನು ಸೃಷ್ಟಿಸಿರುವನೂ ಅವನೇ, ಪ್ರಕೃತಿಯನ್ನು ಧಾರಣೆ ಮಾಡಿರುವವನೂ ಅವನೇ–ಎಲ್ಲಾ ಅವನ ಅಂಶವೇ. ತನ್ನೊಂದಂಶ ಮಾತ್ರದಿಂದ ಲೀಲಾಜಾಲವಾಗಿ ಈ ಪ್ರಕೃತಿ, ಬ್ರಹ್ಮಾಂಡ ಪಿಂಡಾಂಡಗಳ ನ್ನೆಲ್ಲಾ ಸೃಜಿಸಿ ರಕ್ಷಿಸುತ್ತಿರುವನು. ಈ ಅಂಶವೇ "ವ್ಯಕ್ತಬ್ರಹ್ಮ."

ಈ ಅಷ್ಟಾಂಶ ವಿನಾ ಮಿಕ್ಕ ಆತನ ಅಮಿತ ಅನಂತ ಭಾಗವು "ಅವ್ಯಕ್ತ ಬ್ರಹ್ಮ"ವಾಗಿಯೇ ಉಳಿದಿದೆ.

**ಏತದ್ಯೋನೀನಿ ಭೂತಾನಿ । ಸರ್ವಾಣೀತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ । ಪ್ರಭವಃ ಪ್ರಲಯಸ್ತಥಾ ॥ ॥೬॥**

ಉತ್ಪನ್ನವಾದ ಭೂತಗಳಿಗೆಲ್ಲಾ ಪ್ರಕೃತಿಯೇ ಉತ್ಪತ್ತಿ ಕಾರಣವೆಂದು ತಿಳಿ. ಆದರೆ ಅವುಗಳ ಹುಟ್ಟುವಿಕೆ ರಕ್ಷಣೆ ಮತ್ತು ಪ್ರಲಯಕ್ಕೆ (ಸಂಹಾರಕ್ಕೆ) ನಾನು ಕರ್ತನಾಗಿರುವೆನು. ರುದ್ರಹೃದಯೋಪನಿಷತ್ತಿನಲ್ಲಿ ಹೇಳಿದೆ—"ಕಾರ್ಯಂ ವಿಷ್ಣುಃ ಕ್ರಿಯಾ ಬ್ರಹ್ಮ, ಕಾರಣಂತು ಮಹೇಶ್ವರಃ" "ಪುಲ್ಲಿಂಙ್ಗಗ್ ಸರ್ವಮೀಶಾನಃ ಸ್ತ್ರೀಲಿಂಗ ಭಗವತ್ಯುಮಾ" ಎಂದೂ ಹೇಳಿದೆ, ಪ್ರಕೃತಿ ರೂಪದ ಸ್ತ್ರೀಯೋನಿಯಲ್ಲಿ ಸಮಸ್ತ ಸೃಷ್ಟಿಯೂ, ಪುಲ್ಲಿಂಗ ಸರ್ವ ಮೀಶಾನನ ಕ್ರಿಯೆಯಾಗಿ ಉದ್ಭವಿಸುವುವು. "ರುದ್ರೋ ಬ್ರಹ್ಮ ಉಮಾವಾಣೀ ತಸ್ಮೈ ತಸ್ಮೈ ನಮೋ ನಮಃ" ಇತ್ಯಾದಿ ಎಲ್ಲಾ ಪ್ರಕೃತಿ ಪುರುಷ ರೂಪಗಳನ್ನೂ ನಮಸ್ಕಾರ ರೂಪ ಸ್ತೋತ್ರ ಮಾಡಿದೆ.

**ಮತ್ತಃ ಪರತರಂ ನಾನ್ಯತ್ । ಕಿಂಚಿದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ । ಸೂತ್ರೇ ಮಣಿಗಣಾ ಇವ ॥೭॥**

ನನಗಿಂತ ಶ್ರೇಷ್ಠವಾದ ವಸ್ತುವು ಯಾವುದೂ ಇಲ್ಲ. ಒಂದೇ ಮುತ್ತಿನ ಹಾರದಲ್ಲಿ (ಮಣಿಗಣಾ) ನಾನಾ ತರಹ ನವಮಣಿಗಳಲ್ಲಿ ಪೋಣಿಸಲ್ಪಟ್ಟಿರುವ ಸೂತ್ರದಂತೆ ಇಲ್ಲಿ ಸರ್ವಸ್ವದರಲ್ಲೂ ಸಾನಿಧ್ಯೇನೆ. "ಸೂತ್ರೇಮಣಿಗಣಾ ಇವ" ಎನ್ನುವುದು ಎಷ್ಟು ಸೊಗಸಾದ ಸಾಮ್ಯ. ಪರಬ್ರಹ್ಮೋಪನಿಷತ್ತಿನಲ್ಲಿ "ಏನ ಸರ್ವಮಿದಂ ಪ್ರೋತಂ ಸೂತ್ರೇಮಣಿಗಣಾ ಇವ" ಎಂದು ಪ್ರಾಯಶಃ ಅಕ್ಷರತಃ ಈ ಶ್ಲೋಕಾರ್ಧ ಬಂದಿದೆ. ಹಿಂದೆಯೇ "ಸೂಚನಾತ್ಸೂತ್ರ ಮಿತ್ಯುಕ್ತಗ್ ಸೂತ್ರಂನಾಮ ಪರಂಪದಂ–ತತ್ಸೂತ್ರಂ ವಿದಿತಂ ಯೇನ ಸಮುಮುಕ್ಷು ಸಭಿಕ್ಷುಕಃ" ಎಂದೂ "ಪ್ರಣವೋಹಗ್ ಸೋನಾದ ಸ್ತ್ರಿವೃತ್ಸೂತ್ರಂ । ಹೃದಿಚ್ಛೈತಸ್ಯೇತಿಸ್ಮೃತಿ" ಪ್ರಣವ ಹಂಸನಾದ

ತ್ರಿಸೂತ್ರ (ಮೂರು ದಾರ ಸೂತ್ರ) ಹೃದಯದಲ್ಲೇ ಇದ್ದೇ ಇದೆ ಎನ್ನುವ ಸೂತ್ರತತ್ವವನ್ನು ತಿಳಿದವನೇ ಮುಮುಕ್ಷು, ಭಿಕ್ಷುಕ (ಸನ್ಯಾಸಿ), ಇರುವುದೆಲ್ಲಾ ಈ ಅಂತರ್ಗತವಾದ ಸೂತ್ರದಿಂದಲೇ, ಮಣಿಗಳು ಪೋಣಿಸಲ್ಪಟ್ಟಂತಿವೆ ಎನ್ನುವ ಜ್ಞಾನ ತಿಳಿವುವೇ "ಸೂತ್ರ ಮಂತರ್ಗತಂಯೇಷಾಂ ಜ್ಞಾನ ಯಜ್ಞೋಪವೀತಿನಾಂ" ಯಜ್ಞೋಪವೀತವೆಂದೂ "ಪ್ರಾಪಂಚಿಕ ಶಿಖೋಪವೀತಂತ್ಯಜೇತ್" ಎಂದು ಸನ್ಯಾಸಿ ಜ್ಞಾನಿಯಾಗಲು ಬೋಧಿಸಿದ್ದಾರೆ. "ಬಹಿಸ್ಸೂತ್ರಂಪರಿತ್ಯಜ್ಯಸ್ವಾಂತಸ್ಸೂತ್ರಂತುಧಾರಯೇತ್, ಬಹಿಃ ಪ್ರಪಂಚ ಶಿಖೋಪವೀತಿತ್ವಮನಾದೃತ್ಯ, ಪ್ರಣವ ಹಗ್ಂಸ ಶಿಖೋಪವೀತಿತ್ವಮವಲಮ್ಬ್ಯ ಮೋಕ್ಷಸಾಧನಂ ಕುರ್ಯಾತ್" ಎಂದು ಶೌನಕ ಮಹಾಮುನಿಗಳು ಪರಬ್ರಹ್ಮೋಪನಿಷತ್ತನ್ನು ಸಮಾಪ್ತಿ ಮಾಡಿದ್ದಾರೆ. ಅವ್ಯಕ್ತತೆಯು ಸೂತ್ರದ ಮುಖ್ಯ ತತ್ವ ಮುಖ್ಯವಾದರೂ ಧಾರಣಕ್ಕೆ, ಮಣಿಗಳು ಜತೆಗಿರಲು ಅವಶ್ಯಕವಾದರೂ ಕಣ್ಣಿಗೆ ಕಾಣದು ದಾರ. ಅವಕ್ಕೆ ಆಧಾರವಾದರೂ ಅದೃಷ್ಟ. ಪರಮಾತ್ಮನು ಎಲ್ಲರಿಗೂ ಆಧಾರನಾಗಿರುವುದೂ, ಇದ್ದರೂ ಇಲ್ಲದಂತೆ ಅವ್ಯಕ್ತನಾಗಿರುವುದೂ, ಎಲ್ಲಕ್ಕೂ ಒಂದಕ್ಕೊಂದಕ್ಕೆ ಸಂಬಂಧ ಕಲ್ಪಿತನಾಗಿರುವುದೂ, ಎಲ್ಲರಲ್ಲೂ ಏಕರೂಪಿಯಾಗಿ ಎತ್ತಿಹಿಡಿಯಲು ಒಳಗಿನ ಶಕ್ತಿಯಾಗಿರುವುದೂ ಎಲ್ಲಾ ಸೂತ್ರ ರೂಪದಲ್ಲಿ ವ್ಯಕ್ತವಾಗಿದೆ. ಯಾವ ಮಣಿಯಾದರೇನು, ಅವುಗಳನ್ನು ಸ್ಥಾನದಲ್ಲಿ ಧರಿಸಿ, ನಿಲ್ಲಿಸಿರುವುದು ದಾರ, ಒಂದೇ ಎಳೆ. ಯಾವ ಪ್ರಾಣಿಯಾದರೇನು, ಅವುಗಳನ್ನು ಅವ್ಯಕ್ತವಾಗಿ ವ್ಯಾಪಿಸಿ ಜಗತ್ತಿನಲ್ಲಿ ಅದರ ಸ್ಥಾನದಲ್ಲಿ ನಿಲ್ಲಿಸಿ, ಒಂದೊಂದಕ್ಕೂ ಸಂಪರ್ಕ ಕಲ್ಪಿಸಿ ಅವುಗಳನ್ನೊಂದೇ ಜಗತ್ಸೃಷ್ಟಿಯಲ್ಲಿ ಒಂದನ್ನಾಗಿ ಮಾಡಿರುವುದು ಆ ಪರಮಾತ್ಮನ ಜೀವಸೂತ್ರ. ಧ್ಯಾನಬಿಂದೂಪನಿಷತ್ತಿನಲ್ಲಿ "ಪುಷ್ಪಮಧ್ಯೆಯಥಾಗಂಧಃ ಪಯೋಮಧ್ಯೇಯಥಾಘೃತಂ, ತಿಲಮಧ್ಯೆಯಥಾತೈಲಂ, ಪಾಷಣೇಷ್ವಿವಕಾಂಚನಂ, ಏವಂ ಸರ್ವಾಣಿ ಭೂತಾನಿ **ಮಣೌಸೂತ್ರ** ಇವಾತ್ಮನಿ" ಎಂದು, ಪುಷ್ಪದಲ್ಲಿ ಗಂಧ, ಹಾಲಿನಲ್ಲಿ ತುಪ್ಪ, ಎಳ್ಳಿನಲ್ಲಿ ಎಣ್ಣೆ, ಕಲ್ಲಿನಲ್ಲಿ ಚಿನ್ನದಂತೆ ಅವ್ಯಕ್ತವಾಗಿ ಅವುಗಳ ಸರ್ವಸಾರವಾಗಿ ಆತ್ಮನು ಸರ್ವಭೂತಗಳ ಮಧ್ಯದಲ್ಲಿಯೂ

ಮಣಿಗಳೊಳಗೆ ಪೋಣಿಸಲ್ಪಟ್ಟಿರುವ ಸೂತ್ರದಂತಿರುವನು ಎಂದು ಲ್ಲೇಖಿಸಿದೆ.

ಸರ್ವಸಾರೋಪನಿಷತ್ತಿನಲ್ಲಿ "ಕೂಟಸ್ಥಾದ್ಯುಪಹಿತಭೇದಾನಾಂ ಸ್ವರೂಪಲಾಭಹೇತುರ್ಭೂತ್ವಾ, ಮಣಿಗಣೇಸೂತ್ರಮಿವ ಸರ್ವಕ್ಷೇತ್ರೇಷು, ಯದಾನುಸ್ಯೂತ ಅಂತರ್ಯಾಮಯ್ಯಪ್ರಕಾಶತೇಹ್ಯಾತ್ಮಾ ಸೋಂತರ್ಯಾಮೀ!" ಕೂಟಸ್ಥ ಉಪಹಿತಭೇದ ಸ್ವರೂಪ ಹೊಂದಿ ಭೂತ ಕಾರಣವಾದ ಸರ್ವ ಕ್ಷೇತ್ರದಲ್ಲೂ, ಮಣಿಗಣದಲ್ಲಿರುವ ಸೂತ್ರದಂತೆ ಯಾವುದು ಅಂತರ್ಯಾಮಿಯಾಗಿ ಪೋಣಿಸಲ್ಪಟ್ಟು ಪ್ರಕಾಶಿಸುತ್ತದೋ, ಆ ಆತ್ಮನೇ ಅಂತರ್ಯಾಮಿ ಎಂದು ಇದೇ ಉಪಮಾನದಲ್ಲಿ ಕೂಟಸ್ಥನಿಂದ ಸ್ವರೂಪಲಾಭವಾದ ಸರ್ವ ಕ್ಷೇತ್ರಗಳಲ್ಲೂ ಅಂತರ್ಯಾಮಿಯಾಗಿರುವ ಆತ್ಮನ ವಿವರಣೆಯಿದೆ. ಆ ಸೂತ್ರವು ಭಿನ್ನವಾದರೆ ಮುಕ್ತಾಹಾರವು ಕಿತ್ತು ಮಣಿಗಳು ಚಲ್ಲಾಪಿಲ್ಲಿಯಾಗಿ ಹಾರಿಬಿದ್ದಾವು. ಅವಕ್ಕೆ ಸ್ಥಾನವೆಲ್ಲಿ, ಆಧಾರವೆಲ್ಲಿ, ಜೊತೆಯೆಲ್ಲಿ, ಶೋಭಿಸುವುದೆಲ್ಲಿ. ಮಣಿಯು ಮಣಿಯಾದರೂ, ಮಣಿ ಮಾಲೆಯಾಗಲೆಬೇಕಾದರೆ ಈ ಅವ್ಯಕ್ತ ಸೂತ್ರದ ಆಧಾರ, ಅವಲಂಬನ ಅಗತ್ಯ. ತಾನು ಅವ್ಯಕ್ತವಾಗಿದ್ದುಕೊಂಡು, ಇವಕ್ಕೆ ವ್ಯಕ್ತತೆ ಕೊಡಲು ಶಕ್ತವಾದುದು ಸೂತ್ರ.

**ರಸೋಽಹಮಪ್ಸು ಕೌಂತೇಯ। ಪ್ರಭಾಸ್ಮಿ ಶಶಿಸೂರ್ಯಯೋಃ ।**
**ಪ್ರಣವಃ ಸರ್ವವೇದೇಷು। ಶಬ್ದಃ ಖೇ ಪೌರುಷಂ ನೃಷು ॥೮॥**

ಎಲ್ಲಕ್ಕೂ ಸೂತ್ರರೂಪವಾದ ಮೇಲೆ ಇನ್ನೇನು. ಅವುಗಳ ಮುಖ್ಯತತ್ವವೇ ಅವನು. ಉದಕದಲ್ಲಿ ರಸವೂ ಚಂದ್ರ ಸೂರ್ಯಗಳಲ್ಲಿ ಪ್ರಭೆಯೂ ವೇದಗಳಲ್ಲಿ ಪ್ರಣವವೂ "ಓಂಕಾರ," ಆಕಾಶದಲ್ಲಿ ಶಬ್ದವೂ, ಮನುಷ್ಯರಲ್ಲಿ ಪೌರುಷವೂ ತಾನೇ. ಎಲ್ಲದರಲ್ಲೂ ಪಸರಿಸಿರುವುದು ದೈವಿಕರಸ. "ರಸೋವೈ ಸಹ" ಎಂದು ತೈತ್ತರೀಯ ಆನಂದವಲ್ಲಿಯಲ್ಲಿ ಬಂದಿದೆ. ಬ್ರಹ್ಮನು ರಸಮಯನು. ಎಲ್ಲದರ ರಸವೂ ಆ ರಸದ ರಸವೇ. ಆ ರಸವು (ಮುಖ್ಯಾಂಶವು) ಆಯಾ ವಸ್ತುವಿನ ತತ್ವದ ರಸದಂತೆ ಪರಿಣಮಿಸುವುದು. ಇರುವುದೊಂದೇ ಆಕಾಶದ ಆನಂದರಸವು. "ಆ ಆನಂದವು ಆಕಾಶವನ್ನಾವರಿಸದಿದ್ದರೆ ಯಾವ ಪ್ರಾಣಿ ತಾನೇ ಉಸಿರಾಡಲಾಗು

ತಿತ್ತು–ಈ ಜಗತ್ತಿನಲ್ಲಿ" ಎಂದು ಉಪನಿಷತ್ಕಾರರು ಹಾಡಿದ್ದಾರೆ. ಆ ರಸವನ್ನು ಹೊಂದಿ ಎಲ್ಲವೂ ಆನಂದವನ್ನು ಹೊಂದುತ್ತವೆ.

ಯಾವ ಮುಖ್ಯ ಪ್ರತಿಭೆಯ ಮೇಲೆ ಪ್ರತಿವಸ್ತುವೂ ತಾನು ಪ್ರಪಂಚಕ್ಕುಪಕಾರಿಯಾಗಿದೆಯೋ–ನೀರು ತನ್ನ ರಸದಿಂದ, ಸೂರ್ಯ ತನ್ನ ಪ್ರಭೆಯಿಂದ ಇತ್ಯಾದಿ ಆ ಮುಖ್ಯ ತತ್ವವೆಲ್ಲಾ ದೈವಾಂಶವು. ಅದನ್ನು ಪರಬ್ರಹ್ಮ ತತ್ವದಿಂದ ಆ ವಸ್ತು ಪಡೆದು ಶೋಭಿಸುತ್ತಿದೆ.

"ತ್ವಮೇವಭಾಂತ ಮನುಭಾತಸ್ಯಭಾಸಾತಿ ಸರ್ವಂ । ತಸ್ಯಭಾಸಾ ಸರ್ವಮಿದಂ ವಿಭಾತಿ ॥" ಎಂದು ಕಠೋಪನಿಷತ್ತಿನಲ್ಲಿ ಹೇಳಿರುವಂತೆ, ಅದರ ಪ್ರತಿಭೆಯಿಂದ ಸರ್ವವೂ ಪ್ರತಿಭಾಮಾನವಾಗಿವೆ.

ವೇದಗಳಲ್ಲಿ ಪ್ರಣವವೂ ಆಕಾಶದಲ್ಲಿನ ಶಬ್ದವೂ "ಶಬ್ದಬ್ರಹ್ಮನ" ಅಂಶಗಳು. ಹೇಳಲಿಕ್ಕೆ ಆಗಲಾರದ, ವಾಕ್‌ಮನಸ್ಸುಗಳಿಗೆ ನಿಲುಕದ, ಸೂರ್ಯ ಚಂದ್ರ ತಾರಕರು ಬೆಳಗದ ಅವ್ಯಕ್ತವಸ್ತುವನ್ನು ಈ "ಓಂ" ನಾದ ಬಿಂದು, ತೇಜೋಬಿಂದು ಶಬ್ದಸ್ವರೂಪವು ವಿವರಿಸಲೆತ್ನಿಸುವುದು. ಇದು ನಾದಬ್ರಹ್ಮ–ಇದೇ ಬ್ರಹ್ಮವಲ್ಲ. ಇದು ಬ್ರಹ್ಮ ಪ್ರತೀಕ, ತಿಳಿಸಲು ಶಬ್ದ ಉಚ್ಚಾರ. "ಓಂಮಿತಿಬ್ರಹ್ಮಾ। ಓಂಮಿತೀದಗ್ ಸರ್ವಂ........ಓಂಮಿತಿ ಸಾಮಾನಿಗಾಯಂತಿ ! ಓಗ್ಂಶೊಮಿತಿಶಸ್ತ್ರಾಣಿ ಶಗ್ಂಸಂತಿ...." ಎಂದು ತೈತ್ತರೀಯದಲ್ಲಿ ವಿವರಿಸಿದೆ. ಎಲ್ಲವೂ "ಓಂ"ಕಾರ ಮಾಡುತ್ತವೆ. ವೇದಗಳು "ಓಂ" ಎಂದು ಹಾಡುತ್ತದೆ. ಶಸ್ತ್ರಗಳು "ಓಂ, ಗ್, ಶೊಂ" ಎಂದು ನಾದ ಮಾಡುತ್ತವೆ (ಬಿಲ್ಲು ಜಾರಿಸಿದಾಗ). ಅಗ್ನಿಹೋತ್ರ ಮಾಡುವಾಗ, ಧ್ಯಾನಯೋಗಾಭ್ಯಾಸಗಳಲ್ಲಿಯೂ "ಓಂ" ಶಬ್ದವೇ ಪ್ರಥಮ ಬರುತ್ತದೆ. ಆಕಾಶದಲ್ಲಿ ಅವ್ಯಕ್ತಶಬ್ದವೇ "ಓಂ". ನಿಶೆಯಲ್ಲಿ ನಿಶ್ಶಬ್ದತೆಯಲ್ಲಿ, ನಿರ್ಜನ ನಿರಾಲಂಬದಲ್ಲಿ ಹೇಗೆ ನಿರ್ಮಲಾಕಾಶದಲ್ಲಿ "ಓಂ" ಧ್ವನಿಬರುತ್ತದೆ. ನಮ್ಮ ಶ್ವಾಸೋಚ್ಛ್ವಾಸವೇ "ಓಂ" ನಮ್ಮ ಜೀವನಧಾರಣೆಯೇ "ಓಂ" ನಿಂದಾ

**ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।**
**ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥೯॥**

ಪೃಥ್ವಿಯಲ್ಲಿ ಪುಣ್ಯಗಂಧವೂ, ಅಗ್ನಿಯಲ್ಲಿ ತೇಜಸ್ಸೂ ಸರ್ವಭೂತಗಳಲ್ಲಿ ಜೀವನೂ (ಪ್ರಾಣಾಧಾರ) ತಪಸ್ವಿಗಳಲ್ಲಿ ತಪವೂ ನಾನಾಗಿರುವೆ. ಸನಾತನವಾಗಿ ಸರ್ವಭೂತಗಳ ಉತ್ಪತ್ತಿಗೆ ಕಾರಣ ರೂಪವಾದ ಬೀಜವೇ ನಾನು. ಬುದ್ಧಿವಂತರಲ್ಲಿ ಬುದ್ಧಿಯೂ, ತೇಜಸ್ವಿಗಳಲ್ಲಿ ತೇಜಸ್ಸೂ ನಾನಾಗಿರುವೆನು.

ನಮ್ಮ ಭೂತಾಯಿ ಪುಣ್ಯಭೂಮಿ. ಸರ್ವ ಗಂಧಯುಕ್ತೆ. ಒಂದಣು ಮಣ್ಣು ತೆಗೆದುಕೊಳ್ಳಿ ಅದರಲ್ಲಿ ಎಲ್ಲಾ ಇದೆ. ಅದೇ ಮಣ್ಣಿನಲ್ಲಿ ಗೋಧಿ, ಮಾವು, ಪುಷ್ಪಗಳು ಬೆಳೆಯುತ್ತವೆ. ಅದೇ ಮಣ್ಣಿನಲ್ಲಿ ತಾಮ್ರ, ಬಂಗಾರ, ಕಬ್ಬಿಣವನ್ನು ತೆಗೆಯುತ್ತಾರೆ. ಒಂದೊಂದೆಡೆ ಒಂದೊಂದು ಪರಿಮಾಣು ಜಾಸ್ತಿಯಷ್ಟೆ. ಒಂದೇ ಮಣ್ಣಿನ ಕಣದಲ್ಲಿ ಇವೆಲ್ಲಾ ಅಡಗಿದೆ; ಇವೆಲ್ಲಾ ಅಡಗಿರಲು ಅವನ ಆಧಾರ. ಅಗ್ನಿಯಲ್ಲಿನ ತೇಜಸ್ಸೂ ಅವನದೇ. ಅದಕ್ಕೆ ಅಗ್ನಿದೇವನನ್ನು ತಮ್ಮಂತರಾತ್ಮನಿಗೂ, ಪರಮಾತ್ಮನಿಗೂ ಮಧ್ಯಸ್ಥನನ್ನಾಗಿ ವೇದದ ಕಾಲದಿಂದ ನಿರ್ಮಿಸಿಕೊಂಡಿದ್ದರು. ಬ್ರಹ್ಮ ಸೂತ್ರದ 'ವೈಶ್ವಾನರಾಧಿಕರಣ' (೧, ೨, ೬) ದಲ್ಲಿ ಅಗ್ನಿಸ್ವರೂಪವನ್ನು ವಿಮರ್ಶಿಸಿದ್ದಾರೆ. ಪರಮೇಶ್ವರನೇ ವೈಶ್ವಾನರ. ಅವನ ಸ್ವರೂಪ ವಿವರಣೆಯಲ್ಲಿ ಅಗ್ನಿಯೇ ತಲೆಯೆಂದಿದ್ದಾರೆ. ಶಂಕರ ಭಾಷ್ಯದಲ್ಲಿ (೧, ೨, ೨೮) 'ವಿಶ್ವಶ್ಚಾಯಂ, ನರಶ್ಚೇತಿ ವಿಶ್ವೇಷಾಂ ವಾಽಯಂ ನರಃ, ವಿಶ್ವೇವಾನರಾ ಅಸ್ಯೇತಿ ವಿಶ್ವಾನರಃ, ಪರಮಾತ್ಮಾ, ಸರ್ವಾತ್ಮತ್ವಾತ್' ಎಂದಿದೆ. ಎಲ್ಲರ ಒಳಗಿದ್ದು ಆಳುವವನು. "ಅಗ್ನಿ ಶಬ್ದೋಽಪ್ಯಗ್ರಣೀತ್ವಾದಿಯೋಗಾಶ್ರಯಣೇನ ಪರಮಾತ್ಮ ವಿಷಯ ಏವ ಭವಿಷ್ಯತಿ" ಅಗ್ನಿ ಶಬ್ದಕ್ಕೂ ಮುಂದಕ್ಕೆ ತೆಗೆದುಕೊಂಡು ಹೋಗುವವನೆಂಬರ್ಥದಿಂದ ಶ್ರೇಷ್ಠನೆನ್ನಬಹುದು.

ಎಲ್ಲವನ್ನೂ ದಹಿಸಬಲ್ಲ, ಪಚಿಸಬಲ್ಲವ ಅಗ್ನಿ. ನಾವು ಅರ್ಪಿಸುವದನ್ನೆಲ್ಲಾ ಧೂಮರೂಪದಲ್ಲಿ ದೇವತೆಗಳಿಗೆ ಪಿತೃಗಳಿಗೆ ತಲುಪಿಸಬಲ್ಲವನೆಂದು ಅಗ್ನಿಯ ತೇಜಸ್ಸಿನಲ್ಲಿ ನಮ್ಮ ಹಿರಿಯರು ನಂಬಿದ್ದರು. ಅಗ್ನಿಯ ಅಪಾರ ಶಕ್ತಿ ದೇವಾಂಶವೇ. ನಮ್ಮ ದೇಹದಲ್ಲಿರುವ ಕಾವು, ನಮ್ಮ ಪಚನಾಶಕ್ತಿ ಜಠರಾಗ್ನಿಯಲ್ಲಿ ನಮ್ಮ ಮೇಧಾಶಕ್ತಿ ಎಲ್ಲಾ ಅಗ್ನಿಯಂಶವೇ.

ಸರ್ವಭೂತಗಳಲ್ಲಿನ ಜೀವಶಕ್ತಿಯೂ ಪರಮಾತ್ಮನೇ. ಪರಮಾತ್ಮನ ಪ್ರತಿಬಿಂಬವೇ ಜೀವಾತ್ಮ. ಆ ಶಕ್ತಿಯಿರುವತನಕ ಒಂದು ಜೀವ, ಒಂದು ಜೀವನ. ಅದು ಹಾರಿತೆಂದರೆ ಶವ. ಈ ಶವಾಕಾರವನ್ನು ಶಿವಾಕಾರ ವಾಗಿ ಬೆಳಗಿಸಬಲ್ಲ ಜೀವಾಧಾರವೇ ಆ ಪ್ರಾಣ–ಪರಮಾತ್ಮನ ಅಂಶ.

ಆ ಜೀವಾತ್ಮನಿರುವವರೆವಿಗೇ ಈ ಜೀವಕ್ಕೆ ಒಂದು ಬೆಲೆ. ಅದು ಹಾರಿದರೆ, ಅದರ ಪ್ರಸನ್ನತೆ ತಪ್ಪಿದರೆ ಇದನ್ನು–ಈ ಶರೀರವನ್ನು–ಕೇಳುವವರ್‍ಯಾರು. "ವ್ಯಾಧನೊಂದು ಮೊಲವ ತಂದೊಡೆ ಸಲುವ ಹಾಗಕ್ಕೆ ಬೆಲೆಗಯ್ವರಯ್ಯ। ನೆಲನಾಳ್ವನ ಹೆಣನೆಂದೆಡೆ ಒಡೆದ ಮಡಕೆಗೆ ಕೊಂಬ ರಿಲ್ಲಾ । ಮೊಲನಿಂಕರ ಕಷ್ಟನರನ ಬಾಳುವೆ" ಎಂದು ಬಸವಣ್ಣದೇವರು ಹಾಡಿರುವರು. ಮೋಹ ಮುದ್ಗರದಲ್ಲಿ "ಯಾವತ್ಪವನೋ ನಿವಸತಿ ಗೇಹೇ ತಾವತ್ಪೃಚ್ಛತಿ ಕುಶಲಂದೇಹೆ। ಗತಿವತಿ ವಾಯೌದೇಹಾಪಾಯೇ ಭಾರ್ಯಾಭಿಭ್ಯತಿ ತಸ್ಮಿನ್‌ಕಾಯೆ ॥" ಎಲ್ಲಿಯವರೆವಿಗೆ ವಾಯುವು ಈ ದೇಹ ದಲ್ಲಿ ವಾಸವಾಗಿ ಆಡುತ್ತಿದೆಯೋ ಅಲ್ಲಿಯವರೆಗೆ ಕುಶಲವನ್ನು ವಿಚಾರಿಸು ವವರು ಆ ವಾಯುವು ದೇಹವನ್ನು ಬಿಟ್ಟು ಹೋದರೆ, ಆ ಸತ್ತ ದೇಹ ವನ್ನು ನೋಡಿ ಪ್ರೀತಿಸುತ್ತಿದ್ದ ಹೆಂಡತಿಯೂ ಭಯಗೊಳ್ಳುವಳು ಎಂದು ಶಂಕರರು ವಿವರಿಸಿದ್ದಾರೆ. ಶವ ಮನೆಯೊಳಗಿಟ್ಟುಕೊಳ್ಳುವಂತಿಲ್ಲಾ. ಅದಿದ್ದರೆ ದಿನಚರಿ ಊಟ ಉಪಚಾರಕ್ಕೆ ಕೂಡಾ ಅವಕಾಶವಿಲ್ಲಾ ಅಪವಿತ್ರ. ನಾರಲು ಶುರುವಾಗುತ್ತದೆ. ದೇಹವನ್ನು ಬಿಟ್ಟು ಆತ್ಮ ಹೋದೊಡನೆಯೇ, ಮನೆಬಿಟ್ಟು ದೇಹಸಾಗಿಸಲು ಕಾತುರ. ಅದು ಗಂಟೆಗಂಟೆಗೂ ರೂಪ ಭೀಕರವಾಗಿ, ಗಂಧ ದುರ್ಗಂಧವಾಗಿ, ಸೆಳೆತ ರಸ ಸೋರುತ್ತಾ ಕೊಳೆಯಲು ಶುರುವಾಗುವುದು. ಹೀಗಿರುವಾಗ ಈ ಜೀವಾತ್ಮನು ಹೋದಮೇಲೆ ಹೆಂಡತಿ ಕೂಡಾ "ಭಿಬ್ಯತಿ ತಸ್ಮಿನ್‌ಕಾಯೇ" ಆ ದೇಹವನ್ನು ಕಂಡು ಹೆದರುವಳು ಎಂದು ಶಂಕರರು ವಿವರಿಸಿರುವುದು ಸರಿಯೇ. ಆ ಬೆಳಗಿಸಬಲ್ಲ ಸೂಕ್ಷ್ಮತತ್ವ–ಜೀವನಂ ಸರ್ವಭೂತೇಷು–ಪರಮಾತ್ಮ.

ತಪವೆಂದರೆ ಕುದಿಯುವುದು. ತಪಸ್ವಿಗಳು ಯಾವುದಕ್ಕಾಗಿ ತಪಿಸು ವರೋ, ಯಾವುದನ್ನು ಅವರ ತಪದಿಂದ ಬೆಳಗಿ ಕಾಣುವರೋ ಆ ತಪ

ಶಕ್ತಿಯೇ ತಾನು. ತಪಸ್ಸಿನಲ್ಲಿರುವ ಅಂಗಗಳ ಪೈಕಿ ಮುಖ್ಯವಾದುದು ಪರಮಾತ್ಮ ತತ್ವದರ್ಶನ. ಆಸನದಲ್ಲಿ ಭದ್ರಿತವಾಗಿ ಮಂಡಿಸಿ ಕಣ್ಣು ಮುಚ್ಚಿ ಧ್ಯಾನಮಾಡುತ್ತಿರುವುದು ತುಚ್ಛ ಇಹವಸ್ತುಗಳಾಗಿದ್ದರೆ- ಅವುಗಳ ಮೇಲೆ ಮನಸ್ಸು ಹರಿಯುತ್ತಿದ್ದರೆ-ಅದು ತಪವಲ್ಲ. ತಪದ ಮುಖ್ಯತತ್ವ, ಪರತತ್ವದಲ್ಲಿ ಲೀನವಾಗಿರುವುದು. ಅದಕ್ಕೆ ತಪವು ದಾರಿಯೂ ಹೌದು, ಗುರಿಯೂ ಹೌದು, ಅದೇ ಪರಮಾತ್ಮ. ಅವನಲ್ಲೇ ಮುಳುಗಿ ತೇಲಿರುವುದು, ಅವನನುಗ್ರಹದಿಂದಲೇ.

**ಬೀಜಂ ಮಾಂ ಸರ್ವಭೂತಾನಾಂ । ವಿದ್ಧಿ ಪಾರ್ಥ ಸನಾತನಮ್ ।**
**ಬುದ್ಧಿರ್ಬುದ್ಧಿಮತಾಮಸ್ಮಿ । ತೇಜಸ್ತೇಜಸ್ವಿನಾಮಹಮ್ ॥೧೦॥**

ಸನಾತನಂ-ಅನಾದಿಯಾಗಿ, ಸರ್ವಭೂತೋತ್ಪತ್ತಿಗೆ ಕಾರಣವಾದ ಬೀಜ ನಾನು. ಬೀಜವೆಂದರೆ ಘನೀಭೂತವಾದ ಸೂಕ್ಷ್ಮವಾದ ಸಣ್ಣ ಆಕಾರ. ಮುಂದೆ ವೃದ್ಧಿಹೊಂದಿ ಪಸರಿಸಿ ಬೆಳೆಯಬಲ್ಲ ಅಡಗಿದ ಅಣು ಶಕ್ತಿ. ಆ ಬೀಜವೇ ಕೊಳೆತು ಮುಂದೆ ಮರವಾಗುವುದು. ಅದರಲ್ಲಿನ ಮೊಳಕೆಗೆ ಆಹಾರವಾಗುವುದು. ಛಾಂದೋಗ್ಯದಲ್ಲಿ ಅರುಣಿಯ ಮಗ ನಾದ ಶ್ವೇತಕೇತುವಿಗೆ "ತತ್ವಮಸಿ" ಎಂದು ೯ ಸಾರಿ ವಿಧವಿಧವಾಗಿ ಉಪಮಾನ ಸಹಿತ ಉಪದೇಶ ಮಾಡುವುದರಲ್ಲೊಂದು ಈ "ಆಲದ ಮರದ ಬೀಜ"ದ ಅಧ್ಯಾಯ. ಪ್ರಕೃತಿ ಪಾಠ ವಿಮರ್ಶೆಯಲ್ಲಿ ಪ್ರತ್ಯಕ್ಷ ಪ್ರಯೋಗ ಪಾಠದಂತೆ ಬಹು ಸ್ವಾರಸ್ಯವಾಗಿ ತಂದೆ ಮಗನಿಗೆ ಹೇಳುತ್ತಾನೆ. "ಒಂದು ಆಲದ ಮರದ ಹಣ್ಣು ತೆಗೆದುಕೋ" ಮ-ತಂದೆ. ತ- ಅದನ್ನು ಒಡೆದು ನೋಡು. ಮ-ಸಣ್ಣ ಬೀಜಗಳು ಕಾಣುತ್ತವೆ. ತ-"ಆ ಒಂದು ಬೀಜವನ್ನು ಒಡೆದುನೋಡು, ಏನು ಕಾಣುತ್ತದೆ" ಮ-ಒಡೆದು ನೋಡಿದೆ. ಏನೂ ಕಾಣುವುದಿಲ್ಲಾ. "ಏಷೋಣಿಮ್ನ ಏವಂ ಮಹಾ ನ್ಯಗ್ರೋಧಸ್ತಿಷ್ಠತಿ" "ಆ ಕಾಣದ ಅಣುವಿನಲ್ಲೇ ಈ ಮಹಾ ಆಲದ ಮರವಿದೆ" ಎಂದು ಅವ್ಯಕ್ತ ಪರಮಾತ್ಮನು ಸೃಷ್ಟಿಯಲ್ಲಿ ಅವ್ಯಕ್ತ ಸ್ಥಿತಿ ಯಿಂದ ಕಾಲನ ಗತಿಯಲ್ಲಿ ಮಹತ್ ವ್ಯಕ್ತನಾಗುವಂತೆ ಆ ಅವ್ಯಕ್ತ

ಪರಮಾತ್ಮನೇ ನೀನು–ತತ್ವಮಸಿ–ಎಂದು ದಿವ್ಯವಾಗಿ ಪ್ರಕೃತಿ ಪ್ರಯೋಗ ಪಾಠದೊಂದಿಗೆ ಬೋಧಿಸಿರುವುದು ಜ್ಞಾಪಕ ಬರುತ್ತದೆ.

ವ್ಯಕ್ತಿದೆಸೆಯಲ್ಲಿರುವ ಜೀವಭೂತವು ಅವ್ಯಕ್ತವಾದಾಗ ಅದರಂಶವೂ ಅವ್ಯಕ್ತವಾಗಿ ಸೂಕ್ಷ್ಮವಾಗಿ ಈ ಬೀಜದೆಸೆಯಲ್ಲಿದ್ದು ಪುನಃ ವ್ಯಕ್ತದೆಸೆಯಲ್ಲಿ ಪುನಃ ವ್ಯಕ್ತದೆಸೆಗೆ ಬರುವ ಈ ಅಣುಅವಸ್ಥೆಯು (ಬೀಜವು) ಪರಮಾತ್ಮನ ಶಕ್ತಿಯೇ; ಇದು "ಜೀವನಂಸರ್ವಭೂತೇಷು" ಇದ್ದು ಮುಂದುವರಿದ ತತ್ವ. ಈ ಜೀವರುಗಳು ಮರಣದಿಂದ ಅದೃಷ್ಟರಾದಾಗ ಅದರ ಪೀಳಿಗೆಯನ್ನು ಅಭಿವೃದ್ಧಿ ಮಾಡಿ ಸಂತತಿ ನಡೆಸಿಕೊಂಡು ಬರುವ ಪ್ರಾಣಾಧಾರಶಕ್ತಿ "ಬೀಜಂ ಮಾಂ ಸರ್ವಭೂತಾನಾಂ" ಪರಮಾತ್ಮ. ಈ "ಬೀಜಾಂಕುರ" ನ್ಯಾಯವು ಸನಾತನ. ಇದರಲ್ಲಿ ಯಾವದು ಯಾವುದಕ್ಕೆ ಉತ್ಪತ್ತಿ ಕಾರಣವೆಂಬ ತರ್ಕವೇ ಬೇಡ. ಇದಕ್ಕೆ ಮೊದಲೇ ಇಲ್ಲ. ಸನಾತನ ಇದಕ್ಕೂ ಮೊದಲು ಹುಡುಕುವರು "ಮಾಂ" ಅವನನ್ನು ತಿಳಿಯಲಿ. ಅವನೇ ಬೀಜಕ್ಕೆ ಅಂಕುರ, ಅಂಕುರಕ್ಕೆ ಬೀಜ. ಜೀವನವೂ ಅವನೇ, ಬೀಜವೂ ಅವನೇ.

ಬುದ್ಧಿವಂತರಲ್ಲಿ ಬುದ್ಧಿಯು ನಾನೇ. "ಪ್ರಜ್ಞಾನಂ ಬ್ರಹ್ಮ" ಎಂಬ ಐತರೋಪನಿಷತ್ ವಾಕ್ಯಸ್ಥಾಪನೆಯ ಹಿನ್ನೆಯಲ್ಲಿ, ಪ್ರಜ್ಞಾನವೆಂದರೆ "ಸಂಜ್ಞಾನ, ಆಜ್ಞಾನ, ವಿಜ್ಞಾನ, ಪ್ರಜ್ಞಾನ, ಮೇಧಾ, ದೃಷ್ಟಿ, ಧೃತಿ, ಮತಿ, ಮನೀಷಾಜೂತಿ, ಸ್ಮೃತಿ, ಸಂಕಲ್ಪ, ಕ್ರತು, ಅಸು, ಕಾಮ, ವಶ" ಎಲ್ಲವನ್ನೂ ಪ್ರಜ್ಞಾನದ ಹೆಸರೆಂದು ಸೇರಿಸಿದ್ದಾರೆ. ಇದರಲ್ಲಿ ಬುದ್ಧಿಯನ್ನು ನೀವು ಸೇರಿಸಿ ಅದೇ ಪ್ರಜ್ಞಾನವೆಂದೂ, ಅದೇ ಬ್ರಹ್ಮವೆಂದೂ ತಿಳಿದರಾಯಿತು, ಈ ಚಿತ್‌ಶಕ್ತಿಗಳೆಲ್ಲಾ ಅವನದೇ. ಅವನ ಸನ್ನಿಧಾನದ ಪ್ರಚೋದನೆಯೇ. ತೇಜಸ್ವಿಯಾದವನನ್ನು ಅಥವಾ ವಸ್ತು ಪ್ರಾಣಿಗಳನ್ನು ನೋಡಿದರೆ ಯಾರ ಮನ ತಾನೆ ಆಕರ್ಷಣೆಯಾಗದು! ಒಳಗಿನ ಮಹತ್ತನ್ನು ಹೊರಗೆ ಪ್ರಕಾಶಿಸಿ ತೋರುವುದೇ ತೇಜಸ್ಸು. ಅದಕ್ಕಾಗಿಯೇ ಸೋತ ವಿಶ್ವಾಮಿತ್ರ ಋಷಿಗಳು ಗೆದ್ದ ಬ್ರಹ್ಮಋಷಿಯ ತೇಜಸ್ಸನ್ನು ಒಪ್ಪಿಕೊಳ್ಳುತ್ತಾ "ಧಿಕ್, ಧಿಕ್, ಕ್ಷತ್ರಿಯಬಲಂ, ಬ್ರಹ್ಮತೇಜೋ ಬಲಂಬಲಂ" ಎಂದು ತಾವೂ ಆ ಬ್ರಹ್ಮ

ತೇಜೋಬಲಕ್ಕೆ ಅಪ್ರತಿಮ ಸಾಹಸ ತಪದಿಂದ ಅದನ್ನೂ ಪಡೆದರು. ಮಹಾ ತೇಜಸ್ವಿಗಳಾದ ಪರಂಧಾಮವನ್ನೈದ ಶ್ರೀ ಶೃಂಗೇರಿ ಜಗದ್ಗುರುಗಳು ಶ್ರೀ ಚಂದ್ರಶೇಖರಭಾರತಿಗಳು ಅಂತರ್ಮುಖರಾಗಿದ್ದಾಗ, ವೈದ್ಯನಾಗಿ ನೋಡಹೋದ ನನಗೆ ಅವರ ಪ್ರಜ್ವಲಿತ ಕಣ್ಣುಗಳನ್ನೆದುರಿಸಲೇ ಅಸಾಧ್ಯವಾಗಿತ್ತು. ಆ ಕಣ್ಣುಗಳು ಒಳಹೊಕ್ಕು ಅಂತರ್ಯದ ಒಣಬಂಡವಾಳವನ್ನೆಲ್ಲಾ ಎಲ್ಲಳೆದು ಅಲ್ಲಿಗಳೆವುದೂ ಎನ್ನುವಂತಿತ್ತು ಆ ತೇಜಸ್ವಿಗಳ ಆ ಕಣ್ಣುಗಳ ತೇಜಸ್ಸು.

**ಬಲಂ ಬಲವತಾಂ ಚಾಹಂ । ಕಾಮರಾಗವಿವರ್ಜಿತಮ್ ।**
**ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥೧೧॥**

ಬಲಶಾಲಿಗಳಲ್ಲಿ ಬಲವು ನಾನು–ಆದರೆ ಭಗವಂತ ಒಂದು ಚುಟಿಕೆ ಇಟ್ಟ ಅದರಲ್ಲಿ–ಕಾಮರಾಗ ವಿವರ್ಜಿತವಾದ ಯಾವ ಬಲವುಂಟೋ ಎಂದು. ಕಾಮರಾಗವಿರುವವನ ಬಲ ಯಾವ ಕಡೆಗಾದರೂ ಹರಿದು ಅನರ್ಥಕಾರಿಯಾಗಲಾಸ್ಪದವಿದೆ. ಸರಿಯಾಗಿ ಉಪಕಾರವಾಗಬೇಕಾದರೆ, ಕಾಮರಾಗವಿಲ್ಲದಿರಬೇಕು. ಆಗ ಸನ್ಮಾರ್ಗದಲ್ಲುಪಯೋಗವಿರುತ್ತೆ. ಭಗವಂತನೇ ಗೀತೆಯಲ್ಲಿ ಎರಡಾವರ್ತಿ, ಕಾಮ, ಕ್ರೋಧ ರಜೋಗುಣ ಇವು ಜ್ಞಾನಕ್ಕೆ ನಿತ್ಯವೈರಿಗಳೆಂದೂ, (೩, ೩೭) ಕಾಮ, ಕ್ರೋಧ ಲೋಭ ಮೂರನ್ನೂ ತ್ಯಜಿಸೆಂದೂ (೧೬, ೨೦) ಸಾರಿ ಸಾರಿ ಹೇಳಿದ್ದಾನೆ. ಕಾಮರಾಗಾದಿಗಳು ನಮ್ಮ ಬಲಪ್ರಯೋಗ ನಿಶ್ಚಯ ಮಾಡದ ಮೇಲೆ, ಬಲಪ್ರಯೋಗದ ಅವಶ್ಯಕತೆಯೇ ಇಲ್ಲದೆ ಆ ಒಲವಿದ್ದು ಬಲವಂತನಾಗಿ ತಾನೇ ಯಾಕಿರಬೇಕೆಂದರೆ, ಆ ಕಾಮವಿದ್ದರೂ ಅದು ಧರ್ಮವಿರುದ್ಧವಲ್ಲದ ಕಾಮವಾದರೆ ಅದು ಆತ್ಮಬಲವೇ. ಕಾಮವಿಲ್ಲದ ಮೇಲೆ ಈ ಪ್ರಪಂಚವಿನ್ನೆಲ್ಲಿ! "ಸ ಏಕಾಕೀ ನರಮತೇ"–ಆತ್ಮನು ಒಬ್ಬನೇ ಇದ್ದಾಗ ತಾನೊಬ್ಬನೇ ಏಕಾಂಗಿಯಾಗಿ ರಮಿಸಲಾಸ್ಪದವಿಲ್ಲದೇ ಸೃಷ್ಟಿಮಾಡಲು ಕಾಮಿಸಿದನು–ಇಚ್ಛಿಸಿದನು. ಇದರಂತೆ ಧರ್ಮವಿರುದ್ಧವಲ್ಲದ ಆನಂದ ವ್ಯವಹಾರದಲ್ಲಿ, ಇಷ್ಟಪೂರ್ತಿಗಳಿಸುವ ಕಾಮವು ಪರಮಾತ್ಮ ಶಕ್ತಿ ಅಂಶವೇ. ನಮ್ಮ ಕಲ್ಪನೆಯಲ್ಲಿ, ಕಾಮನು ವಿಷ್ಣುವಿನ

ಮಗನು. ಮನ್ಮಥನು ವಿಷ್ಣುವಿನ ಸಂಕಲ್ಪದಂತೆ, ಮನ್ಮಥ ಬಾಣಗಳಿಂದ ಜೀವಿಗಳನ್ನು ಹತಮಾಡಿ ಕಾಮವಶರಾಗಿ ಮಾಡುವನೆಂದು ಸಂಕೇತ. ಸ್ವಾಮಿಯ ಪುತ್ರ, ಸ್ವಾಮಿಯ ಮನೋಗತದಂತೆ ಲೋಕಾಭಿವೃದ್ಧಿ, ಪ್ರೇಮಕಲಾಪಗಳಿಗೆ ಸಹಾಯಕನು. ಅವನೂ ಅತಿಕ್ರಮಿಸಲಾರ. ಪರಮೇಶ್ವರನು ಧ್ಯಾನೈಕ್ಯನಾಗಿದ್ದಾಗ ತನ್ನ ಚೇಷ್ಟೆಯನ್ನು ತೋರಿ ಧರ್ಮವಿರುದ್ಧವಾಗಿ ತಪಸ್ವಿಯ ಮನದಲ್ಲಿ ಕಾಮಾಂಕುರ ವೆಸಗಲು ಪ್ರಯತ್ನಿಸಿದುದಕ್ಕಾಗಿ ದಹಿಸಲ್ಪಟ್ಟು, ದೇಹವಿಲ್ಲವಾದನು. ಕಾಯವಿಲ್ಲದ ಕಾಮ, ಪ್ರವರ್ತಿಗೆ ಕಾಯವನ್ನೇ ಅನುಸರಿಸಬೇಕು. ಆ ಕಾಮಾಂಕುರವಾದ ಮೇಲೆ ಆ ಕಾಮವೇಗದಲ್ಲಿ ಧರ್ಮವಿರುದ್ಧವಾದ ನಡವಳಿಕೆಗವಕಾಶ ಕೊಡಬಾರದು. ಧರ್ಮದ ಎಲ್ಲೆ ಮೀರದೇ ಶಾಸ್ತ್ರೋಕ್ತವಾದ ಜೀವನದಲ್ಲೇ ಎಷ್ಟೋ ಕಾಮಸಂಕಲ್ಪ, ಕಾಮೋಪಭೋಗಗಳಿಗೆ ಆಸ್ಪದವಿದೆ. ಅದಕ್ಕೆ ಧರ್ಮವನ್ನೂ ಅದಕ್ಕೆ ಸಹಾಯಕವಾಗಿ ಅರ್ಥವನ್ನೂ ಹೇಳಿದನಂತರ ಇವೆರಡರಧೀನವಾಗಿ ಕಾಮ ಹೇಳಿರುವುದು ಧರ್ಮಶಾಸ್ತ್ರದಲ್ಲಿ. ಕಾಮ ಸ್ವಾರ್ಥ, ಧರ್ಮಾವಿರುದ್ಧವಾದರೆ ಪರಾರ್ಥ. ಧರ್ಮವಿರುದ್ಧ ಕಾಮವು ಪಶುಸ್ವೇಚ್ಛಾಪ್ರವರ್ತಿಯಲ್ಲಾ ಅದಕ್ಕು ಪಯೋಗಿಸುವ ಪಶುಶಕ್ತಿಯ ಬಲವೂ ಅಲ್ಲಾ. ಧರ್ಮಾನುಸಾರವಾದ ಕಾಮಕ್ಕೆ ಉಪಯೋಗವಾಗುವ ಆತ್ಮಬಲವು ಪರಮಾತ್ಮನದೇ. ಇಲ್ಲಿ ಪ್ರಜೋತ್ಪತ್ತಿಯ ಕಾಮಕ್ರೀಡೆಯ ಕಾಮವೊಂದೇ ಅರ್ಥವಲ್ಲಾ. ಇತರ ಎಲ್ಲಾ ಐಚ್ಛಿಕ ಇಚ್ಛೆಗಳೂ ಕಾಮದಲ್ಲಿ ಸೇರಿದೆ.

ತನಗಿಚ್ಛೆ ಬಂದಂತೆ ವರ್ತಿಸದೆ, ಧರ್ಮಕ್ಕನುಸಾರವಾಗಿ ಕಾಮ ಕರ್ಮಗಳನ್ನೆಸಗಲುಪದೇಶಕ್ಕಾಗಿಯೇ ಭಗವದ್ಗೀತೆ ಹುಟ್ಟಿದುದು. ಅರ್ಜುನನು ತನ್ನಿಚ್ಛೆ ಬಂದಂತೆ ನಡೆದೇ ಬಾಣಬಿಲ್ಲನ್ನು ಬಿಸಿಟುದು. ಧರ್ಮವಿರುದ್ಧವಾದ ಆಕಾಂಕ್ಷೆ. ಧರ್ಮಕ್ಕೆ ಕಟ್ಟುಬಿದ್ದು ಬಲ ಉಪಯೋಗಪಡಿಸಲಿಲ್ಲವೇ ಸ್ವಾಮಿ ಇಷ್ಟೆಲ್ಲಾ ಹೇಳುವುದು. ಎಲ್ಲಾ ಆಕಾಂಕ್ಷೆಗಳಿಗೂ, ಮನೋಗತಗಳಿಗೂ ಈ ಒಂದು ಬಂಧನವಿದೆ ನಮ್ಮ ಸನಾತನ ಧರ್ಮದಲ್ಲಿ. ಯಾವ ಪೇಕ್ಷೆಯನ್ನೂ ಧರ್ಮವಿರುದ್ಧವಾಗಿ ಮಾಡಬಾರದು. ಆ ಧರ್ಮವೇನೆಂಬುದರ ಮೇಲೆಯೇ ನಮ್ಮ ಸನಾತನ ಧರ್ಮ

ಬೆಳೆದಿದೆ. ಅನಾದಿಯಾಗಿ ಪುರಾತನ ಕಾಲದಿಂದ ವೇದವೇದಾಂತ ಗ್ರಂಥಗಳೆಲ್ಲಾ ಈ ಧರ್ಮದ ವಿವರಣೆಯಲ್ಲೇ ಬೆಳೆದಿದೆ. "ಪುಣ್ಯಸ್ಯಫಲಮಿಚ್ಛಂತಿ, ಪುಣ್ಯಂನೆಚ್ಛಂತಿ ಮಾನವಾಃ" ಎಂದು ವ್ಯಾಸರು ಹೇಳಿರುವರು. ಪುಣ್ಯಫಲ ಬೇಕಾದರೆ, ಪುಣ್ಯವನ್ನು ಮಾಡಬೇಕು. ಪುಣ್ಯವೆಂದರೆ "ಧರ್ಮಾವಿರುದ್ಧಃ ಕಾಮ" ಧರ್ಮವೇ ಕಾಮಕ್ಕೆ ಮಾರ್ಗ ತೋರಬೇಕು. ಆಗ ಮಾನವನ ಮನದಿಚ್ಛೆಗಳು ಸನ್ಮಾರ್ಗದಲ್ಲೇ ಇರುತ್ತವೆ. ಅದರಿಂದ ತನಗೂ, ಪರರಿಗೂ, ಲೋಕಕ್ಕೂ ಕಲ್ಯಾಣ ಉಂಟು. ಧರ್ಮಭೀರುವಾದವನು, ಪರರಿಗಾಗುವ ಅಹಿತವನ್ನೂ ಲೋಕಕ್ಕಾಗುವ ಅಕಲ್ಯಾಣವನ್ನೂ ಎಣಿಸನು. ಅತಿಕ್ರಮಿಸಿ ಸ್ವಾರ್ಥಸುಖಕ್ಕಾಗಿ ಏನನ್ನಾದರೂ ಮಾಡಿಬಿಡುವನು.

೭ ರಿಂದ ೧೧ನೇ ಶ್ಲೋಕದವರೆಗೂ ಎಲ್ಲದರಲ್ಲಿರುವ ಸಾರತತ್ವವೂ ತಾನೇ ಎಂದು ಭಗವಂತ ಸಾರಿ, "ಸೂತ್ರೇ ಮಣಿಗಣಾ ಇವ" ಎನ್ನುವುದಕ್ಕೆ ಉದಾಹರಣೆಗಳನ್ನು ಕೊಟ್ಟನು. ಮುಂದೆ ೧೦ ನೇ ಅಧ್ಯಾಯದ ವಿಭೂತಿಯೋಗದಲ್ಲಿ ಎಲ್ಲಾ ಬಲಯುಕ್ತವೂ, ಐಶ್ವರ್ಯಯುಕ್ತವೂ, ಸಾರಯುಕ್ತವೂ ಆದ ಪದಾರ್ಥಗಳಲ್ಲಿ "ಮಮತೇಜೋಂಶ ಸಂಭವಂ" ತನ್ನ ಪ್ರಭಾವದ ಅಂಶದಿಂದಲೇ ಹುಟ್ಟಿದವೆಂದು ವಿಸ್ತರಿಸಿದ್ದಾನೆ.

**ಯೇ ಚೈವ ಸಾತ್ತ್ವಿಕಾ ಭಾವಾ-ರಾಜಸಾಸ್ತಾಮಸಾಶ್ಚ ಯೇ ।**
**ಮತ್ತ ಏವೇತಿ ತಾನ್ ವಿದ್ಧಿ । ನ ತ್ವಹಂ ತೇಷು ತೇ ಮಯಿ ॥೧೨॥**

ಸಾತ್ವಿಕ, ರಾಜಸ, ತಾಮಸಭಾವಗಳೆಲ್ಲವೂ ನನ್ನಧೀನವೇ. ಅವೆಲ್ಲವೂ ನನ್ನಧೀನದಲ್ಲಿರುವವನೇ ವಿನಾ, ನಾನು ಅವುಗಳಧೀನನಲ್ಲ. ಪರಮಾತ್ಮ ಗುಣಾತೀತ, ಭಾವಾತೀತ. ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವದ ಪರಮೇಶ್ವರನೇ, ಸರ್ವ ಭೂತಾತ್ಮನಾಗಿ ಜಗತ್ತಿನಲ್ಲಿರುವಾಗ, "ಕಿಂ ನಿಮಿತ್ತಂ ಜಗತೋ ಅಜ್ಞಾನಂ"—ಯಾವ ಕಾರಣದಿಂದ ಜಗತ್ತಿನಲ್ಲಿ ಅಜ್ಞಾನವೆಂದು ಶಂಕರ ಭಾಷ್ಯದಲ್ಲಿ ಪ್ರಶ್ನಿಸಿ, ೧೩ ನೇ ಶ್ಲೋಕಾರ್ಥವನ್ನು ಉತ್ತರವಾಗಿ ಹೇಳುತ್ತಾರೆ. ತ್ರಿಗುಣಮಯ ಗುಣವಿಕಾರದಿಂದ ರಾಗದ್ವೇಷ ಮೋಹಾದಿ ಪ್ರಕಾರ ಭಾವದಿಂದ ಈ ಸರ್ವಪ್ರಾಣಿಗಳೂ

ಜಗನ್ಮೋಹಿ ಅವಿವೇಕ ತತ್ಪ್ರಾವಾದಿತದಿಂದ ಸತ್ಯವನ್ನು ತಿಳಿಯಲಾರದೇ, ಮಾಯೆಯಿಂದ ಮೇಲೆ ಹೇಳಿದ ಗುಣಗಳಿಂದ ಪರಕ್ಕೆ ವ್ಯತಿರಿಕ್ತ ವಿಲಕ್ಷಣ ವಾದುದನ್ನೇ ತಿಳಿದು, ಅವ್ಯಯ (ಜನ್ಮಾದಿ ಸರ್ವಭಾವ ವಿಕಾರವರ್ಜಿತ) ವಾದ ನನ್ನ ರೂಪ ತಿಳಿಯರು. ಮುಂದೆ ೧೪ ನೇ ಅಧ್ಯಾಯ, ಗುಣ ತ್ರಯವಿಭಾಗ ಯೋಗದಲ್ಲಿ ಈ ಮೂರು ಗುಣಗಳ ವಿಮರ್ಶೆ ನಡೆದಿದೆ. ಇಲ್ಲಿ ಅವುಗಳ ಉತ್ಪತ್ತಿಯನ್ನು ಮಾತ್ರ ಹೇಳಿದೆ. ಈ ಗುಣಗಳನ್ನೇ ನಾವು ತ್ರಿಮೂರ್ತಿ ಪ್ರಾಧಾನ್ಯ ಗುಣಗಳಾಗಿ ಗ್ರಹಿಸಿದ್ದೇವೆ. ಈ ಮೂರು ಗುಣಗಳಿಂದ ಪ್ರಕೃತಿ ವ್ಯಾಪಿಸಿದೆ.

**ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್ ।**
**ಮೋಹಿತಂ ನಾಭಿಜಾನಾತಿ । ಮಾಮೇಭ್ಯಃ ಪರಮವ್ಯಯಮ್ ॥೧೩॥**

ಈ ತ್ರಿಗುಣ ಮೋಹಿತ ಜಗತ್ತು, "ಪರಂ, ಅವ್ಯಯಂ" ಆದ ಪುರುಷನನ್ನು ತಿಳಿಯಲರಿಯದು. ಈ ತ್ರಿಗುಣ ಮೋಹಿತವಾದ ಪ್ರಕೃತಿ ಯಲ್ಲಿ, "ಸೂತ್ರೇ ಮಣಿಗಣಾ ಇವ"ನಾಗಿರುವ ಸೂತ್ರದಾರನನ್ನು ತಿಳಿಯರು. ಪ್ರಕೃತಿ ಕಾರಣನಾದ ಪುರುಷನನ್ನೇ ಪ್ರಕೃತಿಯ ತ್ರಿಗುಣ ಮೋಹವು ಮುಚ್ಚುವುದು.

**ದೈವೀ ಹ್ಯೇಷಾ ಗುಣಮಯೀ । ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯಂತೇ । ಮಾಯಾಮೇತಾಂ ತರಂತಿ ತೇ ॥೧೪॥**

ತ್ರಿಗುಣಾತ್ಮಿಕವಾಗಿಯೂ, ಜಯಿಸಲಶಕ್ತನಾಗಿಯೂ ಶಕ್ತಿಯುತವಾದ ನನ್ನ ಮಾಯಾದೇವಿಯನ್ನು ದಾಟಲು, ನನ್ನ ಶರಣ ಹೊಂದುವವರು ಅದನ್ನು ದಾಟುವರು.

ಭಗವಾನನು ಕ್ರಮವಾಗಿ ಪ್ರಕೃತಿ ಪುರುಷ; ಶಕ್ತ, ಶಕ್ತಿ; ದೇಹ, ದೇಹಿ; ಇವುಗಳನ್ನು ಸೂತ್ರ, ಮಣಿಗಣಗಳಂತೆ ಪ್ರತ್ಯೇಕವಾಗಿ ವಿಂಗ ಡಿಸಿ, ಹೇಗೆ ದೇಹವೇ ನಾನೆಂದು ತಿಳಿದು ದೇಹಿಯನ್ನು ಮರೆವುದು, ಪ್ರಕೃತಿ ಗುಣಗಳಲ್ಲಿ ಪುರುಷನನ್ನು ಕಾಣದಿರುವುದು, ಈ ವ್ಯಕ್ತ ಪ್ರಪಂಚ ಸರ್ವದಲ್ಲಿ ವಿಲಕ್ಷಣನಾದ ಅವ್ಯಕ್ತ ನಾಶರಹಿತನನ್ನು ತಿಳಿಯದಿರುವುದು

ಮಾಯಾಚ್ಛಾದನೆಯಿಂದ ಎಂದು ಕೃತಪಡಿಸಿದನು, ಶ್ವೇತಾಶ್ವತರೋಪನಿಷತ್ತಿನಲ್ಲಿ (೪ ಅ, ೧೦ ಮಂ)

**"ಮಾಯಾಂತು ಪ್ರಕೃತಿಂ ವಿಂದ್ಯಾನ್ಮಾಯಿನಂತು ಮಹೇಶ್ವರಂ ।**
**ಅಸ್ಯಾವಯವಭೂತೈಸ್ತುವ್ಯಾಪ್ತಗ್ ಸರ್ವಮಿದಂ ಜಗತ್ ॥"**

—ಪ್ರಕೃತಿಯು ಮಾಯೆ, ಮಹೇಶ್ವರನು ಮಾಯಿ, ಅವನ ಅವಯವಗಳಾದ ಭೂತಗಳಿಂದ ಸರ್ವ ಜಗತ್ತೂ ವ್ಯಾಪ್ತವಾಗಿದೆ ಎಂದು ಹೇಳಿವೆ. ಮಾಯಿಯನ್ನರಿತರೆ ಅವನ ಮಾಯೆಯ ಪ್ರದರ್ಶನವೆಲ್ಲಾ ತಿಳಿಯುತ್ತೆ. ಅವನನ್ನು ತಿಳಿಸಲೇ ಶ್ವೇತಾಶ್ವೇತರದ ಮುಂದಿನ ಶ್ಲೋಕಗಳಿವೆ. ಇದು ಸೀತಾದೇವಿಯ ವಚನ "ಅನನ್ಯಾರಾಘವೇಂದ್ರಾಹಂ, ಭಾಸ್ಕರೇಣಪ್ರಭಾಯಥಾ" ಎನ್ನುವುದನ್ನು ಮನಸ್ಸಿಗೆ ತರುತ್ತದೆ. ಸೂರ್ಯನ ಕಿರಣಗಳು ಸೂರ್ಯನಿಗಿಂತಲೂ ಹೇಗೆ ಬೇರೆಯಲ್ಲವೋ ಹಾಗೆಯೇ ಶಕ್ತಿ ಪ್ರಕೃತಿ ದೇವಿಯೂ ಶಕ್ತಪುರುಷನಿಗೆ ಬೇರೆಯಲ್ಲ. ಬೇರ್ಪಡಿಸಲಾಗುವುದಿಲ್ಲಾ. ಸೂರ್ಯಪ್ರಭೆಯಿಂದಲ್ಲದೆ ಸೂರ್ಯನನ್ನು ತಿಳಿಯಲು ಬೇರೆ ಮಾರ್ಗವಿಲ್ಲಾ. ಅವನ ಪ್ರಕಾಶ, ಅವನ ತಾಪ, ಅವನ ಪ್ರಭೆ, ಅವನ ಕಿರಣಗಳಿಂದಲೇ ನಮಗೆ ತಲುಪಿ ಅವನರಿವನ್ನುಂಟುಮಾಡುತ್ತದೆ. ಅವನ ಮಾಯೆಯೂ ಅಂತೆಯೇ. "ಶಕ್ತಿ ಶಕ್ತಾಂ ಪೃಥಗ್ ನಾಸ್ತಿ" ಶಕ್ತಿಯನ್ನು ಶಕ್ತನಿಂದ ಬೇರೆ ಮಾಡಲು ಸಾಧ್ಯವೇ ಇಲ್ಲ. ಶಕ್ತನನ್ನು ಶರಣು ಹೊಕ್ಕರೆ ಶಕ್ತಿ ವೇದ್ಯವಾಗುತ್ತೆ.

**ನ ಮಾಂ ದುಷ್ಕೃತಿನೋ ಮೂಢಾಃ । ಪ್ರಪದ್ಯಂತೇ ನರಾಧಮಾಃ ।**
**ಮಾಯಯಾಪಹೃತಜ್ಞಾನಾ-ಆಸುರಂ ಭಾವಮಾಶ್ರಿತಾಃ ॥೧೫॥**

ಅಸುರೀಭಾವವನ್ನಾಶ್ರಯಿಸಿದವರು, ಮಾಯೆಯಿಂದ ಕದಿಯಲ್ಪಟ್ಟ ಜ್ಞಾನವುಳ್ಳವರಾಗಿ ದುಷ್ಕೃತ್ಯಗಳನ್ನು ಮಾಡುವ ಮೂಢರಾಗಿ, ಕೀಳು ದರ್ಜೆಯ ಮನುಷ್ಯರಾಗಿ ನನ್ನನ್ನು ಶರಣು ಹೊಂದುವುದಿಲ್ಲಾ. ಮುಂದೆ ೧೬ ನೇ ಅಧ್ಯಾಯ, ದೈವಾಸುರ ಸಂಪದ್ವಿಭಾಗಯೋಗದಲ್ಲಿ ಈ ಅಸುರೀ ಜನರ ವಿವರಣೆಯಿದೆ. ಈಗ ಪ್ರಕೃತದಲ್ಲಿ ಮಾಯೆ ದಾಟಲು ಶರಣು ಹೋಗದ, ಮಾಯಾವೃತರಾದ ಕೀಳು ಸಂಸ್ಕೃತಿಯ ಮನುಷ್ಯರು ಮಾತ್ರ

ಭಗವಂತನನ್ನು ಆಶ್ರಯಿಸುವುದಿಲ್ಲವೆಂದು ಇಲ್ಲಿ ಹೇಳಿದೆ. ಅವರೇನು ಮಾಡ್ಯಾರು, ಅವರ ಜ್ಞಾನ, (ವಿಮರ್ಶೆ) ಎಲ್ಲಾ ಮಾಯೆಯೆಂಬ ಚೋರಾಂಗಿಣಿ ಅಪಹರಿಸಿಬಿಟ್ಟು ಅಸುರೀಭಾವರನ್ನಾಗಿ ಮಾಡಿದ್ದಾಳೆ. "ಅಂಧಸ್ಯಮೇ ಹೃತ್ ವಿವೇಕ ಮಹಾಧನಸ್ಯ, ಚೋರೈ ಪ್ರಭೋಬಲಭಿ ರಿಂದ್ರಿಯ ನಾಮಧೇಯೈ" ಎಂದು ಶ್ರೀ ಶಂಕರರು ಶ್ರೀ ಲಕ್ಷ್ಮಿನೃಸಿಂಹ ಕರಾವಲಂಬನ ಸ್ತೋತ್ರದಲ್ಲಿ ಹೇಳಿರುವಂತೆ ಈ ಇಂದ್ರಿಯಗಳೇ ನಾನೆಂದು, ಅದರಾಸಕ್ತಿಯಲ್ಲಿದ್ದಾರೆ. ಅಸು ಎಂದರೆ ದೇಹವೇ ನಾನೆಂದು ತಿಳಿದವರು ಅಸುರರು. ಅದರ ಪೋಷಣೆಗೆ, ಅದರ ಇಂದ್ರಿಯ ವ್ಯಾಪಾರಕ್ಕೆ ಗುಲಾಮರು. ಅವರಿಗೆ ದೇಹದಲ್ಲಿರುವ ದೇಹಿ ನಾನು ಈ ದೇಹ ನಾನಲ್ಲವೆಂಬ ಜ್ಞಾನ ಅಪಹೃತವಾಗಿದೆ. ಆ ಅಸುರರೆಂತು ಆತ್ಮ ನನ್ನು ಶರಣುಹೊಂದಿಯಾರು, ಆತ್ಮಜ್ಞಾನವೇ ಇಲ್ಲದಾಗ. ಛಾಂದೋ ಗ್ಯೋಪನಿಷತ್ತಿನಲ್ಲಿ ಹೇಗೆ ಬ್ರಹ್ಮಆತ್ಮಜ್ಞಾನಕ್ಕಾಗಿ ದೇವತೆಗಳ ಪರವಾಗಿ ಇಂದ್ರನೂ, ಅಸುರರ ಪರವಾಗಿ ವಿರೋಚನನೂ ಪ್ರಜಾಪತಿಯ ಬಳಿಗೆ ಉಪದೇಶಕ್ಕಾಗಿ ಬಂದು, ಪ್ರಜಾಪತಿಯು ಅಸುವೇ, ದೇಹವೇ ಆತ್ಮ ಎಂದು ಹೇಳಿದುದನ್ನು ವಿಮರ್ಶಿಸದೆ ವಿರೋಚನನು ನಂಬಿ ದೇಹವೇ ಆತ್ಮನೆಂದು ಅಸುರರಿಗೆಲ್ಲಾ ತಿಳಿಸಿದನು. ಅಷ್ಟರಲ್ಲೆ ತೃಪ್ತರಾಗಿ ಮೋಹಿತ ರಾಗಿ ಅಸುರಕ್ಷಣೆಯೇ ಪರಮೋದ್ದೇಶವೆಂದು ನಂಬಿದವರೆಲ್ಲಾ ಅಸುರರು. ಅವರಿಗೆಲ್ಲಿಂದ ಬಂತು ಪ್ರಪತ್ತಿ–ಆ ಭಕ್ತನ ಶರಣತ್ವ.

**ಚತುರ್ವಿಧಾ ಭಜಂತೇ ಮಾಂ । ಜನಾಃ ಸುಕೃತಿನೋಽರ್ಜುನ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ । ಜ್ಞಾನೀ ಚ ಭರತರ್ಷಭ ॥೧೬॥**

ಸುಕೃತಿಗಳಾದ ನಾಲ್ಕು ವಿಧವಾದ ಜನಗಳು ನನ್ನನ್ನು ಭಜಿಸುವರು, ಅವರ್ಯಾರೆಂದು ವಿಭಾಗವನ್ನು ಮಾಡುತ್ತಾ ಹಾಸ್ಯದಲ್ಲಿ, ಮಂದಹಾಸ ನಾಗೇ ನುಡಿದಿರಬೇಕು ಪರಮಾತ್ಮ:—ದುಃಖಿ (ಆರ್ತ), ಬ್ರಹ್ಮ ಜಿಜ್ಞಾಸು, ಅರ್ಥಾರ್ಥಿ ಮತ್ತು ಜ್ಞಾನಿ. ಸಾವಿರಾರು ಜನಕ್ಕೊಬ್ಬನೇ ಸಿದ್ಧಿಗಾಗಿ ಪ್ರಯತ್ನಿಸುವನೆಂದು ಹಿಂದೆಯೇ ಹೇಳಿದೆ. ಆ ಸಾವಿರಾರು ಪ್ರಯತ್ನಿಸುವವರಲ್ಲಿ ಒಬ್ಬನೇ ಸಿದ್ಧನು–ಜ್ಞಾನಿ. ನಾರದಭಕ್ತಿ ಸೂತ್ರ

ದಲ್ಲಿ (ಸೂ ೫೩) "ಗೌಣೀತ್ರಿಧಾ, ಗುಣಭೇದಾದ್ ಆರ್ತಾದಿಭೇದಾದ್ ವಾ"—ಗೌಣೀ-ಗುಣಭಕ್ತಿಯು ಮೂರು ವಿಧ. ಆರ್ತ, ಅರ್ಥಾರ್ಥಿ, ಜಿಜ್ಞಾಸು ಎಂದು ಮುಖ್ಯ ಅಥವಾ ಪರಾಭಕ್ತಿಯಾದ ಜ್ಞಾನಭಕ್ತಿಯಿಂದ ಬೇರ್ಪಡಿಸಿದ್ದಾರೆ. ಇವೆಲ್ಲಾ ಕೊನೆಗೆ ಮುಖ್ಯ ಭಕ್ತಿ, ಪರಾಭಕ್ತಿಯಲ್ಲಿಯೇ ಲೀನವಾಗುತ್ತೆ. ತ್ರಿಗುಣಾತ್ಮಕ ಪ್ರಕೃತಿಯಲ್ಲಿ ತ್ರಿವಿಧವಾಗಿ ಪ್ರಕಟವಾಗುತ್ತೆ. ಭಕ್ತಿಯು ಮಾನವನ ಮನದಲ್ಲಿಳಿದಾಗ ಆ ಮನಸ್ಸಿನ ಗುಣದಂತೆ ಪ್ರಕಟವಾಗುತ್ತೆ. ಅರ್ಥಾರ್ಥಿಯು ತನ್ನ ಪ್ರಯೋಜನಕ್ಕಾಗಿ, ಯಾವುದನ್ನೋ ಪಡೆಯುವುದಕ್ಕಾಗಿ ಭಕ್ತೋಪಾಸನಾಗಿ-ಕೆಳದರ್ಜೆಯಲ್ಲಿದ್ದಾನೆ. ಜಿಜ್ಞಾಸುವು ಸಂಶಯ ನಿವಾರಣಾರ್ಥವಾಗಿ, ತಿಳಿಯಲಿಚ್ಛೆಯಿಂದ ಮೇಲ್ಮಟ್ಟದಲ್ಲಿದ್ದಾನೆ. ಆರ್ತನಾದರೋ, ದುಃಖದಿಂದ ಮನಪರಿಪಕ್ವವಾಗಿ, ದೀನತೆಯಿಂದ ದೇವನನ್ನೇ ನಂಬಿ ಇನ್ನೂ ಮೆಟ್ಟಲು ಹತ್ತಿದ್ದಾನೆ. ಜ್ಞಾನಿಯೋ ಇವುಗಳನ್ನೆಲ್ಲಾ ದಾಟಿ ಭಗವಂತನೇ ತಾನೆಂಬ ದೃಢ ನಂಬಿಕೆಯಿಂದ ಅವನಲ್ಲೈಕ್ಯನಾಗಿದ್ದಾನೆ. ಹೇಗೆ ತ್ರಿಗುಣಗಳು, ತಾಮಸ, ರಾಜಸ, ಸಾತ್ವಿಕಗಳು ಶುದ್ಧವಾಗಿ ಏಕಾಕಿಯಾಗಿ ಮನಸ್ಸನ್ನಾಶ್ರಯಿಸಿರುವುದಲ್ಲದೆ, ಮೂರೂ ಮೂಡಿ, ಅದರಲ್ಲೊಂದು ಅಧಿಕವಾಗಿ, ಮಾನವನ ಮನೋವೃತ್ತಿಯನ್ನು ರೂಪುಗೊಳಿಸುವುದೋ, ಅದನ್ನೇ ಅಭಿವೃದ್ಧಿಪಡಿಸಲು ಅವನ ವ್ಯವಹಾರ, ವ್ಯಾಪಾರಗಳು ಹೇಗೆ ಸಹಾಯಕವಾಗುವುದೋ, ಅಂತೇ ಈ ಮೂರು ವಿಧ ಭಕ್ತಿಯಲ್ಲೂ, ಈ ಮೂರು ವಿಧವಾಗಿ ಭಗವಂತನನ್ನು ಭಜಿಸುವುದರಲ್ಲೂ, ಒಂದಕ್ಕೊಂದು ಸೇರಿಕೊಂಡಿರುತ್ತದೆ. ಆರ್ತಮನೋಭಾವವಿದ್ದರೂ, ಶಾಂತಿ ಪಡೆಯುವ ಅರ್ಥ, ಪಡೆಯಲು ಜಿಜ್ಞಾಸೆಯಿದೆ. ಆದರೆ ಆರ್ತಭಾವವೇ ಹೆಚ್ಚಿನದಾಗಿ ಆಶ್ರಯಿಸಿರುತ್ತದೆ.

ಈ ಮೂರು ವಿಧ ಭಜಕರು, ತಮ್ಮ ದೃಷ್ಟಿಕೋಣದಿಂದ ಮೂರು ಮಾರ್ಗ ಧಾವಿಸುವರು. ಅವರಲ್ಲಂತರ್ಗತವಾದ ಇಚ್ಛಾ, ಭಾವ, ಧೃತಿ (Volition, Emotion, Cognition) ಮನೋವೃತ್ತಿಯಲ್ಲಿ, ಯಾವುದು ಹೆಚ್ಚು ಅಭಿವೃದ್ಧಿಯಾಗಿರುತ್ತದೆಯೋ ತನ್ಮಾರ್ಗದಿಂದ ಪಾಪ, ಹಿಂಸಾ, ಅಪರಾಧ (Sin Pain & Error) ವಿವೇಚನೆಯನ್ನೇ

ಸುತ್ತಲಿನ ಲೋಕದಲ್ಲಿ ಕಂಡು, ಅದರ ಪರಿಹಾರಾರ್ಥವಾಗಿ, ಅರ್ಥಾರ್ಥಿ, ಆರ್ತ, ಜಿಜ್ಞಾಸುಗಳಾಗಿ ಪರಮಾತ್ಮನನ್ನನುಸರಿಸಿ, ತದನು ನಿವರ್ತಿಗಾಗಿ ಪ್ರಯತ್ನಿಸುವರು. ಏಸುವು ಲೋಕದಲ್ಲಿ ಇಚ್ಛಾಪ್ರವರ್ತಿಯ ಪರಿಣಾಮವಾದ ಪಾಪವನ್ನೇ ಸುತ್ತಲೂ ಕಂಡು ಅದರ ನಿವಾರಣಾರ್ಥವಾಗಿಯೇ, ಜನರನ್ನು ಪಾಪವಿಮೋಚನೆ ಮಾಡಲೋಸುಗವೇ, ಪರಮಾತ್ಮನಲ್ಲಿ ಮೊರೆಯಿಟ್ಟನು. ಬುದ್ಧದೇವನು ಪ್ರಪಂಚದಲ್ಲಿನ ಹಿಂಸಾದುಃಖವನ್ನೆ ಕಂಡು ಪ್ರಾಣಿಗಳಲ್ಲನುತಾಪಗೊಂಡು, ಅಹಿಂಸಾ ತತ್ವದಿಂದ ದುಃಖ ನಿವಾರಣೋಪಾಯವನ್ನೇ ಅರಸುತ್ತ ಬೋಧಿಸಿದನು.

ಉಪನಿಷತ್ ಋಷಿಗಳಾದ ಸನತ್ಕುಮಾರ, ಯಾಜ್ಞವಲ್ಕ್ಯಾದಿಗಳು, ಅವಿವೇಕಿಗಳಾದ ಅಜ್ಞಾನವೃತ ಪ್ರಪಂಚವಾಸಿಗಳನ್ನೇ ಕಂಡು ಅಜ್ಞಾನ ನಾಶ ಉಪಾಯುಗಳ ತರ್ಕದಲ್ಲೇ ಪ್ರವರ್ತಿಸಿ, ಜ್ಞಾನೋದಯಕ್ಕಾಗಿ ಜಿಜ್ಞಾಸ ಮಾಡುತ್ತಾ, ಉಪದೇಶಿಸುತ್ತಾ ಜೀವನವನ್ನೆಲ್ಲಾ ಕಳೆದರು. ಈ ಮೂರು ಪಂಗಡದವರೂ ಪಾಪ, ಹಿಂಸಾ, ಅಜ್ಞಾನ ನಾಶದಿಂದ ಸುಖ, ಆನಂದ, ಜ್ಞಾನದ ಕಡೆಗೇ ಧಾವಿಸಿದರು. ಕೊನೆಗೆ ತಲುಪುವುದಾದರೂ, ಆ ಜ್ಞಾನಿಗಳು ಪಡೆದು ಶಾಂತಿಯಿಂದಿರುವ ಸುಖಾನಂದ ಜ್ಞಾನವನ್ನೇ. ಇದೇ ಎಲ್ಲರ ಗುರಿಯಾದ ಸಚ್ಚಿದಾನಂದ ಪರಮಾತ್ಮ. ಇವೆಲ್ಲದರ ಫಲವಾಗಿಯೇ ಮಹಾತ್ಮನಾಗಿ, ಜ್ಞಾನವಾನ್ ಆಗಿ ವಾಸುದೇವಃ ಸರ್ವಮಿತಿ (ಶ್ಲೋ ೧೯) ಎನ್ನುವುದನ್ನು ತಲಪುವನು, ತಾನೂ ಸುಖಾನಂದಜ್ಞಾನಿಯಾಗಿ ಶಾಂತಾತೀತನಾಗುವನು. ಮಿಕ್ಕವರೆಲ್ಲಾ ಇತರ ಕಾರಣಗಳಿಂದ ಭಜಿಸುವರು.

1 ಆರ್ತ–"ಸಂಕಟಬಂದಾಗ ವೆಂಕಟರಮಣ" ಎಂಬ ಗಾದೆಯಂತೆ, ಯಾವುದೋ ದುಃಖ ನಿವಾರಣೆಗಾಗಿ ದಾರಿ ಕಾಣದೆ, ಪ್ರಯತ್ನ ಸಫಲವಾಗದೆ, ದೇವನನ್ನು ಭಜಿಸುವನು. ಮೃತ್ಯುಂಜಯ ತಪ, ನವಗ್ರಹ ಪೂಜೆ, ಸೂರ್ಯನಮುಸ್ಕಾರ, ರುದ್ರಾಭಿಷೇಕಗಳಾದರೂ ಮಾಡಿ ಬಂದಿರುವ ಸಂಕಟ, ಕಾದಿರುವ ವಿಪತ್ತನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಜನಗಳು ದೇವರನ್ನು ಭಜಿಸಿ ಪೂಜಿಸುವರು. ಆರ್ತನು ಹೃದಯದ್ವಾರ ದೇವರ ಕಡೆ ಸಾಗಿದ್ದಾನೆ. ಏನೋ ಭಯ ಇವನನ್ನು ದುಃಖಿಯನ್ನಾಗಿ ಮಾಡಿದೆ.

ಆ ಭಯ ನಿವಾರಿಸಲು, ಎದುರಿಸಿ ಕಾಯುಲು ಸ್ವಶಕ್ತಿ ಸಾಲದು. ಆದುದರಿಂದ ಪರಮಾತ್ಮನಿಗೆ ಶರಣು ಹೋಗುತ್ತಾನೆ. ಆದರೆ ಈಗಿನ ವಿಪತ್ತು ಯಾವಾಗ ಏನು ಮಾಡಿದುವರ ಫಲವೋ? ಅದರ ನಿವಾರಣೆ ಈಗಿನ ಭಜನೆಯಿಂದ ಸಾಧ್ಯವೋ ಇಲ್ಲವೊ; ಆದರೂ ದೇವಶರಣಾಗತಿಯಿಂದ ಚಿತ್ತಶುದ್ಧಿಯಾದರೂ ಆಗಿ, ಮನಸ್ಸಿಗೆ ನೆಮ್ಮದಿಯಾಗುತ್ತದೆ; ವಿಪತ್ತನ್ನು ಎದುರಿಸಲು ಶಕ್ತಿ ಕೊಡುತ್ತದೆ. ಆದರೆ ಆ ವಿಪತ್ತು ಪಾರಾದೊಡನೆ ದೇವರನ್ನು ಮರೆಯಬಾರದು. ತನ್ನ ಕರ್ಮವೇ ಫಲಿಸುವುದೇ ವಿನಾ ದೇವ ವಿಪತ್ತನ್ನು ಕೊಡುವುದಿಲ್ಲ. ಆದರೂ ದುಷ್ಕರ್ಮದ ಫಲಿತಾಂಶಗಳು ಹದಗೆಡಿಸಿದಾಗ ನಮ್ಮನನ್ನಾಗಿ ಮಾಡಿ ದೇವರ ಕಡೆ ಮನ ತಿರುಗಿಸುತ್ತವೆ. "ದುಃಖಗಳೇ ಕಷ್ಟಗಳೇ ನಮಗೆ ಭಗವಂತನ ಚಿಂತನೆ ಕೊಡುವುವಾಗಿದ್ದರೆ, ಅವೇ ನಮಗೆ ಸ್ಥಿರವಾಗಿ ಭಗವದ್ಭಕ್ತಿ, ಭಗವಧ್ಯಾನ ಚಿಂತನಗಳನ್ನು ಅನವರತವೂ ಕೊಡಲಿ" ಎಂದು ಕುಂತೀದೇವಿಯು ಧ್ಯಾನಿಸಿದ್ದಾಳೆ. ದುಃಖಗಳು ಈ ದೃಷ್ಟಿಯಿಂದ ಒಂದು ಒಳ್ಳೆಯ ಸನ್ನಿವೇಶಗಳೇ, ಆಪದಗಳೇ ಭಗವಧ್ಯಾನದ ಸಂಪದಗಳು.

ಸುಖಲೋಲಾಪ್ತಿಯಲ್ಲೇ ಮುಳುಗಿರುವವನಿಗೆ ಭಗವಚ್ಚಿಂತನೆ ಬರುವುವೇ ಇಲ್ಲಾ. ಯಾವುದಾದರೂ ನ್ಯೂನತೆ ಬಂದರೆ, ಅದನ್ನು ತುಂಬಿಸಲಾದರೂ ಭಗವಂತನ ಕಡೆ ಮನತಿರುಗುವುದು. ತನ್ನ ಎಲ್ಲಾ ಪ್ರಯತ್ನವೂ ಸಫಲವಾಗದಿದ್ದಾಗ, ದೇವರ ಶರಣು ಹೋಗುವುದು. ಈ ಭಗವಧ್ಯಾನದಲ್ಲಿ ಇತರ ಸಾಧನಗಳಲ್ಲ ಸಾಧ್ಯವಾದ ಫಲಗಳು ಎಷ್ಟೋ ಸಾರಿ ಲಭಿಸಿರುವುದು–ಇದು ಕೇವಲ ಫಲಾಪೇಕ್ಷೆಯಿಂದ ಮಾಡಿದ ಭಕ್ತಿ ಭಜನೆಯಾದರೂ ಏನೂ ಇಲ್ಲದವರಿಗಿಂತ ಉತ್ತಮ.

2 ಜಿಜ್ಞಾಸು ಬುದ್ಧಿ ದ್ವಾರ ದೇವರಕಡೆ ಧಾವಿಸಿದ್ದಾನೆ. "ಸಂಶಯಾತ್ಮ ವಿನಶ್ಯತಿ" ಎನ್ನುವುದನ್ನು ನಂಬವಲ್ಲಾ. ಸಂಶಯಗಳನ್ನು ಕೆದರಿಕೊಂಡು ಹೋಗಿ ತರ್ಕಮಾಡುತ್ತಾ ಮಾಡುತ್ತಾ ಆತ್ಮವಸ್ತುವನ್ನು ಹುಡುಕಲು ಪ್ರಯತ್ನಿಸುತ್ತಾನೆ. "ಇದು ಏನು ? ಇದು ಎಂತು" ಎಂದು ಕೇಳುವುದು ಮಕ್ಕಳಾದಾಗಿನಿಂದ ಬಂದ ಕುತೂಹಲ. ಕುತೋಹಲವೇ ಇಲ್ಲವಾಗಿದ್ದರೆ ಪ್ರಪಂಚಾಭಿವೃದ್ಧಿಯಾಗಲಿ ಶಾಸ್ತ್ರ ಮುಂದುವರೆಯುವು

ದಾಗಲೀ ಆಗುತ್ತಿರಲಿಲ್ಲಾ. ಇಹದಲ್ಲಿ ಈ ಕೇಳುವುದು, ಕುತೋಹಲವೆಂತೋ ಪರದಲ್ಲೂ, ತದ್ವಸ್ತುವಿನ ವಿಚಾರದಲ್ಲೂ, "ಇದು ಏನು! ಇದೆಂತು?" ಎನ್ನುವುದು ಬೇಕೇಬೇಕು. ಉಪನಿಷತ್‌ಗಳು ಹುಟ್ಟಿರುವುದೆಲ್ಲಾ ಈ ಜಿಜ್ಞಾಸದಿಂದಲೇ, ಬ್ರಹ್ಮಸೂತ್ರವು ಶುರುವಾಗಿರುವುದೂ ಬ್ರಹ್ಮಜಿಜ್ಞಾಸದಿಂದಲೇ. "ಓಂ ಅಥಾತೋ ಬ್ರಹ್ಮ ಜಿಜ್ಞಾಸ" ಎಂದು ಶಾರೀರಕ ಮೀಮಾಂಸವನ್ನು ಶುರುಮಾಡಿ ವೇದಾಂತವನ್ನೇ ಸೂರೆಗೊಂಡಿದ್ದಾರೆ. ಮೊದಲಿನ ಅಧ್ಯಾಯದ ಮೊದಲನೇ ಅಧಿಕರಣವೇ, ಬ್ರಹ್ಮಸೂತ್ರದಲ್ಲಿ "ಜಿಜ್ಞಾಸಾಧಿಕರಣಂ." ಈ ಜಿಜ್ಞಾಸೆಯು ಬಹಳ ಮುಖ್ಯ-ಅಭ್ಯುದಯಕ್ಕೆ. "ಏನೋ ನಿನ್ನ ಜಿಜ್ಞಾಸೆ-ಪರಿಹಾರವಾಗವಲ್ಲದ್ದು" ಎಂದು ಎಷ್ಟೊಸಾರಿ ಯೋಚನೆಯಲ್ಲಿ ಮುಳುಗಿದವರನ್ನು ಕೇಳುತ್ತಾರೆ. ಮನಸ್ಸಿನಲ್ಲೇ ಮುಗುಚಿಹಾಕಿ, ಸಮಸ್ಯೆಯನ್ನು ಪರಿಹರಿಸುವುದೇ ಜಿಜ್ಞಾಸ-ಶ್ರವಣ, ಮನನ, ನಿಧಿದ್ಯಾಸವೆಲ್ಲಾ ಸೇರಿದೆ. ಈ ಬ್ರಹ್ಮತತ್ವವನ್ನು ಎಂತು ಗ್ರಹಿಸುವುದು. ಒಂದೆಡೆ ಮಾಯಾ ಪ್ರಪಂಚ, ಮತ್ತೊಂದೆಡೆ ವಾಕ್‌ಮನಗಳಿಗೆ ಸಿಲುಕದ ಸದ್ವಸ್ತು. ಅರಿವವನನ್ನೇ ಅರಿವುದಕ್ಕೆ ಅರಿವೆಲ್ಲಿಂದ ಬಂತು. ಈ ಇಹ ಬಾಹ್ಯಪ್ರಪಂಚದ ಅರಿವುಗಳಿಗತೀತವಾದ ಅಂತದೃಷ್ಟಿಯಿಂದ ತಿಳಿಯಬೇಕಾದ ಸಮಸ್ಯೆಯ ಪರಿಹಾರ. ಈ ಜಿಜ್ಞಾಸದಿಂದಲೇ ನಮ್ಮ ತತ್ವದರ್ಶನಗಳೆಲ್ಲಾ ಹುಟ್ಟಿ ಬೆಳದಿವೆ. ಬುದ್ಧಿಪೂರ್ವಕ ಕಷ್ಟಪಟ್ಟು ಸಮಸ್ಯೆ ಎಷ್ಟು ಕಠಿಣವಾದರೂ ಏಕಾಗ್ರತೆಯಿಂದ ಬಿಡಿಸಬಲ್ಲವನೇ ಜಿಜ್ಞಾಸು. ಯಾವ ಸಂಶಯವೂ ಇಲ್ಲದವನಿಗೆ ಜ್ಞಾನೋದಯವೇ ಇಲ್ಲಾ. ("Believe me there is more truth in an honest doubt, than in half the Creeds" ಎಂದು Tennyson ಕವಿಯು "In Memorim"ನಲ್ಲಿ ಘೋಷಿಸಿದ್ದಾನೆ. ಸಂಶಯ ಸತ್ಯವಾಗಿರಬೇಕು. ಸತ್ಯಶೋಧನೆಗಾಗಿರಬೇಕು. ಏನು ಸತ್ಯವೆಂದು ತಿಳಿಯಲು ಹಾತೊರೆಯುತ್ತಿರಬೇಕು. ಸುಮ್ಮನೆ ಕೇಳಿದುದನ್ನೆಲಾ ಕೇಳುತ್ತ ಕುಳಿತಿರಬಾರದು. ಸತ್ಯಶೋಧನೆಗೆ ಅವಿಶ್ರಾಂತಿಯಿಂದ ಸಾಧನೆ ಮಾಡಬೇಕು. ಇದೇ ಜಿಜ್ಞಾಸುವಿನ ದೇವ ಭಜನೆ. ಇದೂ ಶ್ಲಾಘನೀಯವೇ.

3 ಅರ್ಥಾರ್ಥೀ—ಇವ ಕೋಮಟಿ, ಇವ ಇಷ್ಟಕ್ಕೆಷ್ಟು ಫಲಬರುತ್ತೆ, ಎಷ್ಟು ಲಾಭ ಲೆಖ್ಖಾ ಹಾಕುವ ಇಸಂ, "ಸರ್ವೈವಾಣಿಕಃ"—ದೇವರ ಹತ್ತಿರ ಇದು ಬೇಕು, ಅದು ಕೊಡು ಎಂದು ಫಲಾಪೇಕ್ಷೆಯಿಂದ ಧ್ಯಾನ ಪೂಜೆ ಮಾಡುವವನು ಭಕ್ತನಲ್ಲಾ, ಅವನು ಕೇವಲ ವ್ಯಾಪಾರಗಾರ ಎಂದು ಒಂದು ಸ್ತೋತ್ರದಲ್ಲಿ ಹಾಡಿರುವರು. ದೇವರೇ ನನಗೆ ಪರೀಕ್ಷೆ ಪ್ಯಾಸಾಗಲೀ, ನಿನಗೆ ತೆಂಗಿನಕಾಯಿ ಒಡಿಸುತ್ತೇನೆ" ಎಂದು ಮುಂಚೆಯೇ ಕರಾರು. ಪ್ಯಾಸಾಗದಿದ್ದರೆ ನಿನಗೆ ಸೇವೆಯಿಲ್ಲಾ, ದೇವನಿಗೂ ಫಲವಿಲ್ಲಾ ಅಂಥವನಿಗೆ ಫಲಸೇವನೆಯೂ ಇಲ್ಲಾ. ಇದು ಇಹ ಸಂಸಾರ ತಾಪತ್ರಯದಿಂದ ಬಂದ ಭಜನಾವಿಧಾನ. ಪಥಜರುಗಲುರಹಬೇಕು. ಅದಿಲ್ಲದಿರುವಾಗ ಕೊಡೆಂದು ಪ್ರಾರ್ಥನೆ. "Give us our daily Bread" ಎಂಬೇ ಕ್ರಿಸ್ತನ ಮುಖ್ಯ ಪ್ರಾರ್ಥನೆ, ಮೊದಲೂ ಕೊನೆ. ಆದರೆ ಅರ್ಥಾರ್ಥಿಯು ಎಷ್ಟು ಆಸಕ್ತಿಯಿಂದ ಭಜಿಸುತ್ತಾನೆಂಬುದು ಆಶ್ಚರ್ಯವಾಗುತ್ತೆ. ವರಾಹೋಪನಿಷತ್ತಿನಲ್ಲಿ "ಆದರೇಣ ಯಥಾಸ್ತೌತಿ ದನವಂತಂ ಧನೇಚ್ಛಯಾ ತಥಾ ಚೇದ್ವಿಶ್ವಕರ್ತಾರಂ ಕೋನಮುಚ್ಯೇತ ಬಂಧನಾತ್" ಎಂದು ಹೇಳುತ್ತಾರೆ. ನಾವು ದಿನಾ ನೋಡುತ್ತೇವೆ. ಧನ ಇಚ್ಛೆಗಾಗಿ ಎಷ್ಟು ಆದರದಿಂದ ಧನವಂತನನ್ನು ಸ್ತುತಿಸುತ್ತಾರೆ. ಹಾಗೇ ವಿಶ್ವಕರ್ತನನ್ನು ಭಜಿಸಿದರೆ, ಸ್ತುತಿಸಿದರೆ ಯಾರು ತಾನೇ ಬಂಧನಮುಕ್ತರಾಗುವುದಿಲ್ಲಾ ಎಂದು ಹಾಸ್ಯವಾಗಿ ಹೇಳುತ್ತಾರೆ. "ಕಾಸಿಗೆ ತಕ್ಕಷ್ಟು ಕಜ್ಜಾಯ" ಎಣಿಸುವ ಪರಮಾತ್ಮನಾಗಿದ್ದರೆ ಈ ಅರ್ಥಾರ್ಥಿಗಳಿಗೆ ಏನೂ ಸಿಗುತ್ತಿರಲಿಲ್ಲಾ. ಎಷ್ಟು ತಾಜಾಮಾಡಿದರೂ ಧನವಂತ ಧನಬಿಚ್ಚುವುದು ಅಪರೂಪ. ಬಿಚ್ಚಿಯಾನೂ ಅಂತ ಬಾಯಿಬಿಟ್ಟುಕೊಂಡೇ ಇರೋದು. ಆದರೆ ಈ ನಮ್ಮ ಧಣಿಯನ್ನು ಕೇಳಿ ಇಲ್ಲವೆನ್ನಿಸಿಕೊಂಡವರಿಲ್ಲಾ. "Ask It will be given; knock it will be opened." ಅರ್ಥಾರ್ಥಿಯಾಗಿಯಾದರೂ ಅವನ ಕಡೆ ತಿರುಗಿದರೆ ಸಾಕು. ಇವ ಕರ್ಮದ್ವಾರ ದೇವರ ಕಡೆ ಧಾವಿಸಿದ್ದಾನೆ. ಏಕೆಂದರೆ ಅರ್ಥ ಸಂಪಾದನೆಯಲ್ಲಿ ದುಡಿಯಲು ಸಿದ್ಧನಾಗಿದ್ದಾನೆ. ತನ್ನಪೇಕ್ಷೆ ಪಡೆಯಲು ಧ್ಯಾನ ಪೂಜಾದಿಗಳನ್ನು ಮಾಡಿದಂತೆಯೇ ತೋರಿಕೊಟ್ಟ ಕರ್ಮಮಾಡಲು ಸಿದ್ಧನಿದ್ದಾನೆ.

ಅರ್ಥವೆಂದರೆ ಹಣ ಒಂದೇ ಅಲ್ಲಾ. ತನ್ನ ಹಿತ, ಕಲ್ಯಾಣ ಅಭಿವೃದ್ಧಿಗಾಗಿ ದುಡಿಮೆ ಜೀತಕ್ಕೆ ಸಿದ್ಧನಿದ್ದಾನೆ.

ಈ ಮೂವರೂ ಹೇಗಾದರೂ ಯಾವ ಕಾರಣದಿಂದಾದರೂ ಭಗವಂತನ ಕಡೆ ತಿರುಗಿ ಅವನನ್ನು ಭಜಿಸುವರಾದುದರಿಂದ ಸುಕೃತರೇ.

4 ಕೊನೆಯುವನಾಗಿ ಜ್ಞಾನಿ.

**ತೇಷಾಂ ಜ್ಞಾನೀ ನಿತ್ಯಯುಕ್ತ-ಏಕಭಕ್ತಿರ್ವಿಶಿಷ್ಯತೇ ।**
**ಪ್ರಿಯೋ ಹಿ ಜ್ಞಾನಿನೋಽತ್ಯರ್ಥ-ಮಹಂ ಸ ಚ ಮಮ ಪ್ರಿಯಃ ॥೧೭॥**

ಇವರುಗಳಲ್ಲಿ ನಿತ್ಯಯುಕ್ತನಾದ ಜ್ಞಾನಿಯು ಐಕ್ಯಾನುರೂಪವಾದ ಭಕ್ತಿಯುಳ್ಳವನಾಗಿ ಶ್ರೇಷ್ಠನಾಗಿರುವನು. ಜ್ಞಾನಿಗೆ ನಾನು ಅತ್ಯಂತ ಪ್ರಿಯನು, ಹಾಗೆಯೇ ನನಗೆ ಜ್ಞಾನಿಯೂ ಪ್ರಿಯನು. ಜ್ಞಾನಿಯು ತನ್ನ ಜ್ಞಾನದಿಂದ ಪರಮಾತ್ಮನನ್ನು ತನ್ನ ಆತ್ಮವೆಂದು ತಿಳಿದು ಅವನಿಗಾಗಿಯೇ ಭಜಿಸುತ್ತಾನೆ. ಈ ಭಜನೆಯಲ್ಲಿ ಪ್ರತಿಫಲಾಪೇಕ್ಷೆಯೇ ಇಲ್ಲಾ. ಮುಂದೆ ೧೩ ನೇ ಅಧ್ಯಾಯದಲ್ಲಿ "ಅಮಾನಿತ್ವಂ"ದಿಂದ (೭ ನೇ ಶ್ಲೋ) ಶುರುಮಾಡಿ ೧೧ ನೇ ಶ್ಲೋಕದವರೆಗೆ ಜ್ಞಾನವೆಂದರೇನು ಮತ್ತು "ಪ್ರೋಕ್ತ ಮಜ್ಞಾನಂ ಯದತೋಽನ್ಯಥಾ" ಮಿಕ್ಕದೆಲ್ಲಾ ಅಜ್ಞಾನವೆಂದು ಸಾರಿದ್ದಾರೆ. ಯಾವುದನ್ನು ತಿಳಿದುದೇ ಆದರೆ ಅಮೃತತ್ವವನ್ನು ಹೊಂದುತ್ತಾನೆ ಎಂದು ೧೨ ನೇ ಶ್ಲೋಕದಲ್ಲಿ ಸಾರಿದೆ. ಈ ಅಧ್ಯಾಯದ ೨ ನೇ ಶ್ಲೋಕದಲ್ಲೇ "ಯಾವುದು ಈ ಲೋಕದಲ್ಲಿ ತಿಳಿದ ಮೇಲೆ ಪುನಃ ತಿಳಿಯಬೇಕಾದುದು ಮತ್ತ್ಯಾವುದೂ ಉಳಿದಿರುವುದಿಲ್ಲವೋ" ಎಂದೇ ಸ್ವಾಮಿ ಶುರುಮಾಡಿ ಅದನ್ನೇ ಸಂಪೂರ್ಣವಾಗಿ ಹೇಳಹೊರಟಿದ್ದಾನೆ. ಅದನ್ನು ಆ ತತ್ವವನ್ನು ತಿಳಿದವನೇ ಜ್ಞಾನಿಯು. ಹಿಂದಿನ ಅಧ್ಯಾಯದಲ್ಲಿ (೬, ೩೦) "ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇನ ಪ್ರಣಶ್ಯತಿ" ಎಂದು ಪರಸ್ಪರ ಪ್ರತ್ಯಕ್ಷತೆಯನ್ನು ಹೇಳಿರುವುದೇ "ಪ್ರಿಯೋಹಿ ಜ್ಞಾನಿನೋತ್ಯರ್ಥಮಹಂಸ ಚ ಮಮ ಪ್ರಿಯಃ" ಎಂದು ಇಲ್ಲಿ ಪ್ರತಿಧ್ವನಿಯಂತೆ ಬಂದು, ಸ್ವಾಮಿ ಅಭಯ ಹಸ್ತವಿತ್ತಿದ್ದಾನೆ.

ಜ್ಞಾನಿಯ ಶ್ರೇಷ್ಠತೆಯನ್ನು ಎತ್ತಿ ಹಿಡಿದಿದ್ದರೂ ಮಿಕ್ಕವರನ್ನು ಬಿಟ್ಟು ಕೊಟ್ಟಿಲ್ಲಾ.

**ಉದಾರಾಃ ಸರ್ವ ಏವೈತೇ। ಜ್ಞಾನೀ ತ್ವಾತ್ಮೈವ ಮೇ ಮತಮ್ ।**
**ಆಸ್ಥಿತಃ ಸ ಹಿ ಯುಕ್ತಾತ್ಮಾ । ಮಾಮೇವಾನುತ್ತಮಾಂ ಗತಿಮ್ ॥೧೮॥**

ನನ್ನ ಭಕ್ತರೆಲ್ಲರೂ ಉದಾರಿಗಳು. ಹಿಂದೆ ಹೇಳಿದ ನಾಲ್ಕು ವಿಧ ಭಜಕರನ್ನೂ ದೇವನು ಮೆಚ್ಚಿದ್ದಾನೆ. ಯಾವ ರೀತಿಯಲ್ಲಾದರೂ ದೇವರ ಕಡೆ ಮನ ಓಡಿಸಿದರೆ 'ಸುಕೃತಿ'ಗಳೇ. ಯಾವ ವಿಧದಲ್ಲಾದರೂ ಆತನ ಚಿಂತನೆಗೆ ಅಳವಡಿಸಿದರೆ, ಸಾಧನ ಮಾರ್ಗಕ್ಕೆ ಕಾಲಿಟ್ಟಂತಾಗಿ ಆತ ಉದ್ಧರಿಸಲವಕಾಶವಾಗುತ್ತೆ. ಆದರೆ ಜ್ಞಾನಿಯಾದರೋ 'ತ್ವಾತ್ಮೈವ' – 'ನನ್ನ ಸ್ವರೂಪವೇ' ಎನ್ನುವುದೇ ಪರಮಾತ್ಮನ ಮತವು (ಮೇಮತಮ್). ಜ್ಞಾನಿಯು ಸರ್ವದಾ ಪರಮಾತ್ಮನಲ್ಲಿಯೇ ಇದ್ದು, ಆತ್ಮನೊಡಗೂಡಿ, ಉತ್ತಮ ಗತಿಯಾದ ಪರಮಾತ್ಮನಲ್ಲೇ ಸೇರುವನು.

**ಬಹೂನಾಂ ಜನ್ಮ ನಾಮಂತೇ । ಜ್ಞಾನವಾನ್ ಮಾಂ ಪ್ರಪದ್ಯತೇ ।**
**ವಾಸುದೇವಃ ಸರ್ವಮಿತಿ। ಸ ಮಹಾತ್ಮಾ ಸುದುರ್ಲಭಃ ॥೧೯॥**

ಬಹಳ ಜನ್ಮಗಳ ಕೊನೆಯಲ್ಲಿ ಜ್ಞಾನಿಯು ನನ್ನ ಶರಣು ಹೊಂದಿ, "ಸರ್ವವೂ ವಾಸುದೇವನೇ" ಎಂದು ಭಾವಿಸುವ ಮಹಾತ್ಮನು ದುರ್ಲಭನು. ಮಂಡಲ ಬ್ರಾಹ್ಮಣೋಪನಿಷತ್ತಿನಲ್ಲಿ "ಅನೇಕ ಜನ್ಮಾರ್ಜಿತ ಪುಣ್ಯಪುಂಜಪಕ್ವ ಕೈವಲ್ಯ ಫಲೋ ಅಖಂಡಾ ಆನಂದ ನಿರಸ್ತ ಸರ್ವ ಕ್ಲೇಶ ಕಶ್ಮಲೋ, ಬ್ರಹ್ಮಾಹಮಸ್ಮೀತಿ ಕೃತಕೃತ್ಯೋ ಭವತಿ"—ಅನೇಕ ಜನ್ಮಾರ್ಜಿತ ಪುಣ್ಯಪಕ್ವವಾಗಿ ಕೈವಲ್ಯ ಫಲವಾದ ಅಖಂಡ ಆನಂದದಿಂದ ಸರ್ವಕ್ಲೇಶ ಕಲ್ಮಶ ನಾಶವಾಗಿ "ನಾನೇ ಬ್ರಹ್ಮ"—ವಾಸುದೇವಂ ಸರ್ವಮಿತಿ ಎನ್ನುವ ಜ್ಞಾನದಿಂದ ಕೃತಕೃತ್ಯನಾಗುತ್ತಾನೆಂದು–ಅಮನಸ್ಕ ಮತಿರಹಸ್ಯವನ್ನು ಹೇಳಿದ್ದಾರೆ – ಜ್ಞಾನಪಕ್ವಕ್ಕೆ ಜನ್ಮಾಂತರಗಳು ಬೇಕು. ಪೈಂಗಳೋಪನಿಷತ್ತಿನಲ್ಲಿ "ಸತ್ಕರ್ಮ ಪರಿಪಾಕತೋ, ಬಹೂನಾಂ ಜನ್ಮ ನಾಮಂತೇ ನೃಣಾಂಮೋಕ್ಷೇಚ್ಛಾಜಾಯತೇ, ತದಾ ಸದ್ಗುರು

ಮಾಶ್ರಿತ್ಯ, ಚಿರಕಾಲ ಸೇವಯಾ ಬಂಧಾನ್ಮೋಕ್ಷಂ, ಕಶ್ಚಿತ್ಪ್ರಯಾತಿ "— ಸತ್ಕರ್ಮವು ಪರಿಪಕ್ವವಾಗಿ ಬಹು ಜನ್ಮಾಂತರವಲ್ಲಿ ನರನು ಮೋಕ್ಷೇಚ್ಛೆ ಹುಟ್ಟಿ, ಸದ್ಗುರುವನ್ನಾಶ್ರಯಿಸಿ ಚಿರಕಾಲ ಸೇವೆಯಿಂದ ಬಂಧಮೋಕ್ಷಕ್ಕೆ ಪ್ರಯತ್ನಿಸುತ್ತಾನೆ – ಆ ಜ್ಞಾನದಿಂದಲೇ "ವಾಸುದೇವಂ ಸರ್ವಮಿತಿ" ಎಂಬ ಭಾವ ಬಂದು ಮಹಾತ್ಮನಾಗುತ್ತಾನೆ. ಇದೇ ಎಲ್ಲಾ ತಿಳುವಳಿಕೆಗಳ ಅಂತಿಮ ಫಲ, ಇದೇ ಸರ್ವ ಶ್ರೇಷ್ಠವಾದ ಜ್ಞಾನದ ಫಲ, ಇದೇ ಎಲ್ಲಾ ಜೀವನದ ಆಧಾರದ ಧ್ಯಾನದ ಫಲ. "ವಾಸುದೇವಂ ಸರ್ವಮಿತಿ" ಸರ್ವಂ ಎಂದರೆ "ಎಲ್ಲಾ"—ಬ್ರಹ್ಮಾಂಡ ಪಿಂಡಾಂಡ, ಸೃಷ್ಟಿ, ಸ್ಥಿತಿ ಲಯ, ಎಲ್ಲಾ ಪ್ರಪಂಚವನ್ನೊಳಗೊಂಡು, ಎಲ್ಲದರಾಚೆ ಇರುವ ಸರ್ವಸ್ವವೂ ಸೇರಿಹೋಯಿತು, ವಾಸುದೇವನೇ ಸರ್ವವೂ. ಆಗ ಜ್ಞಾನಿಯು "ಅಂತಃ ಶೂನ್ಯೋ ಬಹಿ ಶೂನ್ಯ ಶೂನ್ಯ ಕುಂಭ ಇವಾಂಬರೇ। ಅಂತಃ ಪೂರ್ಣೋ, ಬಹಿಪೂರ್ಣಃ ಪೂರ್ಣ ಕುಂಭ ಇವಾರ್ಣವೇ॥" ಎಂದು ಮಹೋಪನಿಷತ್ತಿನಲ್ಲಿ ಹೇಳಿರುವಂತೆ, ಮಹದಾಕಾಶದೊಡನೆ ಒಂದಾಗಿ ಹೋಗುತ್ತಾನೆ. ತನ್ನೊಳಗಿರುವುದೇ ಸರ್ವವ್ಯಾಪಿಯು; ವಾಸುದೇವಂ ಸರ್ವಮಿತಿ. ತ್ರಿಪುರಾತಾಪಿನ್ಯುಪನಿಷತ್ತಿನಲ್ಲಿ "ವಸತಿ ತಿಷ್ಠತಿ ಭೂತೇಷ್ವಿತಿ ವಾಸುದೇವ ಇತಿ" ಎಂದು ಅರ್ಥ ಕೊಟ್ಟಿದ್ದಾರೆ.

ತ್ರಿಪುರತಾಪಿನ್ಯುಪನಿಷತ್ತಿನಲ್ಲಿಯೇ ಬರುವ ಮಂತ್ರದಂತೆ "ಘಟಸಂವೃತಮಾಕಾಶಂ ನೀಯಮಾನೇ ಘಟೇಯಥಾ ಘಟೋನಿಯೇತನಾಕಾಶಂ ತಥಾ ಜೀವೋನಭೋಪಮಃ" – ಮಡಕೆ ಒಡದ ಮೇಲೆ, ಒಳಗಿನ ಆಕಾಶವು ಹೊರಾಕಾಶದೊಡನೆ ಮಿಲನವಾಗುವಂತೆ "ಮಟಾಕಾಶವು ಪಟಾಕಾಶ"ಕ್ಕೆ ಸೇರಿಬಿಡುತ್ತೆ. ನೀರಿನಲ್ಲಿ ಮುಳುಗಿರುವ ಗಡಿಗೆಯು ಒಳಗೂ ಹೊರಗೂ ನೀರೇ ತುಂಬಿರುವಂತೆ ಸರ್ವವಸ್ತುವಿನಲ್ಲೂ ಒಳಗೂ ಹೊರಗೂ ಒಂದೇ ಆಕಾಶ ತತ್ವವು ತುಂಬಿದೆ. ಅದೇ ಸರ್ವವ್ಯಾಪಿ. ಸರ್ವವೂ ವಾಸುದೇವನೇ ಆದಮೇಲೆ, ಸರ್ವರಲ್ಲಿ ಅಣುವಾಗಿ ಸೇರಿರುವ ತಾನೂ ವಾಸುದೇವನೇ! "ವಾಸನಾತ್ ವಾಸುದೇವಸ್ಯ, ವಾಸಿತಂತೆ ಜಗತ್ರಯಂ" ಎಂದು ತ್ರಿಕಾಲ ಪ್ರಾರ್ಥನೆಯಲ್ಲಿನ ತತ್ವವೂ "ವಾಸುದೇವಂ ಸರ್ವಮಿತಿ." "ಸರ್ವಭೂತಾನಿವಾ ಸೋಸಿ" ಅದೇ ವಾಸುದೇವನೇ

ಸರ್ವಭೂತಗಳಲ್ಲೂ ವಾಸವಾಗಿ ಮನೆ ಮಾಡಿಕೊಂಡಿದ್ದಾನೆ. ನನ್ನಲ್ಲೂ ಅವನೇ ವಾಸವಾಗಿರುವ—"ವಾಸುದೇವ" ಎನ್ನುವುದೇ ಜ್ಞಾನ. ಎಷ್ಟು ಸುಲಭಕ್ಕೆ ತಂದಿಳಿಸಿಬಿಟ್ಟಾ ಪರಮಾತ್ಮ. ತಿಳಿಯಬೇಕಾದುವೆಲ್ಲಾ ಒಂದೇ ಸೂತ್ರದಲ್ಲಿ ಹೇಳಿಬಿಟ್ಟಾ. ಎಲ್ಲಾ ಮತತತ್ವಗಳೂ, ಸರ್ವ ವೇದಾಂತಸಾರಗಳೂ ಇದೇ ಸಾರುತ್ತವೆ. ಉಪನಿಷತ್ತುಗಳಲ್ಲಿ ಮೊದಲನೆಯದಾದ "ಈಶಾವಾಸ್ಯ"ದ ಮೊದಲನೇ ಶ್ಲೋಕವಾದರೂ ಏನು ? "ಈಶಾವಾಸ್ಯ ಮಿದಂ ಸರ್ವಂ" ಎಲ್ಲವೂ ಈಶಾವಾಸ್ಯವು—"ಸರ್ವಂ ವಾಸುದೇವ" ಎಂದಲ್ಲವೇ. ಇರುವುದೊಂದೆ ತತ್ವ ಸಕಲೆಡೆಗಳಲ್ಲೂ, ತ್ರಿಪುರಾತಾಪಿನ್ಯುಪನಿಷತ್ತಿನಲ್ಲಿ "ಏಕ ಏವಹಿ ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ। ಏಕಧಾ ಬಹುಧಾ ಚೈವ ದೃಶ್ಯತೇ ಜಲ ಚಂದ್ರವತ್ ॥" ಎನ್ನುವಂತೆ ಜಲದಲ್ಲಿ ಕಾಣುವ ಪ್ರತಿಬಿಂಬಗಳ ಬಹು ಚಂದ್ರರಂತೆ ಏಕವಾದ ಭೂತಾತ್ಮನು ಭೂತಭೂತಗಳಲ್ಲೂ ವ್ಯವಸ್ಥಿತನಾಗಿ ಏಕವನ್ನು ಬಹುವಾಗಿ ಮಾಡಿದ್ದಾನೆ. ಇದೇ ಎಲ್ಲಾ ಜ್ಞಾನದ ಸಾರ. ಇದು ಮನವಟ್ಟಾದಮೇಲೆ ಇನ್ನೇನು ತಿಳಿಯಬೇಕಾದಿದೆಯರೀ. "ವಾಸುದೈವ ಕುಟುಂಬಿಕಂ" ಆಗಿಬಿಡುತ್ತಾನೆ. "ನಾನು" ಎನ್ನುವುದು ಹೋಗಿಬಿಟ್ಟು ಸರ್ವವೂ "ನೀನೇ" ಎಂಬ ಭಾವನೆ ಬಂದುಬಿಟ್ಟರೆ ಇನ್ನು ಬಂಧನವೆಲ್ಲಿ ! ಇನ್ನು ಇಲ್ಲೇ ಸಮತ್ವ, ಸ್ವತಂತ್ರ, ಭ್ರಾತೃಪ್ರೇಮ.

ಇದರಿಂದಲೇ "ಓಂ ನಮೋ ಭಗವತೇ ವಾಸುದೇವಾಯ" ಎಂಬ ಬೀಜಮಂತ್ರದಿಂದ ಎಷ್ಟೋ ತಪಸ್ವಿಗಳು, "ವಾಸುದೇವಂ ಸರ್ವಮಿದಂ" ಎಂಬುದನ್ನು ಸಾಕ್ಷಾತ್ಕಾರ ಮಾಡಿಕೊಂಡು, ಸರ್ವವ್ಯಾಪಿ ವಾಸುದೇವ ಎಲ್ಲವೂ ತಾನೂ, ವಾಸುದೇವನೇ ಎಂಬ ದಿವ್ಯ ಜ್ಞಾನವನ್ನು ಪಡೆದು, ಜೀವನ್ಮುಕ್ತಾವಸ್ಥೆಯಲ್ಲಿದ್ದರು. ಈ ಪರಮ ಉತ್ಕೃಷ್ಟವಾದ ಜ್ಞಾನಾವಸ್ಥೆ ಎಲ್ಲ ತಿಳುವಳಿಕೆಗಳ ಪರಮಾವಧಿ. ಅಕ್ಷ್ಯುಪನಿಷತ್ತಿನಲ್ಲಿ 'ಚಿದಾತ್ಮನಂ ನಿತ್ಯ ಶುದ್ಧಬುದ್ಧಮುಕ್ತಸದದ್ವಯಃ। ಪರಮಾನಂದಸಂದೋಹೋ, ವಾಸುದೇವೋಹಮೋಮಿತಿ ॥........"ತಸ್ಮಾತ್ಸರ್ವಂ ಪರಿತ್ಯಜ್ಯತತ್ವನಿಷ್ಠೋ ಭವಾನಘ" ಎಲ್ಲವನ್ನೂ ಪರಿತ್ಯಜಿಸಿ ತತ್ವನಿಷ್ಠನಾಗಿ, ನಿತ್ಯ ಶುದ್ಧ ಬುದ್ಧ ಮುಕ್ತ ಸದದ್ವಯ ಪರಮಾನಂದ ಚಿದಾತ್ಮನನ್ನು ಹೊಂದಿ

"ವಾಸುದೇವೋಽಹಂ, ಓಂ, ಇತಿ" ಎಂದು ಪಾಪರಹಿತ ತತ್ವನಿಷ್ಠನಾಗೆಂದುಪದೇಶವಿದೆ.

ಮಹಾನಾರಾಯಣೋಪನಿಷತ್, "ಸ್ವರೂಪನಿರೂಪಣಂ" ಪ್ರಥಮಾಧ್ಯಾಯದಲ್ಲಿ, "ತ್ವಮೇವ ಸರ್ವಂ" ಎಂದು ಮೂರು ಸಾರಿ, ಸಾರಿ ಹೇಳಿ, 'ನಕಿಂಚಿದಸ್ತಿತ್ವದ್ವ್ಯತಿರಿಕ್ತಂ' "ತ್ವಮೇವಾಮೃತಂ" ಎಂದೂ ಹಿಂದೆಯೇ ಹೇಳಿರುವ (ಅದೂ ತ್ರಿಪರಣ–ಮೂರಾವರ್ತಿ) 'ವಾಸುದೇವಂ ಸರ್ವಮಿತಿಯಲ್ಲದೆ ಅದರ ವ್ಯತಿರಿಕ್ತವಾಗಿ ಯಾವುದೂ ಇಲ್ಲಾ ಎಂದು ಹೇಳಿಯೇ ಹೇಳಿವೆ. ೫ ನೇ ಅಧ್ಯಾಯದಲ್ಲಿ 'ಭಕ್ತ್ಯತಿಶಯೇನನಾರಾಯಣ ಸ್ವರೂಪಮಯಸ್ಸರ್ವಾವಸ್ಥಾಸುಪ್ರವಿಭಾತಿ | ಸರ್ವಾಣಿಜಗಂತಿ ನಾರಾಯಣ ಮಯಾನಿಪ್ರವಿಭಾಂತಿ | ನಾರಾಯಣವ್ಯತಿರಿಕ್ತಂ ನಕಿಂಚಿದಸ್ತಿ ||'—ಅತಿಶಯಭಕ್ತಿಯಿಂದ ಸರ್ವಮಯ ಸರ್ವಾವಸ್ಥೆಯಲ್ಲೂ ನಾರಾಯಣನೇ ಕಾಣುತ್ತಾನೆ. ಸರ್ವ ಜಗತ್ತಿನಲ್ಲೂ ನಾರಾಯಣಮಯನಾಗಿ ಸ್ಪಷ್ಟವಾಗಿ ತೋರುತ್ತಾನೆ. ನಾರಾಯಣನಿಗೆ ವ್ಯತಿರಿಕ್ತವಾದುದು ಯಾವುದೂ ಇಲ್ಲಾ ಎಂದು 'ವಾಸುದೇವಂ ಸರ್ವಮಿತಿ ಸ ಮಹಾತ್ಮಾ" ಎಷ್ಟು ಹೊಂದುವಂತೆ ಹೇಳಿದ್ದಾರೆ.

ಅಮೃತಬಿಂದೂಪನಿಷತ್ ಸಮಾಪ್ತಿಯಲ್ಲಿ 'ಸರ್ವಭೂತಾದಿ ವಾಸಂಚ, ಯದ್ಭೂತೇಷುವಸತ್ಯಪಿ | ಸರ್ವಾನುಗ್ರಾಹಕತ್ವೇನ ತದಸ್ಮ್ಯಹಂ ವಾಸುದೇವಸ್ತದಸ್ಮ್ಯಹಂ ವಾಸುದೇವ ಇತಿ ||" ಸರ್ವಭೂತಾದಿ ವಾಸಿಯಾಗಿ, ಭೂತಗಳಲ್ಲಿ ಯಾವುದು ವ್ಯವಸ್ಥೆ ಮಾಡುತ್ತಾ ಸರ್ವಾನುಗ್ರಾಹಕ್ಕಾಗಿ, ತಾನು ವಾಸುದೇವನಾಗಿದ್ದಾನೆ ಎಂದು ಪುನರುಕ್ತಿಯಲ್ಲಿ, ಕೊನೆ ಮಾಡಿದ್ದಾರೆ. ಎಲ್ಲೆಲ್ಲಿಯೂ, ಎಲ್ಲದರಲ್ಲಿಯೂ, ತನ್ನಲ್ಲಿರುವ ವಾಸಿಸುವ ವಾಸುದೇವ ವಸ್ತುವನ್ನೇ ಕಾಣುವುದು ಸಹಜಾವಸ್ಥೆ. ಈ ತತ್ವ ತಿಳಿದ ಜ್ಞಾನಿಗಳು ದುರ್ಲಭ. ನಮ್ಮ ಕಾಲಕ್ಕೆ ಒಬ್ಬರೆ ಆದ "ಮಹಾತ್ಮಾ" ಗಾಂಧಿಯವರೊಬ್ಬರೇ. "ಸ ಮಹಾತ್ಮಾ" ಎಂದು ಗೀತೆಯಲ್ಲಿ ಹೇಳಿದಂತೆ ಈ ಕಾಲದಲ್ಲಿ ಜನಸಮುದಾಯವೇ ಇಡೀ ಭಾರತ ಪುಣ್ಯಭೂಮಿಯೇ ಆ ಗಾಂಧಿಯನ್ನು "ಮಹಾತ್ಮಾ" ಎಂದು ಹೃದಯದಿಂದ ಅಭಿವಂದಿಸಿ ಕರೆಯಿತು, ಆ ಹೆಸರಿಗೆ ಆ ಮಹಾತ್ಮರು "ವಾಸುದೇವಂ ಸರ್ವಮಿತಿ"

ಎಂದು ನಡವಳಿಕೆಯಲ್ಲಿ, ಸಾಮಾನ್ಯ ಜೀವನದಲ್ಲಿ, ನಿತ್ಯವ್ಯವಹಾರದಲ್ಲಿ, ರಾಜಕೀಯದಲ್ಲಿ ಕೂಡಾ ತೋರಿಕೊಟ್ಟರು. ಅವರ ಅಹಿಂಸಾತತ್ವವು ಈ ಆಧಾರದ ಮೇಲೇ. ಶ್ರೀ ಬುದ್ಧ ಪರಮಾತ್ಮನ ಅಹಿಂಸಾತತ್ವವಾದರೋ ಈ ಸೂತ್ರದ ಮೇಲೇ. ಹೀಗೆ ಆಗಾಗ್ಯೆ ಒಬ್ಬರು ಮಹಾತ್ಮರು ನಮ್ಮ ಪುಣ್ಯಭೂಮಿಯಲ್ಲಿ ಜನಿಸಿ "ವಾಸುದೇವಂ ಸರ್ವಮಿತಿ" ಅಕ್ಷರತಃ ಆಚರಿಸಿ ನಮ್ಮನ್ನುಧರಿಸಿರುವರು. ಇದೇ ಸರ್ವಕಾಲ ದೇಶಮತ ಸತ್ಯವಾದ ಸೂತ್ರ. ಸರ್ವರೂ ಸದಾ ಮನಸಿನಲ್ಲಿಟ್ಟು ಆಚರಿಸಬೇಕಾದ ತತ್ವ.

ಕಾಮೈಸ್ತೈಸ್ತೈರ್ಹೃತಜ್ಞಾನಾಃ । ಪ್ರಪದ್ಯಂತೇಽನ್ಯದೇವತಾಃ ।
ತಂ ತಂ ನಿಯಮಮಾಸ್ಥಾಯ । ಪ್ರಕೃತ್ಯಾ ನಿಯತಾಃ ಸ್ವಯಾ ॥೨೦॥

ಈ ಜ್ಞಾನಿಯ ಪವಿತ್ರ ಪರಮಭಾವದಲ್ಲೇ ಎಲ್ಲಾ ಭಜಕರೂ ನಿಲ್ಲಲು ಸಾಧ್ಯವಿಲ್ಲವಾಗಿ, ಸಕಾಮರಾದವರು, ಭಿನ್ನಭಿನ್ನವಾದ ಯಜ್ಞಾದಿ ಕರ್ಮಫಲಗಳಿಂದ ಮೋಹಿಸಲ್ಪಟ್ಟ ಜ್ಞಾನವುಳ್ಳವರಾಗಿ (ಶುದ್ಧ ಜ್ಞಾನ ವಲ್ಲದೆ ಅಲ್ಪಜ್ಞಾನಜೋದಿತರಾಗಿ) ತಮ್ಮ ತಮ್ಮ ಸಂಸ್ಕಾರದಂತೆ ನಿಯಮಿತವಾದ ನಿಯಮಗಳನ್ನನುಸರಿಸಿ, ನಿಯಂತ್ರಿತರಾದ ಅನ್ಯದೇವತೆಗಳನ್ನಾಶ್ರಯಿಸಿ, ಭಜಿಸುವರು. ಇದು ಆರ್ತ, ಜಿಜ್ಞಾಸು, ಅರ್ಥಾರ್ಥಿಗಳಿಗೂ ಅನ್ವಯಿಸುವುದು. "ವಾಸುದೇವಂ ಸರ್ವಮಿತಿ"ಯೇ ಜ್ಞಾನದ ಉತ್ಕೃಷ್ಟತಮಾವಸ್ಥೆ. ಅದು ಜ್ಞಾನಿಯಾದ ಅಪರೂಪ ಮಹಾತ್ಮನಿಗೆ ಮೀಸಲು. ಸಾಧಾರಣ ಇತರ ಸಾಧಕರೆಷ್ಟೋ ಮಂದಿ, ಜ್ಞಾನಿ ಅವರಲ್ಲಿ ಸಹಸ್ರಕ್ಕೆ ಒಬ್ಬ ಮಾತ್ರ. ಮಿಕ್ಕವರೆಲ್ಲಾ ತಾವೇ (ಸ್ವಯಂ) ತಮ್ಮಂತಸ್ತಿಗೆ ಸರಿಯಾದ ದೇವತೆಯನ್ನು ಗೊತ್ತುಮಾಡಿಕೊಂಡು ತಮ್ಮ ಸಂಸ್ಕಾರದಂತೆ ನಿಯಮ ಮಾಡಿಕೊಂಡು ಅನ್ಯದೇವತೆಗಳನ್ನು ಭಜಿಸುತ್ತಾರೆ. ಬಹಿರ್ದೇವತಾರ್ಚನೆಯ ವಿಷಯ. ಅಂತರದಲ್ಲಿ ತಮ್ಮಾತ್ಮನನ್ನೇ ಕಂಡು, ಅದೇ ಸರ್ವವ್ಯಾಪಿ, ಸರ್ವರಲ್ಲೂ ನನ್ನಲ್ಲೂ ವಾಸಿಸುವ ವಾಸುದೇವನೆಂಬ ಉತ್ತಮ ಶರಣು ಪೂಜಾಧ್ಯಾನವನ್ನು ಕಾಣರು. ಹೊರಗಿನ ಪ್ರಪಂಚದಲ್ಲಿ ತಮಗೆ ಬೇಕಾದ ಫಲಗಳಿಗಾಗಿ (ಕಾಮೈ ಸ್ತೈಸ್ತೈ) ತಮ್ಮ

ಆಚರಣೆಯನ್ನು ಅನುಸರಿಸಿಕೊಂಡು ಆ ಫಲ ಸಿದ್ಧಿಗಾಗಿ ಬೇಕಾದ ಅನ್ಯ ದೇವತೆಗಳ ಭಜನೆಯನ್ನು ಅವರು ಮಾಡುವರು. ಇದು ಮಿಥ್ಯಾಜ್ಞಾನ–ಅಪಪ್ರಿತ ಜ್ಞಾನ, ಸರಿಯಾದ ಜ್ಞಾನವಲ್ಲಾ.

**ಯೋ ಯೋ ಯಾಂ ಯಾಂ ತನುಂ ಭಕ್ತಃ । ಶ್ರದ್ಧಯಾರ್ಚಿತುಮಿಚ್ಛತಿ**
**ತಸ್ಯ ತಸ್ಯಾಚಲಾಂ ಶ್ರದ್ಧಾಂ । ತಾಮೇವ ವಿದಧಾಮ್ಯಹಮ್ ॥೨೧॥**

ಯಾವ ಯಾವ ಭಕ್ತನು ಯಾವ ಯಾವ ದೇವತೆಯನ್ನು ಶ್ರದ್ಧೆಯಿಂದ ಅರ್ಚಿಸಲಿಚ್ಛಿಸುತ್ತಾನೋ, ಆಯಾಯ ದೇವತಾ ಭಕ್ತರಿಗೆ ಆಯಾಯ ಅಚಲವಾದ ಶ್ರದ್ಧೆಯನ್ನು ನಾನೇ ಉಂಟುಮಾಡಿದ್ದೇನೆ. ಏತಕ್ಕೆಂದರೆ ಸರ್ವಾಂತರ್ಯಾಮಿಯಾದ–ವಾಸುದೇವ ಇವ. ಎಲ್ಲರಲ್ಲಿಯೂ ಇದ್ದು ಪ್ರೇರೇಪಿಸುವ ಶಕ್ತಿ- ವಾಸುದೇವ ಇವ. ಎಲ್ಲರ ಬುದ್ಧಿಯೂ ತಾನಾಗಿ ನಡೆಸುವ–ವಾಸುದೇವ ಇವ. ಒಂದು ದೇವತೆಯನ್ನು ಒಪ್ಪಿ ಅದನ್ನು ತನ್ನದಾಗಿ ಆವಾಹನೆ ಮಾಡಿಕೊಂಡು, ಅದಕ್ಕೆ ಶ್ರದ್ಧಾಭಕ್ತಿಯಿಂದ ಅರ್ಚನೆ ಮಾಡಬೇಕಾದರೂ ಒಂದು ಒಳಗಿನ ಪ್ರೇರಣೆ ಬೇಕು.

**ಸ ತಯಾ ಶ್ರದ್ಧಯಾ ಯುಕ್ತ-ಸ್ತಸ್ಯಾರಾಧನಮೀಹತೇ ।**
**ಲಭತೇ ಚ ತತಃ ಕಾಮಾನ್ । ಮಯ್ಯೈವ ವಿಹಿತಾನ್ ಹಿ ತಾನ್ ॥೨೨॥**

ಆ ದೇವಭಕ್ತನು, ಆ ದೇವತೆಯನ್ನು ಶ್ರದ್ಧೆಯಿಂದ ಆರಾಧಿಸಿದರೆ, ತತ್ತದೇವತಾರೂಪನಾದ ನನ್ನಿಂದ ಕೊಡಲ್ಪಟ್ಟ ಭೋಗಗಳನ್ನು ಅವನು ಪಡೆಯುತ್ತಾನೆ. ಈ ಶ್ಲೋಕಗಳಲ್ಲುಪಯೋಗಿತವಾಗಿರುವ ಪದಗಳನ್ನಾದರೂ ನೋಡಿ. 'ಭಕ್ತ : "ಅಚಲಾಂಶ್ರದ್ಧಾಂ" "ಅರ್ಚಿತು" "ಇಚ್ಛತಿ" "ಯುಕ್ತಸ್ತಸ್ಯಾರಾಧನಾ" "ಮಯ್ಯೈವ." ಭಕ್ತನಾಗಬೇಕು, ಅರ್ಚಿಸಬೇಕು, ಅಚಲವಾದ ಶ್ರದ್ಧೆಯಿಂದ ಸ್ವಂತ ಇಚ್ಛೆಯಿಂದ ಪೂಜಿಸಬೇಕು, ಭಜಿಸಬೇಕು. ಎಲ್ಲಾ ದೇವತೆಗಳ ಸ್ವರೂಪವೂ ತಾನೆ, ಎಲ್ಲಾ ಶ್ರದ್ಧಾಭಕ್ತಿಗಳನ್ನು ಕೊಟ್ಟವನೂ ತಾನೇ, ಯುಕ್ತಾರಾಧನೆಗೆ ಪ್ರೇರಿಸಿದವನೂ ತಾನೇ, ಭೋಗರೂಪದಲ್ಲಿ ಕಾಮಿಸಿದ ಫಲಗಳನ್ನು ಕೊಡುವನೂ

ತಾನೇ—ಆದರೆ ಅವರಿಗೆ "ವಾಸುದೇವಂ ಸರ್ವಮಿತಿ" ಅರಿವು ಮಾತ್ರ ಇಲ್ಲ.

ತಿಳಿದುಮಾಡಲೀ, ತಿಳಿಯದೆಮಾಡಲೀ, ಆ ಭಕ್ತಿಗೆ ಆ ಶ್ರದ್ಧೆಗೆ (ಅಚಲಾಂ) ಆ ಅರ್ಚನೆಗೆ, ಆ ಯುಕ್ತ ಆರಾಧನೆಗೆ ಫಲವಿದ್ದೇಯಿದೆ. ಕಾಮಪೂಜಿತರು ಅನುಭವಿಸುತ್ತಾರೆ. ಕಾಮವರ್ಜಿತರು ಫಲಾಪೇಕ್ಷೆ ಯಿಲ್ಲದೇ ಪೂಜೆಯನ್ನೇ ಫಲವಾಗಿ ಸಮರ್ಪಿಸುತ್ತಾರೆ. ಅದರ ಫಲ ಭೋಗಕ್ಕೆ ಆಸೆಪಡುವವರೇ ಅಲ್ಲಾ-ಜ್ಞಾನಿಗಳು. ಕೊಡುವ ಅವನಲ್ಲದೆ ಏಕೈಕದಾತ ಮತ್ಯಾರಿದ್ದಾರೆ. ಕುಲಶೇಖರರಾಜರು ಮುಕುಂದ ಮಾಲಾ ಸ್ತೋತ್ರದಲ್ಲಿ "ನಾರಾಯಣೇತಿಷ್ಟತಿ" ಕೊಡುವ ಧಣಿ ಮಹಾಸ್ವಾಮಿ ಶ್ರೀಮನ್ನಾರಾಯಣನೇ ಇರುವಾಗ, ನಾನು ಇತರರನ್ನು "ಅಲ್ಪಾರ್ಥದಂ" ಯಾಕೆ ಯಾಚಿಸಲಿ ಎಂದು ಪ್ರಾರ್ಥಿಸಿದ್ದಾರೆ. ಯಾವ ಭಕ್ತನಿಗಾದರೂ, ಯಾವ ಪೂಜಾಫಲವೆಂದಾದರೂ, ಯಾವ ಕಾಮೋಪಭೋಗವನ್ನು ಕೊಟ್ಟರೂ, ಎಲ್ಲಾ ಆ ಸ್ವಾಮಿಯೇ. ಆದರೆ ಆ ಫಲ ನನ್ನದು, ನಾನು ಅನುಭವಿಸುತ್ತೇನೆಂದು ತಿಳಿಯುತ್ತಾನೆ ಅಜ್ಞಾನಿ ಸಾಧಕ. "ಫಲಭುಕ್ ತ್ವಮೇವ ಮಧುಸೂದನ" ಎಂದು ಅದೇ ಸ್ತೋತ್ರದಲ್ಲಿ ಮುಂದೆ ಹೇಳಿರುವಂತೆ ಜ್ಞಾನಿಯು, ಕರ್ಮ ಸಂಕಲ್ಪವೂ ನಂದಲ್ಲಾ, ಕರ್ಮಮಾಡಿದವನೂ ನಾನಲ್ಲ, ಎಲ್ಲಾ ನೀನೇ ಆದುದರಿಂದ ನೀನೇ ಫಲವನ್ನೂ ಊಟಮಾಡು ಸ್ವಾಮಿ, ಎಂದು ಮಹಪಾತ್ಮನಿಗೆ ಅರ್ಪಿಸಿಬಿಡುತ್ತಾ . ಮಾಡಿದ ಕರ್ಮವ್ಯಾವುದೂ ನಿಷ್ಫಲವಾಗುವುದಿಲ್ಲಾ. ಆದರೆ ಆ ಫಲ ಯಾರಿಗರ್ಪಿತ ಹೇಗೆ ಪರಿಸಮಾಪ್ತಿ ಮುಖ್ಯ. ಮಹದಾತ್ಮನ ಸೇವೆಯಲ್ಲಿ ಅರ್ಪಿತವಾಗಿಬಿಟ್ಟರೆ ನಿಷ್ಕಾಮ ಕರ್ಮವಾಗಿಬಿಟ್ಟಿತು.

**ಅಂತವತ್ತು ಫಲಂ ತೇಷಾಂ । ತದ್ಭವತ್ಯಲ್ಪಮೇಧಸಾಮ್ ।**
**ದೇವಾನ್ದೇವಯಜೋ ಯಾಂತಿ । ಮದ್ಭಕ್ತಾ ಯಾಂತಿ ಮಾಮಪಿ ॥೨೩॥**

ಅದಕ್ಕೇ ಸ್ವಾಮಿ ಹೇಳುತ್ತಾನೆ, ಹಾಗೆ ಸ್ವಾರ್ಥಕ್ಕಾಗಿ ಕಾಮಭೋಗಕ್ಕಾಗಿ ಪಡೆದ ಆ ಫಲವು, ಅಲ್ಪಬುದ್ಧಿಯವರ ಆ ದೇವತಾಫಲವು ಅಲ್ಪವಾದುದು. "ಅಂತವತ್ತು" ಕೊನೆಯುಳ್ಳದ್ದು. ಅನುಭವಿಸಿ

ಮುಗಿದುಬಿಡುತ್ತದೆ. ಆಯಾದೇವತೆಯನ್ನು ಭಜಿಸಿದವರು ಆಯಾ ದೇವತೆಗಳನ್ನು ಪಡೆವರು. "ಮದ್ಭಕ್ತಾ ಯಾಂತಿಮಾಮಪಿ." ಆದರೆ ನನ್ನ ಭಕ್ತನು, "ವಾಸುದೇವಂ ಸರ್ವಮಿತಿ" ಎಂದು ತಿಳಿದ ಜ್ಞಾನಿಯು ನನ್ನನ್ನೇ ಸೇರುವನು. ಇದು "ಕ್ಷೀರಂ ಕ್ಷೀರೇ, ಜಲಂ ಜಲೇ" ಎನ್ನು ವಂತೆ, ತದ್ವಸ್ತುವು ಅದರಲ್ಲೇ ಸೇರಿಬಿಡುವುದು, ನದಿಯು ಸಮುದ್ರವನ್ನು ಸೇರುವಂತೆ. ಆ ನದಿಯ ನೀರು ಸಮುದ್ರದಿಂದಲೇ ಆವಿಯಾಗಿ ಬಂದು ಮೇಘ-ಮಳೆಗಳಿಂದ ನದೀರೂಪ ತಾಳಿ, ಪುನಃ ತನ್ನ ಉದಯಸ್ಥಾನವಾದ ಆ ಸಮುದ್ರವನ್ನೇ ಸೇರುವಂತೆ, ಆ ವಾಸುದೇವನ ಕಿಂಚಿದಂಶವೇ ಆದ ಆ ಅವನ ಭಕ್ತನು, ಅವನನ್ನೇ ಸೇರಿಬಿಡುವನು. ಸೇರಲು ಬೇರೇ ಸ್ಥಾನವೇ ಇಲ್ಲಾ. ಇದೆಲ್ಲಾ ನಾಮರೂಪವಷ್ಟೇ. "ಮೃತ್ತಿಕೇತ್ಯೇವ ಸತ್ಯಂ, ಸರ್ವಂ ಮೃಣ್ಮಯಂ" ಎಂದು ಛಾಂದೋಗ್ಯದಲ್ಲಿ ಹೇಳುವಂತೆ, ಈ ನಾಮರೂಪದಿಂದ ಬೇರ್ಪಟ್ಟಿರುವ ಈ ವಸ್ತುವು, ಈ ನಾಮರೂಪ ಹೋದಮೇಲೆ, ಯಾವುದರಿಂದ ಬಂತೋ ಆ ಮಹದಾತ್ಮನಲ್ಲೇ ಲೀನ ವಾಗಿ ಬಿಡುವುದು, ಮಡಕೆ ಒಡೆದ ಮೇಲೆ ಮಡಕೆಯೊಳಗಿನ ಆಕಾಶ, ಹೊರಗಿನ ಮಹದಾಕಾಶದೊಡನೆ ಬೆರತು ಬಿಡುವಂತೆ. ಬೇರೆ ಎಂಬ ಭಾವವಿದ್ದುದು ಆ ಮಡಿಕೆಯ ಆವರಣದಿಂದಷ್ಟೆ. "Trailing clouds of glory do we come, from God who is our home" ಎಂದು ಆಂಗ್ಲ ಕವಿ ಹಾಡಿರುವಂತೆ, ನಾವು ನಮ್ಮ ನಿಜ ನಿವಾಸಸ್ಥಾನವಾದ, ನಮ್ಮ ಮನೆಗೆ, ಪರಂಧಾಮಕ್ಕೆ ಸೇರುತ್ತೇವೆ. ಆ ಪರಮಾತ್ಮನು ಪ್ರತಿ ಬಿಂಬಿಸಿರುವ ಈ ಉಪಾಧಿಯು, ಬಿದ್ದು ಹೋದಮೇಲೆ ಪ್ರತಿಬಿಂಬವು ಎಲ್ಲಿ ಹೋಯಿತೆಂದರೆ, ಯಾವ ಬಿಂಬದಿಂದ ಪ್ರತಿಬಿಂಬಿಸಿತ್ತೋ ಆ ಬಿಂಬವನ್ನೇ ಸೇರಿತು.—ಅದೇ "ಮದ್ಭಕ್ತಾ ಯಾಂತಿಮಾಮಪಿ." ಅದರ ಜ್ಞಾನವಾಗುವವರೆಗೂ ಈ ಉಪಾಧಿಗಳಲ್ಲೆ ಸುತ್ತಾಟ.

**ಅವ್ಯಕ್ತಂ ವ್ಯಕ್ತಿಮಾಪನ್ನಂ। ಮನ್ಯಂತೇ ಮಾಮಬುದ್ಧಯಃ।**
**ಪರಂ ಭಾವಮಜಾನಂತೋ। ಮಮಾವ್ಯಯಮನುತ್ತಮಮ್ ॥೨೪॥**

ಬುದ್ಧಿಯಿಲ್ಲದವರು ಅವ್ಯಕ್ತನಾದ ನನ್ನನ್ನು ವ್ಯಕ್ತಿರೂಪವುಳ್ಳವನೆಂದು ಭಾವಿಸುತ್ತಾರೆ. ಅವ್ಯಯವೂ, ಸರ್ವೋತ್ತಮವೂ ಆದ ನನ್ನ ಪರಂಭಾವ ವನ್ನು (ನಿರತಿಶಯ ಸ್ವರೂಪ) ತಿಳಿಯರು. ಇದೊಂದು ದೊಡ್ಡ ಸಮಸ್ಯೆ. ಕಣ್ಣಿಗೆ ಕಾಣದುದೇ ಸತ್ಯ, ಸ್ಥಿರ ಸದ್ವಸ್ತು ; ಕಣ್ಣಿಗೆ ಕಾಣುವುದೆಲ್ಲಾ ಸುಳ್ಳು, ಮಿಥ್ಯ. ವ್ಯಕ್ತಿತ್ವ ಹೊಂದಿರುವ ಈ ಪ್ರಕೃತಿಯೆಲ್ಲಾ ಸ್ಥಿರವಾದುದಲ್ಲಾ. ಹುಟ್ಟಿತು, ಇರುತ್ತದೆ, ಹೋಗುತ್ತದೆ. ಅವ್ಯಕ್ತ ವಾಗಿರುವುದೇ ಸ್ಥಿರ. ಅದು ಹುಟ್ಟುವುದೂ ಇಲ್ಲಾ, ಸಾಯುವುದೂ ಇಲ್ಲಾ ಯಾವಾಗಲೂ ಇರುತ್ತವೆ. ಅಸ್ತಿ, ಭಾತಿ, ಆನಂದತಿ. ಯಾವಾಗಲೂ ಇರುತ್ತದೆ, ಪ್ರಕಾಶಿಸುತ್ತದೆ ಮತ್ತು ಆನಂದಿಸುತ್ತದೆ. ಅದರ ಇರುವಿಕೆಯೇ ಅಗೋಚರ. ನಿರಾಕಾರ, ಅಕ್ಷಯ ನಿರತಿಶಯವಾದರೂ—ಸತ್ಯ.

ಅವ್ಯಕ್ತ ಪರಂ ಭಾವವೇ ಅಪಾರವಾದುದು. ಈ ವ್ಯಕ್ತ ಅಪರ ಇದ್ದು ಹೋಗುವಂಥಾದ್ದು ಅಲ್ಪವಾದುದು. ಆದರೆ ನಾವು ಇದನ್ನೇ ಶಾಶ್ವತವೆಂದು ಕಟ್ಟಿಕೊಂಡು ಒದ್ದಾಡುತ್ತೇವೆ ಕಣ್ಣಿಗೇ ಕಟ್ಟಿದ ಹಾಗಿರುವ ಇದನ್ನು ನಾವು ಮಿಥ್ಯವೆಂದು ಹೇಗೆ ತೆಗೆಳುವುದು!

**ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ ।**
**ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಮ್ ॥**

ಕಾರಣ ಹೇಳುತ್ತಾನೆ ಪರಮಾತ್ಮ, ಅಚಿಂತ್ಯ ರಚನಾ ಸಾಮರ್ಥ್ಯ ವುಳ್ಳ ಯೋಗ ಮಾಯೆಯಿಂದ ಸುತ್ತಲ್ಪಟ್ಟ ನಾನು ಸರ್ವರಿಗೂ ಕಾಣುವವನಲ್ಲ (ಪ್ರಕಾಶಃ). ಮೂಢವಾಗಿರುವ ಈ ಲೋಕವು ಅಜಂ (ಉತ್ಪತ್ತಿರಹಿತವಾಗಿಯೂ, ಹುಟ್ಟಿಲ್ಲದವ) ಅವ್ಯಯಂ (ವ್ಯಯವಾಗದೆ, ನಾಶರಹಿತ) ಆದ ನನ್ನ ಸ್ವರೂಪವನ್ನು ತಿಳಿಯರು. ಯೋಗ ಎಂದರೆ ಪಡದಿರುವ, ತನ್ನಿಂದ ತಾನೇ ಹೊಂದಿರುವ ಮಾಯೆ, ಯೋಗ ಮಾಯೆ ಇದು ನಾಲ್ಕೆಡೆಯೂ ಆ ಸದ್ವಸ್ತುವನ್ನು ಮುಚ್ಚಿದೆ. ಮೂಢರಾದ ಲೋಕರಿಗೆ ಹೇಗೆ ಕಾಣಬೇಕು, ಆ ಮಾಯೆ ದಾಟಬೇಕು, ಕಾಣ ಬೇಕಾದರೆ, ಜ್ಞಾನದಿಂದ. ಶ್ವೇತಾಶ್ವತರೋಪನಿಷತ್ ೪ ಅ ೧೦ ಶ್ಲೋಕ ದಲ್ಲಿ "ಮಾಯಾಂತು ಪ್ರಕೃತಿಂ ವಿಂದ್ಯಾನ್ಮಾಯಿನಂತು ಮಹೇಶ್ವರಂ"

ಎಂದು ಹೇಳಿದೆ. ಈ ಪ್ರಕೃತಿಯೇ ಅವನ ಮಾಯೆ, ಈ ಪ್ರಕೃತಿಯೇ ಎಲ್ಲವನ್ನೂ ಆವರಿಸಿದೆ. ತ್ರಿಗುಣಾತ್ಮಕ ಪ್ರಕೃತಿಯಿಂದ ಎಲ್ಲವೂ ಮುಚ್ಚಿಹೋಗಿರುವುದರಿಂದ, ಮಾಯಿಯಾದ ಮಹೇಶ್ವರನನ್ನು ಯಾರೂ ಕಾಣರು. ಈ ಪ್ರಕೃತಿಯು ಇಹ ವ್ಯಾಮೋಹದ ವ್ಯಾಪಾರದಲ್ಲಿ ಮಾಯಿಯಾದ ಮಹೇಶ್ವರನ ಕಡೆಗೇ ಕೂಡಾ ಯಾರ ದೃಷ್ಟಿಯೂ ಧಾವಿಸದು.

ಮಾಯಾರೂಪಿಣಿಯಾದ ಹೆಣ್ಣಾಗಿಯೇ ಹುಟ್ಟಿ, ಮಾಯೆದಾಟಿ ಶರಣ ಸತಿಯಾದ ಮಹಾದೇವಿಯಕ್ಕನು, ಅನುಭವ ನುಡಿಯಲ್ಲಿ, "ಬಿಟ್ಟೆನೆಂದರೆ ಬಿಡದೀಮಾಯೆ, ಬಿಡದಿದ್ದರೆ ಬೆಂಬತ್ತಿತ್ತು ಮಾಯೆ ಯೋಗಿಗೆ ಯೋಗಿಣಿಯಾಯಿತ್ತು ಮಾಯೆ, ಸವಣಂಗೆ ಸವಣಿಯಾಯಿತ್ತು ಮಾಯೆ. ಯತಿಗೆ ಪರಾಕಿಯಾಯ್ತು ಮಾಯೆ. ನಿನ್ನ ಮಾಯೆಗೆ ನಾನಂಜುವಳಲ್ಲ, ಚೆನ್ನಮಲ್ಲಿಕಾರ್ಜುನದೇವ, ನಿನ್ನಾಣೆ"–ಎಂದು ಕೊಡವಿಕೊಂಡರೂ ಬಿಡದೆ ಬೆನ್ನುಹತ್ತಿ, ಯೋಗಿಯಾಗಿ ಕಾಡಿಗೆ ಏಕಾಕಿಯಾಗಿ ಹೋದರೂ ಯೋಗಿಣಿ ರೂಪದಲ್ಲಿ ಹಿಂಬಾಲಿಸಿತು ಮಾಯೆ. ಸರ್ವಸಂಗ ಪರಿತ್ಯಾಗ ಮಾಡಿ, ಹೆಣ್ಣು ಹೊನ್ನು ಮಣ್ಣುಗಳಾಸೆ ಬಿಟ್ಟು, ವ್ರತನಿರತನಾದ ಪರಮಯತಿಗೂ "ಪರಾಕ್, ಪರಾಕ್" ಎಂಬ ಹೊಗಳಿಕೆಯಿಂದ, ಅಂತರ್ಮುಖ, ಪರಾಙ್ಮುಖವಾಗುವಂತೆ ಮಾಡಿ, ಅಡ್ಡದಾರಿ ಹಿಡಿಸುತ್ತದೆ. ಅಹಂ ಎಬ್ಬಿಸುತ್ತದೆ. ಪ್ರತಿ ನುಡಿಗೆ ಪಲ್ಲವಿಯಾಗಿ 'ಮಾಯೆ' ಹಾಕಿ ದಿವ್ಯವಾಗಿದೆ ವಚನ.

**ವೇದಾಹಂ ಸಮತೀತಾನಿ । ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿ । ಮಾಂ ತು ವೇದ ನ ಕಶ್ಚನ ॥೨೬॥**

ಇವನೇನೋ ಇತರರಿಗೆ ಕಾಣದೆ ಯೋಗ ಮಾಯೆಯಿಂದ ಮುಚ್ಚಿಕೊಂಡಿದ್ದಾನೆ. ಆದರೆ ಇವನಿಗೆ ಎಲ್ಲವೂ ಹೊರಗಡೆ ಕಾಣುತ್ತದೆ. ಮಾಯಾ ತೆರೆಮರೆಯಲ್ಲಿ ಔತುಕೊಂಡು ಯಾರಿಗೂ ಕಾಣದಂತೆ ತಾನು ಎಲ್ಲವನ್ನೂ ನೋಡುವಂತೆ. ಭೂತ, ವರ್ತಮಾನ ಭವಿಷ್ಯದ ಎಲ್ಲಾ ಭೂತಗಳನ್ನೂ ಪರಮಾತ್ಮ ತಿಳಿದಿರುವನು. ಆದರೆ ಆತನನ್ನು ಯಾರೂ

ಅರಿಯರು. ಯಾವಾಗಲೂ ತ್ರಿಕಾಲದಲ್ಲೂ ಅವನು ಇರುವನಾದುದರಿಂದ ತ್ರಿಕಾಲ ಜ್ಞಾನ ಅವನಿಗಿದೆ.

ಕೆಲವರು ಕಪ್ಪು ಕನ್ನಡಕವನ್ನು ಧರಿಸಿ, ಅದರಿಂದ ಎಲ್ಲವನ್ನೂ ನೋಡಿ ತಿಳಿವರು, ಹೊರಗಿನವರಿಗೆ ಆ ಕಪ್ಪುಗಾಜಿನ ಮೂಲಕ, ಎಲ್ಲಿ ನೋಡುತ್ತಿರುವರು, ಏನು ನೋಡುತ್ತಿರುವರು, ನೋಡುತ್ತಿರುವ ಕಣ್ಣಿದೆಯೋ ಎಂದು ಕೂಡಾ ಕಾಣುವುದಿಲ್ಲಾ. ತಮ್ಮ ದೃಷ್ಟಿ ಚಾಪಲ್ಯವನ್ನು ಮುಚ್ಚಿತೋರ್ಪಡಿಪ ತಾವು ಮಾತ್ರ ಯಾವುದನ್ನಾದರೂ, ಯತ್ತಾದರೂ ಸ್ವೇಚ್ಛೆಯಿಂದ ನೋಡಲವಕಾಶವಾಗುವಂತೆ ಈ ಬಣ್ಣದ ಕನ್ನಡಕದ ಮಾಯಾಚ್ಛಾದನೆ. ಅದನ್ನು ಧರಿಸಿರುವ ರಾಜಕೀಯ ಪಟು, ರಾಜರನ್ನು ನಾನು ಇಲ್ಲಿ ನಾಮಾಂಕಿತ ಮಾಡಬೇಕಾಗಿಲ್ಲಾ.

ಅವನು ಯೋಗಮಾಯೆಯಲ್ಲಿ ಮುಚ್ಚಿಕೊಂಡಿರುವುದರಿಂದ ಅವನು ಅದೃಷ್ಟನು. ಒಳಗಿರುವ ಸರ್ವದರಲ್ಲಿಯ ಪರಮಾತ್ಮನನ್ನು ನಾವು ಕಾಣೆವು ; ಮೇಲಿರುವ ಯೋಗಮಾಯಾಕಾರವಾದ ಪ್ರತೀಕವನ್ನೇ ನೋಡುವೆವು. ಎಲ್ಲರಲ್ಲಿಯೂ ಎಲ್ಲದರಲ್ಲಿಯೂ, ಯಾವಾಗಲೂ ಪರಮಾತ್ಮನಿರುವನೆಂಬ ಭಾವನೆ ದೃಢವಾಗಿರಬೇಕು. "ಸೂತ್ರೆಮಣಿಗಣಾಇವ"ವಂತೆ, ಕಾಣದಂತೆ ಒಳಗೆ ಹಾದುಹೊಂದಿದ್ದಾನೆ. ನಾವು ಹೊರಗೆ ಥಳಥಳಿಸುವ ಕಣ್ಣಿಗೆ ಕಾಣುವ ವ್ಯಕ್ತಮಣಿಗಳನ್ನು ಕಾಣುತ್ತೇವೆಯೇ ಹೊರತು, ಒಳಗಣ ಸೂತ್ರ ಕಾಣೆವು. ದೇಹಗಳನ್ನು ನೋಡುತ್ತೇವೆಯೇ ಹೊರತು, ಅಂತರ್ಯಾಮಿಯಾದ ಸರ್ವದರಲ್ಲಿರುವ "ದೇಹಿ"ಯನ್ನು ಕಾಣೆವು.

**ಇಚ್ಛಾದ್ವೇಷಸಮುತ್ಥೇನ । ದ್ವಂದ್ವಮೋಹೇನ ಭಾರತ ।**
**ಸರ್ವಭೂತಾನಿ ಸಮ್ಮೋಹಂ । ಸರ್ಗೇ ಯಾಂತಿ ಪರಂತಪ ॥೨೭॥**

ಇಚ್ಛಾದ್ವೇಷದಿಂದುತ್ಪನ್ನವಾದ ಸೀತೋಷ್ಣ ಇತ್ಯಾದಿ ದ್ವಂದ್ವ ಮೋಹಕ್ಕೆ ವಶರಾದ ಸರ್ವಭೂತಗಳೂ, ಇಹದುತ್ಪತ್ತಿಕಾಲದಲ್ಲಿಯೇ ಮೋಹ ಸಹಿತರಾಗಿ ಹುಟ್ಟುವರು. ಮೋಹ ಸಹಿತರಾಗುವುದಕ್ಕೆ ಈ ದ್ವಂದ್ವಗಳ ಮಧ್ಯೆ ಉತ್ಪತ್ತಿಯೇ ಕಾರಣ. ಈ ಮೋಹ ಸಡಿಲ ಬೇಕಾ

ದರೆ ದ್ವಂದ್ವಾತೀತನಾಗಬೇಕು. ಇದೇ ಮುಂಚೆ ಸ್ವಾಮಿಯು ಬೋಧಿಸಿದುದು. ಶೀತಉಷ್ಣದಲ್ಲಿ, ಸುಖದುಃಖಗಳಲ್ಲಿ ಸಮವಾಗಿರಬೇಕು. ಸುಖಬಂದರೆ ಹಿಗ್ಗಬಾರದು, ದುಃಖಕ್ಕೆ ಕುಗ್ಗಬಾರದು. ಆಗ ಈ ಮೋಹದ ಜಾಲ ನಮ್ಮ ಮೇಲೆ ಕಮ್ಮಿಯಾಗುವುದು. ಭಗವದ್ದರ್ಶನವಾಗಬೇಕಾದರೆ, ಈ ಸಮತ್ವ ಬಹು ಮುಖ್ಯ.

**ಯೇಷಾಂ ತ್ವಂತಗತಂ ಪಾಪಂ । ಜನಾನಾಂ ಪುಣ್ಯಕರ್ಮಣಾಮ್ ।**
**ತೇ ದ್ವಂದ್ವಮೋಹನಿರ್ಮುಕ್ತಾ-ಭಜಂತೇ ಮಾಂ ದೃಢವ್ರತಾಃ ॥೨೮॥**

ದೃಢವ್ರತರಾಗಿ ಸ್ವಾಮಿಯನ್ನು ಭಜಿಸಬೇಕಾದರೆ ಈ ದ್ವಂದ್ವ ಮೋಹದಿಂದ ನಿರ್ಮುಕ್ತನಾಗಬೇಕು. ಯಾರು ಸುಕೃತಿಯಿಂದ ಪಾಪವು ನಷ್ಟವಾಗಿ ಪುಣ್ಯಕರ್ಮಿಗಳಾಗುತ್ತಾರೋ ಆಗ ದ್ವಂದ್ವ ಮೋಹವು ನಿವೃತ್ತಿಯಾಗುತ್ತದೆ. ಈ ಬಿಡುಗಡೆಗೆ ಪ್ರಯತ್ನಬೇಕು. ಹುಟ್ಟುತ್ತಲೇ ಜೊತೆಯಲ್ಲಿ ಬಂದ ಈ ಮೋಹಪಾಶವನ್ನು ಸ್ವಪ್ರಯತ್ನದಿಂದ ಕಿತ್ತೊಗೆಯಬೇಕು. ಇದಕ್ಕಾಗಿಯೇ ಈ ದ್ವಂದ್ವಗಳಿಂದ ಬಿಡುಗಡೆ ಹೊಂದಬೇಕು. ಅವಕ್ಕೆ ಮೇಲೇರಬೇಕು. ಆಗ ದೃಢವ್ರತರಾಗುತ್ತಾರೆ. ಈ ದ್ವಂದ್ವಗಳಿಂದ ಯಾವಾಗ ಮನವಲ್ಲಾಡುವುದಿಲ್ಲವೋ ಆಗ ದೃಢವ್ರತರಾಗುತ್ತಾರೆ. ಆ ದೃಢಮನಸ್ಸಿನಿಂದ ಭಗವಂತನನ್ನು ಧ್ಯಾನಮಾಡುತ್ತಾರೆ. ಬೇರೆ ಎಳೆಯಲು ಈ ದ್ವಂದ್ವಗಳ ಬಾಧೆ ಅವರಿಗಿರುವುದಿಲ್ಲಾ. ಈ ದೃಢವ್ರತ ಬಹಳ ಮುಖ್ಯ. ಇಲ್ಲವಾದರೆ ಯಾವ ಯಾವುದೋ ಬಂದು ಅಲುಗಾಡಿಸಲು ಪ್ರಯತ್ನಿಸುತ್ತದೆ. ಎಂತೆಂಥಹ ಮಹಾ ಋಷಿಗಳಿಗೂ ಈ ದ್ವಂದ್ವ ಮೋಹಪಾಶವು ತಮ್ಮ ತಪೋಹಾನಿ ಮಾಡಿದೆ. ಅವಕ್ಕೆಡೆಯೇ ಕೊಡದಂತೆ ದೃಢವಾಗಿರಬೇಕು. ಅದಕ್ಕೆ ಸಹಾಯವಾಗಿ ಪಾಪವು ನಷ್ಟವಾಗಿ ಪುಣ್ಯಕರ್ಮ ನಿರತನಾಗಿರಬೇಕು. ಇಲ್ಲವಾದರೆ ಹಿಂದಿನ ಪಾಪವಾಸನೆಯೇ ದ್ವಂದ್ವ ಮೋಹಕ್ಕೊಳಗುಮಾಡುತ್ತದೆ.

**ಜರಾಮರಣಮೋಕ್ಷಾಯ । ಮಾಮಾಶ್ರಿತ್ಯ ಯತಂತಿ ಯೇ ।**
**ತೇ ಬ್ರಹ್ಮ ತದ್ವಿದುಃ ಕೃತ್ಸ್ನ-ಮಧ್ಯಾತ್ಮಂ ಕರ್ಮ ಚಾಖಿಲಮ್ ॥೨೯॥**

ಈ ಎಲ್ಲಕ್ಕೂ ಮುಖ್ಯ ಹೇತುವು, ಈ ವಾರ್ಧಿಕ್ಯ ಮೃತ್ಯುಗಳಿಂದ ಬಿಡುಗಡೆ ಹೊಂದುವ ಉತ್ಕೃಷ್ಟ ಇಚ್ಛೆ (ಮೋಕ್ಷಾಯ) ಯಿಂದ ಪರಮಾತ್ಮನನ್ನು ಆಶ್ರಯಮಾಡುವ ಪ್ರಯತ್ನ. ಭಗವಂತನನ್ನೇ ಆಶ್ರಯಮಾಡುವ ಪ್ರಯತ್ನದಲ್ಲಿ ಅವರು ಆ ಬ್ರಹ್ಮವನ್ನೂ ಸಂಪೂರ್ಣ ವಾದ ಅಧ್ಯಾತ್ಮವನ್ನೂ (ಆ ಪರಬ್ರಹ್ಮನ ತತ್ವವಿಚಾರ) ತದಂಗವಾಗಿ ಸಕಲ ಕರ್ಮಗಳನ್ನೂ ಬಲ್ಲವರಾಗುತ್ತಾರೆ. ಬ್ರಹ್ಮವೇ ಗುರಿ, ಅದನ್ನು ಹೊಂದಲು ಮಾರ್ಗಪೂರ್ಣ ಅಧ್ಯಾತ್ಮ (ವಿಚಾರ) ಅದಕ್ಕೆ ಮಾಡಬೇಕಾದ ಅಖಿಲ ಕರ್ಮ, ಇವು ಮೂರೂ ಬಲ್ಲವರಾದರೆ ಪರಮಾತ್ಮನನ್ನೇ ಆಶ್ರಯಿಸಿ ಆ ಮಾರ್ಗದಲ್ಲೇ ಪ್ರಯತ್ನಮಾಡುತ್ತಾ ಇರುತ್ತಾರೆ.

**ಸಾಧಿಭೂತಾಧಿದೈವಂ ಮಾಂ । ಸಾಧಿಯಜ್ಞಂ ಚ ಯೇ ವಿದುಃ ।**
**ಪ್ರಯಾಣಕಾಲೇಽಪಿ ಚ ಮಾಂ । ತೇ ವಿದುರ್ಯುಕ್ತಚೇತಸಃ ॥೩೦॥**

ಅಧಿಭೂತದಿಂದಲೂ, ಅಧಿದೈವದಿಂದಲೂ, ಅಧಿಯಜ್ಞದಿಂದಲೂ ಕೂಡಿರುವ ನನ್ನನ್ನು ಯಾರು ಅರಿತಿರುತ್ತಾರೋ, ಅವರು ಮರಣ ಕಾಲದಲ್ಲಿ ಕೂಡಾ ನನ್ನ ಚೇತಸ್ಸಿನೊಂದಿಗೆ ಸೇರಿಹೋಗಲು ತಿಳಿವಳಿಕೆ ಹೊಂದುವರು. ಮುಂದಿನ ಅಧ್ಯಾಯದ ಪ್ರಥಮದಲ್ಲೇ ಅರ್ಜುನನು ಅಧಿಭೂತ, ಅಧಿದೈವ, ಅಧಿಯಜ್ಞವೆಂದರೇನೆಂದು ಕೇಳುವುದರಿಂದ ಅವುಗಳ ವಿವರಣೆಯನ್ನು ಪರಮಾತ್ಮನ ಬಾಯಿಂದಲೇ ಕೇಳುವ. ಈ ಕೊನೆಯ ಶ್ಲೋಕದಲ್ಲಿ ತನ್ನ ವಿಶೇಷಣಗಳನ್ನು ಹೇಳಿಕೊಂಡಿದ್ದರಿಂದ ಪರಮಾತ್ಮನು ಮುಂದಿನ ಅಧ್ಯಾಯಕ್ಕೆ ಅಂಕುರಾರ್ಪಣಮಾಡಿದಂತಾ ಯಿತು. ಅದನ್ನು ತಿಳಿದವರು ಆ ಚೇತಸ್ಸಿನೊಂದಿಗೆ ಸೇರಿಹೋಗುವ ರಾದುದರಿಂದ ಅದನ್ನು ತಿಳಿಯಲು ಅರ್ಜುನನಿಗೂ ಕುತೂಹಲ.

ಪ್ರಯಾಣ ಕಾಲೇಽಪಿ, ಎಂದು ಸ್ವಾರಸ್ಯವಾಗಿ ಪರಮಾತ್ಮ ಸೇರಿಸಿದ್ದಾನೆ. ಜನನ ಮರಣಗಳು ಒಂದು ಸ್ಥಿತಿಯಿಂದ ಮತ್ತೊಂದು ಸ್ಥಿತಿಗೆ ಪ್ರಯಾಣವಷ್ಟೆ. ಆ ಕಾಲವು (ಮರಣದ್ದು) ಜನನ ಕಾಲದಲ್ಲೇ ಸಿದ್ಧವಾಗಿರುತ್ತೆ. ಎಲ್ಲಿಳಿಯುವುದೆಂದು, ರೈಲು ಹತ್ತುವಾಗಲೇ ಸಿದ್ಧ ವಾಗಿ ಟಿಕೆಟ್ ತೆಗೆದು ರೈಲು ಹತ್ತಿದ್ದೇವೆ. ಆದರೆ ಆ ಕಾಲ ನಮಗೆ

ವೇದ್ಯವಿಲ್ಲಾ. ಮರಣವಮೇಲೆ ಜನನ ಸಿದ್ಧ. "ಪುನರಪಿ ಮರಣಂ, ಪುನರಪಿ ಜನನಂ ಪುನರಪಿ ಮರಣೇ ಜಠರೇ ಶಯನಂ" ಆದರೆ ಎಲ್ಲರೂ ಸಾಮಾನ್ಯ ಜನರು ತಮ್ಮ ಕರ್ಮಗತಿಗನುಸಾರವಾಗಿ ಪುನಃ ಸತ್ತವರು ಹುಟ್ಟುವರು. ಆದರೆ ಕರ್ಮಗತಿಯನ್ನನುಕ್ರಮಿಸಿ, ಅಧಿಭೂತ, ಅಧಿದೈವ, ಅಧಿಯಜ್ಞ ಕೂಡಿರುವ ಪರಮಾತ್ಮನನ್ನರಿತವರು, ಮರಣ ಹೊಂದುತ್ತಲೇ ಆ ಮಹದಾತ್ಮನೊಡನೆ ಒಂದಾಗಿ ಬಿಡುತ್ತಾರೆ. ಯುಕ್ತಚೇತನಃ (Heart Union) ಆ ಸೇರಿಹೋಗುವಿಕೆಯನ್ನೇ ಎದುರುನೋಡುತ್ತಾ ಅವರು ಜೀವನ್ಮುಕ್ತಾವಸ್ಥೆಯಲ್ಲಿ ಇಹ ಜೀವನ ವನ್ನು ದಬ್ಬುತ್ತಾಯಿರುತ್ತಾರೆ. ಅವರು ಇರುವುದು ಇಹವಾದರೂ ಅವರ ಲೋಕ ಪರ. ಪರದ, ಅವ್ಯಕ್ತದ, ಚಿಂತೆಯಲ್ಲಿಯೇ ಕಾಲ ಹಾಕುವರು. ಸಂಪೂರ್ಣವಾದ ಅಧ್ಯಾತ್ಮವು ಅವರಿಗಾಗಿದೆ. ಆದಾಗಲೇ ಅವರಿಗೆ ಆತ್ಮಸಾಕ್ಷಾತ್ಕಾರವಾಗಿ ಅವನೊಡನೊಂದಾಗಿಬಿಟ್ಟಿದ್ದಾರೆ. ಆ ಜ್ಞಾನಿಗಳು ಅವನಿಗೆ ಪ್ರಿಯರು. ಪರಮಾತ್ಮನು ಜ್ಞಾನಿಗಳಿಗೆ ಪ್ರಿಯ. ಒಬ್ಬರೊಬ್ಬರಿಗೆ ಆಗಲೇ ಸಂಧಿಯಾಗಿಬಿಟ್ಟಿದೆ.

ಈ ಅಧ್ಯಾಯದಲ್ಲಿ ಭಗವಂತನು ಜ್ಞಾನವನ್ನೇ ಒಂದು ವಿಜ್ಞಾನವಾಗಿ ವಿಶದೀಕರಿಸಿರುವನು. ಯಾವುದು ತಿಳಿದರೆ ಇನ್ನು ಏನೂ ತಿಳಿಯ ಬೇಕಾದುದಿಲ್ಲವೋ, ಎಲ್ಲಾ ತಿಳಿದಂತಾಗುತ್ತದೋ, ಆ ಎಲ್ಲಾ ತಿಳುವಳಿಕೆ ಗಳಿಗಾಧಾರಭೂತನಾದ ಆತ್ಮನನ್ನು ವಿವರಿಸಿ, ಆ ಆತ್ಮನೇ "ವಾಸುದೇವಂ ಸರ್ವಮಿತಿ" ಎಂಬ ಒಂದೇ ಆಧಾರ ಸೂತ್ರದಮೇಲೆ ಆ ಜ್ಞಾನ ನಿಷ್ಠೆ ಯನ್ನೆಲ್ಲಾ ನಿಲ್ಲಿಸಿದ್ದಾನೆ. ಎಲ್ಲಾ ಭಜಕರಿಗಿಂತಲೂ ಈ ಜ್ಞಾನವುಳ್ಳ ಜ್ಞಾನಿಯೇ ತನಗೆ ಪ್ರಿಯನೆಂದೂ ಹೇಳಿರುವುದರಿಂದ ಈ ಸರ್ವೋತ್ಕೃಷ್ಟ ಜ್ಞಾನ ಸಾಧನೆಗೆ ಮೋಹಮಾಯಾಪಾಶದಿಂದ ಬಿಡುಗಡೆ ಹೊಂದಲು ದ್ವಂದ್ವಾತೀತನಾಗಬೇಕು, ಎಂದು ಉಪದೇಶಿಸಿದ್ದಾನೆ.

ಶ್ರೀಮದ್ಭಗವದ್ಗೀತೆ ಎನ್ನುವ
ಉಪನಿಷತ್ತಿನ, ಬ್ರಹ್ಮವಿದ್ಯೆಯ, ಯೋಗಶಾಸ್ತ್ರದ
ಶ್ರೀ ಕೃಷ್ಣಾರ್ಜುನ ಸಂವಾದದಲ್ಲಿ
ಜ್ಞಾನವಿಜ್ಞಾನ ಯೋಗವೆನ್ನುವ ಏಳನೆಯ ಅಧ್ಯಾಯ ಸಮಾಪ್ತಿ

# ಅಧ್ಯಾಯ ೮: ಅಕ್ಷರ ಬ್ರಹ್ಮ ಯೋಗ

## ಬ್ರಹ್ಮಾದಿ ವಿವೇಚನ ಪೂರ್ವಕ, ಪ್ರಯಾಣ ಕಾಲದಲ್ಲಿ ಮುಮುಕ್ಷುಗಳ ಕರ್ತವ್ಯ ಧ್ಯಾತವ್ಯ ನಿರೂಪಣೆ

**ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ। ಕಿಂ ಕರ್ಮ ಪುರುಷೋತ್ತಮ।**
**ಅಧಿಭೂತಂ ಚ ಕಿಂ ಪ್ರೋಕ್ತ-ಮಧಿದೈವಂ ಕಿಮುಚ್ಯತೇ ॥೧॥**

**ಅಧಿಯಜ್ಞಃ ಕಥಂ ಕೋಽತ್ರ। ದೇಹೇಽಸ್ಮಿನ್ ಮಧುಸೂದನ।**
**ಪ್ರಯಾಣಕಾಲೇ ಚ ಕಥಂ। ಜ್ಞೇಯೋಽಸಿ ನಿಯತಾತ್ಮಭಿಃ ॥೨॥**

ಪರಮಾತ್ಮನು ಹೇಳಿದ ವಿಶೇಷಣಗಳು ಅರ್ಜುನನಿಗೆ ಅರ್ಥವಾಗದೇ ಕೇಳುತ್ತಾನೆ, ಪಟಪಟನೆ ಪ್ರಶ್ನೆಗಳನ್ನು, ೧) ಬ್ರಹ್ಮವೆಂದರೇನು? ೨) ಅಧ್ಯಾತ್ಮವೆಂದರೇನು? ೩) ಕರ್ಮವೆಂದರೇನು? ೪) ಅಧಿಭೂತವೆಂದರೇನು? ೫) ಅಧಿದೈವವೆಂದರೇನು? ೬) ಅಧಿಯಜ್ಞವೆಂದರೇನು? ೭) ದೇಹದಲ್ಲಿ ಕರ್ಮಫಲಭಾತೃವ್ಯಾರು? ೮) ಸ್ಥೂಲಶರೀರವನ್ನು ಬಿಟ್ಟು ಪ್ರಯಾಣಮಾಡುವ ಕಾಲದಲ್ಲಿ ಯೋಗಿಗಳಿಂದ ನಿನ್ನನ್ನು ತಿಳಿಯುವ ಬಗೆ ಹೇಗೆ? ಈ ಪ್ರಶ್ನೆಗಳು ಜೀವನ ಮರಣಗಳ ವಿಷಯವಾಗಿ ಎಲ್ಲರ ಹೃದಯದಲ್ಲೂ ಉದ್ಭವಿಸುವವೇ? ಇವುಗಳ ವಿಷಯ ಸರಿಯಾಗಿ ತಿಳಿದುಕೊಂಡರೆ ಎಲ್ಲಾ ತಿಳಿದಂತೆಯೇ.

**ಅಕ್ಷರಂ ಬ್ರಹ್ಮ ಪರಮಂ। ಸ್ವಭಾವೋಽಧ್ಯಾತ್ಮಮುಚ್ಯತೇ।**
**ಭೂತಭಾವೋದ್ಭವಕರೋ। ವಿಸರ್ಗಃ ಕರ್ಮಸಂಜ್ಞಿತಃ ॥೩॥**

೧ ಅಕ್ಷರವೇ ಬ್ರಹ್ಮ—ಎಂದು ಭಗವಂತನು ಉತ್ತರ ಶುರುಮಾಡಿದನು. ನಾಶರಹಿತವಾದುದೇ ಅಕ್ಷರ. ಇದು ಛಾಂದೋಗ್ಯದಲ್ಲಿ ಗಾರ್ಗ್ಯಿ ಯಾಜ್ಞವಲ್ಕ್ಯರ ಸಂವಾದದಲ್ಲಿ ಬ್ರಹ್ಮವನ್ನು ನಿಶ್ಚಯಮಾಡುವಾಗ ಹೇಗೆ ಅದು ಆಕಾಶರೂಪವಾಗಿ ಓತಪ್ರೋತದಂತೆ, ಸೃಷ್ಟಿಸ್ಥಿತಿಗಳಲ್ಲಿ ಹಾಸುಹೊಕ್ಕಾಗಿ ಸೇರಿಹೋಗಿರುವುದು, ಅದು ಅಕ್ಷರದಲ್ಲಿ ಸ್ಥಿರವಾಗಿ ನಿಂತು

(ಏತಸ್ಯವಾ ಅಕ್ಷರಸ್ಯ ಪ್ರಶಾಸನೇ) ಸೂರ್ಯ ಚಂದ್ರರನ್ನೂ, ಭೂವ್ಯಾಕಾಶಗಳನ್ನೂ, ಹಗಲು ರಾತ್ರಿಗಳನ್ನೂ ಪ್ರತ್ಯೇಕವಾಗಿ ನಿಲ್ಲಿಸಲಾಧಾರವಾಗಿದೆ. "ತಸ್ಮಿನ್ನು ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚೇತಿ" ಆದುದರಿಂದ ಈ ಅಕ್ಷರವು "ದೃಷ್ಟಂದ್ರಷ್ಟ್ರ, ಶ್ರುತಗ್ ಶ್ರೋತ್ರ ಮತಂ ಮಂತ್ರ" ಇತ್ಯಾದಿ. ನೋಟದ ಪ್ರೇಕ್ಷಕನೂ, ಕೇಳುವುದನ್ನು ಕೇಳುವವನೂ ಇತ್ಯಾದಿ ಆಗಿದ್ದಾನೆ ಎಂದು ವಿವರಿತವಾಗಿವೆ.

"ಓಂ" ಇತ್ಯೇಕಾಕ್ಷರಂ ಬ್ರಹ್ಮ–ಎಂದೂ ವಾಕ್ಯವಿರುವುದು. ಇದರ ಪ್ರಕಾರ "ಓಂ" ಎನ್ನುವ ಅಕ್ಷರವೇ ಬ್ರಹ್ಮ. ಓಂ ಇತಿ ಬ್ರಹ್ಮ. ಇದು ಶಬ್ದಬ್ರಹ್ಮ. ಇದು ಅಕ್ಷರ ಬ್ರಹ್ಮವೇ ನಾಶವಿಲ್ಲದ್ದು. ಈ ಎರಡು ವಿಧವೂ ಒಂದೇ. ಅವ್ಯಕ್ತವಾದ, ವಾಕ್‌ಮನಗಳಿಗೆ ನಿಲುಕದ ಈ ಬ್ರಹ್ಮವನ್ನು ಈ ರೀತಿ ವಿವರಿಸಿ ನೆಲೆ ಹಿಡಿದಿದೆ. "ದ್ವೇವಾವ ಬ್ರಹ್ಮಣೋರೂಪೇ, ಮೂರ್ತಂ ಚೈವಾ ಮೂರ್ತಂಚ ಮರ್ತ್ಯಂ ಚಾ ಮೃತಂ ಚ ಸ್ಥಿತಂಚ ಯಚ್ಚ ಸಚ್ಚತ್ಯಚ್ಚ" ಎಂದು ಬೃಹದಾರಣ್ಯಕೋಪನಿಷತ್ತಿನಲ್ಲಿ ಹೇಳಿದೆ (೪ ಅ, ೩ ಬ್ರಾ, ೧) ಬ್ರಹ್ಮವು ಎರಡು ರೂಪವಾಗಿದೆ, ಮೂರ್ತಿ, ಅಮೂರ್ತಿ; ಮರ್ತ್ಯ, ಅಮೃತ; ಸ್ಥಿರ, ಚಲನ; ಮತ್ತು ಸತ್ (Actual) ಮತ್ತು ತ್ಯ (Yonder) (ಇಹ ಮತ್ತು ಪರ) ಎನ್ನಬಹುದು.

೨ ಸ್ವಭಾವವೇ ಅಧ್ಯಾತ್ಮವೆಂದು ಹೇಳಲ್ಪಟ್ಟಿದೆ. ಒಳಗಿರುವ ಆತ್ಮ–ಪ್ರಾಣಾಧಾರಣಮಾಡಿರುವ ಅಂತಃಶಕ್ತಿ. ಬೃಹದಾರಣ್ಯದಲ್ಲಿ ಅಲ್ಲೇ ಮುಂದೆ (೪ಅ, ೩ ಬ್ರಾಂ ೪) "ಅಥಾ ಅಧ್ಯಾತ್ಮಮಿದ ಮೇವ ಮೂರ್ತಂ ಯದನ್ಯತ್ಪ್ರಾಣಾಚ್ಚ ಯಶ್ಚಾಯಮಂತರಾತ್ಮನ್ನಾಕಾಶ ಏತನ್ಮರ್ತ್ಯ, ಮೇತತ್ಸ್ಥಿತ" ಇತ್ಯಾದಿ. ಇದು ಸಾಕ್ಷಿರೂಪವಾದ ಭೋಕ್ತೃರೂಪವಾದ ಹಿಂದೆ "ಜೀವನಂ ಸರ್ವಭೂತೇಷು" ಎಂದು ಹೇಳಿದ ಅಧ್ಯಾತ್ಮ–ಅಂತರ್ಯಾಮಿ. ಇದು ಬ್ರಹ್ಮ ಕಲ್ಪನೆಯಿಂದ ಆತ್ಮಕಲ್ಪನೆ. ಅದರ ಪ್ರತಿಬಿಂಬ, ಅವ್ಯಕ್ತ ನಿರಾಕಾರ ಅಕ್ಷರ ಬ್ರಹ್ಮನ ವ್ಯಕ್ತ ಅಣುರೂಪ. ಸಮಷ್ಟಿಯಿಂದ ವ್ಯಷ್ಟಿ. ಬ್ರಹ್ಮಾಂಡದಲ್ಲಿರುವ ಆ ಶಕ್ತಿ ಪಿಂಡಾಂಡದಲ್ಲಿ ಆತ್ಮ. "ಅಯಂ ಆತ್ಮಾ

ಬ್ರಹ್ಮ" ಎಂದು ಮಾಂಡೂಕ್ಯೋಪನಿಷತ್ತಿನಲ್ಲಿ ಹೇಳಿರುವ ಆತ್ಮಸ್ವರೂಪ, "ಸರ್ವಗ್‌ಹ್ಯೇತದ್ಬ್ರಹ್ಮಾಯಮಾತ್ಮಾಬ್ರಹ್ಮಾ ಸೋಽಯಮಾತ್ಮಾ ಚತುಷ್ಪಾತ್" (ಮಾಂ ೧ ಬಂ ೨) ಎಂದು ಹೇಳಿ, ಜಾಗ್ರತ್ಸ್ವಪ್ನಸುಶುಪ್ತಿಗಳನ್ನು ವಿವರಿಸಿ–"ಏಕಾತ್ಮ್ಯ ಪ್ರತ್ಯಯಸಾರಂ, ಪ್ರಪಂಚೋಪಶಮಮಂ, ಶಾಂತಂ, ಶಿವಂ, ಅದ್ವೈತಂ, ಚತುರ್ಥಂ–ಮನ್ಯಂತೇ ಸ ಆತ್ಮಾ–ಸವಿಜ್ಞೇಯಃ" ಎಂದು (ಮಾಂ ೨ ಮಂ ೭) ಆತ್ಮನನ್ನು ವಿವರಿಸಿ, ಅದನ್ನೇ ತಿಳಿಯಬೇಕೆಂದು ವಿಧಿಸಿದ್ದಾರೆ. ಇದು ಅಂತರಂಗನಲ್ಲಿರುವ ಬ್ರಹ್ಮನನ್ನು ಆತ್ಮನೆಂದು ತಿಳಿಯಲು ಉಪದೇಶ. ಇದರ ಮೇಲೇ ಗೌಡಪಾದರಕಾರಿಕೆ ಬೆಳದಿದೆ. ಈ ಅಧ್ಯಾತ್ಮನ ವಿಚಾರವಾಗಿಯೇ ಎಲ್ಲಾ ಜಿಜ್ಞಾಸ.

೩ ಕರ್ಮ: ಭೂತೇಭಾವ ಉದ್ಭವಕರಕ್ಕೆ (ಉತ್ಪತ್ತಿ ಕಾರಣ) ಹೇತುವಾದುದೆಲ್ಲಾ ಕರ್ಮವೆಂದು, ಸಂಜ್ಞಿತವಾಗಿದೆ. ಕರ್ಮವೆಂದರೇನು, ಕರ್ಮ, ಅಕರ್ಮ, ವಿಕರ್ಮ ಅದರಗತಿ, ಕರ್ಮಯೋಗ, ಕರ್ಮಫಲ ಎಲ್ಲಾ ಪರಮಾತ್ಮನು ೩ ನೇ ಅಧ್ಯಾಯುವಲ್ಲೇ (ಕರ್ಮಯೋಗದಲ್ಲಿ) ಪ್ರತಿಪಾದಿಸಿದ್ದಾನೆ. ಕರ್ಮವಿಲ್ಲದೆ ಈ ಉತ್ಪತ್ತಿ ಸ್ಥಿತಿ, ಲಯದ ಭೂತಭಾವವೇ ಇಲ್ಲಾ. ಕರ್ಮದಿಂದಲೇ ಇವೆಲ್ಲಾ ಫಲಗಳು. ಇಲ್ಲಿ ಮಹಾದಾತ್ಮನ ಸಮಗ್ರ ಕರ್ಮಯಜ್ಞವು ಸೂಚಿತವಾಗಿದೆ.

**ಅಧಿಭೂತಂ ಕ್ಷರೋ ಭಾವಃ । ಪುರುಷಶ್ಚಾಧಿದೈವತಮ್ ।**
**ಅಧಿಯಜ್ಞೋಽಹಮೇವಾತ್ರ । ದೇಹೇ ದೇಹಭೃತಾಂ ವರ ॥೪॥**

೪ ಪ್ರತಿಕ್ಷಣವೂ ನಾಶ ಹೊಂದುತ್ತಿರುವುದೇ ಅಧಿಭೂತ, ಜಡ.

೫ ಅಂತರ್ಯಾಮಿ ರೂಪದಲ್ಲಿ ಸಾಕ್ಷಿಯಾಗಿರುವನೇ ಅಧಿದೈವ–ಚೇತನ ಇವೆರಡರ ಸಂಯೋಗವೇ ಜೀವ, ಪ್ರಾಣರೂಪವಾಗಿ ಎಲ್ಲೆಡೆಯೂ ತೋರುವುದು. ಪ್ರಕೃತಿ ಪುರುಷ ಸಂಯೋಗ.

೬ ಅಧಿಯಜ್ಞವು ನಾನೇ. ಯಜ್ಞವೆಂದರೆ ಇಂಗ್ಲೀಷ್ ಪದ (Sacrifice) ಎನ್ನುತ್ತಾರಲ್ಲಾ ಹಾಗೆ ಪರೋಪಕಾರವಾದ ಎಲ್ಲಾ ಕಾರ್ಯ. ತಾನು ಮಾಡಿ ಫಲ ನನಗೆ ಬೇಡವೆಂಬ ಭಾವದಲ್ಲಿ ಮಾಡಿದ ಕಾರ್ಯಕ್ಕೆ

ಇಲ್ಲಿ ಅನ್ವಯಿಸುತ್ತದೆ. ಮಹಾದಾತ್ಮನ ಕಾರ್ಯವೇ ಅಧಿಯಜ್ಞ. ಎಲ್ಲರೂ ಮಾಡುವ ಯಜ್ಞಗಳೂ ಮಹಾದಾತ್ಮನಿಗೆ ಅರ್ಪಿತವಾಗುತ್ತದೆ, ಅದರಲ್ಲಿ ಯಜ್ಞಕರ್ತನೂ ಸೇರುತ್ತಾನೆ. ಪರರಿಗೋಸ್ಕರವಾಗಿ "ಸರ್ವೇಜನಾಃ ಸುಖಿನೋಭವಂತು, ಸಮಸ್ತ ಸನ್ಮಂಗಳಾನಿಭವಂತು" ಎಂದು ವಿಶ್ವ ಕಲ್ಯಾಣವನ್ನೇ ಕೋರುವ ಎಲ್ಲಾ ಕರ್ಮಗಳೂ ಅಧಿಯಜ್ಞ. ಪುರಾತನ ಕಾಲದಲ್ಲಿ ಎಲ್ಲಾ ಅಗ್ನಿಯಲ್ಲಿ ಮಾಡುವ ಹವನಹೋಮಾದಿಗಳಿಗೆ ಇದು ಅನ್ವಯಿಸುತ್ತಿತ್ತು. ಈಗ ತನ್ನನ್ನಳಿಸಿ, "ಶ್ರೀಕೃಷ್ಣಾರ್ಪಣಮಸ್ತು" ಎಂದು ಮಾಡುವ ಮನೋವಾಕ್ ಕಾಯಕರ್ಮಗಳೇ ಯಜ್ಞ. ಈಗಿನ ಸ್ಥಿತಿಗತಿಗಳೆಲ್ಲಾ ಬದಲಾಯಿಸಿದೆ. ಪೂರ್ವದಂತೆ ಯಜ್ಞಕ್ಕೆ ಯಾಗಾದಿ ಗಳೇ ಎಂಬ ಅರ್ಥ ಇಲ್ಲಿ ಹೊಂದುವುದಿಲ್ಲಾ.

೭ ದೇಹದಲ್ಲಿ ಯಾರು ತುಂಬಿಕೊಂಡಿರುವ ಶ್ರೇಷ್ಠ ವಸ್ತುವೆಂದರೆ ಪರಮಾತ್ಮ ವಸ್ತುವೇ ಆತ್ಮನಾಗಿ "ದೇಹೇದೇಹ ಭೃತಾಂ ವರಂ." ಇಲ್ಲ ವಾದರೇ ಈ ಚರ್ಮಚೀಲವನ್ನು ಒಪ್ಪುವರ್‍ಯಾರು, ಆದರಿಸುವರ್‍ಯಾರು. ಈ ಚರ್ಮದ ಚೀಲದಲ್ಲಿ ನೀರು ಹೊರುವುದು ಉತ್ತರ ದೇಶದಲ್ಲಿ ವಾಡಿಕೆಯಾಗಿದೆ, ಅದರಲ್ಲೂ ಮುಸಲ್ಮಾನರಲ್ಲಿ. ಒಂದಾವರ್ತಿ ಅಂತಹ ಚರ್ಮದ ಚೀಲದಲ್ಲಿ ನೀರು ಹೊತ್ತುಹೋಗುತ್ತಿದ್ದೊಬ್ಬನನ್ನು, ಬಾಯಾ ರಿಕೆಗೆ ನೀರು ಕುಡಿಯಲಪೇಕ್ಷಿಸಿ, ಆತನನ್ನು ಕೇಳಿದನಂತೆ—"ಏನಯ್ಯಾ, ನಿನ್ನ ಚರ್ಮದ ಚೀಲ ಚೊಕ್ಕಟವಾಗಿದೆಯೋ ನಾ ಅದರಲ್ಲಿ ನೀರು ಕುಡಿಯ ಬಹುದೇ" ಎಂದು. ಅದಕ್ಕೆ ನೀರಿನ ಚೀಲ ಹೊತ್ತವ ಹೇಳಿದನಂತೆ "ನಿನ್ನ ಚರ್ಮದ ಚೀಲಕ್ಕಿಂತ ಈ ನನ್ನ ನೀರಿನ ಚೀಲ ಎಷ್ಟೋ ಚೊಕ್ಕಟ ವಾಗಿದೆ. ಏನೂ ಬಾಧೆಯಿಲ್ಲಾ. ಕುಡಿ ಇದರ ನೀರನ್ನು." ಈ ನಮ್ಮ ದೇಹವೆಂಬ ಚರ್ಮದ ಚೀಲದ ಒಳಗಿರುವುದನ್ನು ಕಂಡವರೇ ಬಲ್ಲರು. ಎಷ್ಟೇ ಮಲಿನವಿರಲಿ ದೇಹ, ದೇಹಿ ಅತ್ಯಂತ ನಿರ್ಮಲನು. ಆತನ ಸಂಪರ್ಕದಿಂದಲೇ ಈಶವಾಕಾರವಾದ ದೇಹಕ್ಕೆ ಶಿವಾಕಾರ ಬರುವುದು– ವರ ಶ್ರೇಷ್ಠನು. "ಅತ್ಯಂತಮಲಿನೋದೇಹೋ, ದೇಹೀ ಚಾತ್ಯಂತ ನಿರ್ಮಲಃ" ಎಂದು ದರ್ಶನೋಪನಿಷತ್ತಿನಲ್ಲಿ ಹೇಳಿದೆ, ಇರುವ ಆ ಪರ ಮಾತ್ಮ ವಸ್ತು ಅತ್ಯಂತ ನಿರ್ಮಲನಲ್ಲದೇ ಇನ್ನೇನು. ಅದರ ಪವಿತ್ರತೆ

ಯನ್ನು ಎಷ್ಟು ಕೊಳಕು ಮನುಷ್ಯನಾಗಲೀ, ಎಷ್ಟು ಅನಾಚಾರವಂತ ನಾಗಲೀ ಹಾಳುಮಾಡಲಾರನು. ಇದೊಂದಕ್ಕೂ ಸಮರ್ಪಕವಿಲ್ಲದ, ಅಂಟದ ಸದ್ವಸ್ತು ಅದು.

**ಅಂತಕಾಲೇ ಚ ಮಾಮೇವ । ಸ್ಮರನ್ಮುಕ್ತ್ವಾ ಕಲೇವರಮ್ ।**
**ಯಃ ಪ್ರಯಾತಿ ಸ ಮದ್ಭಾವಂ । ಯಾತಿ ನಾಸ್ತ್ಯತ್ರ ಸಂಶಯಃ ॥೫॥**

೮ ಅಂತ್ಯಕಾಲದಲ್ಲಿ ಯಾರು ಈ ಕಳೇಬರವನ್ನು ಬಿಟ್ಟು ಪ್ರಯಾಣ ಮಾಡುತ್ತಾರೋ ಅವರು ನನ್ನ ಭಾವವನ್ನು ಹೊಂದುವುದರಲ್ಲಿ ಸಂಶಯ ವಿಲ್ಲಾ. ಇದೇ ಮಹತ್ ಕಷ್ಟ. ಆ ಪ್ರಯಾಣ ಕಾಲ ಯಾವ ಕ್ಷಣ ಯಾವ ರೀತಿ ಬರುತ್ತೆಂಬುದೇ ಗೊತ್ತಿಲ್ಲಾ. ಅಪಘಾತದಲ್ಲಿ ಸಾಯುವ ರಿಗೆ ಕ್ಷಣದಲ್ಲಿ ಪ್ರಾಪ್ತವಾಗುತ್ತೆ. ಅದೂ ಈ ಏರೋಪ್ಲೇನ್ ಸಂಚಾರ ಕಾಲದಲ್ಲಿ ಹೇಳುವಂತೆಯೇ ಇಲ್ಲಾ. "ಕ್ಷಣಮಾಯಂತಿ ಆಪದಃ" ಎಂದೂ "ಕ್ಷಣಂ ಜನ್ಮಾಥಮರಣಂ ಸರ್ವನಶ್ವರಮೇವತತ್" ಎಂದು ಮಹೋಪನಿಷತ್ತಿನಲ್ಲಿ ಹೇಳಿರುವುದು ಈ ಕಾಲದ ಏರೋಪ್ಲೇನ್ ಅಪ ಘಾತಗಳಲ್ಲಿ ಕಣ್ಣಿಗೆ ಕಟ್ಟಿದಂತಿದೆ. ಇನ್ನೂ ಅಣುಶಕ್ತಿಯ, ಜಲಜನಕದ (Atom & H. Bomb) ಬಾಂಬುಗಳು ಸುರಿದರೆ, ದುರದೃಷ್ಟದಿಂದ ಯುದ್ಧ ಶುರುವಾಗಿ, ಆಗ ಮರಣಕಾಲವು ಕ್ಷಣದಲ್ಲಿ ಸಾಮೂಹಿಕ ವಾಗಿಯೇ ಒದಗಿಬಿಡುತ್ತದೆ. ಆಗ ಅರಿವೇ ಇಲ್ಲದೆ ಆ ಗಾಬರಿಯಲ್ಲಿ ಪರಮಾತ್ಮನ ಸ್ಮರಣೆಯೆಲ್ಲಿ. ತಿಳಿದು ತಿಳಿದು ಸಾಯುತ್ತಾ ಬದುಕಿಯೇ ಸಾಯುವರಿಗಾದರೂ, ಆ ಸ್ಮರಣೆಗೆ ಅವಕಾಶವೆಲ್ಲಿ. ಎಷ್ಟೋ ಪೂರೈಸ ಲಾಗದ ಆಸೆಗಳ ಸ್ಮರಣೆ. ಸಾಯುವಾಗ ಬಿಟ್ಟುಹೋಗಬೇಕಾದ ಮನೆ, ಹಣ, ಹೆಂಡತಿ ಮಕ್ಕಳ ಚಿಂತೆ. ಅಯ್ಯೋ ಸಾಯುತ್ತೇನೆಲ್ಲಾ ಎನ್ನುವ ಚಿಂತೆ. ಈ ಮಧ್ಯೆ ಪರಮಾತ್ಮನ ಸ್ಮರಣೆಯೆಲ್ಲಿ. ಹಾಗೇ ಹೋಗಲಿ ಸ್ಮರಿ ಸೋಣವೆಂದಿರುವ ಒಬ್ಬಿಬ್ಬರಿದ್ದರೂ, ಸುತ್ತಲೂ ಗೋಳೋ ಎಂದು ಅಳುತ್ತಿರುವ ಹೆಂಡತಿ ಮಕ್ಕಳು ಬಂಧುಗಳು ಆ ಸ್ಮರಣೆಗಾದರೂ ಅವಕಾಶ ಕೊಟ್ಟಾರೇ ? "ಅಯ್ಯೋ ಸಾಯ್ತಿಯಾ, ನನ್ನ ಗತಿ ಏನು ?" ಅಂತ ಹೆಂಡತಿ ಒಂದು ಕಡೆ, ಮಕ್ಕಳೊಂದು ಕಡೆ, ನೆಂಟನೊಂದು ಕಡೆ

ಗೋಳಾಡುತ್ತಿದ್ದಾಗ ಒಬ್ಬ ತಿಳುವಳಿಕಸ್ಥ ಹೇಳಿದನಂತೆ "ನಾ ಸತ್ತರೆ ನನ್ನ ಇಹದಾಸ್ತಿ, ಮನೆ ಎಲ್ಲಾ ನಿಮಗೇ ಬಿಟ್ಟುಹೋಗುತ್ತೇನೆ. ನಾ ತೆಗೆದು ಕೊಂಡು ಹೋಗೋಲ್ಲಾ ನಿಮಗೇನು ಚಿಂತೆ. ನಾ ಸತ್ತರೆ ನನ್ನ ಗತಿ ಯೇನು?" ಎಂದು ಉತ್ತರ ಕೊಟ್ಟನಂತೆ. "ನನ್ನ ಗತಿಯೇನು?"

ಈಗಲಾದರೂ ಪರಮಾತ್ಮನ ಚಿಂತೆ ಮಾಡೋಣವೆಂದು ಆ ಮರಣ ಕಾಲಕ್ಕೆ ಜ್ಞಾನ ಬರಬೇಕಾದರೆ ಜೀವಿತದಲ್ಲೆಲ್ಲಾ ಆ ಧ್ಯಾನದಲ್ಲೆ ಇದ್ದರೆ ಆ ಸ್ಮರಣೆ ಬಂದೀತು. "ಮರಣ ಕಾಲದಲ್ಲಿ ಕಫ ವಾತ ಪಿತ್ತದಲ್ಲಿ ನರಳು ವಾಗ ನನ್ನ ಮನಸ್ಸು ನಿನ್ನ ಸ್ಮರಣೆಗೆ ಅವಕಾಶವಿಲ್ಲದೆ ನಿನ್ನನ್ನಾಶ್ರಯಿಸು ತ್ತೆಯೋ ಇಲ್ಲವೋ, ಆದ್ದರಿಂದ ನನ್ನ ಈ ಮನಸ್ಸೆಂಬ ಹಂಸವು ನಿನ್ನ ಪಾದಕಮಲವೆಂಬ ಪಂಜರದೊಳಗೆ ಈಗಲೇ ಪ್ರವೇಶ ಮಾಡಿಬಿಡಲಿ" ಎಂದು ಕುಲಶೇಖರರು 'ಮುಕುಂದಮಾಲಾ ಸ್ತೋತ್ರ'ದಲ್ಲಿ ಪ್ರಾರ್ಥಿಸಿ ದ್ದಾರೆ ದಿನದಿನವೂ ಕ್ಷಣಕ್ಷಣವೂ ತದೇಕ ಧ್ಯಾನದಲ್ಲೇ ಇದ್ದರೆ ಆಗ ಮರಣ ಕಾಲದಲ್ಲೂ " ಯಥಾ ಜೀವತಂ, ತಥಾ ಮರಣಂ" ಆ ಧ್ಯಾನವೇ ತಾನೇತಾನಾಗಿ ಬಂದು ಪರಮಾತ್ಮ ಭಾವವನ್ನು ಸ್ಮರಿಸುತ್ತಾನೆ. ಆ ಕ್ಷಣ ದಲ್ಲಿ ಆ ಸದ್ಗತಿ ಬರಲಿ ಆಗೈ ಭಗವಂತನ ಸ್ಮರಣೆ ಬರಲಿ ಎಂದೇ ಜ್ಞಾನಿ ಗಳು ಸದಾ ಆತನ ಸ್ಮರಣೆಯಲ್ಲೆ ಎಡಬಿಡದೆ ಕಾಲ ಹಾಕುತ್ತಾರೆ. ಅದೇ ಜಪ, ಧ್ಯಾನ ಎಲ್ಲದರ ಮರ್ಮ. ಅನಾಯಾಸವಾಗಿ ತಾನಾಗಿ ತಾನೆಯೇ ಪ್ರಯತ್ನವಿಲ್ಲದೆಯೇ ಆ ಜಪ, ಧ್ಯಾನ ಪ್ರತಿಕ್ಷಣವೂ ಜೀವನದಲ್ಲಿ ಯಾವ ಕೆಲಸಮಾಡುತ್ತಿದ್ದರೂ ನಡೆಯುತ್ತಲೇ ಇದ್ದರೆ, ಸಾಯುವಾಗಲೂ ಅದೇ ನಡೆಯುತ್ತಲೇ ಇದ್ದರೆ, ಸಾಯುವಾಗಲೂ ಅದೇ ನಡೆಯುತ್ತಿರುತ್ತದೆ. ಸಾಯುವಾಗ ಎಂದು ಪದ ಬಂದೇ ಇಲ್ಲಾ. ಪ್ರಯಾಣವೆಂದೇ ಉಪ ಯೋಗಿಸಿದೆ. ಈ ದೇಹಬಿಟ್ಟು ಅಂತರಾತ್ಮ ಪ್ರಯಾಣಮಾಡುತ್ತಾ ನೆಯೇ ಹೊರತು, ನಾಶವಾಗುವುದಿಲ್ಲಾ. ಆ ಪ್ರಯಾಣ ಮತ್ತೊಂದು ದೇಹಕ್ಕೊ ಅಥವಾ "ಪರಂಧಾಮ" ಪಾದಕಮಲಕ್ಕೊ ಅವನವನ ಕರ್ಮ, ಜ್ಞಾನದ ಮೇಲೆ ಅನುಸರಿಸುತ್ತೆ.

ಸಾಯುವ ಕಾಲಕ್ಕೆ ಅಜಮಿಳನು "ನಾರಾಯಣ" ಎಂದು ಒಂದಾ ವರ್ತಿ ಮಗನ ನೆಪದಲ್ಲಿ ಧ್ಯಾನ ಮಾಡಿದುದರಿಂದಲೇ ಅವನಿಗೆ ಸದ್ಗತಿ

ಯಾಯಿತೆಂದು ಪುರಾಣವಿದೆ. ಈ ವಿಷಯದಲ್ಲಿ ಸಂಶಯವಿಲ್ಲಾ ಎಂದು ಒತ್ತಿಹೇಳಿದ ಸ್ವಾಮಿ. "ಯದ್ಭಾವಂ ತದ್ಭವತಿ" ಎನ್ನುವುದು ಮರಣ ಕಾಲದ ಕಾಂಕ್ಷೆಯ ಮೇಲೆ ಪುನರ್ಜನ್ಮ ನಿಶ್ಚಿತವೆಂದು ನಮ್ಮಲ್ಲಿ ನಂಬಿಕೆ. ಮರಣಕಾಲದಲ್ಲಿ ಪರಮಾತ್ಮನ ಚಿಂತನೆಯೇ ಇರುವವರು ಅವನನ್ನೇ ಸೇರುವವರು. ಜ್ಞಾನಿಗಳು ಅಶಾಶ್ವತವಾದ ಇಹವನ್ನೂ, ಬಿದ್ದು ಹೋಗುವ ದೇಹವನ್ನೂ ಅರಿತು, "ನನಂದತಿ ನನಿಂದತಿ, ಜೀವಿತಂ ಮರಣಂ ತಥಾ" ಎಂದು ಅನ್ನಪೂರ್ಣೋಪನಿಷತ್ತಿನಲ್ಲಿ ಹೇಳಿದಂತೆ, ಮರಣವೇಕೆ ಜೀವನದಲ್ಲೇ ಆದರ ಅನಾದರವಿಲ್ಲದೆ ಜೀವನ್ಮುಕ್ತಾ ವಸ್ಥೆಯಲ್ಲಿಯೇ ಇರುವರು. ಮರಣ ಕಾಲ ಸನ್ನಿಹಿತವಾದಾಗಲೂ ಉಪೇಕ್ಷೆಯಿಂದಲೇ ಸಿದ್ಧರಾಗಿ ಪರಮಾತ್ಮನ ಸ್ಮರಣೆಯಲ್ಲಿಯೇ ಪರಮಾತ್ಮ ನನ್ನು ಸೇರುವರು.

**ಯಂ ಯಂ ವಾಽಪಿ ಸ್ಮರನ್ ಭಾವಂ । ತ್ಯಜತ್ಯಂತೇ ಕಲೇವರಮ್ ।**
**ತಂ ತಮೇವೈತಿ ಕೌಂತೇಯ । ಸದಾ ತದ್ಭಾವಭಾವಿತಃ ॥೬॥**

ಈ ಕಳೇಬರವನ್ನು ತ್ಯಜಿಸುವವನು ಯಾವ ಯಾವ ಭಾವದ ಸ್ಮರಣೆ ಯಲ್ಲಿರುವನೋ ಆ ಭಾವವನ್ನೇ ಪಡೆಯುವನು. ಅವನು ಸದಾ ಅದೇ ಭಾವದಲ್ಲಿರುವದರಿಂದ ಅದನ್ನೇ ಹೊಂದುವನು. ಉತ್ಕೃಷ್ಟೇಚ್ಛೆಯಿಂದ ಯಾವುದಾದರೂ ಚಿಂತಿಸುತ್ತಾ ದೇಹತ್ಯಾಗಮಾಡಿದರೆ, ಅದನ್ನು ಅನು ಭವಿಸಲಾಗಿ ಅದೇ ರೀತಿ ಜನ್ಮವನ್ನು ಪಡೆಯುವರೆಂದೂ ಪುರಾಣಗಳಲ್ಲಿ ಹೇಳಿವೆ. ಜಡಭರತ ಹೇಗೆ ಜಿಂಕೆಯನ್ನೇ ಚಿಂತಿಸುತ್ತಾ ಪ್ರಾಣಬಿಟ್ಟ ಆ ಪ್ರಾಣಿಯಾಗಿಯೇ ಜನ್ಮಕೂಡಾ ತಳೆದನು.

ಅನ್ಯದೇವತಾಭಾವವನ್ನು ಪಿತೃಗಳನ್ನೂ ಸ್ಮರಿಸುತ್ತಾ ದೇಹತ್ಯಾಗ ಮಾಡಿದರೆ ಆ ದೇವಲೋಕ, ಅಥವ ಪಿತೃಲೋಕಗಳನ್ನೇ ಪಡೆಯು ತ್ತಾನೆ.

**ತಸ್ಮಾತ್ಸರ್ವೇಷು ಕಾಲೇಷು । ಮಾಮನುಸ್ಮರ ಯುದ್ಧ ಚ ।**
**ಮಯ್ಯರ್ಪಿತಮನೋಬುದ್ಧಿ-ರ್ಮಾಮೇವೈಷ್ಯಸ್ಯಸಂಶಯಃ ॥೭॥**

ಆದಕಾರಣ ಎಲ್ಲಾ ಕಾಲದಲ್ಲೂ ನನ್ನನ್ನೇ ಸ್ಮರಣೆಮಾಡು, ಯುದ್ಧ ಮಾಡು, ಯುದ್ಧ ಮಾಡುವಾಗಲೂ ಆ ಸ್ಮರಣೆಯೇ ಇರಲಿ. ನನ್ನಲ್ಲಿಯೇ ಅರ್ಪಿತವಾದ ಬುದ್ಧಿಯಿದ್ದರೆ, ನಿಸ್ಸಂಶಯವಾಗಿ ನೀನು ನನ್ನನ್ನೇ ಸೇರುವೆ. "ಸರ್ವೇಷು ಕಾಲೇಷು" ಎಲ್ಲಿ ಸಾಧ್ಯ ಪ್ರಭೋ! ಮಾಡೋದು ಮಾಡುತ್ತಾಯಿದ್ದರೂ, ಮನಸ್ಸಿನಲ್ಲಿ ಪರಮಾತ್ಮ ಸ್ಮರಣೆಯಿರಲಿ, "Hands in work mind in Him" ಅನ್ನುವಂತೆ ಕೈಗಳು ಕೆಲಸ ಮಾಡುತ್ತಿದ್ದರೂ, ಕಾಲು ನಡೆಯುತ್ತಿದ್ದರೂ, ಆಯಾಯವಯಗಳು ತನ್ನ ತನ್ನ ಕೆಲಸಗಳನ್ನು ಮಾಡುತ್ತಿದ್ದರೂ ಮನಸ್ಸು ಮಾತ್ರಾ ಅವನ ಪಾದದೆಡೆಯಲ್ಲಿರಲಿ. ಕೊಟ್ಟಣಕ್ಕೆ ಭತ್ತ ನೂಕುತ್ತಿರುವವಳು, ತೊಡೆಯ ಮೇಲೆ ಮಗುವಿರಲಿ, ಮೊಸರಿನವನ ಹತ್ತಿರ ಲೆಕ್ಕಮಾಡುತ್ತಿರಲಿ, ಇನ್ನೊಬ್ಬರು ದೂರು ಹೇಳುವುದು ಕೇಳುತ್ತಿರಲಿ, ತನ್ನ ಧ್ಯಾನವೆಲ್ಲಾ ಕೈ, ಒನಕೆ ಪೆಟ್ಟಿಗೆ ಸಿಕ್ಕದಂತೆ ಮಾತ್ರಾ ಅದರ ಎಚ್ಚರದಲ್ಲೇ ಇರುತ್ತಾಳೆ. ಅಂತೆಯೇ ನಮ್ಮ ಧ್ಯಾನ ಎಚ್ಚರ ಮನಸ್ಸೆಲ್ಲಾ ಪರಮಾತ್ಮನಲ್ಲೇ ಇರ ಬೇಕು — ನಾವೇನು ಇಹವ್ಯಾಪಾರ ಮಾಡುತ್ತಿದ್ದರೂ ಯುದ್ಧವೇ ಆಗಲೀ, ಅಥವಾ ದಿನದ ಇಹವ್ಯಾಪಾರದ ಸಮರವೇ ಆಗಲೀ, ಸರ್ವ ಕಾಲದಲ್ಲೂ ಅವನ ಸ್ಮರಣೆಯೇ ಇರಬೇಕು. ಮನೋಬುದ್ಧಿಯನ್ನೆಲ್ಲಾ ಅವನಿಗೇ ಅರ್ಪಿಸಿಬಿಟ್ಟರೆ ಅವನನ್ನೇ ಸೇರುವುದರಲ್ಲೇನು ಸಂಶಯ. ಇಹಜೀವನದಲ್ಲೇ ಅವನಲ್ಲೈಕ್ಯವಾಗಲು ಉಪಾಯ.

ಆದರೆ ಈಗಿನ ಪ್ರಪಂಚ ವ್ಯವಹಾರದಲ್ಲಿ ನಾವು ಭಗವಚ್ಚಿಂತನೆ ಯೊಂದನ್ನು ಬಿಟ್ಟು ಏನು ಬೇಕಾದರೂ ಮಾಡೇವು. ನೋಡಿ ಆ ಭಗವತ್ ಚಿಂತನೆಯನ್ನೆ ಸರ್ವ ಕಾಲದಲ್ಲೂ ಹಚ್ಚಿಕೊಂಡರೆ, ಈಗಿನ ಅಲ್ಲದ ಸಲ್ಲದ ವ್ಯವಹಾರಗಳನ್ನೆಲ್ಲಾ ಮಾಡಲು ಮನಸಾದರೂ ಒಪ್ಪೀತೇ— ಮಾಡಲಾದರೂ ವ್ಯವಧಾನವಿದ್ದೀತೇ? ಈಗಿನ ಇಹದ ಕೆಲಸ ಕಾರ್ಯವೆಲ್ಲಾ ಹೇಗಾದರೂ ಹಣ ಗಳಿಸಿ ಸುಖಲೋಲಾಪ್ತಿಯಲ್ಲಿ ಕಾಲ ಹಾಕುವ ಆಸೆ ಬಂದಿರುವಾಗ ಅಂತರಂಗದಲ್ಲಿ ಹರಿಧ್ಯಾನವೆಂತು ಬಂದೀತು. ಪೂರ್ವ ದವರು, ಯಾವಾಗಲೂ ಒಂದು ಜಪಮಾಲೆಯನ್ನು ಹಿಡಿದೊ, ವ್ಯವ ಹಾರ ಮಾಡುವಾಗ, ಊಟ ಮಾಡುವಾಗ ಕೂಡಾ "ಗೋವಿಂದ"

"ತತ್ಸತ್" ಇತ್ಯಾದಿ ಪುನರುಚ್ಚರಣೆ ಮಾಡುತ್ತಲೋ ಈ "ಸರ್ವ ಕಾಲೇಷು, ಮಾ ಮನುಸ್ಮರ"ವನ್ನು ಅಭ್ಯಾಸ ಮಾಡಲೆತ್ನಿಸುತ್ತಿದ್ದರು. ಆದರೆ ಈಗ ಸಿನಿಮಾ ನೋಡುತ್ತಲೋ, ಹೋಟಲಲ್ಲಿ ತಿನ್ನುತ್ತಲೋ, ಹೆಣ್ಣುಗಳ ಮೇಲೆ ಕಣ್ಣು ಹಾಕುತ್ತಲೋ ಇರುವಾಗ ಆ ತರಹ ಸ್ಮರಣೆಗೆ ಅವಕಾಶವೆಲ್ಲಿ. ಒಂದಕ್ಕೊಂದು ಹೊಂದುವುದಿಲ್ಲಾ. ಈಗಿನ ಕಾಲದ ಈ ಷೋಕಿ ಜೀವನದಲ್ಲಿ ಈ ಗೊಡ್ಡು ಪುರಾಣವ್ಯಾತಕರೀ. ಪ್ರವರ್ಧ ಮಾನಕ್ಕೆ ಬರುತ್ತಿರುವ ತರುಣ ತಂಡವನ್ನು ಈ ಅಪ್ರಯೋಜಕ ಕೆಲಸಕ್ಕೆ ಬಾರದ ಗೊಡ್ಡಭ್ಯಾಸಗಳಿಗೆ ಬಿಡಲಾಗುತ್ತೆಯೇ. ಅದಕ್ಕೇ ಅವರಿಗೂ ಶಾಂತಿಯಿಲ್ಲಾ; ಇತರರಿಗೂ ಶಾಂತಿ ಇಲ್ಲಾ. ಕೊಂಚ ಹೊತ್ತಾದರೂ ಈಗ ಸಂಧ್ಯಾವಂದನೆ ಮಾಡುವವನೋ, ದೇವಸ್ಥಾನಕ್ಕೆ ಹೋಗುವ ವನೋ ನಾಲಾಯಕ್–ಇಹಲೋಕ ವ್ಯಾಪಾರಕ್ಕೆ ಅರ್ಹನೇ ಅಲ್ಲಾ.

ಬುದ್ಧಿ ಕಾಯಿದೆ ಮಾಡುವ ಖಾತೆಯುಜಮಾನ. ಮನಸ್ಸು ಕಾರ್ಯವನ್ನು ಮಾಡಿಸುವ ಖಾತೆಯ ಯಜಮಾನ. ಬುದ್ಧಿ ನಿಶ್ಚಯಿಸಿದಂತೆ, ಮನಸ್ಸು ಹೇಳಿದಂತೆ ಇಂದ್ರಿಯಗಳು ಕೆಲಸ ಮಾಡುವುವು. ಸರ್ವೇಷು, ಕಾಲೇಷು ಭಗವಂತನನ್ನೇ ಸ್ಮರಣೆ ಮಾಡಬೇಕಾದರೆ ಈ ಬುದ್ಧಿ ಮನಗಳನ್ನೇ ಅವನಿಗರ್ಪಿಸಿಬಿಟ್ಟರಾಯಿತು. ಬೇರೆ ಸ್ಮರಣೆಗೆ ಹೋಗುವುದಿಲ್ಲಾ. ಹಾಗೆ ಮನೋಬುದ್ಧಿಗಳನ್ನು ಪರಮಾತ್ಮನ ದಿವ್ಯಚರಣಗಳಿಗೆ ಅರ್ಪಿಸಿಬಿಟ್ಟರೆ ನಿಸ್ಸಂಶಯವಾಗಿ ಅವನನ್ನೇ ಸೇರುತ್ತಾನೆ. ಅದೇ ಕಷ್ಟ. ಈ ಚಪಲ ಬುದ್ಧಿಯನ್ನೂ, ಮನೋಮರ್ಕಟವನ್ನೂ ಅಲ್ಲಿಗೆ ಕಟ್ಟಿಹಾಕುವುದು. ಎಲ್ಲೆಲ್ಲೋ ಹರಿದಾಡುತ್ತದೆ. ಅವೇ ನಮ್ಮ ಮೇಲಧಿಕಾರ ಮಾಡುತ್ತಿರುವ ಪ್ರಕೃತ ಸ್ಥಿತಿಯಲ್ಲಿ ನಾವು ಎಂತು ಅವುಗಳನ್ನು ಸರಿಯಾಗಿ ದೇವನಗರ್ಪಿತ ಮಾಡುವುದಕ್ಕೆ ಉಪಾಯ ಹೇಳುತ್ತಾನೆ. ಪರಮಾತ್ಮ

**ಅಭ್ಯಾಸಯೋಗಯುಕ್ತೇನ । ಚೇತಸಾ ನಾನ್ಯಗಾಮಿನಾ ।**
**ಪರಮಂ ಪುರುಷಂ ದಿವ್ಯಂ । ಯಾತಿ ಪಾರ್ಥಾನುಚಿಂತಯನ್ ॥೮॥**

ಅಭ್ಯಾಸಯೋಗ ಯುಕ್ತವಾಗಿ, ಅತ್ತ ಇತ್ತ ಚಪಲ ಸ್ವಭಾವಿಯಾಗಿ ರುವ ಮನಸ್ಸು ಬುದ್ಧಿಯ ಚೇತಸ್ಸನ್ನು ವಿಷಯಾಂತರ ಸಂಬಂಧವನ್ನು

ಬಿಡಿಸಿ ದಿವ್ಯವಾದ ಪರಮಪುರುಷನ ಚಿಂತನವನ್ನೇ (ಇದೇ ಅವನರ್ಪಣ) ಮಾಡುತ್ತಿರುವವನು ದಿವ್ಯವಾದ ಆ ಶ್ರೇಷ್ಠವಾದ ಪರಮಾತ್ಮನನ್ನೇ ಹೊಂದುವನು. ಈ ಯೋಗಾಭ್ಯಾಸವೆಲ್ಲಾ ತನ್ನ ಚೇತಸ್ಸನ್ನು ಆ ದಿವ್ಯವಾದ ಪರಮಪುರುಷನಲ್ಲಿ ಹೊಂದಿಸುವುದು (ಯುಕ್ತ)ಕ್ಕೇ ಪ್ರಯತ್ನ ಒಂದು ಗೀತಾಧ್ಯಾಯಕ್ಕೆ (೬ನೇದು) ಅಭ್ಯಾಸಯೋಗವೆಂದು ಹೆಸರು. ಕಷ್ಟವಾದುದರಿಂದಲೇ ಅಭ್ಯಾಸ ಮಾಡಿಮಾಡಿ ಜಯಿಸಬೇಕು. ಅಲ್ಪ ಚೇತಸ್ಸನ್ನು ಮಹತ್ ಚೇತಸ್ಸಿನಲ್ಲಿ ನೇರಿಸಬೇಕು.

ಅಲ್ಪ ಚೇತಸ್ಸೆಂದು ನಮ್ಮಲ್ಲಿನ ಚೇತಸ್ಸನ್ನು ಅಲ್ಲಗಳೆಯಬಾರದು. ಅಮೃತಸಮುದ್ರದ ಬಿಂದುಗಳು ನಾವು; ಅಮೃತಬಿಂದುಗಳು. ಗಾತ್ರ ಕಮ್ಮಿಯಾಗಿ, ಪರಿಮಾಣದಲ್ಲಿ ಕೇವಲ ಬಿಂದುಗಳಾದರೂ ಪ್ರತಿ ಅಮೃತಬಿಂದುವಿನಲ್ಲಿಯೂ ಅಮೃತಸಮುದ್ರದ ಸವಿಯಿದೆ. ನಮ್ಮ ಪ್ರತಿ ಆತ್ಮದಲ್ಲೂ ಆ ಮಹಾದಾತ್ಮನ ಶಕ್ತಿಯಿವೆ. ಅಮೃತಬಿಂದುವು ಅಮೃತಸಮುದ್ರದಲ್ಲಿ ಸೇರುವಂತೆ, ನಾವೂ ಸೇರಿಬಿಡುವೆವು. ಬೇರೆ ಮಾಡುವವರ್ಯಾರು? ಬಲ್ಲವರ್ಯಾರು? ಈ ಕಿಂಚಿತ್ ಪುರುಷನು ಆ ದಿವ್ಯವಾದ ಪರಮಪುರುಷನ ಬಿಂದು. ಕೇವಲ ಚೂರಲ್ಲ. ಆ ದಿವ್ಯ ಪರಮ ಪುರುಷನ ಲಾವಣ್ಯಗುಣಗಳೆಲ್ಲಾ ಇದೆ; ಮಿಠಾಯಿನ ಪ್ರತಿ ಕ್ಷಣದಲ್ಲೂ ಅದರ ಸಿಹಿ ಇರುವಂತೆ ಮಿಠಾಯಿನ ಆಕಾರ, ಬಣ್ಣವಲ್ಲಾ ಮುಖ್ಯ. ಅದರ ಸಿಹಿಯೇ ಸರ್ವರನ್ನೂ ಆಕರ್ಷಿಸುವುದು.

ಕವಿಂ ಪುರಾಣಮನುಶಾಸಿತಾರ-
ಮಣೋರಣೀಯಾಂಸಮನುಸ್ಮರೇದ್ಯಃ ।
ಸರ್ವಸ್ಯ ಧಾತಾರಮಚಿಂತ್ಯರೂಪ-
ಮಾದಿತ್ಯವರ್ಣಂ ತಮಸಃ ಪರಸ್ತಾತ್ ॥೯॥

ಪ್ರಯಾಣಕಾಲೇ ಮನಸಾಽಚಲೇನ
ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ ।
ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್
ಸ ತಂ ಪರಂ ಪುರುಷಮುಪೈತಿ ದಿವ್ಯಮ್ ॥೧೦॥

ಆ "ದಿವ್ಯಂ ಪರಮಂ ಪುರುಷಂ "ಗೆ ಕೆಲವು ವಿಶೇಷಣಗಳನ್ನು ೯ ನೇ ಶ್ಲೋಕದಲ್ಲಿ ಉಲ್ಲೇಖಿಸಿವೆ. ೧೦ ನೇ ಶ್ಲೋಕದಲ್ಲಿ ಯಾವ ರೀತಿ ಪ್ರಯಾಣ ಕಾಲದಲ್ಲಿ ಯೋಗಬಲದಿಂದ ಭಕ್ತಿಯಿಂದ ಸರಿಯಾಗಿ ಹುಬ್ಬುಗಳ ಮಧ್ಯೆ ಪ್ರಾಣವನ್ನು ನಿಲ್ಲಿಸಿ ದಿವ್ಯವಾದ ಪರಮಪುರುಷನನ್ನು ಹೊಂದುವವನು ಎಂದು ಉಲ್ಲೇಖವಾಗಿದೆ.

ಸರ್ವಜ್ಞನೂ, ಸನಾತನೂ ಸಮಸ್ತ ನಿಯಾಮಕನೂ, ಸೂಕ್ಷ್ಮಾತಿ ಸೂಕ್ಷ್ಮನಾಗಿಯೂ ಸರ್ವವನ್ನೂ ಧಾರಣ ಮಾಡಿರುವವನೂ ಚಿಂತಿಸಲ ಸಕ್ಯವಾದರೂಪವುಳ್ಳವನಾಗಿಯೂ, ತಮಸ್ಸಿನ ಆಚೆ, ಸೂರ್ಯಪ್ರಭಾವ ದಂತಿರುವವನನ್ನು ಸ್ಮರಣೆ ಮಾಡುತ್ತಾ ಪ್ರಯಾಣ ಕಾಲದಲ್ಲಿ, ಅಚಲ ವಾದ ಮನಸ್ಸಿನಿಂದ, ಭಕ್ತಿಯಿಂದ, ಯೋಗಬಲದಿಂದ ಭ್ರೂಮಧ್ಯದಲ್ಲಿ ಪ್ರಾಣವನ್ನು ನಿಲ್ಲಿಸಬೇಕು.

"ಪರಂ, ಪುರುಷಂ ದಿವ್ಯಂ " ಪುನರೋಕ್ತಿ ಎಷ್ಟು ಚೆನ್ನಾಗಿದೆ. ಅಷ್ಟು ವಿವರಿಸಿದ ಮೇಲೂ ' ಪರಂ '–'ಪುರುಷ 'ರ ದಿವ್ಯಂ ಸೇರುವನು. "ಆದಿತ್ಯ ವರ್ಣಂ ತಮಸಃ ಪರಸ್ತಾತ್ " ಎನ್ನುವುದು ಶ್ವೇತಾಶ್ವೇತರ ೩ ನೇ ಅಧ್ಯಾಯದ ೮ ನೇ ಶ್ಲೋಕವಲ್ಲಿ ದಿವ್ಯವಾಗಿ "ವೇದಾಹಮೇ ತಂ ಪುರುಷಂ ಮಹಾಂತಂ, ಆದಿತ್ಯ ವರ್ಣಂ ತಮಸಃ ಪರಸ್ತಾತ್ । ತಮೇವ ವದಿತ್ವಾತಿ ಮೃತ್ಯುಮೇತಿ, ನಾನ್ಯಃ ಪಂಥಾವಿದ್ಯತೇ, ಅಯನಾಯ ॥" ಎಂದು ಬಂದಿದೆ.

ಇದೇ ಶ್ಲೋಕವು ಮಹಾನಾರಾಯಣೋಪನಿಷತ್ತಿನ ೪ ನೇ ಅಧ್ಯಾಯ ದಲ್ಲಿ "ವೇದಾಹಮೇತಂ ಪುರುಷಂ ಮಹಾಂತಂ । ಆದಿತ್ಯ ವರ್ಣಂತ ಮಸಃ ಪರಸ್ತಾತ್ । ತಮೇವಂ **ವಿದ್ವಾನಮೃತ ಇಹಭವತಿ** ನಾನ್ಯಃ ಪಂಥಾವಿದ್ಯತೇಯನಾಯ " ಎಂದು ಬಂದಿದೆ. 'ಇಹದಲ್ಲಿಯೇ ಅಮೃತ ನಾಗುತ್ತಾ'ನೆ, ಇದನ್ನು ತಿಳಿದವನು ಎಂದು ಆಶ್ವಾಸನವಿದೆ.

ಮಹಾವಾಕ್ಯೋಪನಿಷತ್ತಿನಲ್ಲಿ "ನೈಷೊಂಧಕಾರ ಅಯಮಾತ್ಮಾ। ವಿಂದ್ಯಾಪಿಕಾಂಡಾಂತರಾದಿತ್ಯೋಜ್ಯೋತಿರ್ಮಂಡಲಂ ಗ್ರಾಹ್ಯಂ ನಾಪರಂ.... ............ಬ್ರಹ್ಮೈಕ್ಯಂತತ್ । ಆದಿತ್ಯ ವರ್ಣಂ ತಮಸಸ್ತು ಪಾರೇ। ಸರ್ವಾಣಿ ರೂಪಾಣಿ ವಿಚಿಂತ್ಯಧೀರಃ........ತ್ವಮೇವ ವಿದ್ವಾನಮೃತ

ಇಹಭವತಿ, ನಾನ್ಯಃ ಪನ್ಥಾ ಅಯನಾಯವಿದ್ಯತೇ।" ಈ ಆತ್ಮವು ಅಂಧಕಾರಮಯವಲ್ಲಾ, ವಿದ್ಯಾಸಂಪನ್ನ ಅಖಂಡ ಆದಿತ್ಯಜ್ಯೋತಿ ಮಂಡಲದಂತೆ, ಬೇರೆಯಲ್ಲ, ಬ್ರಹ್ಮೈಕ್ಯವು (ಅಯಮಾತ್ಮಾ ಬ್ರಹ್ಮ ಎನ್ನುವ ಮಹಾ ವಾಕ್ಯದಂತೆ) ತಮಸ್ಸಿನ ಆಚೆಯಿರುವ ಸೂರ್ಯ ಕಾಂತಿಯು ಸರ್ವರೂಪಗಳಲ್ಲೂ ಜ್ಞಾನಿಯು ಧ್ಯಾನಿಸುತ್ತಾನೆ ಎಂದಿದ್ದಾನೆ. ಸರ್ವಾಣಿ ರೂಪಾಣಿ ವಿಚಿಂತ್ಯ ಧೀರಃ" ಇಲ್ಲಿನ ಸರ್ವಸ್ವಧಾತಾರಮಚಿಂತ್ಯ ರೂಪಂ "ನಂತೆ.

ಎಷ್ಟು ಖಂಡಿತವಾಗಿ ಆ ಮಹರ್ಷಿಗಳು ಹೇಳುತ್ತಾರೆ. ಎಷ್ಟು ಧೈರ್ಯದಿಂದ 'ಆ ಪುರುಷಂ ಮಹಾಂತಂ ನನಗೆ ಗೊತ್ತು" ಎಂದು ಎದೆಯ ಮೇಲೆ ಕೈಯಿಟ್ಟಂತೆ. ಅದನ್ನರಿತೇ ಮೃತ್ಯುವನ್ನು ದಾಟಬಹುದು. ಅದಲ್ಲದೇ ಬೇರೆ ಮಾರ್ಗವೇ ಇಲ್ಲ ಅಲ್ಲಿಗೆ-ಎಲ್ಲಿಗೆಂದರೆ "ತಮಸ್ಸಿನ ಅಜ್ಞಾನದ ಆಚೆಯಿರುವ ಸೂರ್ಯಜ್ಯೋತಿಗೆ" ಆ ಸೂರ್ಯಜ್ಯೋತಿ ಪ್ರಭೆಯ ಪರಮಪುರುಷನನ್ನು ಇಲ್ಲಿಯೂ ಅಲ್ಲಿಯೂ ಪ್ರಸ್ತಾಪಿಸಿರುವುದು. ಮೃತ್ಯುವನ್ನು ದಾಟಿ ಅಮರನಾಗುತ್ತಾನೆ ಎಂದು ಎರಡು ಕಡೆಯೂ ಅಭಯ ಕೊಟ್ಟಿದೆ. ಇಲ್ಲಿ ಹೇಳಿರುವ ವಿಶೇಷಣಗಳ ಪ್ರತಿಧ್ವನಿಯೋ ಎಂಬಂತೆ ಆ ಉಪನಿಷತ್ತಿನಲ್ಲೇ ಮುಂದಿನ ಶ್ಲೋಕ ೯ ರಲ್ಲಿ "ಯಸ್ಮಾತ್ಪರಂ ನಾ ಪರಮಸ್ತಿ ಕಿಂಚಿತ್ ಯಸ್ಮಾನ್ನಣೀಯೋ ನ ಜ್ಯಾಯೋ ಅಸ್ತಿ ಕಶ್ಚಿತ್ । ವೃಕ್ಷಯಿವಸ್ತಬ್ಧೋ ದಿವಿತಿಷ್ಠತ್ಯೇಕಸ್ತೇನೇದಂ ಪೂರ್ಣಂಪುರುಷೇಣ ಸರ್ವಂ" ಎಂದು ಬೆಟ್ಟದಾಚೆ ಇರುವ ಸೂರ್ಯಪ್ರಭೆಯಂತೆ, ಈ ಅಜ್ಞಾನ ವೆಂಬ (ತಮಸ) ಬೆಟ್ಟದಾಚೆ ಇದೆ ಆ ಪುರುಷಪ್ರಭೆ.

ಮಹಾನಾರಾಯಣೋಪನಿಷತ್ತಿನಲ್ಲಿ "ವಿಶ್ವಂ ಪುರಾಣಂ **ತಮಸಃ ಪರಸ್ತಾತ್"** ಎಂದು ೫ ನೇ ಶ್ಲೋಕವಲ್ಲಿ ಬಂದಿದೆ. ಹಿಂದು ಮುಂದಿನ ಶ್ಲೋಕಗಳಲ್ಲಿ ಇಲ್ಲಿನ ವಿಶೇಷಣಗಳಿಂದಲೇ ಆ ಪರಮಪುರುಷನ ವರ್ಣನೆಯಿದೆ. ಅಜ್ಞಾನನೆಂಬ ತಮಸ್ಸಿನ ಕತ್ತಲೆಯಾಚೆ ಇದೆ-ಈ ತೇಜಸ್ಸು.

ಮುಂಡುಕೋಪನಿಷತ್ (೨ ಅ, ೨ ಬಂ, ೬ ನೇ) ಶ್ಲೋಕದಲ್ಲೂ "ಪಾರಾಯ, ತಮಸಃ ಪರಸ್ತಾತ್" ಎಂದು ಬಂದಿದೆ. ಓಂ ಎಂದು

ಆತ್ಮಧ್ಯಾನ ಮಾಡಿದರೆ ಅಜ್ಞಾನಾಂಧಕಾರದಾಚೆಯಿರುವ ದಡಕ್ಕೆ ದಾಟಲು ಶಕ್ಯವಾಗುತ್ತೆಂದು ಮಂತ್ರದ ಅರ್ಥ.

ಈ ತಮಸ್ಸಿನಿಂದ ಪಾರಾಗುವುದು ಎಷ್ಟು ಕಷ್ಟವೆಂದು ತೋರಲು, ಛಾಂದೋಗ್ಯದ ೭ನೇ ಪ್ರ. ಕೊನೆಯಲ್ಲಿ ನಾರದರು ಸನತ್ಕುಮಾರರಿಂದ ಎಲ್ಲಾ ಉಪದೇಶ ಪಡೆದ ಮೇಲೆ "ಮುದಿತ ಕಷಾಯಯ **'ತಮಸಃ ಪಾರಂ'** ದರ್ಶಯತಿ ಭಗವಾನ್" "ಅಜ್ಞಾನದ ತಮಸ್ಸಿನಾಚೆ ಸನತ್ಕುಮಾರ ಭಗವಾನರು ತೋರುವರು" ಎಂದು ಒಪ್ಪಿಕೊಂಡಿರುವರು. ಕಲಿಸಂತರಮಹೋಪನಿಷತ್ತಿನಲ್ಲಿ "ತತಃ ಪ್ರಕಾಶತೇ ಪರಂಬ್ರಹ್ಮಾ ಮೇಘಾಪಾಯೇ ರವಿರಶ್ಮಿಮಂಡಲಿವೇತಿ" ಎಂದು ತಮಸ್ಸೆಂಬ ಮೇಘ ದಾಟಿದ ಮೇಲೆ ಸೂರ್ಯಕಿರಣಮಂಡಲದಂತೆ, ಪರಬ್ರಹ್ಮನು ಪ್ರಕಾಶಿಸುವನು ಎಂದು ಈ "ಆದಿತ್ಯವರ್ಣ ತಮಸಃ ಪರಸ್ತಾತ್" ಎನ್ನುವುದಕ್ಕೆ ಸದೃಶವಾದ ವಾಕ್ಯವಿದೆ.

ಕೈವಲ್ಯೋಪನಿಷತ್ತಿನಲ್ಲಿ "ಧ್ಯಾತ್ವಾಮುನಿರ್ಗಚ್ಛತಿ ಭೂತಯೋನಿನ್ । ಸಮಸ್ತ ಸಾಕ್ಷಿಂ ತಮಸಃ ಪರಸ್ತಾತ್ ॥" ಎಂದು ಬಂದಿದೆ. ಅದರ ಮುಂದೆ "ಸ ಬ್ರಹ್ಮ ನ ಶಿವಸೇಂದ್ರಃ ಸೋಕ್ಷರಃ ಪರಮಸ್ವರಾಟ್" ಎಂದು ಉಪನಿಷತ್ ಮತ್ತು ಸ್ತೋತ್ರಗಳಲ್ಲಿ ಅನೇಕಾವರ್ತಿ ಬರುವ "ಎಲ್ಲಾ ಕಲ್ಪಿತವೇವ–ವ್ಯಕ್ತ ಅವಶ್ಯಕವೂ–ಅದೇ–ತಮಸಃ ಪರಸ್ತಾತ್–ಜ್ಞಾನ ಜ್ಯೋತಿ" ಎಂದು ವಿಶದೀಕರಿಸಿದೆ.

ವರಾಹೋಪನಿಷತ್ತಿನಲ್ಲಿ "ಸತ್ಯಜ್ಞಾನಾನಂದಪೂರ್ಣ ಲಕ್ಷಣಂ ತಮಸಃ ಪರಂ" ಎಂದೂ, ಮುಂದೆ "ಬ್ರಹ್ಮಾನಂದಗ್ ಸದಾಪಶ್ಯನ್, ಕಥಂ ಬಧ್ಯೇತ ಕರ್ಮಣಾ" ಈ ತಮಸ್ಸಿನ ಆಚೆ ಅದರಿಂದ ಬೇರೆಯಾದ ಈ ಸತ್ಯಜ್ಞಾನಾನಂದಪೂರ್ಣ ಲಕ್ಷಣ ಬ್ರಹ್ಮಾನಂದವನ್ನು, ಸದಾ ಕಂಡ ಮೇಲೆ ಕರ್ಮವೇನು ಬಂಧಿಸೀತೆಂದು ಹೇಳಿದೆ. "ಕೂಪ ಮಂಡೂಕ" ನ್ಯಾಯದಂತೆ ನಾವೆಲ್ಲಾ ಅಜ್ಞಾನವೆಂಬ ಕತ್ತಲು ಭಾವಿಯೊಳಗೆ ಬಿದ್ದಿರುವ ಕಪ್ಪೆಗಳಂತೆ ಅಜ್ಞಾನವು ದಾಟಲು ಬಹಳ ಕಷ್ಟವಾಗಿರುವುದು. ದಾಟಿದರೇ "ಆದಿತ್ಯವರ್ಣಂ" ಪುರುಷನ ದರ್ಶನ, ಮಿಳನವಾಗಬೇಕಾದರೆ

ಇದಕ್ಕೆ ಉಪಾಯ ಅಭ್ಯಾಸ, ಯೋಗ, ಯುಕ್ತಿ, ಅಚಲ ಮನಸ್ಸಿನ ಭಕ್ತಿ ಭ್ರೂಮಧ್ಯೆ ಪ್ರಾಣ ಸೇರಿಸುವ ಶಕ್ತಿ ಹೇಳಿದ್ದಾನೆ ಸ್ವಾಮಿ

**ಯದಕ್ಷರಂ ವೇದವಿದೋ ವದಂತಿ**
**ವಿಶಂತಿ ಯದ್ಯತಯೋ ವೀತರಾಗಾಃ ।**
**ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ**
**ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥೧೧॥**

ತಿಳಿಯಬೇಕಾದುದನ್ನು ತಿಳಿದವರು (ವೇದ ತಿಳಿದವರು) ಯಾವುದನ್ನು ಅಕ್ಷರ (ನಾಶರಹಿತ)ವೆಂದು ಶ್ಲಾಘಿಸುವರೋ ರಾಗದಿಂದ ಬಿಡುಗಡೆ ಹೊಂದಿದ (ಇಚ್ಛಾದ್ವೇಷಾಸೂಯೆಗಳಿಂದ ದೂರರಾದ ವೈರಾಗ್ಯಶಾಲಿಗಳು)ವರು ಯಾವ ಪರವನ್ನು ಹೊಂದುವರೋ, ಯಾವುದನ್ನು ಪಡೆಯಲಿಚ್ಛಿಸಿ ನಿಷ್ಠತೆಯಿಂದ ಬ್ರಹ್ಮಚರ್ಯವನ್ನಾಚರಿಸುವರೊ (ಜೀವಾವಧಿ) ಆ ಪರಮಪದವನ್ನು ಸಂಗ್ರಹವಾಗಿ ಹೇಳುತ್ತೇನೆ. ಈ ಶ್ಲೋಕವು ಕಠೋಪನಿಷತ್ತಿನ (೨ ಆ ೧೫ ನೇ ಮಂತ್ರ) "ಸರ್ವೇವೇದಾಯತ್ಪದಮಾಮನಂತಿ, ತಪಾಗ್ಂಸಿ ಸರ್ವಾಣಿಚಯದ್ವದಂತಿ, ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ, ತತ್ತೇಪದಂ ಸಂಗ್ರಹೇಣ ಬ್ರವೀಮ್ಯೊ ಮಿತ್ಯೆತತ್ " ಎನ್ನುವುದನ್ನು ಜ್ಞಾಪಕ ತರುತ್ತದೆ. ಇದು ಬ್ರಹ್ಮವನ್ನು ಪಡೆಯಬಹುದಾದ ಬ್ರಹ್ಮಚರ್ಯದ ಮಹತ್ವವನ್ನು ಒಂದು ಮುಖ್ಯವಾದ ವಿಷಯವನ್ನಾಗಿ ಹೇಳುತ್ತದೆ. ಮುಂದೆರಡನೇ ಶ್ಲೋಕದಲ್ಲಿ (೧೩) "ಓಂ ಮಿತ್ಯೇಕಾಕ್ಷರಂ ಬ್ರಹ್ಮ" ಎಂದು ಕಂಠವಲ್ಲಿ ಬರುವ "ಓಂ ಮಿತ್ಯತತ್ " ಎನ್ನುವ "ಪದಂ" ಆಗಿದೆ. ಇಲ್ಲಿಯೂ, ಕಂಠದಲ್ಲಿಯೂ "ಪದಂ" ಎನ್ನುವುದಕ್ಕೆ "ಸ್ಥಾನ" ಎನ್ನುವ ಒಂದರ್ಥವನ್ನೂ "ಪದ" ಅಥವಾ "ಅಕ್ಷರ" ಎನ್ನುವ ಮತ್ತೊಂದರ್ಥವನ್ನೂ ಹೊಂದಿಸಬಹುದು. "ಅಕ್ಷರ" ಎನ್ನುವ ಪದಕ್ಕೆ "ನಾಶರಹಿತ" ಎನ್ನುವ ಮತ್ತು "ಪದ" ಎನ್ನುವ ಅರ್ಥಗಳನ್ನು ಮಾಡಲವಕಾಶವಿರುವಂತೆ.

ಎರಡೂ "ಓಂ"ಕಾರಕ್ಕೆ ಹೊಂದುತ್ತದೆ. ಪರಮಪದ ಮತ್ತು ಅಕ್ಷರ ಎನ್ನುವವೆರಡು ಬ್ರಹ್ಮಪ್ರತೀಕವಾದ "ಓಂ"ಕಾರಕ್ಕೆ ಹೊಂದುವುದರಿಂದ

ಆ ಮೂಲಕವೇ ಧ್ಯಾನಯೋಗ ಧಾರಣಗಳಿಂದ ಆ ಬ್ರಹ್ಮಪದವನ್ನು ಪಡೆಯುವ ಮಾರ್ಗವನ್ನು ಸ್ವಾಮಿ ಹೇಳುತ್ತಾನೆ. ಈ ಅಭ್ಯಾಸಕ್ಕೆ ಎರಡು ಮುಖ್ಯ ಸಹಾಯಕಗಳಿವೆ. "ವೀತರಾಗಃ" ಒಂದು, "ಬ್ರಹ್ಮಚರ್ಯ." ಮತ್ತೊಂದು "ರಾಗಾಃ" ಎಂದರೆ ಇಚ್ಛೆಗಳನ್ನು, ಕಾಮಗಳನ್ನು ಬಿಡುವುದು ಎಷ್ಟು ಮುಖ್ಯವೆನ್ನುವುದು ಗಮನಿಸ ಬೇಕು. ಕಾಮವಾಸನೆಗಳಿದ್ದರೆ ಸಿಟ್ಟು, ದ್ವೇಷ, ಅನುರಾಗ, ಆನಂದ ಗಳಲ್ಲಿ ತೇಲುತ್ತಿರುವವನಿಗೆ ಬ್ರಹ್ಮಾನ್ವೇಷಣಕ್ಕೆ ಮಾರ್ಗವೇ ಇಲ್ಲಾ. ಸ್ತ್ರೀ ಕಾಮದ ವಾಸನೆಯೇ ಇಲ್ಲದಿರುವುದು, ಸ್ತ್ರೀ ವಿಷಯದಲ್ಲಿ ಪೂರ್ಣನಿಗ್ರಹ ವಿರುವುದೇ "ಬ್ರಹ್ಮಚರ್ಯ." ಈ ಕಾಮನಿಗ್ರಹವು ಎಷ್ಟು ಮುಖ್ಯ ವೆಂದು ತೋರಲೇ ಆ ನಿಷ್ಠೆಗೇ "ಬ್ರಹ್ಮಚರ್ಯ" ಎಂದರೆ ಬ್ರಹ್ಮಮಾರ್ಗ ಬ್ರಹ್ಮಕರ್ಮವೆಂದು ಅರ್ಥ ಬರುವ ಪದವನ್ನೇ ಕೊಟ್ಟಿದ್ದಾರೆ. ಆ ಕಾಮಿನೀ ಕಾಮನಿಗ್ರಹವೇ ಬ್ರಹ್ಮೈಕ್ಯಕ್ಕೆ ಮೆಟ್ಟಲು ಆ ಸ್ಥಿತಿಯೇ ಬ್ರಹ್ಮನನ್ನು ಪಡೆಯುವುದು, ಬ್ರಹ್ಮನಲ್ಲಿ ನಡೆಯುವುದು. ಪೂರ್ವದಲ್ಲಿ ಅದಕ್ಕೇ ಬ್ರಹ್ಮಚರ್ಯೆಗೆ ಅಷ್ಟು ಮುಖ್ಯ ಸ್ಥಾನ ಕೊಟ್ಟು ಬ್ರಹ್ಮಚರ್ಯಾ ಶ್ರಮವನ್ನು ಕಾಪಾಡಿಕೊಂಡು ಬರಲು ಒತ್ತಿ ಹೇಳುತ್ತಿದ್ದರು.

ಕಾಮವಾಸನಾ, ಕಾಮಸಂಕಲ್ಪ, ಕಾಮಕ್ರೀಡೆಗಳಲ್ಲಿ ಮನುಷ್ಯನ ಅಮೂಲ್ಯ ಶಕ್ತಿಗಳೆಲ್ಲಾ ನೀರಾಗಿ ಹರಿದು ವ್ಯರ್ಥವಾಗುತ್ತದೆ. ಬ್ರಹ್ಮ ಚರ್ಯದಲ್ಲಿ ಆ ವಾಸನೆ, ಸಂಕಲ್ಪ, ಕ್ರೀಡೆಗಳನ್ನೆಲ್ಲಾ ನಾಶಮಾಡಿ, ಶಕ್ತಿ ನಾಶವಾಗದಂತೆ, ಆತ್ಮಶಕ್ತಿ ಊರ್ಧ್ವಮುಖನಾಗಿ ಹರಿದು ಬ್ರಹ್ಮ ಭಾವ ಪಡೆಯಲನುವಾಗುತ್ತದೆ. ಎಲ್ಲಾ ವಿದ್ಯಾರ್ಜನೆಗೂ ಬ್ರಹ್ಮಚರ್ಯೆ ಮುಖ್ಯವೆಂದು ಭಾವಿಸಿದ್ದರು. ಕ್ರೀಡಿಸಲು, ಜೀವಿತದ ಚರ್ಯೆಗೆ ಒಂದು ಕಾಮಿನಿಯ ಆಧಾರವಾಗಿ ಬಿಟ್ಟಮೇಲೆ, ಇನ್ನು ಬ್ರಹ್ಮಧ್ಯಾನಕ್ಕೆ ಅವ ಕಾಶವೆಲ್ಲಿ. ಧ್ಯಾನವೆಲ್ಲಾ ಕಾಮದ ಮೇಲೆ. ಎರಡಕ್ಕೂ ಅವಕಾಶವಿಲ್ಲಾ. ಬ್ರಹ್ಮಚರ್ಯೆಯನ್ನೇ ಆಶ್ರಯಿಸಿ, ವಿದ್ಯೆ ಕಲಿತು, ಆತ್ಮ ಪಡೆಯಬೇಕು. ಇಲ್ಲವಾದರೆ ಆ ದಾರಿ ಬಿಟ್ಟು, ಗೃಹಸ್ಥನಾಗಿ ಅಥವಾ ಕಾಮಸಾಧನೆ ಗಳಲ್ಲಿ ನಿರತನಾಗಿ ಕೆಳದರ್ಜೆಯಲ್ಲಿ ಇರಬೇಕು. ಅದರಿಂದಲೇ ಬ್ರಹ್ಮ ಚರ್ಯ ಪಾಲನೆಗೆ ಅಷ್ಟು ಪ್ರಾಮುಖ್ಯ ಪೂರ್ವದಲ್ಲಿ ಜ್ಞಾನಾರ್ಜನೆಗಾಗಿ

ಗುರುವಿನ ಹತ್ತಿರಕ್ಕೆ ಬಾಲ್ಯಾವಸ್ಥೆಯಲ್ಲಿಯೇ ಹೋಗಿ ೧೨ ವರ್ಷ ಬ್ರಹ್ಮ ಚರ್ಯೆಯಲ್ಲಿ ಅಭ್ಯಾಸ ಮಾಡುತ್ತಿದ್ದರು. ೮ ರಿಂದ ೧೨ ವರ್ಷಗಳೊಳಗಾಗಿ ಉಪನಯನವನ್ನು ಮಾಡಿ, ತಂದೆ ಬ್ರಹ್ಮೋಪದೇಶವನ್ನು ಮಾಡಿ, ಸರಿಯಾದ ಗುರುವಿನ ಹತ್ತಿರ ಸಮಿತ್‌ಪಾಣಿಯಾಗಿ ಶಿಷ್ಯನನ್ನಾಗಿ ಕಳು ಹಿಸುತ್ತಿದ್ದರು.

ಗುರುಕುಲಾಶ್ರಮಗಳಲ್ಲಿ ಆ ಬಾಲಬ್ರಹ್ಮಚಾರಿಗಳು ಗುರುಸೇವೆಯನ್ನು ಮಾಡುತ್ತಾ, ಸ್ವಂತ ಮಕ್ಕಳಂತೆ ಆದರದಿಂದ ಉಪದೇಶ ಮಾಡುತ್ತಿದ್ದ ಗುರುಗಳ ಪಾದದಡಿ ಅಮೂಲ್ಯವಾದ ವಿದ್ಯೆಯನ್ನು ಕಲಿಯುತ್ತಿದ್ದರು. ಕೊನೆಯ ಪಕ್ಷ ಆ ರೀತಿಯಲ್ಲಿ ೧೨ ವರ್ಷಗಳಾದರೂ ಗುರುಕುಲವಾಸ ಮಾಡಿ ನಿಷ್ಠಬ್ರಹ್ಮಚರ್ಯೆಯಲ್ಲಿ ವೇದ, ವೇದಾಂಗಗಳನ್ನೆಲ್ಲಾ ಅಭ್ಯಾಸಿ ಸುತ್ತಿದ್ದರು. ಈಗಿನ ವಿದ್ಯಾಭ್ಯಾಸ-ವಿದ್ಯಾ ಆಭಾಸವೆನ್ನಬಹುದು-ಕ್ರಮದಲ್ಲಿ ಆ ಬ್ರಹ್ಮಚರ್ಯ ನಿಷ್ಠೆ ಎಲ್ಲಿ ಬಂತು. ಸ್ವೇಚ್ಛೆಯಾಗಿ ಕಾಮೋ ದ್ರೇಕ ಪುಸ್ತಕಗಳನ್ನು ಓದುವುದು, ಕಾಮಿಕ ಚಿತ್ರಪಟಗಳನ್ನು ನೋಡು ವುದು, ಅದೇ ವಿಷಯ ಪರಸ್ಪರ ಯಾವಾಗಲೂ ಮಾತನಾಡುತ್ತಾ ಕಾಲ ಹಾಕುವುದಕ್ಕೆ ವಿದ್ಯಾವ್ಯಾಸಂಗವೆಂಬ ನೆಪದಿಂದ ವಿದ್ಯಾರ್ಥಿ ಮಂದಿರ ಗಳಲ್ಲಿ, ಮಾವನಿಂದಲೋ, ತಂದೆಯಿಂದಲೋ ಯಥೇಚ್ಛೆ ಹಣತರಿಸಿ ಕೊಂಡು ಲೋಲಾಪ್ತಿಯಿಂದ ಶೋಕಿಮಾಡಿಕೊಂಡು ಮೆರೆಯುವುದೇ, ವಿಶ್ವವಿದ್ಯಾವ್ಯಾಸಂಗ. ಈ ತೊಡರುಗಳ ಮಧ್ಯೆ, ಇವನ್ನು ದಾಟಿಯಾದರೂ ಹೇಗೆ ನಾಲ್ಕಾರು ಯುವಕರಾದರೂ ನಾಲ್ಕಕ್ಷರ ಕಲಿಯುತ್ತಾರೋ? ಛಾಂದೋಗ್ಯದ (೮ ನೇ ಪ್ರ, ೫ ಖಂಡದಲ್ಲಿ ಶ್ಲೋ೧) "ಅಥ ಯದ್ಯಜ್ಞ ಇತ್ಯಾ ಚಕ್ಷತೇ ಬ್ರಹ್ಮಚರ್ಯಮೇವ, ತದ್ಬ್ರಹ್ಮ ಚರ್ಯೇಣ ಹ್ಯೇವಯೋಜ್ಞಾ ತಾತಂ ವಿನ್ದತೇ"-ಯಜ್ಞವೆಂದು ಯಾವುದನ್ನು ಕರೆಯುತ್ತೇವೆಯೋ ಅದು ಬ್ರಹ್ಮಚರ್ಯವೇ, ಈ ನಿಷ್ಠಬ್ರಹ್ಮಚರ್ಯದಿಂದಲೇ ಅದನ್ನು ಪಡೆಯು ವುದು ಎಂದೂ "ಬ್ರಹ್ಮಚರ್ಯಮೇವ, ತದ್ಬ್ರಹ್ಮ ಚರ್ಯೇಣ ಹ್ಯೇವೆ ಷ್ಟ್ವಾತ್ಮಾನಮನುವಿಂದತೇ"-ಬ್ರಹ್ಮಚರ್ಯ ನಿಷ್ಠೆಯಿಂದಲೇ ಬ್ರಹ್ಮಚರ್ಯ ಇಷ್ಟೆಯಿಂದಲೇ "ಆತ್ಮ"ವನ್ನು ಪಡೆಯುತ್ತಾನೆ ಎಂದು ಬ್ರಹ್ಮಚರ್ಯೆಯನ್ನು ಶ್ಲಾಘಿಸಿದ್ದಾರೆ. ಬ್ರಹ್ಮಚರ್ಯೆಯಲ್ಲಿರುವುದೇ ಬ್ರಹ್ಮನಲ್ಲಿರುವುದು. ಆ

ನಿಷ್ಠಾಬಲದಿಂದ ಎಷ್ಟು ತೇಜಸ್ಸು ಬರುತ್ತೆ, ಏನುತಾನೆ ಅಸಾಧ್ಯ. ನಾರದ ಭಕ್ತಿ ಸೂತ್ರದಲ್ಲಿ ಸ್ತ್ರೀಯರ ವಿಷಯ ಧ್ಯಾನ, ಮಾತು, ಕೇಳಿ, ಚಿಂತನ ಕೂಡ (ಅಷ್ಟವಿಧ ಮೈಥುನ) ಕೂಡದೆಂದು, ಭಕ್ತಿಮಾರ್ಗದಲ್ಲಿ ಬ್ರಹ್ಮ ಚರ್ಯ ಬಹು ಮುಖ್ಯವೆಂದು ಪ್ರತಿಪಾದಿಸಿದ್ದಾರೆ. ಮಹೋಪನಿಷತ್ತಿನಲ್ಲಿ "ದುಷ್ಕೃತಾಗ್ನಿ ಶಿಖಾನಾರ್ಯೊ, ದಹಂತಿ ತೃಣವನ್ನರಂ" ಎಂದು ನರನನ್ನು ತೃಣ (ಹುಲ್ಲುಕಡ್ಡಿ) ದಂತೆ ಸುಟ್ಟುಬಿಡುವ ದುಷ್ಕೃತ ಅಗ್ನಿಶಿಖೆ ನಾರಿ, ಎಂದಿದೆ. ಮುಂದೆ ಅಲ್ಲೇ "ಕಾಮನಾಮ್ನಾ ಕಿರಾತೇನ" ಎಂದು ಕಾಮ ನಾಮಧೇಯವುಳ್ಳ ಕಿರಾತ-ರಾಕ್ಷಸ ಎಂದು ಸಂಭೋದಿಸಿದೆ. ಆದುದರಿಂದ ವೇದದಲ್ಲಿ ತಿಳಿಯ ಹೇಳಲ್ಪಟ್ಟಿರುವ, 'ಅಕ್ಷರ' ಸಾಕ್ಷಾತ್ಕಾರಕ್ಕೆ, 'ವೀತರಾಗ' 'ಬ್ರಹ್ಮಚರ್ಯ' ಎರಡು ಅಂಗಗಳು.

ಸರ್ವದ್ವಾರಾಣಿ ಸಂಯಮ್ಯ
ಮನೋ ಹೃದಿ ನಿರುಧ್ಯ ಚ ।
ಮೂರ್ಧ್ನ್ಯಾಧಾಯಾತ್ಮನಃ ಪ್ರಾಣ-
ಮಾಸ್ಥಿತೋ ಯೋಗಧಾರಣಾಮ್ ॥೧೨॥

ಓಮಿತ್ಯೇಕಾಕ್ಷರಂ ಬ್ರಹ್ಮ
ವ್ಯಾಹರನ್ ಮಾಮನುಸ್ಮರನ್ ।
ಯಃ ಪ್ರಯಾತಿ ತ್ಯಜನ್ ದೇಹಂ
ಸ ಯಾತಿ ಪರಮಾಂ ಗತಿಮ್ ॥೧೩॥

೧೦ ನೇ ಶ್ಲೋಕದ ಪ್ರತಿಧ್ವನಿಯಂತೆ ಪುನಃ ಪ್ರಾಣವಾಯು ನಿರೋಧ, ಮಾಡಿ "ಓಂ" ಎನ್ನುವ ಬ್ರಹ್ಮನಲ್ಲಿ ನಿಲ್ಲಿಸಿ, ದೇಹತ್ಯಾಗ ಮಾಡುವಾಗ ಪರಮಗತಿಯನ್ನು ಪಡೆಯುವವನ್ನೇ ಪ್ರತಿಪಾದಿಸಿದ್ದಾನೆ ಸ್ವಾಮಿ. ಇದು ಮುಖ್ಯವಾದ ವಿಷಯವಾಗಿರುವುದರಿಂದ ಪುನಃ ಹೇಳಲ್ಪಟ್ಟಿದೆ. ನಿರೋಧಕ್ರಮ; ಸರ್ವದ್ವಾರ ಹರಿಯುತ್ತಿರುವ, ಜ್ಞಾನಕರ್ಮೇಂದ್ರಿಯ ಗಳನ್ನು ಮನಸ್ಸಿನಲ್ಲಿ ನಿರೋಧಿಸಿ, ಮನಸ್ಸನ್ನು ಹೃದಯಸ್ಥಾನದಲ್ಲಿ ನಿರೋಧಿಸಿ, ಪ್ರಾಣವಾಯುವನ್ನು ಮೂರ್ಧಸ್ಥಾನದಲ್ಲಿ ನಿಲ್ಲಿಸಿ ಬ್ರಹ್ಮಾ ತ್ಮೈಕ್ಯರೂಪವಾಗಿ ಯೋಗಧಾರಣೆಯನ್ನು ಮಾಡುತ್ತಾ "ಓಂ" ಎಂದು

ಬ್ರಹ್ಮಪ್ರತೀಕವಾಗಿರುವ ಏಕಾಕ್ಷರದಿಂದ ನನ್ನನ್ನು (ಪರಮಾತ್ಮನನ್ನು) ಸ್ಮರಿಸುತ್ತಾ ಯಾರು ಈ ದೇಹವನ್ನು ಬಿಡುವರೋ ಅವರು ಪರಮ ಗತಿಯನ್ನು ಹೊಂದುವರು.

ಪೂರ್ವದಲ್ಲಿ ಯೋಗಿಗಳು ಸ್ವೇಚ್ಛೆಯಿಂದ ಯಾವಾಗ ಬೇಕಾದರಾಗ ಯೋಗಮಗ್ನರಾಗಿ ಓಂ ಧ್ಯಾನದಲ್ಲಿ ಪ್ರಾಣ ನಿರೋಧನ ಮಾಡಿ ದೇಹ ತ್ಯಾಗ ಮಾಡುತ್ತಿದ್ದರು. ಅಕಾಲಮರಣ, ಅನೇಚ್ಛಾಮರಣಗಳಿಂದ ಅವರು ಬಾಧಿತರಾಗಿರಲಿಲ್ಲಾ, ಭೀತರಾಗಿರಲಿಲ್ಲಾ. ಜೀವನದ ಮೇಲೆಂತೋ ಅಂತೇ ಮರಣದ ಮೇಲೆಯೂ ಅವರು ಹತೋಟಿಯನ್ನಿಟ್ಟುಕೊಂಡಿದ್ದರು. ಈಗ ಆ ಸ್ಥಿತಿ ಎಲ್ಲಿ! ಆ ಮಾತೇ ಇಲ್ಲ. ಜೀವಿತವೊಂದು ಸಮರ, ಮರಣದ್ದೊಂದು ಭೀತಿ. ಯಾವ ರೀತಿ, ಒದ್ದಾಟದಲ್ಲಿ ಜೀವನ ಈಗ ಸಾಗಿಸುತ್ತೇವೋ, ಆ ರೀತಿ ಒದ್ದಾಟದಲ್ಲಿ ಸಾಯಬೇಕಲ್ಲಾ ಎನ್ನುವ ಸಂಕಟದ ಸಾವು. ಜೀವನಕ್ಕೊಂದಾಧಾರ, ಮರಣಕ್ಕೊಂದು ಸ್ಮರಣೆ ಯಿದ್ದರೆ–ಪರಮಾತ್ಮ ಧ್ಯಾನರೂಪವಾಗಿ ಸತತ ಧಾರೆಯಿದ್ದರೆ ಶಾಂತಿಯಿಂದ ಬೇಕಾದಂತೆ ಜೀವನವೂ ಮರಣವೂ ಅನುಭವಿಸಿ, ಅವನಲ್ಲೇ ಐಕ್ಯ.

ದೇಹ ಬಿಡುವಾಗ ಈ ಯೋಗ ಧಾರಣೆ ಬರುವುದಿಲ್ಲವಾದ್ದರಿಂದ ಜೀವಾವಧಿ ಎಡಬಿಡದೆ (ಸರ್ವೇಷು ಕಾಲೇಷು ಮಾಮನುಸ್ಮರ) ಯಾವಾಗಲೂ ಪರಮಾತ್ಮ ಸ್ಮರಣೆ ಅಭ್ಯಾಸ ಮಾಡುತ್ತಲೇ ಇರಬೇಕು.

**ಅನನ್ಯಚೇತಾಃ ಸತತಂ । ಯೋ ಮಾಂ ಸ್ಮರತಿ ನಿತ್ಯಶಃ ।**
**ತಸ್ಯಾಹಂ ಸುಲಭಃ ಪಾರ್ಥ । ನಿತ್ಯಯುಕ್ತಸ್ಯ ಯೋಗಿನಃ ॥೧೪॥**

ಈ ಶ್ಲೋಕದಲ್ಲಿ ಅದಕ್ಕಾಗಿಯೇ ಅನನ್ಯ, ಸತತಂ ನಿತ್ಯಶಃ ಎಂಬ ವಿಶೇಷಣಗಳಿವೆ. ಇವು ಇದ್ದವ ನಿತ್ಯಯುಕ್ತ ಯೋಗಿ ಅವನಿಗೆ ನಾನು (ಪರಮಾತ್ಮ) ಸುಲಭನು. ಅನನ್ಯ ಚೇತಸ್ಸಿನಿಂದ (ಇನ್ಯಾವುದಕ್ಕೂ ಮನಸ್ಸು ಕೊಡದೆ) ಸತತಂ ಯಾವಾಗಲೂ, ನಿತ್ಯದಲ್ಲಿ–ಇದರಲ್ಲಿ ದಿನವೂ ಎಂಬರ್ಥವಲ್ಲದೆ ಅನಿತ್ಯವಲ್ಲದ ಅಂದರೆ ಶಾಶ್ವತವಾದ ಎಂಬರ್ಥವೂ ಬರುತ್ತದೆ–ಸ್ಮರಣೆ ಮಾಡುತ್ತಿದ್ದರೆ, ದೃಢವಾದ ಸಂಯೋಗ (ನಿತ್ಯಯುಕ್ತ) ಪರಮಾತ್ಮನೊಡನೆ ಆಗದೆ ಏನು?

ಯಾವುದೇ ಕಷ್ಟವಾಗಲಿ, ಸುಲಭವಾಗಲಿ ಆಗಬೇಕಾದರೆ ಅಭ್ಯಾಸ ಬಲದಿಂದಲೇ. ಒಂದು ವಿಷಯ "ಅನನ್ಯ, ಸತತಂ, ನಿತ್ಯಶಃ" ಆಗಿ ದಿನಾ ಅಭ್ಯಾಸವಾಗಿ ಬಿಟ್ಟರೆ ಅದು ಸುಲಭವೇ. ಅಭ್ಯಾಸಬಲದಿಂದ ತನ್ನದೇ ಆಗಿಬಿಡುತ್ತದೆ. ಪರಮಾತ್ಮ ಸಾಕ್ಷಾತ್ಕಾರವೂ ಅಂತೇ. ಎಡಬಿಡದೆ ಉಶ್ವಾಸ ನಿಶ್ವಾಸದಂತೆ, ಹೃದಯ ಬಡಿಯುವಂತೆ ಸತತವಾಗಿ ನಿತ್ಯ ನಡಿಯುವ ಧ್ಯಾನ ಸ್ಮರಣೆಯಾಗಿಬಿಟ್ಟರೆ ಆ ಪರಮಾತ್ಮವಸ್ತುವೇ ಸಾಕ್ಷಾತ್ತಾಯಿತು. ದೇಹ ಬಿದ್ದುಹೋದರೇನು, ಇರುವಾಗಲೇ ಆ ಯೋಗಿಗೆ ಅದರರಿವಿರುವುದಿಲ್ಲಾ. "ಅನಾಯಾಸೇನ ಮರಣಂ" ಎಂದು ಒಬ್ಬ ಭಕ್ತನು, ಅದೈನ್ಯ ಭಿಕ್ಷದಿಂದ ಜೀವನವೂ ಅನಾಯಾಸವಾಗಿ ಮರಣವೂ ಆಗಲೆಂದು ಜೇಡಿದ್ದಾನೆ. ಇರುವಾಗಲೇ "ನಿತ್ಯಯುಕ್ತ" ದೃಢವಾಗಿ ಸೇರಿಬಿಟ್ಟರುವಾಗ ಇನ್ನು ಈ ಉಪಾಧಿಯಾಗಿರುವ, ತಡೆಯಾಗಿರುವ ದೇಹ ಬಿದ್ದುಹೋದರೆ, ಅಡಚಣೆಯೇ ಇಲ್ಲದಂತಾಗಿ ಸುಲಭವಾಗಿ ಅಂಥವರು ಪರಮಾತ್ಮವಸ್ತುವಿನೊಡನೈಕ್ಯರಾಗುವರು. ಸುಲಭವೆಂದು ಸಲೀಸಾಗಿ ಹೇಳಿಬಿಟ್ಟಿನೆಲ್ಲಾ ಸ್ವಾಮಿ. ಏನು ಅಷ್ಟು ಸುಲಭವೇ ? ಮಹಾತ್ಮರಿಗೆ ಸುಲಭವೇ.

**ಮಾಮುಪೇತ್ಯ ಪುನರ್ಜನ್ಮ । ದುಃಖಾಲಯಮಶಾಶ್ವತಮ್ ।**
**ನಾಪ್ನುವಂತಿ ಮಹಾತ್ಮಾನಃ । ಸಂಸಿದ್ಧಿಂ ಪರಮಾಂ ಗತಾಃ ॥೧೫॥**

"ವಾಸುದೇವಂ ಸರ್ವಮಿತಿ" ಸ ಮಹಾತ್ಮಾನಾಂ ಎಂದು ಹೇಳಿದ ದುರ್ಲಭರಾದವರಿಗೆ ಸುಲಭ. "ಮಾಮುಪೇತ್ಯ" ಪರಮಾತ್ಮನನ್ನು ಹೊಂದಿದ ಮೇಲೆ, ಆ ಮಹಾತ್ಮರು ಪುನರ್ಜನ್ಮವೆಂಬ ಅಶಾಶ್ವತವಾದ ದುಃಖಾಲಯವನ್ನು ಪಡೆಯುವುದಿಲ್ಲ.

"ನಿವರ್ತಂತೇ" ಎಂದರೆ ವಾಪಸು ಬರದೆ ಹೊರಟೇ ಹೋಗುವಂತೆ. ಎಂದಿಗೂ ಹಿಂತಿರುಗಿ ಬರದಂತೆ ಶಾಶ್ವತವಾಗಿ ಪರಮಪದವನ್ನು ಸೇರಿಬಿಡುವರು. ಇದಕ್ಕೆ 'ಸಂಸಿದ್ಧಿ' ಜ್ಞಾನಸಿದ್ಧಿ ಬೇಕು. "ಈ ಪುನರ್ಜನ್ಮವೆಂಬುದು ಸತ್ಯಾನ್ವೇಷಣಕ್ಕಿಂತ ಪ್ರಾಮುಖ್ಯ ಹೊಂದಿ, ಇದರಿಂದ ಹೇಗೆ ಬಿಡುಗಡೆ ಹೊಂದುವುದೆಂಬುದೊಂದು ವೇದಾಂತಿಗಳ ದೊಡ್ಡ ಸಮಸ್ಯೆ

ಯಾಗಿದೆ. (Bugbear)" ಎಂದು ಮೊನಿಯೆ ವಿಲಯಂಸ್ ಎಂಬ ಪಾಶ್ಚಾತ್ಯ ತತ್ವಜ್ಞ ಆಶ್ಚರ್ಯಗೊಂಡಿದ್ದಾನೆ. (Brahmism & Hinduism by Monier Williams)ಕರ್ಮ, ಕರ್ಮಫಲವಾಗಿ ಜನ್ಮ, ಆ ಜನ್ಮದಲ್ಲಿ ಪುನಃ ವಾಸನಾರೂಪವಾಗಿ ಕರ್ಮ; ಪುನರ್ಜನ್ಮ ಇವು ಸನಾತನ ಧರ್ಮದಲ್ಲಿ ನಂಬಿಕೆ. ಜೀವನ ಸಂಸ್ಕಾರದ ಪ್ರಕಾರ ಅವನವನ ಮೇಧಸ್ಸು, ಶಕ್ತಿ, ಫಲಗಳಿರಬೇಕೆಂದೂ ಇಲ್ಲವಾದರೆ ಒಂದೊಂದು ಜೀವಕ್ಕೂ ಹುಟ್ಟು ಶಕ್ತಿ ಸ್ಥಿತಿಗಳಲ್ಲೇ ಇಷ್ಟಂತರವಿರಲು ಕಾರಣವಿಲ್ಲವೆಂದೂ ಕನಸು, ಪಾಪ ಮುಂತಾದುವುಗಳು ಅನುಭವವೂ, ಅನುಭವವೇ ಇಲ್ಲದ ವಸ್ತುಗಳ ಜ್ಞಾಪಕ, ಪ್ರಯೋಗಗಳೂ, ಈ ಪುನರ್ಜನ್ಮದಲ್ಲಿ ನಂಬಿಕೆಯನ್ನು ಹುಟ್ಟಿಸಿವೆ. ಇದು ಪಾಶ್ಚಿಮಾತ್ಯರಲ್ಲಿಲ್ಲವೇ ಎಂದಲ್ಲ. ಪ್ಲೇಟೋ ಮೊದಲಾದ ಗ್ರೀಕ್ ರೋಮನ್ ತತ್ವಜ್ಞರೂ ಈ ಕೆಲವು ಚರ್ಚೆಗಳಿಂದ, ಜನ್ಮಾಂತರಗಳಿರಬಹುದೆಂದು ಊಹಿಸಿದ್ದರು. ಆದರೆ ನಮ್ಮ ಶಾಸ್ತ್ರಗಳಲ್ಲಿ ಇದು ಬಹಳ ಬೇರೂರಿದೆ.

ಇರುವವನೊಬ್ಬನೇ, ಅನಾದಿ ಏಕೈಕಪುರುಷನೆಂದೂ ಅವನ ಶಕ್ತಿ ಪ್ರಕೃತಿಯೆಂದೂ, ಪ್ರಕೃತಿ ಪುರುಷನ ಸಂಯೋಗದಿಂದ ಸೃಷ್ಟಿ, ಸ್ಥಿತಿ, ಲಯಗಳು ನಡೆಯುತ್ತಿವೆಯೆಂದೂ ನಂಬಿದ ಮೇಲೆ, ಈ ನಾಟಕ ನಡೆಯಲು ಅದರ ಪಾತ್ರಧಾರಿಗಳಾದ ಜೀವರುಗಳು ಅಂಕಅಂಕಗಳಲ್ಲೂ ಬರಲೇಬೇಕು. (ಮುಂ, ೩ ಅ, ೨ ಬ್ರಾ ೨ ನೇ ಶ್ಲೋಕದಲ್ಲಿ) "ಕಾಮಾನ್ಯಃ ಕಾಮಯತೇಮನ್ಯಮಾನಃ ಸ ಕಾಮಭಿರ್ಜಾಯತೇತತ್ರತತ್ರ"— ಕಾಮವಾಸನೆಯಿಂದ ಪುನಃ ಪುನಃ ಇಲ್ಲಿ ಹುಟ್ಟುತ್ತಾರೆಂದು ಉಲ್ಲೇಖಿತವಾಗಿದೆ. ಅವರ ಅವರ ಕರ್ಮಫಲವಲ್ಲದೇ ಇದ್ದರೆ ಇಹದಲ್ಲಿ ಇಲ್ಲಿ ಒಬ್ಬೊಬ್ಬರ ಅಂತಸ್ತು, ಸುಖ, ವಿದ್ಯೆ, ವೈರಾಗ್ಯಗಳಲ್ಲಿ ತಾರತಮ್ಯವೇಕೆ. ಪಾಪವಾಗಲೀ ಪುಣ್ಯವಾಗಲೀ ತಮ್ಮ ತಮ್ಮ ಕರ್ಮಫಲಗಳನ್ನುಣಲು ಜೀವಿಗಳು ಆ ದರ್ಜೆಯಲ್ಲಿ ಆ ಕರ್ಮಕ್ಕನುಗುಣವಾಗಿ ಹುಟ್ಟಲೇಬೇಕು. ಪಾಪವು ಕಬ್ಬಿಣದ ಸಂಕೋಲೆಯಂತಾದರೆ ಪುಣ್ಯವು ಚಿನ್ನದ ಸಂಕೋಲೆ; ಎರಡೂ ಸಂಕೋಲೆಯೆ, ಇವು ಜೀವನನ್ನು ಇಹಲೋಕದಲ್ಲಿ ಬಂಧಿಸುತ್ತಲೇ ಇರುತ್ತವೆ. ಈ

ಎರಡನ್ನೂ ದಾಟಿ ಪುನರ್ಜನ್ಮವಿಲ್ಲದೇ ಪರಮಗತಿಯನ್ನು ಪಡೆಯುವು ದಕ್ಕೆ ಸ್ವಾಮಿ ಆದೇಶ ಕೊಟ್ಟಿದ್ದಾನೆ. ಆವನನ್ನು ಸೇರಿದ ಮೇಲೆ ಅವನ ಲ್ಲೈಕ್ಯವಾಗಿ, ದುಃಖಕ್ಕೆ ತೌರುಮನೆಯಾಗಿಯೂ ಅಶಾಶ್ವತವಾಗಿಯೂ ಇರುವ ಪುನರ್ಜನ್ಮಕ್ಕೆ ಪುನರಾಗಮನವಿಲ್ಲಾ. ಅವನನ್ನೇ ಸ್ಮರಿಸಿ ಸತತ ವಾಗಿ ಜೀವನ ಕಳೆದ ಮಹಾತ್ಮನಿಗೆ ಇನ್ನು ಅವನ ಪುಣ್ಯಪಾಪಗಳ ಲೆಕ್ಕಾಚಾರವೆಲ್ಲಿ. ಅದರ ಫಲವೆಲ್ಲಿ. ಫಲವಿದ್ದರೆ ತಾನೇ ಅನುಭವಿಸಲು ಪುನರ್ಜನ್ಮ. ಅವನು ಎಲ್ಲಾ ಪರಮಾತ್ಮನೇ ಎಂದು ಜೀವಿಸಿ ಮಹಾತ್ಮ ನಾಗಿ, ಮಹದಾತ್ಮನಲ್ಲಿ ಲೀನವಾಗಿಬಿಡುವನು. ಈ ಜನ್ಮವು ನಮ್ಮ ಗಳಿಗೆ ಆಹ್ಲಾದವಾಗಿ ಆನಂದವಾಗಿರಬಹುದು. ಕೊಚ್ಚೆಯಲ್ಲಿ ಮಿಲಿಮಿಲಿ ಎಂದು ಒದ್ದಾಡುವ ಕ್ರಿಮಿಗಳಿಗೆ ಆ ಜೀವನದಲ್ಲಿ ಆನಂದವಿರುವಂತೆ, ಅಜ್ಞಾನದಲ್ಲಿ ಮುಳುಗಿ ತೇಲುತ್ತಿರುವ ನಮಗೆ ಈ ತಾಪತ್ರಯಗಳ ಇಹ ಜೀವನವು ಆಹ್ಲಾದವಾಗಿಯೇ ಕಾಣಬಹುದು. ಆದರೆ ಅದು ದುಃಖಾ ಲಯವು, ಅಶಾಶ್ವತವು. ಕಿಂಚಿತ್ ಸುಖಕ್ಕೋಸ್ಕರ ಎಷ್ಟೋ ದುಃಖ ಗಳನ್ನು ಕಟ್ಟಿಕೊಳ್ಳುವೆವು. ಕಿಂಚಿತ್ ಸುಖವಾದರೂ ಬಂದುಹೋಗು ವುದು. ಶಾಶ್ವತ ಸುಖವಲ್ಲಾ. ಆದ್ದರಿಂದ ಮಹಾತ್ಮರು ಪುನಃಪುನಃ ಈ ಜನ್ಮವೆತ್ತಿ ಈ ದುಃಖಗಳನ್ನನುಭವಿಸಲು ಇಷ್ಟಪಡುವುದಿಲ್ಲಾ. ಪರಮ ಸುಖವಾದ, ಶಾಶ್ವತವಾದ ಪದ, ಶಾಂತಿಪದವನ್ನೇ ಹೊಂದು ವರು. ಏಕೆಂದರೆ ಮುಂದಿನ ಶ್ಲೋಕದಲ್ಲಿ ಹೇಳುತ್ತಾನೆ ಸ್ವಾಮಿ

**ಆಬ್ರಹ್ಮಭುವನಾಲ್ಲೋಕಾಃ । ಪುನರಾವರ್ತಿನೋಽರ್ಜುನ ।**
**ಮಾಮುಪೇತ್ಯ ತು ಕೌಂತೇಯ । ಪುನರ್ಜನ್ಮ ನ ವಿದ್ಯತೇ ॥೧೬॥**

ಬ್ರಹ್ಮಲೋಕಾದಿಯಾಗಿ ಇರುವ ಎಲ್ಲಾ ಲೋಕಗಳಿಂದಲೂ ಪುನರಾವೃತ್ತಿಗಳುಂಟು. ನನ್ನನ್ನು ಹೊಂದಿದರೆ ಪುನರ್ಜನ್ಮವೇ ಇಲ್ಲಾ. ಯಾವುದಕ್ಕೆ ಉತ್ಪತ್ತಿ ಉಂಟೋ ಅದಕ್ಕೆ ನಾಶವು ಸ್ವಯಂಸಿದ್ಧ. ಅದರ ದರ ಇರುವಿಕೆಯು ಪರಿಮಾಣದಂತರವಿರಬಹುದಷ್ಟೇ. ಇವತ್ತೋ, ನಾಳೆಯೋ ಅಂತೂ ಕೊನೆಯು ಉಂಟು. ಬ್ರಹ್ಮಲೋಕ ಪ್ರಾಪ್ತಿ ಯಾಗಲಿ, ಬ್ರಹ್ಮಪದವಿಯೇ ಸಿಕ್ಕಲೀ, ಅಪುಣ್ಯ ಫಲ ಮುಗಿದ ಮೇಲೆ

ಪುನಃ ಪಾಪಸ್ಸು-ಪುನರ್ಜನ್ಮ. ಬ್ರಹ್ಮದಿಂದ ತೃಣದವರೆವಿಗೂ ಒಂದೇ ಆದ್ಯಂತ್ಯವಷ್ಟೆ. ಕಾಲಪರಿಣಾಮವಲ್ಲಿ ಅಂತರವಷ್ಟೆ. ಅಶಾಶ್ವತೆಯಲ್ಲಿ ಎರಡೂ ಒಂದೇ. ಪುನರ್ಜನ್ಮವೇ ಬಾರದಂತಿರಬೇಕಾದರೆ ಪರಮಾತ್ಮೈಕ್ಯ-"ಮಾಮುಪೇತ್ಯ."

**ಸಹಸ್ರಯುಗಪರ್ಯಂತ-ಮಹಯದ್ಬ್ರಹ್ಮಣೋ ವಿದುಃ**
**ರಾತ್ರಿಂ ಯುಗಸಹಸ್ರಾಂ ತಾಂ । ತೇಽಹೋರಾತ್ರವಿದೋ ಜನಾಃ॥೧೭॥**

ಯಾರು ಸಹಸ್ರಯುಗಪರ್ಯಂತವಾದ ಬ್ರಹ್ಮನ ಮಹತ್ತಿನ ಪ್ರಮಾಣವನ್ನು ಬಲ್ಲವರೋ, ಹಾಗೆಯೇ ಸಹಸ್ರಯುಗಪರ್ಯಂತವಾದ ರಾತ್ರಿ ಪ್ರಮಾಣವನ್ನು ತಿಳಿದಿರುವರೋ ಆ ಯೋಗಿಗಳೇ ಅಹೋರಾತ್ರಿಯನ್ನು ಬಲ್ಲವರು. ಅಳೆಯಲನದಳವಾದ ವಸ್ತುಗಳಲ್ಲಿ ಈ ಕಾಲವೊಂದು. ಇದರ ಮೊದಲ್ಯಾವುದು. ಕೊನೆ ಯಾವುದು. ಈ ಕೆಲಸವನ್ನು ಮಾಡುತ್ತೇನೆ ಎನ್ನುವುದರೊಳಗೇ ಆ ಮಾತು ಭೂತಕಾಲವನ್ನು ಸೇರಿಬಿಟ್ಟಿತು. ಕೊನೆ ಮೊದಲಿಲ್ಲದುದರಿಂದಲೇ ಈ ಕಾಲನನ್ನು ಪರಬ್ರಹ್ಮನೆನ್ನುವರು. ಸೂರ್ಯ ಸೃಷ್ಟಿಯ ಮುಂಚೆ ಕಾಲವನ್ನಳೆಯಬಲ್ಲ ಸಾಧನೆಯೇ ಇರಲಿಲ್ಲಾ. ಅಚಿಂತ್ಯ. ಅನಾದ್ಯಂತ, ಏಕಪ್ರವಾಹವಾಗಿ ಹರಿಯುತ್ತಿತ್ತು. ಈಗಲೂ ಅಂತೇ ಹರಿಯುತ್ತಿದೆ. ಸೃಷ್ಟಿಯಲ್ಲಿ ಸೂರ್ಯೋದಯಾಸ್ತಮಾನಗಳಿಂದ, ಒಂದೇ ರೀತಿಯಲ್ಲಿ ತೋರುತ್ತಿದ್ದ ಕಾಲವಲ್ಲಿ ಬೆಳಕು ಕತ್ತಲೆಯ ಅಂತರವು ಒದಗಿ, ಒಂದು ಲೆಖ್ಖಕ್ಕೆ ಸಿಗುವಂತಾಯಿತು. ಯಾವ ಅಳತೆಗೂ ಸಿಕ್ಕಿಬೀಳದ ವಸ್ತುವನ್ನು ಸೂರ್ಯದೇವನು ಒಂದು ಪರಿಮಾಣದಲ್ಲಿ ಅಳೆದು ತೋರುತ್ತಾನೆ. ಸೂರ್ಯಪರಮಾತ್ಮನು ಪ್ರತ್ಯಕ್ಷವಾಗಿರುವುದೇ ನಮಗೆ ಹಗಲು (ದಿನ) ಅವ ಅಗೋಚರನಾಗುವುದೇ ರಾತ್ರಿ-ಎಲ್ಲಾ ಪ್ರಕೃತಿ ಒಂದೇ, ಜೀವವೊಂದೇ, ಸೃಷ್ಟಿ ಒಂದೇ ಆದರೂ ಆ ಭಗವಾನನು ಉದ್ಭವಿಸಿದನೆಂದರೆ ಸೃಷ್ಟಿ ಸಾಮಾನ್ಯಕ್ಕೆಲ್ಲಾ ನವಚೈತನ್ಯ. ಆತ ಮರೆಯಾದನೆಂದರೆ ಅಂಧಕಾರಮಯ. ಹಾಗೆಯೇ ಬ್ರಹ್ಮಚೈತನ್ಯವೆಲ್ಲವೂ ವ್ಯಕ್ತವಾದರೆ ಅದೇ ಸೃಷ್ಟಿ ಅದೇ ಬ್ರಹ್ಮನ ಹಗಲು. ಆ ಚೈತನ್ಯವೆಲ್ಲಾ ಅವ್ಯಕ್ತವಾದರೆ ಅದೇ ಬ್ರಹ್ಮನ ರಾತ್ರಿ-ಲಯ,

ಸೂರ್ಯನು ರಾತ್ರಿಯಲ್ಲಿ ನಾಶವಾಗಿಲ್ಲಾ. ಮರೆಯಾಗಿದ್ದಾನಷ್ಟೆ, ಪುನಃ ಉದಯಿಸುವನು. ರಾತ್ರಿ ಮುಗಿದ ಮೇಲೆ ಬೆಳಗು ಸ್ವಯಂಸಿದ್ಧ. ಅಂತೇ ಬ್ರಹ್ಮಲಯದ ಕಾಲದಲ್ಲಿ ನಾಶನಾಗಿಲ್ಲ. ಅವ್ಯಕ್ತ ಸ್ಥಿತಿಯಲ್ಲಿದ್ದಾನೆ. ಸೃಷ್ಟಿ ಪುನಃವಾದರೆ ನವಚೈತನ್ಯ ತಾಂಡವಾಡುತ್ತದೆ, ಸೃಷ್ಟಿ ಚಕ್ರದಲ್ಲೆಲ್ಲಾ. ಒಂದು ಚಿತ್ರಪಠದ ದೊಡ್ಡ ತೆರೆ ಪಸರಿಸಿದಾಗ, ವ್ಯಕ್ತ. ಅದನ್ನೇ ಮುರಿದಾಗ ಅವ್ಯಕ್ತ. ಚಿತ್ರಗಳೂ, ತೆರೆಯೂ ನಾಶವಾಗಿಲ್ಲಾ, ಮುದುರಿ ಕಾಣದಾಗಿವೆಯಷ್ಟೆ? ಈ ಅಳೆಯಲಸದಳವಾದ ಕಾಲಚಕ್ರದಲ್ಲಿ ದಿನ ರಾತ್ರಿಗಳೆಂತೋ ಅಂತೆಯೇ ಈ ಬ್ರಹ್ಮಚಕ್ರದಲ್ಲೂ ಸ್ಥಿತಿ ಲಯಗಳು.

**ಅವ್ಯಕ್ತಾದ್ವ್ಯಕ್ತಯಃ ಸರ್ವಾಃ । ಪ್ರಭವಂತ್ಯಹರಾಗಮೇ ।**
**ರಾತ್ರ್ಯಾಗಮೇ ಪ್ರಲೀಯಂತೇ । ತತ್ರೈವಾವ್ಯಕ್ತಸಂಜ್ಞಕೇ ॥೧೮॥**

ಅವ್ಯಕ್ತವಾದ ದೆಸೆಯಿಂದ ಸರ್ವವೂ ವ್ಯಕ್ತವಾಗಿ ದಿನ ಹುಟ್ಟುತ್ತಲೇ, ಉದ್ಭವಿಸುವುವು ಬ್ರಹ್ಮನ ದಿನದ ಆದಿಯಲ್ಲಿ ಆ ಬ್ರಹ್ಮನ ರಾತ್ರಿ ಬಂದೊಡನೆಯೇ ಎಲ್ಲವೂ ಅದೇ ಅವ್ಯಕ್ತದಲ್ಲಿ ಲೀನವಾಗುವುವು ಅವ್ಯಕ್ತವು ವ್ಯಕ್ತಿರೂಪದಲ್ಲಿ ಸ್ಥೂಲ ಪ್ರಪಂಚವಾಗುವುದು. ಇದೇ ಸ್ಥೂಲ ವ್ಯಕ್ತಿಗಳು ಪುನಃ ಅವ್ಯಕ್ತ ಸ್ಥಿತಿಯಲ್ಲಿ ಸೂಕ್ಷ್ಮವಾಗುವುವು. ಇವೇ ಬ್ರಹ್ಮನ ಹಗಲು ರಾತ್ರಿಗಳು.

ಈ ಅಳೆಯಲಾರದ ಕೊನೆ ಮೊದಲಿಲ್ಲದ ಕಾಲವನ್ನು ಅಲ್ಪ ಪರಿಮಾಣದಲ್ಲಿ, ಸೂರ್ಯೋದಯಾಸ್ತಮಗಳಿಂದ ಮಾನವನ ಹಗಲು ರಾತ್ರಿಗಳೆಂದು ಒಂದು ಅಳತೆ ಪ್ರಮಾಣವನ್ನು ಮಾಡಿಕೊಂಡಿರುವಂತೆಯೇ, ಈ ಸೃಷ್ಟಿ ಲಯಗಳನ್ನೂ ಬ್ರಹ್ಮನ ಹಗಲು ರಾತ್ರಿಗಳೆಂದು ಒಂದು ಚತುರ್ಯುಗ ಸಹಸ್ರಗಳ ಅಳತೆ ಕೋಲಿನಲ್ಲಿ ಒಂದು ಪ್ರಮಾಣವನ್ನು ಕಲ್ಪನೆಮಾಡಿಕೊಂಡಿದ್ದಾಯಿತು. ಅವ್ಯಕ್ತವು ವ್ಯಕ್ತವಾಗುವುದೇ ಹಗಲು, ವ್ಯಕ್ತವು ಅವ್ಯಕ್ತವಾಗುವುದೇ ರಾತ್ರಿ. ಇದು ಬ್ರಹ್ಮನ ಹಗಲು ರಾತ್ರಿಗಳಲ್ಲಿ ಸೃಷ್ಟಿ ಲಯಗಳು. ಆ ಬ್ರಹ್ಮ ಕೂಡಾ ಕೊನೆಕಾಣಲು ಸಿದ್ಧನಿರಬೇಕು. ಆ ಬ್ರಹ್ಮ ವ್ಯಾಪಾರವೆಲ್ಲಾ ಈ ಅಪಾರ, ಅವಿಚ್ಛಿನ್ನ, ಕೊನೆ

ಮೊದಲಿಲ್ಲದ ಕಾಲದಲ್ಲಿ ಕ್ಷಣಿಕ ವ್ಯಾಪಾರವೇ. ಅಳತೆಗೆ ಸಿಗದ ಈ "ಕಾಲ"ದಂತೆ "ಆಕಾಶ"ವೂ ಒಂದು, ಆಕಾಶವೆನ್ನುವುದಕ್ಕಿಂತ "ಅವಕಾಶ" (Space)ವೆಂದರೆ ಒಪ್ಪುತ್ತದೆ. ಈ ಅವಕಾಶಕ್ಕೆ ಆದ್ಯಂತ ವಿಲ್ಲಾ ದಿಕ್ಕುದಿವಾಣವಿಲ್ಲಾ. ದಶದಿಕ್ಕುಗಳಲ್ಲೂ ಎಲ್ಲೆ ಇಲ್ಲಾ. ಇದರಲ್ಲೇ ಬ್ರಹ್ಮಾಂಡ ಪಿಂಡಾಂಡಗಳೆಲ್ಲದರ ಆಟ. ಇದು ಮೀರಿ ಒಂದೂ ಇಲ್ಲಾ. ಇದರಂತೆ ಪರಮಾತ್ಮ ಶಕ್ತಿ, ಅವ್ಯಕ್ತ. ಒಂದು ರೂಪದಲ್ಲಲ್ಲದೆ ನಾನಾ ರೂಪದಲ್ಲಿ ಪ್ರವಹಿಸುತ್ತೆ. ಅನಂತ, ಗ್ರಹಿಸಲಸದಳ. ಒಂದು ರೂಪ ಇನ್ನೊಂದಾಗುತ್ತೆ. (Transformation of Energy) ಈ ಕಾಲ, ಅವಕಾಶ, ಶಕ್ತಿಯಲ್ಲೇ ಎಲ್ಲಾ ಅಡಗಿದೆ. ಈ ಅವ್ಯಕ್ತವಾದಾಗ ಸರ್ವ ಸಂಗ್ರಹಿಯನ್ನು ವ್ಯಕ್ತವಾಗಿ ತಿಳಿಯಲು ಬ್ರಹ್ಮನ ಹಗಲು, ಸ್ಥೂಲ ಸೃಷ್ಟಿವೇದ್ಯವಾಗಿದೆ.

**ಭೂತಗ್ರಾಮಃ ಸ ಏವಾಯಂ । ಭೂತ್ವಾಭೂತ್ವಾಪ್ರಲೀಯತೇ ।**
**ರಾತ್ರ್ಯಾಗಮೇಽವಶಃ ಪಾರ್ಥ । ಪ್ರಭವತ್ಯಹರಾಗಮೇ ॥೧೯॥**

ಅದ್ವಿತೀಯವಾದ ಪರಬ್ರಹ್ಮವೊಂದೇ. ಬೇರೆ ಇಲ್ಲಾ ಎನ್ನುವುದೇ ನಮ್ಮ ಸನಾತನ ಧರ್ಮದ ತತ್ವ. ಅದೇ ಸತ್ಯ ಅದೇ ಎಲ್ಲದರ ಸತ್ವ. ವಸ್ತು ಒಂದೇ ಆದಮೇಲೆ ಅದರಿಂದ ವ್ಯಕ್ತವಾದ ಪ್ರಾಣಿಸಮುದಾಯವೂ ಪುನಃ ಪುನಃ ಕಾಣಿಸಿಕೊಂಡು ಮಾಯವಾಗುತ್ತಿರುವಾಗ ಒಂದೇ ಅಲ್ಲವೇ? ಈ ಒಂದೇ ಪ್ರಾಣಿ ಸಮುದಾಯವೇ ಪ್ರಳಯ ಕಾಲದಲ್ಲಿ ಲೀನಾವಸ್ಥೆ ಹೊಂದಿ ಅವ್ಯಕ್ತವಾಗುತ್ತನೆ. ಸೃಷ್ಟಿ ಕಾಲದಲ್ಲಿ ಉತ್ಪನ್ನ ವಾಗಿ ಪುನಃ ಬ್ರಹ್ಮನ ಹಗಲಿನಲ್ಲಿ ಹುಟ್ಟುತ್ತವೆ.

**ಪರಸ್ತಸ್ಮಾತ್ತು ಭಾವೋಽನ್ಯೋಽ-ವ್ಯಕ್ತೋಽವ್ಯಕ್ತಾತ್ಸನಾತನಂ**
**ಯಃ ಸ ಸರ್ವೇಷು ಭೂತೇಷು । ನಶ್ಯತ್ಸು ನ ವಿನಶ್ಯತಿ ॥೨೦॥**

ಈ ಸಮಸ್ತ ಭೂತಗಳೂ ನಾಶವಾದರೂ ಯಾವನು ನಾಶವಾಗದೆ ಇರುವನೋ ಆ ಅವ್ಯಕ್ತ, ವ್ಯಕ್ತಭಾವಗಳಿಗಿಂತ ಅನ್ಯನಾಗಿ (ಸ್ಥೂಲ ಸೂಕ್ಷ್ಮಕ್ಕಿಂತ ಭಿನ್ನನಾಗಿ,) ಸನಾತನನಾಗಿ (ಪೂರ್ವ) ಅದರಿಂದಲೇ

ಶ್ರೇಷ್ಟನಾಗಿ (ಪರಂ) ಇರುವನು. ಈ ಚಕ್ರಕ್ಕೆ ಸಿಕ್ಕದಿರುವುದೇ ಅವನ ಶ್ರೇಷ್ಟತ್ವ (ಪರಾತ್ಪರ) ಇದಕ್ಕೆ ಸಿಗದಿರುವುದರಿಂದಲೇ ಅದು ಸದ್ವಸ್ತು. ಸಚ್ಚಿದಾನಂದ ವಿಶೇಷಣಗಳಲ್ಲಿ, ಅದು ಸತ್ ಎನ್ನುವುದಕ್ಕೆ ಇದೇ ಅರ್ಥ. ವ್ಯಕ್ತಾವ್ಯಕ್ತಭಾವಗಳಿಗಿಂತ ಬೇರೆಯಾಗಿ ಸಮಸ್ತ ವಸ್ತುಗಳೂ ಲಯವಾದರೂ, ಸ್ಥಿರವಾಗಿ ಯಾವಾಗಲೂ ಇರುವ ಗುಣದಿಂದಲೇ "ಸತ್" ಎಂದು ಗೌರವಿಸುವುದು.

**ಅವ್ಯಕ್ತೋಽಕ್ಷರ ಇತ್ಯುಕ್ತ-ಸ್ತಮಾಹುಃ ಪರಮಾಂ ಗತಿಮ್ ।**
**ಯಂ ಪ್ರಾಪ್ಯ ನ ನಿವರ್ತಂತೇ । ತದ್ಧಾಮ ಪರಮಂ ಮಮ ॥೨೧॥**

ಅವ್ಯಕ್ತನಾಗಿರುವ, ಅಕ್ಷರವಾಗಿರುವ ಇದನ್ನೇ "ಪರಮಾಗತಿ" ಎಂದು ಜ್ಞಾನಿಗಳು ಹೇಳುವರು. ಯಾವ ಈ ಸ್ಥಾನವನ್ನು ಹೊಂದಿದರೆ ಪುನರಾವೃತ್ತಿ ಇಲ್ಲವೇ ಇಲ್ಲವೋ ಆ ಪರಂಧಾಮ (ಸ್ಥಾನ, ಮನೆ)ವು ನನ್ನದು. ಸಂಸಾರದಲ್ಲಿ ಬೇಜಾರಾದವರು ತಾವು ಸಂಸಾರಬಿಟ್ಟು ಹೊರಟುಹೋಗುತ್ತೇವೆ, ಬರುವುದೇ ಇಲ್ಲಾ ಎಂದು ಹೆದರಿಸುವುದುಂಟು. ಮನೆಬಿಟ್ಟು ಕೆಲವು ಗಂಟೆ ಹೋದರೂ ಊಟದ ಸಮಯಕ್ಕೆ ವಾಪಸು, ಹಾಜರು. ಇಲ್ಲವಾದರೆ ಎಲ್ಲರೂ ಊಟಮಾಡಿ ಎಲ್ಲಿ ತಪ್ಪಲೆ ಬೋರಲು ಹಾಕಿಬಿಡುತ್ತಾರೋ ಎಂಬ ಹೆದರಿಕೆಯಿಂದ ವಾಪಸು, ರೆಡಿ ಊಟದ ಟೈಂಗೆ. ಯುದ್ಧಕಾಲದಲ್ಲೂ ಕೆಲವರು ತಾವು ಯುದ್ಧಕ್ಕೆ ಸೇರಿ ಹೋಗಿಬಿಡುವುದಾಗಿಯೂ, ಪುನಃ ಮನೆಗೇ ಬರುವುದಿಲ್ಲವೆಂದೂ ಹೆದರಿಸಿ ಹೋಗುತ್ತಿದ್ದವರು, ಉದ್ದಕ್ಕೂ ಅಷ್ಟು ದೂರ ಹೋಗಿ ವಾಪಸು ಬರುತ್ತಿದ್ದರು. ಯುದ್ಧಕ್ಕೆಂದು ಯುದ್ಧಭೂಮಿಗೆ ಸೇರಿದರೂ, ಆ ರಣ ಭಯದಿಂದ, ಹೇಳದೆ ಕೇಳದೆ ಓಡಿಬಂದು ಕೆಲಕಾಲಾನಂತರ ಮನೆ ಸೇರುತ್ತಿದ್ದರು. ಅಂತಲ್ಲಾ ಇದು (Going off never to return) ಹಿಂದಕ್ಕೆ ನೋಡದೇ, ಬರುವ ಯೋಚನೆಯೇ ಇಲ್ಲದಂತೆ, ಉಟ್ಟ ಬಟ್ಟೆಯಲ್ಲೇ ಹೊರಟೇ ಹೋಗುವುದು—ಎಂದು ಹಟಾತ್ ವೈರಾಗ್ಯದ ವಿಷಯದಲ್ಲಿ ಶ್ರೀ ರಾಮಕೃಷ್ಣರು ಹೇಳುವಂತೆ, ಪುನಃ ಬರುವ ಯೋಚನೆಯೇ ಇಲ್ಲಾ. ಆ ಪರಂಧಾಮವನ್ನು ಸೇರಿದ ಬಳಿಕ ಈ ಪುನರ್ಜನ್ಮಕ್ಕೆ ಹಿಂತಿರುಗುವಿಕೆಯೇ

ಇಲ್ಲಾ. ಈ ಜನನ ಮರಣ ಚಕ್ರದಿಂದ ತಪ್ಪಿಸಿಕೊಂಡಂತಾಯಿತು. ಅದರಧೀನದಲ್ಲಿಲ್ಲಾ.

**ಪುರುಷಃ ಸ ಪರಃ ಪಾರ್ಥ । ಭಕ್ತ್ಯಾ ಲಭ್ಯಸ್ತ್ವನನ್ಯಯಾ ।**
**ಯಸ್ಯಾಂತಸ್ಥಾನಿ ಭೂತಾನಿ । ಯೇನ ಸರ್ವಮಿದಂ ತತಮ್ ॥೨೨॥**

ಅಂಥಾ ಪರಮಪುರುಷನನ್ನು ಹೇಗೆ ಪಡೆಯುವುದೆಂದರೆ-ಅನನ್ಯಭಕ್ತಿಯಿಂದ. ಯಾವನಲ್ಲಿ ಭೂತಗಳೆಲ್ಲವೂ ಅಂತರ್ಭೂತವಾಗಿವೆಯೋ, ಯಾವನಿಂದ ಸರ್ವವೂ ವ್ಯಾಪಿಸಲ್ಪಟ್ಟಿದೆಯೋ ಅಂಥಾ ಪರಮಪುರುಷ. "ಅನನ್ಯ" ಎನ್ನುವುದನ್ನೂ "ಭಕ್ತಿ" ಎನ್ನುವುದನ್ನೂ ಬಿಡಲೇ ಒಲ್ಲ ಸ್ವಾಮಿ. ಕಿಂಚಿತ್ ಒಂದರ ಗಳಿಗೆ ಪೂಜೆ ನಾಲದು ಸ್ವಾಮಿಗೆ. ಕಾಟಾಚಾರಕ್ಕೂ ಆಗದು. ಭಕ್ತಿಯಿಂದ ಅವನನ್ನು ಅನನ್ಯವಾಗಿ ಚಿಂತಿಸಬೇಕು. ಪಡೆಯಬೇಕಾದರೆ ಇದೇ ಉಪಾಯ. ಸ್ವಾಮಿಯ ಸ್ವರೂಪವನ್ನು ತಾನೇ ಬಿಡಿಸಿ ಹೇಳಿದ್ದಾನೆ. ಎಲ್ಲ ಭೂತಗಳ ಅಂತರಾತ್ಮ, ಸರ್ವಸ್ವವೂ ಆತನೇ, ಸರ್ವವ್ಯಾಪಿ ಪರಮಾತ್ಮ. ಆ ಪರಮಪುರುಷನನ್ನು ಯಾವ ರೀತಿ ಎಲ್ಲಿ ಕಾಣಬೇಕೆಂಬುದು ತಿಳಿಯಲೇ ಈ ವಿಶೇಷಣಗಳು. ಸರ್ವದರಲ್ಲೂ ಅವ್ಯಕ್ತನಾಗಿ ಅಂತರಾತ್ಮನಾಗಿರುವ ಸ್ವಾಮಿಯನ್ನೇ ಸ್ಮರಣೆ ಮಾಡಿ, ಅನನ್ಯಭಕ್ತಿಯಿಂದ ಭಜನೆ ಮಾಡಿದರೆ, ಅವನಲ್ಲೇ ಮಿಲಿತವಾಗಿ ಬಿಡುತ್ತಾನೆ ಆ ಭಕ್ತ. ಭಕ್ತಿ ಭಕ್ತ ಎಂಬ ಪದಗಳನ್ನು ಉಪಯೋಗಿಸಲು ಷುರುಮಾಡಿದ್ದಾನೆ. ಏಕೆಂದರೆ ಎಲ್ಲಾ ಸಾಧಕರಿಗೂ ಇದು ನಿರುಪದ್ರವ. ಜ್ಞಾನಿಯಾಗಬೇಕಾದಷ್ಟು ಸಾಹಸ ಬೇಕಿಲ್ಲಾ.

**ಯತ್ರ ಕಾಲೇ ತ್ವನಾವೃತ್ತಿ-ಮಾವೃತ್ತಿಂ ಚೈವ ಯೋಗಿನಃ ।**
**ಪ್ರಯಾತಾ ಯಾಂತಿ ತಂ ಕಾಲಂ । ವಕ್ಷ್ಯಾಮಿ ಭರತರ್ಷಭ ॥೨೩॥**

**ಅಗ್ನಿರ್ಜ್ಯೋತಿರಃ ಶುಕ್ಲಃ । ಷಣ್ಮಾಸಾ ಉತ್ತರಾಯಣಮ್ ।**
**ತತ್ರ ಪ್ರಯಾತಾ ಗಚ್ಛಂತಿ । ಬ್ರಹ್ಮ ಬ್ರಹ್ಮವಿದೋ ಜನಾಃ ॥೨೪॥**

**ಧೂಮೋ ರಾತ್ರಿಸ್ತಥಾ ಕೃಷ್ಣಃ । ಷಣ್ಮಾಸಾ ದಕ್ಷಿಣಾಯನಮ್ ।**
**ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥೨೫॥**

**ಶುಕ್ಲ ಕೃಷ್ಣೇ ಗತೀ ಹ್ಯೇತೇ । ಜಗತಃ ಶಾಶ್ವತೇ ಮತೇ ।**
**ಏಕಯಾ ಯಾತ್ಯನಾವೃತ್ತಿ-ಮನ್ಯಯಾಽಽವರ್ತತೇ ಪುನಃ ॥೨೬॥**

ಯೋಗಿಗಳು ಯಾವ ಕಾಲದಲ್ಲಿ ಪ್ರಯಾಣಮಾಡಿದರೆ, ಅನಾವೃತ್ತಿ, ಪುನರಾವೃತ್ತಿ ಹೊಂದುವರೋ ಆ ಕಾಲಗಳನ್ನು ಹೇಳುವೆನು. ಬ್ರಹ್ಮವನ್ನು ತಿಳಿದ ಜನಗಳು, ಅಗ್ನಿ, ಜ್ಯೋತಿ, ದಿನ (ಹಗಲು), ಶುಕ್ಲಪಕ್ಷ, ಉತ್ತರಾಯಣದ ಆರು ಮಾಸಗಳು, ಇವುಗಳಲ್ಲಿ (ಇವುಗಳ ಮೂಲಕ) ಪ್ರಯಾಣ ಮಾಡಿದರೆ ಬ್ರಹ್ಮನಲ್ಲಿ ಹೋಗುವರು. ಧೂಮ, ರಾತ್ರಿ, ಕೃಷ್ಣಪಕ್ಷ, ದಕ್ಷಿಣಾಯನದ ಆರು ಮಾಸಗಳಲ್ಲಿ, ಅವುಗಳ ಮೂಲಕ ಪ್ರಯಾಣ ಮಾಡಿದವನು ಚಂದ್ರಲೋಕವನ್ನು ಸೇರಿ ಪುನರಾವೃತ್ತಿ (ಪುನರ್ಜನ್ಮ) ಪಡೆಯುವನು. ಜಗತ್ತಿನಲ್ಲಿ ಶಾಶ್ವತವಾದ ಶುಕ್ಲ ಕೃಷ್ಣವೆಂಬ ಎರಡು ಅಭಿಮುಖ ಮಾರ್ಗಗಳು ಸಿದ್ಧವಾಗಿವೆ. ಒಂದನೇ ಶುಕ್ಲಮಾರ್ಗದಿಂದ ಪ್ರಯಾಣಮಾಡಿದವರು ಅನಾವೃತ್ತಿಯನ್ನು ಹೊಂದುವರು (ಹಿಂತಿರುಗರು) ಎರಡನೇ ಕೃಷ್ಣಮಾರ್ಗದಿಂದ ಪ್ರಯಾಣ ಮಾಡಿದವರು ಪುನರ್ಜನ್ಮವನ್ನು ಪಡೆವರು (ಹಿಂತಿರುಗುವರು.) ಶುಕ್ಲ ಮಾರ್ಗವೆಂದರೆ ಬೆಳಕಿನ ಮಾರ್ಗ, ತಿಳುವಳಿಕೆಯಿಂದ ಸರಿಯಾದ ದಾರಿ ತಿಳಿದು, ಅದರಲ್ಲಿ ಪ್ರಯಾಣಮಾಡಿದರೆ, (ನಿತ್ಯಜೀವನವನ್ನು ಸಾಗಿಸಿದ್ದರೆ) ಸೇರಬೇಕಾದ ಪರಂಧಾಮವನ್ನು ಸೇರಿ ವಾಪಸು ಬರುವುದಿಲ್ಲ. ಕೃಷ್ಣಮಾರ್ಗ, ಕತ್ತಲುಮಾರ್ಗದಲ್ಲಿ ಅಜ್ಞಾನದಿಂದ ದಾರಿ ತಪ್ಪಿ ಅದರಲ್ಲಿ ಪ್ರಯಾಣ ಸಾಗಿಸಿದರೆ, ಪರಂಧಾಮಕ್ಕೆ ದಾರಿಯೇ ತಪ್ಪಿ, ಅದನ್ನು ಸೇರಲೆಂತು ಸಾಧ್ಯ. ಅದು ಸಿಗದೆ, ಸೇರಲಾಗದೆ, ಸರಿಯಾದ ಮಾರ್ಗವನ್ನು ಹುಡುಕಲು ಪುನಃ ವಾಪಸು ಬರುವರು.

ರಾತ್ರಿ ಊಟಮಾಡಿ ನೆಂಟರೂರಿಗೆ ಹೋಗಬೇಕೆಂದು ಎತ್ತಿನ ಗಾಡಿಯಲ್ಲಿ ಇಬ್ಬರು ಪ್ರಯಾಣ ಹೊರಟರಂತೆ. ರಸ್ತೆ ಸಾಗುತ್ತಾ, ತಂಗಾಳಿ ಬೀಸಿ ಗಾಡಿಯಲ್ಲಿದ್ದಿಬ್ಬರಿಗೂ ನಿದ್ರೆ ಬಂದುಬಿಟ್ಟಿತು. ಬೆಳಗಿನ ಜಾವ ನಸುಬೆಳಕಿನಲ್ಲಿ ಎಚ್ಚರವಾದಂತಿರಲು, ಕಣ್ಣುಹೊಸೆದು, ಗಾಡಿ ನಿಂತಂತಿರುವುದು ಭಾಸವಾಗಿ ನೆಂಟರ ಮನೆ ಮುಂದೆ ಬಂದು ನಿಂತಿರ

ಬಹುದೆಂದು ಇಳಿದು ನೋಡಿದರು. ತಾವು ಹೊರಟ ತಮ್ಮ ಗಾಡೀ ಖಾನೆಯ ಮುಂದೇ ವಾಪಸು ಬಂದು ಎತ್ತುಗಳು ಹಾಯಾಗಿ ಹುಲ್ಲು ಮೇಯುತ್ತಾ ನಿಂತುಬಿಟ್ಟಿತ್ತು. ಹೀಗೆ ಕೆಲವರ ಪ್ರಯಾಣ. ಪುನಃ ಹೊರಟಲ್ಲಿಗೇ ಬರುವುದು. ದೀರ್ಘ ನಿದ್ರೆಮಾಡಿ ಎಚ್ಚತ್ತಮೇಲೆ.

**ನೈತೇ ಸೃತೀ ಪಾರ್ಥ ಜಾನನ್ । ಯೋಗೀ ಮುಹ್ಯತಿ ಕಶ್ಚನ ।**
**ತಸ್ಮಾತ್ಸರ್ವೇಷು ಕಾಲೇಷು । ಯೋಗಯುಕ್ತೋ ಭವಾರ್ಜುನ ॥೨೭॥**

ಈ ಎರಡು ಪಥಗಳನ್ನೂ ತಿಳಿದವನು, ಎಲೈ ಪಾರ್ಥನೇ ಮೋಹ ವನ್ನು ಯಾವಾಗಲೂ ಹೊಂದುವುದಿಲ್ಲಾ. ಆದುದರಿಂದ "ಸರ್ವೇಷು ಕಾಲೇಷು" ಯೋಗಯುಕ್ತನಾಗು ಅರ್ಜುನಾ. (ಛಾಂದೋಗ್ಯದ ೫ನೇ ಅಧ್ಯಾಯ ೧೦ನೇ ಖಂಡದಲ್ಲಿ) ಈ ಮಾರ್ಗಗಳನ್ನು ವಿಶದೀಕರಿಸಿದೆ. ಇದನ್ನೇ ದೇವಯಾನ, ಪಿತೃಯಾನವೆಂದೂ ಹೇಳುವರು. "ಕ್ಷುದ್ರಾಣ್ಯ ಸಕೃದಾವರ್ತಿ, ನಿಭೂತಾನಿ ಭವಂತಿ, ಜಾಯಸ್ವಮ್ರಿಯಸ್ವೇತ್ಯೈ ತ್ರೃತೀ ಯಂಗ್ ಸ್ಥಾನಂ" ಎಂದು ಈ ಎರಡು ಮಾರ್ಗಕ್ಕೂ ಸೇರದ ಕ್ಷುದ್ರ ಜಂತುಗಳು ಹುಟ್ಟುತ್ತಾ ಸಾಯುತ್ತಾ ಹೋಗಿ ಬರುತ್ತಾ ಇರುವ ಭೂತಗಳದು, ಮೂರನೆಯ ಸ್ಥಾನವೆಂದೂ ಮುಂದೆ ೮ನೇ ಶ್ಲೋಕದಲ್ಲಿ ಹೇಳಿದೆ.

ಇದನ್ನು ತಿಳಿದವರೂ ಮತ್ತು ಅರಣ್ಯದಲ್ಲಿ 'ಶ್ರದ್ಧಾ' 'ತಪ'ದಿಂದ ಉಪಾಸಿಸುವವರೂ, ಜ್ಯೋತಿಯಿಂದ, ದಿನ (ಹಗಲು) ಕ್ಕೂ ದಿನದಿಂದ ಅರ್ಧಮಾಸ (ಶುಕ್ಲಪಕ್ಷ) ಕ್ಕೂ ಅರ್ಧಮಾಸದಿಂದ ಉತ್ತರಾಯಣದ ಆರು ಮಾಸಗಳಿಗೂ, ಸಂವತ್ಸರಕ್ಕೂ, ಆದಿತ್ಯಕ್ಕೂ (ಸೂರ್ಯ), ಚಂದ್ರ ನಿಗೂ, ವಿದ್ಯುತ್ತಿಗೂ ಹೋಗುತ್ತಾರೆ. ಅಲ್ಲಿ ಅಮಾನವ ಪುರುಷನು ಬ್ರಹ್ಮನಲ್ಲಿಗೆ ಕರೆದೊಯ್ಯುತ್ತಾನೆ. "ದೇವಯಾನಃ ಪಂಥಾ ಇತಿ"— ಉತ್ತರಾಯಣ ಶುಕ್ಲ ಜ್ಯೋತಿರ್ಮಾರ್ಗ. ಸ್ವಗಮನದಲ್ಲೇ ಇಷ್ಟಾ ಪೂರ್ತಾ ದಾನಾದಿಗಳಿಂದ ಉಪಾಸಿಸುವರು ಧೂಮದಿಂದ, ರಾತ್ರಿ, ಕೃಷ್ಣ ಪಕ್ಷ, ದಕ್ಷಿಣಾಯನದ ಆರು ಮಾಸಗಳಿಗೆ ಹೋಗಿ, ಸಂವತ್ಸರ ತಲುಪದೆ ಪಿತೃಲೋಕದಿಂದ ಆಕಾಶಕ್ಕೂ ಚಂದ್ರಕ್ಕೂ ತಲಪುತ್ತಾರೆ. ದೇವರು

ಬಕ್ಷಿಸುತ್ತಾರೆ. ಅಲ್ಲಿ ತಮ್ಮ ಪುಣ್ಯ ಫಲ ಅವಿಶೇಷವೆಲ್ಲಾ ತೀರಿದಮೇಲೆ ಅವರು ಆಕಾಶ, ವಾಯು, ಧೂಮ, ಮಂಜು, ಮೇಘ, ಮಳೆಯ ಮೂಲಕ ಹಿಂತಿರುಗಿ ಯಾವುದಾದರೂ ಧ್ಯಾನ ಓಷಧಿ, ವನಸ್ಪತಿಯಾಗಿ ಉದ್ಭವಿಸುತ್ತಾರೆ. ಇವನ್ನು ಯಾರಾದರೂ ತಿಂದು ಅವರರೇತಸ್ಸಿಂದಾದ ಪುನರ್ಜನ್ಮ ಹೊಂದುತ್ತಾರೆ, ಅವರವರ ಪೂರ್ವಕರ್ಮಾನುಸಾರ. ಆದ್ದರಿಂದ ಕರ್ಮದ ವಿಷಯದಲ್ಲಿ ಬಹಳ ಎಚ್ಚರಿಕೆಯಿಂದಿರಬೇಕೆಂದು, ಕೆಟ್ಟ ಕರ್ಮಗಳನ್ನು ಮಾಡುವವನಿಗಿಂತ ಅವನ ಸಹವಾಸದಲ್ಲಿ ಚರಿಸು ವವನೂ ಪತಿತನಾಗುವನೆಂದೂ ಎಚ್ಚರಿಸಿದೆ. "ಸ್ತೇನೋ ಹಿರಣ್ಯಸ್ಯ, ಸುರಾಂಪಿಬಗ್ ಗುರೋಸ್ತಲ್ಪ ಮಾವಸನ್, ಬ್ರಹ್ಮಹಾಚ ಏತೇ ಪತಿತಂ ಚತ್ವಾರ ಪಂಚಮಶ್ಚಾಚರಗ್ ಸ್ತೈರಿತಿ" ಬಡಕ (ಕಳ್ಳ) ಕುಡುಕಹಡಕ, ಕಡುಕ (ಕೊಲೆಪಾತಕ) ಈ ನಾಲ್ವರು ಪತಿತರು (ದಾರಿತಪ್ಪಿದವರು) ಇವರ ಸಹವಾಸದಲ್ಲಿ ಇವರೊಡನೆ ಚರಿಸುವನೇ ಐದನೆಯವನು ಪತಿತ. ಇದರಿಂದ ಸಹವಾಸವು ಪ್ರತಿಯೊಬ್ಬನ ಪ್ರಗತಿಗೆ ಎಷ್ಟು ಮುಖ್ಯವೆಂದು ತತ್ವಜ್ಞರು ಒತ್ತಿ ಹೇಳಿದ್ದಾರೆ. ಇದರಿಂದಲೇ ಇಹಗತಿಯಲ್ಲದೆ ಪರ ಗತಿಯೂ ಉಂಟು. ಇದಕ್ಕೇ ಶಂಕರರು "ದುರ್ಲಭಂತ್ರಯಮೇ ವೈತದ್ದೇವಾನುಗ್ರಹ ಹೇತುಕಂ। ಮನುಷ್ಯತ್ವ, ಮುಮುಕ್ಷುತ್ವಂ, ಮಹಾಪುರುಷ ಸಂಶ್ರಯಃ॥" ದೇವರ ಅನುಗ್ರಹ ಕಾರಣವಿಲ್ಲದೆ ಈ ಮೂರೂ ದುರ್ಲಭವು; ಮನುಷ್ಯತ್ವ, ಮುಮುಕ್ಷುತ್ವ, ಸತ್ಪುರುಷರ ಆಶ್ರಯ, ಸಹವಾಸ, ಎಂದು. ಮನುಷ್ಯತ್ವವೂ, ಬಂಧನದಿಂದ ಬಿಡುಗಡೆ ಹೊಂದಬೇಕೆಂಬ ಆಸೆ ಮುಮುಕ್ಷುತ್ವ ಎರಡು ದುರ್ಲಭವಾದುವುಗಳು ಲಭಿಸಿದರೂ, ಮಹಾಪುರುಷರ ಆಶ್ರಯ, (ದುಷ್ಟರ ಸಹವಾಸ ತಪ್ಪಿ, ಸತ್ಸಹವಾಸ) ಸಿಗಬೇಕಾದರೆ, ದೇವಾನುಗ್ರಹ ಕಾರಣದಿಂದಲೇ ದೊರಕ ಬೇಕೆಂದು ವಿವೇಕ ಚೂಡಮಣಿ ೩ನೇ ಶ್ಲೋಕದಲ್ಲಿ ಸಾರಿದ್ದಾರೆ. ಮಹಾ ಪುರುಷರಾಶ್ರಯ ಸಿಕ್ಕಿಬಿಟ್ಟರೆ ಅವರು ದುಸ್ಸಹವಾಸದಿಂದ ಕಾಪಾಡಿ, ತಮ್ಮ ರಕ್ಷಣೆಯಲ್ಲಿ ಸಲಹುತ್ತಾರೆ.

"ಸರ್ವ ಸಮತ್ವಂ, ಸರ್ವ ಹಿತತ್ವಂ, ಸತ್ಸಂಗತ್ವಂ ದೇಹಿವಿಭೋಮೇ" ಎಂದು ಸರ್ವಸಮ ಸರ್ವರ ಹಿತದ ಜೊತೆಗೆ ಮೇಲಾಗಿ, ಅಧಿಕವಾಗಿ,

ಮುಖ್ಯವಾಗಿ ಸಂತ್ಸಂಗವನ್ನು ದಯಪಾಲಿಸೆಂದು ದೇವ ಪ್ರಾರ್ಥನೆ ಮಾಡಿದ್ದಾರೆ. ಬೆಳಕಿನ ಮಾರ್ಗ, ತಿಳುವಳಿಕೆಯ ಪ್ರಭೆ ತೋರಬೇಕಾದರೇ ಅವರು. ಕೌಷೀತಕೀ ಬ್ರಾಹ್ಮಣೋಪನಿಷತ್ತಿನಲ್ಲೂ ಇದೇ ರೀತಿ ಪುನರ್ಜನ್ಮದ ವಿಷಯ ಪ್ರಸ್ತಾಪವಿದೆ, ಎಲ್ಲರೂ ಚಂದ್ರನವರೆಗೂ ತಲುಪುವರು. ನಂತರ ಅವರ ಕರ್ಮ ವಿದ್ಯ ಪ್ರಕಾರ (ತೇಷು ಸ್ಥಾನೇಷು ಪ್ರತ್ಯಾಜಾಯಿತೇ ಯಥಾ ಕರ್ಮ, ಯಥಾ ವಿದ್ಯಂ) ಅವರವರ ಸ್ಥಾನ ಪಡೆಯುತ್ತಾರೆ. ಚಂದ್ರನೇ ಮುಂದಿನ ದಾರಿಗೆ ಬಾಗಿಲು ತೆಗೆಯುವವ. ಅವನಿಗೆ ಒಪ್ಪದಿದ್ದರೆ, ಮಳೆಯ ಮೂಲಕ ಕೆಳಗಿಳಿಯುವರು. ಅವರವರ ಪೂರ್ವಕರ್ಮ ವಿದ್ಯ ಪ್ರಕಾರ ಪಶುಮಾನುಷ ಜನ್ಮವೆತ್ತುವರು. ಚಂದ್ರನಿಂದ ತೇರ್ಗಡೆ ಹೊಂದಿದವರು "ದೇವಯಾನ ಪಂಥಾಃ" ಅಗ್ನಿ, ವಾಯು, ವರುಣ ಇಂದ್ರಲೋಕಗಳಿಂದ ಬ್ರಹ್ಮಲೋಕ ತಲುಪುವರು. "ಸಂವತ್ಸರಸ್ಯ ತೇಜೋ ಭೂತಸ್ಯ ಭೂತಸ್ಯಾತ್ಮಾ ಭೂತಸ್ಯ ತ್ವಮಾತ್ಮಾಸಿಯಸ್ತ್ವಮಸಿ, ಸೊ ಅಹ ಮಸ್ಮೀತಿ, ತಮಾಹ ಕೋಽಹಮಸ್ಮೀತಿ, ಸತ್ಯಮಿತಿ" ಎಂದು ಆತ್ಮನೂ ಬ್ರಹ್ಮನೂ ಒಂದೇ ಎಂದೂ ಸರ್ವವ್ಯಾಪಿ ಎಂದೂ ಅದೇ ಸತ್ಯವೆಂದೂ ಬ್ರಹ್ಮಾತ್ಮೈಕ್ಯವನ್ನು ಹೇಳುವನು. ಪ್ರಶ್ನೋಪನಿಷತ್ತಿನಲ್ಲೂ (೩ನೇ ಪ್ರಶ್ನೆ) "ಯಥ್ಯೈಷಾ ಪುರುಷೆಚ್ಛಾಯೈತಸ್ಮಿನ್ನೆ ತದಾತತಂ, ಮನೋಕೃತೇನಾ ಯಾತ್ಯಸ್ಮಿಂಚ್ಛರೀರೇ" ಮನುಷ್ಯನಿಗೆ ಛಾಯೆಯು ಹೇಗೋ ಹಾಗೆ ಹಿಂದಿನ ಮನೋಕೃತಿಯಿಂದ ಪುನಃ ತಕ್ಕ ಶರೀರವನ್ನು ಆತ್ಮದಿಂದ ಹುಟ್ಟಿದ ಪ್ರಾಣವು ಹೊಂದುವನು ಎಂದು ಪುನರ್ಜನ್ಮದ ವಿಷಯ ಹೇಳಿದೆ. ಮುಂಡಕ (೧, ೨, ಶ್ಲೋ ೫, ೬) ದಲ್ಲಿ ಯಜ್ಞಯಾಗಾದಿಗಳನ್ನು ಮಾಡುವವರು, ಆ ಜ್ಯೋತಿಯಿಂದ, ಸೂರ್ಯರಶ್ಮಿಯಿಂದ "ದೇವಾನಾಂ ಪತಿರೇಕೋಧಿವಾಸಃ" ಆ ಅಧಿದೇವತಾಲೋಕಗಳಿಗೆ ಕರೆದೊಯ್ಯುವರು. "ಪುಣ್ಯಸ್ಸುಕೃತೋ ಬ್ರಹ್ಮಲೋಕಃ" ಆದರೆ "ಅದೃಢಾ ಯಜ್ಞ ರೂಪಾ" ಎಂದು ನೆಚ್ಚಲಾರದ ತೆಪ್ಪಗಳಿವು ಸರಿಯಾಗಿ ಇಹದಿಂದ ದಾಟಿಸಲು. ಆದ್ದರಿಂದ ತಪ, ಶ್ರದ್ಧೆಯಿಂದ ಶಾಂತರಾದವರು "ಸೂರ್ಯ ದ್ವಾರೇಣತೇ ವಿರಜಾಃ ಪ್ರಯಾಂತಿ ಯತ್ರಾಮೃತಸ್ಸಪುರುಷೋಹ್ಯವ್ಯ ಯಾತ್ಮಾ"—ಸೂರ್ಯದ್ವಾರ

ದಿಂದ ಅವೃತ ಪುರುಷರು ಅವ್ಯಯಾತ್ಮನಾಗಿರುವೆಡೆಗೆ ಪ್ರಯಾಣ ಮಾಡುತ್ತಾರೆ. ಕಠೋಪನಿಷತ್ತಿನಲ್ಲಿ (೩ವ ೭–೮ ಶ್ಲೋ) ಒಟ್ಟಿನಲ್ಲಿ ಸಾರಾಂಶ ಹೇಳಿಬಿಟ್ಟಿದ್ದಾರೆ. ವಿಜ್ಞಾನವಿಲ್ಲದೆ, ಅಮನಸ್ಕ, ಸದಾ ಅಶುಚಿಯಾಗಿರುವವರು ಆ ಪದವನ್ನು ಹೊಂದುವುದಿಲ್ಲಾ, ಪುನಃ ಪುನಃ ಸಂಸಾರಕ್ಕೆ ಬರುತ್ತಾರೆ. "ವಿಜ್ಞಾನ ಹೊಂದಿ ಸಮನಸ್ಕ, ಸದಾ ಶುಚಿಯಾಗಿರುವವನು ಪುನರ್ಜನ್ಮವಿಲ್ಲದ ಆ ತತ್ ಪದವನ್ನು ಹೊಂದುವನು. 'ಅಮನಸ್ಕ' 'ಸಮನಸ್ಕ' ಗಮನಿಸಿ. ಪರಮಾತ್ಮನಲ್ಲೇ ಮನಸುಳ್ಳವನು ಅವನನ್ನು ಸೇರುವನು. ಆದರಿಂದಲೇ ಈ ಮಾರ್ಗಗಳನ್ನೆಲ್ಲಾ ವಿವರಿಸಿದ ಸ್ವಾಮಿಯು ಅವುಗಳ ತೊಡರಿಗೆ ಸಿಗದೆ "ಸರ್ವೇಷು ಕಾಲೇಷು, ಯೋಗ ಯುಕ್ತೋ ಭವಾರ್ಜುನ" ಎಂದು ಅವನನ್ನು ಪಡೆದು ಅವನೊಡನೊಂದಾಗಿ ಸೇರಿ ಸರ್ವಕಾಲದಲ್ಲೂ ಇರು ಎಂದು ನಿರುಪದ್ರವಮಾರ್ಗ ಹೇಳಿಬಿಟ್ಟಿದ್ದಾನೆ.

**ವೇದೇಷು ಯಜ್ಞೇಷು ತಪಸ್ಸು ಚೈವ**
**ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್ ।**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ**
**ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್** ॥೨೮॥

ಏಕೆಂದರೆ, ವೇದಗಳಲ್ಲೂ, ಯಜ್ಞಗಳಲ್ಲೂ, ತಪಸ್ಸಿನಲ್ಲೂ, ದಾನಗಳಲ್ಲೂ, ಎಷ್ಟೆಷ್ಟು ಪುಣ್ಯ ಫಲವನ್ನು ಹೇಳಿದೆಯೋ ಅದನ್ನು ಅತಿಕ್ರಮಿಸಿ, ಯೋಗಿಯಾದವನು ಇದನ್ನೆಲ್ಲವನ್ನೂ ತಿಳಿದು, ಪರಂಸ್ಥಾನವನ್ನು ಹೊಂದುವನು. ಸಮುದ್ರ ಸ್ನಾನಮಾಡಿ ಬಿಟ್ಟರೆ ಸರ್ವ ನದಿಗಳ ಸ್ನಾನವನ್ನೂ ಮಾಡಿದಂತೆ. ಸರ್ವ ನದಿಗಳೂ ಸಮುದ್ರವನ್ನೇ ಸೇರುವುವು. ಹಾಗೆ ಅವನುಪಾಸನೆ ಮಾಡಿಬಿಟ್ಟರೆ, ವೇದಯಜ್ಞ, ತಪ, ದಾನ ಎಲ್ಲಾ ಉಪಾಸನೆ ಮಾಡಿದಕ್ಕಿಂತ ಹೆಚ್ಚಿನದಾಯಿತು. ಎಲ್ಲವೂ ಅವನನ್ನು ಸೇರುವವೇ. ಸರ್ವ ಪುಣ್ಯವೂ ಫಲವೂ ಅತಿಶಯವಾಗಿ ಬರುವುದು. ಸಮಸ್ತ ಜಗತ್ತನ್ನೂ ಪ್ರದಕ್ಷಿಣೆ ಮಾಡಿಕೊಂಡು ಬರಬೇಕೆಂದು ಪಾರ್ವತೀ ಪರಮೇಶ್ವರರು ಮಕ್ಕಳಾದ ಗಜಾನನ ಷಡಾನನಿಗೆ

ಹೇಳಿದರಂತೆ. ಯಾರು ಮುಂಚೆ ಬರುತ್ತಾರೋ ನೋಡೋಣವೆಂದಾಗ, ಪಕ್ಷಿ (ಮಯೂರ) ವಾಹನನಾದ ಷಣ್ಮುಖನು, ಇಲಿ ವಾಹನವಾಗುಳ್ಳ ವಿನಾಯಕನಿಗೆ ತನ್ನನ್ನು ಸೋಲಿಸುವುದೆಂತು ಸಾಧ್ಯವೆಂದು ತ್ವರಿತವಾಗಿ ವಾಹನ ಹತ್ತಿ ಜಗತ್ಪ್ರದಕ್ಷಿಣೆಗೆ ಹೊರಟನು. ಗಜಾನನನು ಕೈಮುಗಿದು ಮಾತಾಪಿತೃಗಳಾದ ಪಾರ್ವತೀ ಪರಮೇಶ್ವರರನ್ನು ಪ್ರದಕ್ಷಿಣೆ ಮಾಡಿ ನಮಸ್ಕರಿಸಿ, ಸರ್ವ ಜಗತ್ಪ್ರದಕ್ಷಿಣೆ ಮುಗಿಯಿತೆಂದು ನಿಂತನಂತೆ. ಭುಸು ಗುಟ್ಟುತ್ತಾ ಜಗತ್ಪ್ರದಕ್ಷಿಣೆ ಮಾಡಿ ಬಂದ ಷಡಾನನನ್ನು ನೋಡಿ ಮಾತಾ ಪಿತೃಗಳು ನಕ್ಕಿರಬೇಕು. ಸರ್ವವನ್ನೂ ಒಳಗೊಂಡ ಜಗದ್ರಕ್ಷಕ, ಆದಿ ಶಕ್ತಿಗಳನ್ನು ಪ್ರದಕ್ಷಿಣೆ ಮಾಡಿದ ಮೇಲೆ ಇನ್ನು ಬೇರೆ ಸರ್ವ ಜಗದ್ಪ್ರಕ್ಷಿಣೆ ಉಂಟೆ. ಈ ತತ್ವ ಸರ್ವಜ್ಞ ಗಜಾನನ ತಿಳಿದಿದ್ದ. ಅಂತೇ ಸ್ವಾಮಿ ಅನುಗ್ರಹದಿಂದ ಶಿಷ್ಯನಿಗೆ ಹೇಳುತ್ತಾನೆ–ಇಲ್ಲಸಲ್ಲದುದನ್ನು ಕಟ್ಟಿಕೊಂಡು ಪರದಾಡದೆ ಎಲ್ಲವನ್ನೂ ಒಳಗೊಂಡಿರುವ, ಸರ್ವ ಫಲಕ್ಕೂ ಅತಿಶಯ ವಾದ ಪರಮ ಪದವನ್ನು "ಸರ್ವೇಷು ಕಾಲೇಷು ಯೋಗಿಯುಕ್ತೋ ಭವ" ನಾಗಿ ಸುಲಭವಾಗಿ ಪಡೆಯುವಂತೆ.

ಶ್ರೀಮದ್ಭಗವದ್ಗೀತೆ ಎನ್ನುವ
ಉಪನಿಷತ್ತಿನ, ಬ್ರಹ್ಮವಿದ್ಯೆಯ, ಯೋಗಶಾಸ್ತ್ರದ
ಶ್ರೀ ಕೃಷ್ಣಾರ್ಜುನ ಸಂವಾದದಲ್ಲಿ
ಅಕ್ಷರ ಬ್ರಹ್ಮ ಯೋಗವೆನ್ನುವ ಎಂಟನೆಯ ಅಧ್ಯಾಯ ಸಮಾಪ್ತಿ

# ಅಧ್ಯಾಯ ೯ : ರಾಜವಿದ್ಯಾ ರಾಜಗುಹ್ಯ ಯೋಗ

## ಪರಬ್ರಹ್ಮಸ್ವರೂಪ ಬ್ರಹ್ಮಸೃಷ್ಟ್ಯಾದಿ ಸಾಕ್ಷಿತ್ವಾದಿ ಧರ್ಮ, ಉಪಾಸನಾ ಭೇದ

**ಇದಂ ತು ತೇ ಗುಹ್ಯತಮಂ । ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ । ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥**

'ಯೋಗಯುಕ್ತೋ ಭವಾರ್ಜುನ'–'ಯೋಗೀ ಪರಂ ಸ್ಥಾನಮುಪೈತಿ' ಎಂದು ಹಿಂದಿನ ಅಧ್ಯಾಯ ಸಮಾಪ್ತಿ ಮಾಡಿದಮೇಲೆ, ಆ ಯೋಗವನ್ನು ಹೇಳಲೇಬೇಕಾಯಿತು ಭಗವಾನ್.

ಯಾವ ವಿಜ್ಞಾನ ಸಹಿತವಾದ ಜ್ಞಾನ (Scientific real Knowledge) ತಿಳಿದರೆ ನೀನು ಅಶುಭದಿಂದ ಮುಕ್ತನಾಗಿ ಮೋಕ್ಷಪಡೆಯುವೆಯೋ ಅಂತಹ ಅತ್ಯಂತ ರಹಸ್ಯವನ್ನು ಅಸೂಯೆ ಇಲ್ಲದ ನಿನಗೆ ಹೇಳುವೆನು. ಬರೀ ಜ್ಞಾನವೆಂದು ಹೇಳಲಿಲ್ಲಾ. 'ಜ್ಞಾನಂವಿಜ್ಞಾನ ಸಹಿತಂ' ವಿಚಾರಮಾಡಿ ಇತ್ಯರ್ಥಮಾಡಿದ ಶೋಧಿಸಿದ ಜ್ಞಾನ. ಇದು ಬಹಳ ಗುಟ್ಟಾದುದು. ಗುರುಪರಂಪರೆಯಿಂದ ಆಪ್ತಶಿಷ್ಯರಿಗೆ ಶ್ರೇಯಸ್ಸಿಗಾಗಿ ಉಪದೇಶವಾದುದು. ಅಶ್ರದ್ಧೆಯಿದ್ದವರಿಗೆಲ್ಲಾ ಈಗಿನ ಕಾಲದಲ್ಲಿ ಕಾಲೇಜುಗಳಲ್ಲೂ, ಬಹಿರಂಗಭಾಷಣಗಳಲ್ಲೂ, ಕೆಲವು ವೇಳೆ ಬೈಲಿನಲ್ಲಿ ಸಾರ್ವಜನಿಕವಾಗಿ ಕೂಡಾ ತತ್ವಜ್ಞಾನದ ಭಾಷಣಗಳನ್ನು ಮಾಡುವುದುಂಟು. "ಸಂತೆಯಲಿ ತತ್ವವನು ಸಂತಸದಿಪೇಳ್ವಾತ ಮೂರ್ಖ" ಎಂದು ಸರ್ವಜ್ಞ ಪದವಿದೆ. ವಿದೇಶೀ ತತ್ವೋಪದೇಶಿಗಳಿಗೆ ಇದು ಬಹು ಪ್ರಿಯ. ಏನೂ ತಿಳಿಯದ ಗಮಾರರಿಗೆ ಅಚ್ಚರಿ ತೋರಿ ತಮ್ಮ "ಕುರುಬ"ನಲ್ಲಿಗೆ "ಕುರಿ"ಗಳನ್ನು ಸೇರಿಸಿ ಉದ್ಧಾರ ಮಾಡುವ ಸುಲಭ ಪ್ರಯತ್ನ. ಇದರಲ್ಲಿ ರಹಸ್ಯವೂ ಇಲ್ಲಾ, ಅಸೂಯೆಯೂ ಉಂಟು. ಇತರ ಮತದೂಷಣೆಯಿಂದ ತಮ್ಮ ಮತ ಪೋಷಣೆಗೆ ಪ್ರಯತ್ನ. ಮತಾಂತರ ಪ್ರಯತ್ನಕ್ಕೆ ಈ ದಾರಿಗಳು ಬೇಕಾಗಬಹುದು. ನಿಜತತ್ವ

ಬೋಧೆಗೆ, ಸರಿಯಾದ ತಿಳುವಿನ ತಿಳುವಿಗೆ ನಮ್ಮ ಸನಾತನ ಧರ್ಮದಲ್ಲಿ ರಹಸ್ಯ, ಗುರೂಪದೇಶ ಶ್ರದ್ಧೆ, ಸರಿಯಾದ ಪಾತ್ರ ಎಲ್ಲಾ ಗಣನೆಗೆ ತೆಗೆದು ಕೊಂಡಿದ್ದಾರೆ. ಈಗಲೂ ಮಂತ್ರೋಪದೇಶ, ಬ್ರಹ್ಮೋಪದೇಶಗಳಲ್ಲಿ, ಗುರು ಮತ್ತು ತಂದೆ, ಶಿಷ್ಯ ಅಥವಾ ಮಗನ ಕಿವಿಯಲ್ಲಿ ಅದನ್ನು ಗುಟ್ಟಾಗಿ ಉಸಿರುತ್ತಾನೆ. ಕಿವಿ ಮಾತಿನಲ್ಲಿ ಹೇಳಿದುದರಲ್ಲಿ ಗಮನ ಹೆಚ್ಚು, ಆಸಕ್ತಿ ಹೆಚ್ಚು, ಗ್ರಹಿಸಲು ಏಕಾಗ್ರತೆ ಹೆಚ್ಚಲ್ಲವೇ. ಈಗೇನು ಮುದ್ರಣ ಬಂದಮೇಲೆ ಎಲ್ಲಾ ತತ್ವಜ್ಞಾನ ಪುಸ್ತಕಗಳೂ ಸಾವಿರಗಟ್ಟಲೆ ಎಲ್ಲಾ ಭಾಷೆಯಲ್ಲೂ ಅಚ್ಚಾಗಿಬಿಟ್ಟಿರುವಾಗ ಭಾಷಣ ಮಾಡುವುದರಲ್ಲಿ ತಪ್ಪೇನಿಲ್ಲಾ. ಆದರೆ ಎಷ್ಟೋ ಸಾರಿ ಆಶ್ರೋತ್ರವೃಂದ ವನ್ನು ನೋಡಿದರೆ ವ್ಯಸನವಾಗುತ್ತದೆ. ಹಾಲಿಳಿಯುದ ಗಂಟಲಿಗೆ ಕಡಬು ತುರುಕಿದಂತೆ. ಈ ಜ್ಞಾನವನ್ನು ಪಡೆಯಲೂ ಒಂದು ದರ್ಜೆಯ ಕನಿಷ್ಟ ತಿಳುವಳಿಕೆಯಾದರೂ ಬೇಕು.

ಆದುದರಿಂದ ಆ ಕಾಲದಲ್ಲಿ ಕಷ್ಟಪಟ್ಟು ತಾಲೀಗರಿಗಳಲ್ಲಿ ಹಸ್ತಪ್ರತಿ ಯಾಗಿ ಬರೆದಿಟ್ಟಿದ್ದ ಅಲ್ಪ ಗ್ರಂಥಗಳ ಕಾಲದಲ್ಲಿ, ಅವು ಸಿಕ್ಕುವುದೇ ಕಷ್ಟವಾಗಿ ಪರಂಪರೆಯವುಗಳಾಗಿ ಬಿಟ್ಟಿದ್ದವು. ಅಲ್ಲದೇ ಈ ಜ್ಞಾನ ವನ್ನು ಬರೀ ಪುಸ್ತಕೇನ ಕಲಿಯುವುದಕ್ಕಿಂತ ಗುರುಮುಖೇನ ಅಭ್ಯಾಸಿಸುತ್ತಿದ್ದರು. ತಿಳಿದವರೂ ಕೆಲವರೇ ಇದ್ದರು. ತಿಳಿಯಲು ಆದ್ದರಿಂದ ಪೇಕ್ಷೆಯುಳ್ಳವರು, ತಿಳಿಯಲರ್ಹತೆಯಿದ್ದವರೂ ಕೆಲವರೇ ಮಮತೆಯಿಂದ ಗುಟ್ಟಾಗಿ ಈ ಜ್ಞಾನ ರಹಸ್ಯವನ್ನು ಹೇಳಿಕೊಡುತ್ತಿದ್ದರು. ರಣರಂಗದಲ್ಲಿ ಯುದ್ಧದ ಗಲಾಟೆಯ ಮಧ್ಯೆ ಶ್ರೀ ಕೃಷ್ಣನು ಇದನ್ನು ಹೇಳಿದಾಗ ಕೂಡಾ ಧ್ವನಿ ತಗ್ಗಿಸಿ ಮೆತ್ತನೆ ಪಿಸುಮಾತಿನಲ್ಲೇ ಹೇಳಿರ ಬೇಕು.

ರಾಜವಿದ್ಯಾ ರಾಜಗುಹ್ಯಂ । ಪವಿತ್ರಮಿದಮುತ್ತಮಮ್ ।
ಪ್ರತ್ಯಕ್ಷಾವಗಮಂ ಧರ್ಮ್ಯಂ । ಸುಸುಖಂ ಕರ್ತುಮವ್ಯಯಮ್ ॥೨॥

ಈ ವಿದ್ಯೆಯು ರಾಜವಿದ್ಯೆ, ರಾಜರಹಸ್ಯ, ಪವಿತ್ರ, ಉತ್ತಮ, ಪ್ರತ್ಯಕ್ಷ ಫಲದಾಯಕ, ಧರ್ಮಯುಕ್ತ, ವ್ಯಯವಾಗದಿರುವುದು. (ಸನಾತನ

ವಾಗಿ ಸರ್ವಕಾಲಕ್ಕೂ ವ್ಯಯವಾಗದ-ಅವ್ಯಯಂ) ಎಲ್ಲದಕ್ಕಿಂತ ಮೇಲಾಗಿ ಸುಖವಾಗಿ ಅನುಷ್ಠಾನಮಾಡಲು ಯೋಗ್ಯವಾಗಿದೆ. ಜ್ಞಾನಿಗಳಿಗೆ ಕಮ್ಮಿಯಿಲ್ಲದ ಪೂರ್ವದ ಭಾರತದಲ್ಲಿ ಕೂಡಾ, ಎಷ್ಟೋ ತತ್ವ ರಹಸ್ಯಗಳು, ಧರ್ಮವಿಷಯಗಳು, ಋಷಿಗಳಿಗೆ ಕೂಡಾ ತಿಳಿಯದವುಗಳು ಆಗಿನ ರಾಜರುಗಳರಿತಿದ್ದರಂತೆ. ಆ ದೃಷ್ಟಿಯಿಂದಲೂ ರಾಜವಿದ್ಯೆಯೇ. ಜನಕ, ಅಶ್ವಪತಿ, ಅಜಾತಶತೃ ಮೊದಲಾದ ರಾಜರುಗಳು ಅದ್ವಿತೀಯ ತತ್ವಜ್ಞರು. ಅವರಿಂದ ತತ್ವಗಳನ್ನು ಕಲಿಯಲೂ, ಅವರ ಓಲಗದಲ್ಲಿ ಚರ್ಚೆಗಳನ್ನು ನಡೆಸಿ ತತ್ವ ವಿಮರ್ಶೆಮಾಡಲೂ, ಯಾಜ್ಞವಲ್ಕರಂಥ ಮಹಋಷಿಗಳು ಕೂಡಾ ಹೋಗುತ್ತಿದ್ದರು. ರಾಜರುಗಳಾದರೂ ಅವರು ರಾಜರ ಅಟ್ಟಹಾಸ ಆಡಂಬರಗಳಿಲ್ಲದೆ ರಾಜಋಷಿಗಳಾಗಿ ಬೆಳಗಿದರು. ವಿನಯಸಂಪನ್ನರಾಗಿ, ಜ್ಞಾನಪೂರ್ತಿ ಮೂರ್ತಿಗಳಾದರೂ ಬಂದ ತಪಸ್ವಿಗಳನ್ನು ಆದರದಿಂದ ಬರಮಾಡಿಕೊಂಡು ಚರ್ಚೆಗಳನ್ನು ನಡೆಸುತ್ತಿದ್ದರು. ಇದರಿಂದ ಉಭಯತಾಪಿ ಉಪಯೋಗವಾಗುತ್ತಿದ್ದಲ್ಲದೆ, ಜ್ಞಾನವು ಬೆಳೆದು ಬೆಳಗಲೂ ಅವಕಾಶವಾಗುತ್ತಿತ್ತು. ಎಷ್ಟೋ ತತ್ವಗಳು ರಾಜರಹಸ್ಯವಾಗಿದ್ದವು. ಇಲ್ಲಿಯೂ ಹೇಳುವವ ರಾಜ ಕೇಳುವವ ರಾಜ, ಹೇಳುವ ವಿಷಯವಾದರೋ ರಾಜವಿದ್ಯ ರಾಜಗುಹ್ಯಂ ಅಲ್ಲದೆ ಮತ್ತೇನು. ರಾಜಮಾರ್ಗದಲ್ಲಿ ನಡೆಯುವಂತೆಯೂ, ಹೇಡಿಯಂತೆ ರಣರಂಗದಿಂದ ಯುದ್ಧ ವಿಮುಖನಾಗಬೇಡವೆಂದೂ ಸ್ವಾಮಿಯು ಹೇಳುವುದು ರಾಜವಿದ್ಯೆಯಲ್ಲದೆ ಮತ್ತೇನು. ವಿದ್ಯಗಳಿಗೆಲ್ಲಾ ರಾಜನಂತಿರುವ ಪರಮತತ್ವ ರಹಸ್ಯವಿದ್ಯೆ, ಸರ್ವಜನಗಳಿಗೂ, ಸರ್ವಕಾಲಕ್ಕೂ, ಸರ್ವಸಮಸ್ಯೆಗಳಿಗೂ ಬೋಧಿಸುತ್ತಿರುವ ಈ ಗೀತಾತತ್ವ ರಾಜವಿದ್ಯೆ ರಾಜಗುಹ್ಯಂ ಅಲ್ಲದೆ ಮತ್ತೇನು.

ಅದು ಎಂತಹುದು, ಪವಿತ್ರಂ,-ಪಾವನಮಾಡಿ ಕಾಪಾಡುವುದು, (ಪಾವಯತಿ ತ್ರಾತ ಯಿತಿ ಪವಿತ್ರಂ) ಯಾವಾಗ ಪಾವನವಾಯಿತೋ ಸ್ವಶಕ್ತಿಯಿಂದಲೇ ಕಾಪಾಡಿಕೊಳ್ಳಬಹುದು. ಯಾವ ಶ್ರೇಷ್ಠ ಧರ್ಮ ಕರ್ಮಗಳನ್ನು ಮಾಡಬೇಕಾದರೂ, ಯಾವ ಪುಣ್ಯ ಕರ್ಮ – ಒಂದು ತೀರ್ಥದಲ್ಲಿ ಮುಳುಗಬೇಕಾದರೂ, ಪುರೋಹಿತರು ಈಗಲೂ "ಪವಿತ್ರ

ಧರಿಸಿ" ಎಂದು ಶುದ್ಧಿಯಾಗಲು ಹೊರಚಿನ್ಹೆಯಾಗಿ ದರ್ಭೆಯ ಪವಿತ್ರವನ್ನು ಬೆರಳಿಗೆ ತೊಡಿಸುವರು. ಯಾವ ಕರ್ಮಕ್ಕೂ ಅಂತ ಶ್ಯುದ್ಧಿ ಬಹುಮುಖ್ಯ. ಇದು (ಈ ಜ್ಞಾನ ವಿಜ್ಞಾನ ಸಹಿತಂ) ಪವಿತ್ರಂ ಉತ್ತಮಂ, ಶ್ರೇಷ್ಠವಾದುದು. ಕೀಳು ದರ್ಜೆಯ ವಿದ್ಯೆಯಲ್ಲಾ. ಯಾವುದು ತಿಳಿದರೆ ಎಲ್ಲಾ ತಿಳಿದಂತಾಗಿ ಇನ್ನು ತಿಳಿಯಬೇಕಾದುದೇ ಇಲ್ಲವೋ ಅಂತಹ ಶ್ರೇಷ್ಠವಾದುದು. ಕಣ್ಣಿಗೆ ಕಂಡಂತೆ ಫಲ ಕೊಡ ತಕ್ಕದ್ದು, ಧರ್ಮಯುತವಾಗಿ, ಏನೂ ಧರ್ಮಬಿಟ್ಟು ನಡೆಸುವ ವಿದ್ಯೆಯಲ್ಲಾ. ಖರ್ಚಾಗಿ ಬಿಡುವುದೂ ಅಲ್ಲಾ. ಸುಖವಾಗಿ ಆಚರಿಸ ಬಹುದು. ಯಜ್ಞ, ಯಾಗ, ಕರ್ಮಗಳಂತೆ ಪ್ರಯಾಸಪಟ್ಟು ಮೈನೋಯಿಸಿಕೊಂಡು, ಮನಸ್ಸು ನಿಗ್ರಹಿಸಿಕೊಂಡು ಕಷ್ಟಪಡಬೇಕಾದುದಿಲ್ಲಾ. ಜ್ಞಾನವೇ ಆನಂದ – ಸುಖ. ಇದೇ ನಮಗೆಲ್ಲಾ ಬೇಕಾದುದು. ಈ ಕಾಲದಲ್ಲಿ "ವ್ರತಕೆಟ್ಟರೂ ಸುಖವಿರಬೇಕು." ಸುಮ್ಮನೆ ವ್ರತಕಟ್ಟಿಕೊಂಡು ಯಾರು ಒದ್ದಾಡಿಯಾರು? ಅದಕ್ಕೆ ಯಾವುದನ್ನು ಮಾಡಬೇಕಾದರೂ ತಿಳಿದವರನ್ನು ಕೇಳಿ ಮಾಡಬೇಕೆನ್ನುವುದು. ತಿಳಿದವರು ಅನಾಯಾಸ ವಾಗಿ ಮಾಡುವ ರೀತಿಯನ್ನು ಹೇಳಿಕೊಡುತ್ತಾರೆ. ಒಂದು ನಾವು ಯಾವುದನ್ನಾದರೂ ಸಾಧಿಸಬೇಕಾದರೆ ಎಷ್ಟೋ ಮಾರ್ಗಗಳಿವೆ, ಮಾಡುವ ವಿಧಗಳಿವೆ. ಅದರಲ್ಲಿ ಪ್ರವೀಣರಾದವರು ಸುಲಭವಾಗಿ ಮಾಡುವುದನ್ನು ಕಲಿತಿರುತ್ತಾರೆ. ಕಲಿತವರಲ್ಲಿ ತಿಳಿದು ಮಾಡಿದರೆ ನಮಗೂ ಸುಲಭವಾಗುತ್ತದೆ. ಕಷ್ಟವಿಲ್ಲ–ಸುಖ. ಈ ಜ್ಞಾನ ಪಡೆಯಲೂ ಸ್ವಾಮಿಯು ಸುಲಭವಾಗಿಯೇ ಹೇಳುತ್ತಾನೆ.

**ಅಶ್ರದ್ದಾಧಾನಃ ಪುರುಷಾ-ಧರ್ಮಸ್ಯಾಸ್ಯ ಪರಂತಪ ।**
**ಅಪ್ರಾಪ್ಯ ಮಾಂ ನಿವರ್ತಂತೇ । ಮೃತ್ಯುಸಂಸಾರವರ್ತ್ಮನಿ ॥೩॥**

ಈ ತತ್ವಜ್ಞಾನವೆಂಬ ಪರಮ ಧರ್ಮದಲ್ಲಿ ಅಶ್ರದ್ಧೆಯಿಂದಿರುವವರು ನನ್ನನ್ನು ಸೇರದೇ, ಮೃತ್ಯುಸಂಸಾರ ಮಾರ್ಗದಲ್ಲಿ ನಡೆವರು. ಸ್ವಂತ ಶ್ರೇಯಸ್ಸಿಗಾದರೂ ತಿಳಿಯಬೇಕಾದ ತತ್ವಜ್ಞಾನ. ಮೃತ್ಯು ಸಂಸಾರ ವನ್ನು ತಪ್ಪಿಸಿಕೊಳ್ಳಬೇಕಾದರೆ ತಿಳಿಯಬೇಕಾದ ಜ್ಞಾನ. ಇಂತಹದರಲ್ಲೇ

ಶ್ರದ್ಧೆಯಿಲ್ಲದವರು ಹೇಗೆ ಪಾರಾಗುವರು. ತಿಳಿಯಬೇಕೆಂಬ ಶ್ರದ್ಧೆಯಾದರೂ ಮೊದಲು ಬೇಕು. ಆ ಶ್ರದ್ಧೆಯಿಲ್ಲದೆ ಯಾವ ತಿಳಿವಳಿಕೆಯೂ ಬರುವುದಿಲ್ಲಾ. ಶ್ರದ್ಧೆಯಿಂದ ಅವನ ಕಡೆಗೆ ತಿರುಗುವ ಕೆಲಸವನ್ನಾದರೂ ಮಾಡದಿದ್ದರೆ ಅವರಿಗೆ ಇನ್ನು ಗತಿಯಿಲ್ಲ. ಅವರೇನು ಮಾಡಿಯಾರು. ಇವ ಅವರಿಗೆ ಕಾಣಲೇ ಕಾಣ, ಸರ್ವವ್ಯಾಪಿಯಾದರೂ.

ಮಯಾ ತತಮಿದಂ ಸರ್ವಂ । ಜಗದವ್ಯಕ್ತಮೂರ್ತಿನಾ ।
ಮತ್ಸ್ಥಾನಿ ಸರ್ವಭೂತಾನಿ । ನ ಚಾಹಂ ತೇಷ್ವವಸ್ಥಿತಃ ॥೪॥

ಸರ್ವ ಜಗತನ್ನೂ ನಾನು ಅವ್ಯಕ್ತಮೂರ್ತಿಯಾಗಿ ವ್ಯಾಪಿಸಿರುವೆನು. ಸರ್ವಭೂತಗಳೂ ನನ್ನಲ್ಲಿ ಸ್ಥಾಪಿಸಿರುವವು. ನಾನು ಅವುಗಳಲ್ಲಿಲ್ಲಾ. ಎಲ್ಲಾ ಭೂತಗಳಿಗೂ ಆಧಾರ ಭೂತನು. ಅವನಿಗೆ ಯಾವುದರ ಆಧಾರವೂ ಇಲ್ಲಾ.

"ಸತ್ಯ ಪಿಮಹಸೇ ನಾಥತವಾಹಂ, ನಮಾಮಿಕೀನಸ್ತ್ವಂ" ಸತ್ಯವಾಗಿ ವಿಚಾರಮಾಡಿ ನೋಡಿದರೆ, ನಾಥ, ನಾನು ನಿನ್ನವನೇ ಹೊರತು, ನೀನು ನನ್ನವನಲ್ಲಾ. ನಿನ್ನಲ್ಲಿ ಬಿಟ್ಟು ನನ್ನಿರವೇ ಇಲ್ಲಾ. ಆದರೆ ನೀನು ಸರ್ವವಸ್ತು. ನನ್ನದೆಂದು ಎಂತು ಹೇಳಲಿ. ಎಂದು ಶಂಕರರು "ನಾಮುದ್ರೋಹಿತರಂಗಃ ಕ್ವಚದಪಿ ಸಮುದ್ರೋನ ತಾರಂಗಃ"ವೆಂದು ಷಟ್ಪದಿಯಲ್ಲಿ ಹಾಡಿರುವುದು ಜ್ಞಾಪಕಕ್ಕೆ ತರುತ್ತದೆ. ಅಲೆಗಳು ಸಮುದ್ರದ್ದು; ಸಮುದ್ರವು ಅಲೆಗಳದ್ದಲ್ಲಾ. ಅಂತೆಯೇ ಸರ್ವಭೂತಗಳೂ ಸ್ವಾಮಿಯಂಶವೇ ಆಗಿ ಅವನಲ್ಲಿಯೇ ಉದ್ಭವಿಸಿ, ಆಡಿ, ಅಂತರ್ಗತವಾಗುವುವು; ಅಲೆಗಳು ಸಮುದ್ರದಲ್ಲೇ ಉದ್ಭವಿಸಿ ಆಡಿ, ಅಂತರ್ಗತವಾಗುವಂತೆ ಅವಕ್ಕೆ ಬೇರೆ ಎಡೆಯೇ ಇಲ್ಲಾ. ಸಮುದ್ರವೇ ಅಲೆಯ ಆದಿ, ಸ್ಥಿತಿ, ಮತ್ತು ಅಂತ. ಹಾಗೆಯೇ ಪರಮಾತ್ಮನೆಂಬ ಮಹಾಸಮುದ್ರವೇ ಪ್ರತಿ ಜೀವಾತ್ಮನಿಗೂ (ಭೂತಗಳಿಗೆಲ್ಲಾ) ಆದಿ, ಇರುವು ಮತ್ತು ಕೊನೆ. ಎಲ್ಲಿಹೋದರೂ, ಎಲ್ಲಿದ್ದರೂ, ಸಮುದ್ರದ ಆವರಣದಲ್ಲೇ! ಆದರೂ ನಾವುಗಳು ಮಾತ್ರ ಹಾಗೆ ಭಾವಿಸಿಲ್ಲಾ. ನಾವೇ ಸ್ವತಂತ್ರರೆಂದೂ, ನಮ್ಮ ಆಧಾರಭೂತವಾದ ಮಹದಾತ್ಮನನ್ನೇ

ಉಲ್ಲಂಘಿಸಿ ಬೇಕಾದುವನ್ನು ಮಾಡಬಲ್ಲವರೆಂದೂ ಭಾವಿಸಿದ್ದೇವೆ. ನಮ್ಮ ಇರುವೆಲ್ಲಾ ಸಮುದ್ರದ ಮೇಲೆ ಅಲೆಯು ಇರುವಂತೆ ಕೊಂಚಕಾಲ ಮಾತ್ರ. ಅಳತೆಯಿಲ್ಲದ ಕಾಲದಲ್ಲಿ ಒಂದು ಕ್ಷಣ. ಆದರೂ ನಮ್ಮ ಪ್ರತಾಪವೆಷ್ಟು ? ಸೂಫಿ ಒಂದೆಡೆ ಹೇಳಿದುದು ಜ್ಞಾಪಕಬರುತ್ತೆ. ಒಂದು ತೃಣ (ಹುಲ್ಲುಕಡ್ಡಿ) ಮಹಾ ಸಮುದ್ರದ ಅಲೆಗಳ ಮೇಲೆ ತೇಲಾಡು ತಿತ್ತಂತೆ. ಆದರೂ ಅದು ಆ ಸಮುದ್ರದಲೆಗಳೊಡನೆ ಹೊಡೆದಾಡಿ ತನ್ನ ದಾರಿ ಸಾಗಿಸುತ್ತಿದೇನೆಂದು ಭಾವಿಸಿತ್ತಂತೆ. ಹಾಗೆಯೇ ನಮ್ಮ ಇಹದ ವ್ಯಾಪಾರದ ಭಾವನೆ ನಮಗೆಮಗೆ.

"ನಾನು ಅವುಗಳಲ್ಲಿ ಇರುವುದಿಲ್ಲಾ" ಎನ್ನುವುದು ಮಾತ್ರಾ ಗಾಬರಿಯ ನ್ನುಂಟು ಮಾಡುತ್ತದೆ. ನಮ್ಮ ಆತ್ಮನೇ ಪರಮಾತ್ಮ. "ಪ್ರಜ್ಞಾನಂ ಬ್ರಹ್ಮ" "ಅಹಂ ಬ್ರಹ್ಮಾಸ್ಮಿ" "ತತ್ವಮಸಿ" ಮತ್ತು "ಅಯಂ ಆತ್ಮಾ ಬ್ರಹ್ಮ" ಎಂದು ಉಪನಿಷತ್ತುಗಳು, ವೇದವೇದಾಂತಗಳ ಸಾರವೆಂದು ಸಾರಿದ "ನಾನೇ ಅವನು" "ನನ್ನಾತ್ಮನೇ ಬ್ರಹ್ಮ" ಎನ್ನುವುದೆಲ್ಲಾ ಹಾರಿ ಹೋಯಿತಲ್ಲಾ ಎನ್ನುವುದೇ ಗಾಬರಿ. ಕೇಳಿ. ಗಾಬರಿಗೆ ಕಾರಣವಿಲ್ಲಾ. ಒಂದು ತಟ್ಟೆ ನೀರಿನಲ್ಲಿ ಸೂರ್ಯಬಿಂಬ ಪ್ರಕಾಶಿಸುತ್ತಿತ್ತು. ಆ ತಟ್ಟೆ ಒಡೆದುಹೋಯಿತು ಅಥವಾ ನೀರು ಚಲ್ಲಿಬಿಟ್ಟರಿ. ಆಗ ಆ ನೀರಿನಲ್ಲಿದ್ದ ಸೂರ್ಯಬಿಂಬ ಹೋಯಿತಲ್ಲಾ ಎಂದು ಗಾಬರಿಯೇ ? ಹೋದುದೇನೋ ನಿಜ. ಆದರೆಲ್ಲಿಗೆ ಹೋಯಿತು. ಯಾವ ಬಿಂಬದಿಂದ ಪ್ರತಿಬಿಂಬಿಸಿತ್ತೋ ಆ ಸೂರ್ಯನಲ್ಲಿ ಆ ಪ್ರತಿಬಿಂಬವೂ, ಉಪಾಧಿ ನಾಶವಾದಾಗ, ಸೇರಿ ಹೋಯಿತಷ್ಟೇ. ಉಪಾಧಿ ಇರುವವರೆಗೂ ಆ ಬಿಂಬದ ಇರುವಿಕೆ. ಆ ಉಪಾಧಿಯಲ್ಲಿ ನಿಜವಾಗಿಯೂ ಸೂರ್ಯನಿರಲಿಲ್ಲಾ. ಉಪಾಧಿಯ ಆಕರ್ಷಣ ಶಕ್ತಿಯಷ್ಟು ಪ್ರತಿಬಿಂಬ ಪ್ರಕಾಶಿಸುತ್ತಿತ್ತಷ್ಟೆ. ಅಂತೆಯೇ ಪರಮಾತ್ಮ ಜೀವಾತ್ಮರುಗಳು. ನಮ್ಮಲ್ಲಿ ಆ ಪ್ರತಿಬಿಂಬದ ಶಕ್ತಿ ಪ್ರತಿ ಬಿಂಬಿಸಿದೆಯಷ್ಟೆ. ಅದೇ ಇಲ್ಲಿಲ್ಲಾ. ಬಿಂಬವಿಲ್ಲದೇ ಪ್ರತಿಬಿಂಬವಿಲ್ಲಾ. ಪ್ರತಿಬಿಂಬಗಳಿರುವಿಕೆಗೆಲ್ಲಾ ಬಿಂಬವೇ ಆಧಾರ. ಆದರೆ ಬಿಂಬದ ಇರುವಿಕೆಗೆ ಪ್ರತಿಬಿಂಬದ ಅವಶ್ಯಕತೆ ಇಲ್ಲಾ. ಉಪಾಧಿಯು ಎಷ್ಟು ಚೊಕ್ಕಟವಾಗಿ, ನಿರ್ಮಲವಾದರೆ ಅಷ್ಟು ಜಾಸ್ತಿ ಪ್ರಕಾಶಿಸುವುದು ಪ್ರತಿಬಿಂಬ ಅಷ್ಟೇ.

**ನ ಚ ಮತ್ಸ್ಥಾನಿ ಭೂತಾನಿ । ಪಶ್ಯ ಮೇ ಯೋಗಮೈಶ್ವರಮ್ ।**
**ಭೂತಭೃನ್ನ ಚ ಭೂತಸ್ಥೋ । ಮಮಾತ್ಮಾ ಭೂತಭಾವನಃ ॥೫॥**

ಭೂತಗಳು ನನ್ನಲ್ಲಿಲ್ಲಾ. ಆದರೂ ನನ್ನ ಯೋಗಮಹಿಮೆ (ಐಶ್ವರ್ಯ) ಯನ್ನು ನೋಡು. ಅವುಗಳು ನನ್ನಲ್ಲಿಲ್ಲದೆಯೂ, ನಾನು ಅವುಗಳಲ್ಲಿಲ್ಲ ದೆಯೂ, ನನ್ನ ಸ್ವರೂಪವು ಸಮಸ್ತ ಭೂತಗಳನ್ನೂ ಉತ್ಪನ್ನಮಾಡು ವಂಥಾದ್ದೂ (ಸೃಷ್ಟಿ) ಮತ್ತು ಧಾರಣಮಾಡತಕ್ಕಂಥಾದ್ದೂ ಆಗಿರುವುದು. ಇದು ನಿಜವಾದ ಸಂಪತ್ತೇ. ಅದಕ್ಕೇ "ಮಾಯಾಂತು ಪ್ರಕೃತಿಂ ವಿಧಿ ಮಾಯಿನಂತು ಮಹೇಶ್ವರಃ" ಎಂದು ಶ್ವೇತಾಶ್ವೇತರೋಪನಿಷತ್ತಿ ನಲ್ಲಿ ಉಲ್ಲೇಖಿಸಿರುವುದು. ಇಲ್ಲದ್ದನ್ನು ಇರುವಂತೆ ತೋರುವನು ಮಾಯಾವಿಯಲ್ಲವೇ. ಅದಕ್ಕೆ ಈ ತೋರಿಕೆಯು ಪ್ರಪಂಚವೆಲ್ಲಾ (ಪ್ರಕೃತಿ) ಮಾಯೆಯೆಂದು ಶಂಕರರು "ಮಾಯಾವಾದ"ವನ್ನು ಹೂಡಿ ರುವುದು. ಇದಕ್ಕೆ ಅಸ್ತಿತ್ವವೇ ಇಲ್ಲಾ. ಬರೀ ಇಂದ್ರಜಾಲವಲ್ಲಾ. "ಸ್ವಪ್ನೇ ಇಂದ್ರಜಾಲವತ್" ಎಂದಿದ್ದಾರೆ. ತೋರಿಕೆಯಲ್ಲಿ ತೋರಿಕೆ. ಸ್ವಪ್ನಕ್ಕೇ ಅಸ್ತಿತ್ವವಿಲ್ಲಾ, ಅದರಲ್ಲಿ ಅಸ್ತಿತ್ವವಿಲ್ಲದ ಇಂದ್ರಜಾಲ. ಇದನ್ನರಿತು ನಿಜವೆಂದು ಕಟ್ಟಿಕೊಂಡು ಒದ್ದಾಡುವೆವೆಲ್ಲೋ ಮಾಯಾವಿ, ಮಹೇಶ್ವರ - ಎಲ್ಲಾ ನಶ್ವರ.

**ಯಥಾಽಽಕಾಶಸ್ಥಿತೋ ನಿತ್ಯಂ । ವಾಯುಃ ಸರ್ವತ್ರಗೋ ಮಹಾನ್ ।**
**ತಥಾ ಸರ್ವಾಣಿ ಭೂತಾನಿ । ಮತ್ಸ್ಥಾನೀತ್ಯುಪಧಾರಯ ॥೬॥**

ಆದರೆ ಏನೂ ಇಲ್ಲವೇ ಇಲ್ಲವೋ,-ಶೂನ್ಯವೋ. ತಾಳಿ. ಸರ್ವತ್ರ ಸಂಚರಿಸುತ್ತಿರುವ ಮಹಾ ವಾಯುವು ಹೇಗೆ ಆಕಾಶದಲ್ಲಿ ನಿತ್ಯ (ಸ್ಥಿರ, ಸರ್ವದಾ) ಸ್ಥಿತವಾಗಿರುವುದೋ ಹಾಗೆಯೇ ಸಮಸ್ತ ಭೂತಗಳೂ ನನ್ನಲ್ಲಿ ಸ್ಥಾನ ಹೊಂದಿವೆಯೆಂದು ಭಾವಿಸು. ತೈತ್ತರೀಯೋಪನಿಷತ್ ಶಿಕ್ಷಾವಲ್ಲಿ (೬ ಅ. ೨ ಶ್ಲೋಕದಲ್ಲಿ) "ಆಕಾಶ ಶರೀರಂ ಬ್ರಹ್ಮಾ" ಎಂದು ಹೇಳಿವೆ. ಹಾಗೆಯೇ ಅದರಲ್ಲಿ ಸಮಸ್ತ ಪ್ರಾಣಿಗಳೂ ಸ್ಥಾನ ಹೊಂದಿವೆ. ಹೇಗೆಂಬುದು ಮುಂದಿನ ೧೧ನೇ ಅಧ್ಯಾಯದಲ್ಲಿ ವಿಶ್ವರೂಪದರ್ಶನದಲ್ಲಿ

ಎಲ್ಲವೂ ತನ್ನಲ್ಲಿಯೇ ಇರುವುದೆಂದು ಪ್ರತ್ಯಕ್ಷ ಅರ್ಜುನನಿಗೆ ತೋರಿಸಿದನು. ಮುಂದೆಯೇ ಆ ಶ್ಲೋಕದ "ಸತ್ಯಾತ್ಮ ಪ್ರಾಣಾರಾಮಂ ಮನ ಆನಂದಂ। ಶಾಂತಿ ಸಮೃದ್ಧಮಮೃತಂ" ಎಂದಿದೆ. ಈ ಬ್ರಹ್ಮ ಸ್ವರೂಪಕ್ಕೆ ಆಕಾಶವೇ ಶರೀರ, ಸತ್ಯವೇ ಆತ್ಮಾ, ಪ್ರಾಣವೇ ಆರಾಮ (ಸುಖಸ್ಥಾನ) ಆನಂದವೇ ಮನ, ಶಾಂತಿ, ಸಮೃದ್ಧಿ ಅಮೃತ ಸ್ವರೂಪವೆಂದು ಅಮೋಘವಾಗಿ ಭಾವಿಸಲಾಗಿದೆ. (ಇದು ಸಗುಣ ಬ್ರಹ್ಮದ ಭಾವನೆಯಾಯಿತು.) ಸರಿ ಆಕಾಶ ಪುರಾಣವಾಯಿತು. ಆಕಾಶ ಅಂದರೇನು ನೀಲಿಯಾಗಿ ಕಾಣುತ್ತೆಲ್ಲಾ, ಕಾಮನಬಿಲ್ಲು ಬೀಳುತ್ತೆಲ್ಲಾ ಅದೇ ಆಕಾಶನೋ? ಆಕಾಶ ಅಂದ್ರೆ ಕಾಣೋದೆಂಥಾದ್ದು. ಕಾಣೋದಲ್ಲಾ ಎಲ್ಲೆ ಇಲ್ಲಾ. ಅವಕಾಶ (Space) ಅನ್ನಿ. ಹಿಂದೆ ಕಾಲದ ವಿಷಯ ಹೇಳಿದನೆಲ್ಲಾ ಸ್ವಾಮಿ ತಾನೇ ಅಂತ ಮೊದಲಿಲ್ಲಾ ಕೊನೆಯಿಲ್ಲಾ ಅಳತೆಯಿಲ್ಲಾ ಅದರಂತೆ ದಿಕ್ಕಿಲ್ಲಾ ದಿವಾಣವಿಲ್ಲದ ಅವಕಾಶ ಇವನು. ಅದರೊಳಗೆ ವಾಯು ಇದೆ. ವಾಯುವಿಲ್ಲದ ಅವಕಾಶ (ಆಕಾಶ) ಆಕಾಶದ ಮೇಲಿದೆಯೆಂದು ಖಗೋಳಶಾಸ್ತ್ರಜ್ಞರು ಹೇಳುತ್ತಾರೆ. ಆದರೆ ನಮಗೆ ವಾಯುವಿದ್ದರೇ ಗೋಚರವಾಗೊಲ್ಲಾ. ಆ ವಾಯು ಚಲಿಸಿದರೇ ಆ ವಾಯುವಿದೆಯೆಂದು ಗೋಚರ, ಆ ವಾಯು ಆಕಾಶದಲ್ಲಿದೆ ಎಂದು ಗಮನ. ವಾಯುವಿಲ್ಲದಿದ್ದರೊ ಎಲ್ಲಾ ಕಡೆಯೂ ಆಕಾಶವೇನೋ ಇದೆ. ಒಳಗೂ ಇದೆ ಹೊರಗೂ ಇದೆ. ಮಠಾಕಾಶ ಪಠಾಕಾಶ ಎಲ್ಲಾ ಈ ಮಹಾಕಾಶದಲ್ಲಿದೆ ಎಂದು ತಿಳಿದುಬಿಡೋಣ.

**ಸರ್ವಭೂತಾನಿ ಕೌಂತೇಯ। ಪ್ರಕೃತಿಂ ಯಾಂತಿ ಮಾಮಿಕಮ್।**
**ಕಲ್ಪಕ್ಷಯೇ ಪುನಸ್ತಾನಿ। ಕಲ್ಪದೌ ವಿಸೃಜಮ್ಯಹಮ್ ॥೭॥**

ಕಲ್ಪಕ್ಷಯದಲ್ಲಿ ಪ್ರಕೃತಿಯೆಲ್ಲವೂ ನನ್ನಲ್ಲಿ ಸೇರಿಬಿಡುವುದು, ಕಲ್ಪಾದಿಯಲ್ಲಿ ಪುನಃ ಅದನ್ನು ನಾನು ಸೃಷ್ಟಿಸುವೆನು. ಕಲ್ಪಾದಿಯಿಂದ ಕಲ್ಪಕ್ಷಯದವರೆಗೂ ಈ ಸೃಷ್ಟಿ ನಡೆಯುತ್ತಿರುತ್ತದೆ. ಕಲ್ಪ ಅಂದರೆ ಒಂದು ಕಲ್ಪನೆ. ಒಂದಳತೆ ಕೋಲು. ಬ್ರಹ್ಮಕಲ್ಪವೆಂದರೆ ಮಹದಂತರದ ಕಾಲ. ಮಹಾಕಾಲದಲ್ಲಿ ಇಂತಹವು ಆಗಿ ಸಾಗುತ್ತವೆ.

ಹಿಂದೆಯೇ ಮಾನವನ ಮತ್ತು ಬ್ರಹ್ಮನ ಹಗಲು ರಾತ್ರಿಗಳ ಉದಾಹರಣೆ ಕೊಡಲಿಲ್ಲವೇ (೮. ೧೮) ಅದರಂತೆ. ಈಗಿನ ಹೈಡ್ರೊಜನ್ ಮತ್ತು ಆಟಂಬಾಂಬ್‌ಗಳ ಕಾಲದಲ್ಲಿ ಕಲ್ಪಕ್ಷಯೀ ಜ್ಞಾಪಕ ಬರುತ್ತದೆ. ಯಾವ ರೂಪದಲ್ಲಿ ಸರ್ವ ಪ್ರಳಯುವಾಗುತ್ತದೆಯೋ ನಮಗೆ ವೇದ್ಯವಿಲ್ಲಾ. ಈ ಬಾಂಬುಗಳ ತಯಾರಿಕೆ ಹೆಚ್ಚಿ, ದಾಸ್ತಾನು ಹೆಚ್ಚಿ, ಅವುಗಳ ವಶದಿಂದ ಉನ್ಮತ್ತರಾದ, ಮುಂದೆ ತಮಗೇ ಏನಾದರೂ ಅದರಿಂದ ಹಿಂದೇಟು (recoil) ಬೀಳಬಹುದೆಂಬ ಮುಂದಾಲೋಚನೆಯಿಲ್ಲದೆ ಹೊಂದಿದ ಜನಾಂಗಗಳು, ಅವರ ಮೇಲಿವರು ಕೆಲವೂ, ಇವರ ಮೇಲೆ ಅವರು ಕೆಲವು ಕೈಕಡಿತದಿಂದ ಹಾಕಿಬಿಟ್ಟರೂ ಸರಿಯೇ, ದಾಸ್ತಾನೇ ತಾನಾಗಿ ಸಿಡಿದುಬಿಟ್ಟರೂ ಸರಿಯೇ ಪರಿಣಾಮವೇನಾಗುತ್ತದೆನ್ನುವುದು ಹೇಳಲಾಗುವುದಿಲ್ಲಾ. ಸರ್ವನಾಶಕ ವಸ್ತುಗಳೊಡನೆ ಆಟವಾಡುತ್ತಿದ್ದೇವೆ.

ಒಂದು ವಾಸದಮನೆ ಬಹಳ ದಿನವಾಗಿ ಜೀರ್ಣವಾಗುತ್ತಾ ಬಂದರೆ ಅದನ್ನು ಕೆಡವಿ ಅದರ ಸ್ಥಳದಲ್ಲಿ ಹೊಸದೊಂದು ನಿರ್ಮಾಣಮಾಡುವಂತೆ ಸೃಷ್ಟಿಯು ಜರಾವಸ್ಥೆಹೊಂದಿ ಶಿಥಿಲವಾದಾಗ ಅದನ್ನು ಲೀನಮಾಡಿ, ಪುನಃ ಕಲ್ಪಾದಿಯಲ್ಲಿ ಅವುಗಳನ್ನು ಸೃಷ್ಟಿಮಾಡುವನು ಪರಮಾತ್ಮ.

**ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ ।**
**ಭೂತಗ್ರಾಮಮಿಮಂ ಕೃತ್ಸ್ನ-ಮವಶಂ ಪ್ರಕೃತೇರ್ವಶಾತ್ ॥೮॥**

ಪ್ರಕೃತಿಯ ವಶದಲ್ಲಿರುವ ಈ ಭೂತಗ್ರಾಮ (ಸಮೋಹ) ವನ್ನೆಲ್ಲ ವನ್ನೂ, ನನ್ನ ಮೂಲ ಪ್ರಕೃತಿಯಿಂದ ಪುನಃ ಸೃಷ್ಟಿಸುವೆನು. ಪ್ರಕೃತಿ ಸ್ಥಾನ, ಇವಹೇತು ಸೃಷ್ಟಿಗೆಲ್ಲಾ.

**ನ ಚ ಮಾಂ ತಾನಿ ಕರ್ಮಾಣಿ । ನಿಬಧ್ನಂತಿ ಧನಂಜಯ ।**
**ಉದಾಸೀನವದಾಸೀನ-ಮಸಕ್ತಂ ತೇಷು ಕರ್ಮಸು ॥೯॥**

ಈ ಕರ್ಮಗಳಲ್ಲಿ ನಾನು ಕರ್ತೃತ್ವಾಭಿಮಾನವಿಲ್ಲದೆ, ಉದಾಸೀನ, ಅಸಕ್ತತೆಯಿಂದಿರುವುದರಿಂದ ಹಿಂದೆ ಹೇಳಿದ ಈ ಸೃಷ್ಟ್ಯಾದಿ ಕರ್ಮಗಳು ನನ್ನನ್ನು ಬಂಧಿಸುವುದಿಲ್ಲಾ. ಇವಕ್ಕೆ ನಾನು ಬಂದಿಯಲ್ಲಾ. ಇವು

ಗಳನ್ನು ನಾನು ಮಾಡುತ್ತಿದ್ದರೂ ಅದರಲ್ಲಿ ಅಭಿಮಾನ, ಆಸಕ್ತಿ ಹೊಂದಿಲ್ಲಾ. ಶಂಕರ ಭಾಷ್ಯದಲ್ಲಿ, ಉದಾಸೀನ ಅಂದರೆ ಉಪೇಕ್ಷಕಃ ಎಂದೂ ಅದಾಸೀನ ಎಂದರೆ ಕ್ರಿಯದಲ್ಲಿ ಅಸಕ್ತಿ ಎಂದೂ, 'ಫಲಾಸಂಗ ರಹಿತ, ಅಭಿಮಾನ ವರ್ಜಿತ" ಕರ್ಮಮಾಡುವುದೆಂದೂ ವ್ಯಾಖ್ಯಾನ ಮಾಡಿದ್ದಾರೆ. ಫಲದಲ್ಲಿ ಉದಾಸೀನ, ಕ್ರಿಯಮಾಡುವುದರಲ್ಲಿ ಅನಾಸಕ್ತಿ-ಉದಾಸೀನವದಾಸೀನ. ಅಭಿಮಾನ ಆಸಕ್ತಿಗಳಿದ್ದರೇ ಬಂಧನ. ಪ್ರಕೃತಿ ಕಾರ್ಯನಡೆಯುತ್ತಿದೆ ಎಂಬ ಉದಾಸೀನ ಭಾವದಲ್ಲಿದ್ದರೆ ಬಂಧನವೆಲ್ಲಿ ಬಂತು. ಇದೇ ಪ್ರಕೃತಿಯ ಸಮನ್ಯೆ. ತ್ರಿಗುಣಾತ್ಮಿಕವಾದ ಪ್ರಕೃತಿಯು ಅವನಧೀನದಲ್ಲಿ ತನ್ನ ಸ್ವಭಾವದಿಂದ ಜರಗುವುದು. ಒಬ್ಬ ಯಜಮಾನನ ಅಧೀನದಲ್ಲಿ ಒಂದು ದೊಡ್ಡ ಅವಿಭಕ್ತ ಸಂಸಾರವಾಗಲೀ, ಒಬ್ಬ ಅಧಿಕಾರಿಯ ಅಧೀನದಲ್ಲಿ ಒಂದು ದೊಡ್ಡ ಸಂಸ್ಥೆಯ ಆಡಳಿತವಾಗಲೀ ಅವನ ಹೆದರಿಕೆಯಿಂದ ಮಾತ್ರವೇ ಅವ ಉದಾಸೀನ, ಅಸಕ್ತನಾಗಿದ್ದರೂ, ತಾನು ನಡೆಯುವಂತೆ ಇದೂ ಪ್ರಕೃತಿ ನಡೆಯುತ್ತಿರುವುದು.

**ಮಯಾಧ್ಯಕ್ಷೇಣ ಪ್ರಕೃತಿಃ । ಸೂಯತೇ ಸಚಾರಚರಮ್ ।**
**ಹೇತುನಾಽನೇನ ಕೌಂತೇಯ । ಜಗದ್ವಿಪರಿವರ್ತತೇ ॥೧೦॥**

ನನ್ನ ಅಧ್ಯಕ್ಷತೆಯಲ್ಲಿ ಪ್ರಕೃತಿಯು ಚರಾ ಚರ ಪ್ರಪಂಚವನ್ನು ಹುಟ್ಟಿಸುತ್ತದೆ. ಇದೇ ಕಾರಣದಿಂದ ಜಗತ್ತು ಪರಿವರ್ತನವಾಗುತ್ತದೆ. (ಸೃಷ್ಟಿ, ಸ್ಥಿತಿ, ಲಯ) ಇವನು ಅಧ್ಯಕ್ಷನಷ್ಟೆ. ಒಂದು ದೊಡ್ಡ ಸಂಸ್ಥೆಯ ಕಾರ್ಯಾಲಾಪಗಳು ಅಧ್ಯಕ್ಷನ ಅಧೀನದಲ್ಲಿ ನಡೆಯುವಂತೆ. ಅಧ್ಯಕ್ಷನಿಗೇನೂ ಹೆಚ್ಚಿನ ಜವಾಬ್ದಾರಿಯಿಲ್ಲಾ. ನಡೆಸುವ ಅಧಿಕಾರಿಗಳು ಆ ಕಾರ್ಯಕ್ರಮದಂತೆ ಕಾರ್ಯಗಳನ್ನು ನಡೆಸಿಕೊಂಡುಹೋಗುವಂತೆ. ಮೇಲುಸ್ತುವಾರಿ ನೋಡಿಕೊಳ್ಳುವುದು ಅಧ್ಯಕ್ಷನ ಕರ್ತವ್ಯವಷ್ಟೆ. ಅವ ಆಸಕ್ತಿ ತೋರಿಸುವದಲ್ಲ ನಡೆಯುವುದು ಸರಿಯಾಗಿ ನಡೆದುಹೋಗುತ್ತದೆಂದು ಉದಾಸೀನವದಾಸೀನತೆಯಿಂದ ನೋಡಿಕೊಳ್ಳುತ್ತಿರುತ್ತಾನಷ್ಟೆ. ತಾನೇನೂ ಮಧ್ಯಬಾರದೇ ತಾನಾಗಿಯೇ "ಪ್ರಕೃತಿಃ ಸೂಯತೇ

ಸಚರಾಚರಂ” ಎಂದಿದೆ. ಗರ್ಭಿಣಿಯು ಹೆರುವಾಗ ಸೂಲಗಿತ್ತಿ ಅಧ್ಯಕ್ಷಿಣಿಯಾಗಿರುವಂತೆ. ಸ್ವಭಾವವಾಗಿ ಆಗುವ ಹೆರಿಗೆಗಳೆಲ್ಲಾ ತಾನಾಗಿಯೇ ಆಗುತ್ತದೆ. ಗರ್ಭಿಣಿಯೇ ಯಾರ ಸಹಾಯವೂ ಇಲ್ಲದೆ ಹೆರುತ್ತಾಳೆ. ಹಾಗೆಯೇ ಸ್ವಾಭಾವಿಕವಾಗಿ ಯಾರ ಸಹಾಯವೂ ಇಲ್ಲದೆ ಪ್ರಕೃತಿಯೇ ಚರಾಚರಯುಕ್ತವಾದ ಸೃಷ್ಟಿಯನ್ನು (ಪ್ರಪಂಚ) ಹುಟ್ಟಿಸುತ್ತದೆ (ಸೂಯುತೆ). ಅದರಲ್ಲಿ ಉಸ್ತುವಾರಿ ನೋಡಿಕೊಳ್ಳು ವವನು ಮಾತ್ರ ಪರಮಾತ್ಮ. ಅವನು ಉದಾಸೀನ ಅನಾಸಕ್ತಿಯಿಂದಲೇ ಇರುವನು. ಶ್ವೇ. ೬ ಅ ೧೧ನೇ ಮಂತ್ರದಲ್ಲಿ ಹೇಳಿರುವಂತೆ “ಏಕೋ ದೇವಃ ಸ್ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾನ್ತರಾತ್ಮಾ। ಕರ್ಮಾಧ್ಯಕ್ಷಃ ಸರ್ವಭೂತಾಧಿ ವಾಸಃ, ಸಾಕ್ಷೀ ಚೇತಾ, ಕೇವಲೋ ನಿರ್ಗುಣಶ್ಚಃ” ಎಂದು ಹೇಳಿರುವ ಮಂತ್ರಾರ್ಥ. ತೈ. ಬ್ರಾ.ದಲ್ಲಿ “ಯೋ ಅಸ್ಯಾಧ್ಯಕ್ಷಃ ಪರಮೇವ್ಯೋಮನ್” ಎಂದು ಇವೆಲ್ಲವರ ಅಧ್ಯಕ್ಷನ್ಯಾರು” ಎಂದು ಕೇಳಿ, “ಕೋ ಅದ್ಧಾವೇದ, ಕೈ ಇಹ ಪ್ರವೋ ಚತ್‌ಕುತ ಆಜಾತಾ ಕುತ ಇಯಾಂ ವಿಸೃಷ್ಟಿಃ” ಋ. ೧೦, ೧೨೯ ಮಂ. ಎಂದು ನಿರ್ಧರಿಸಿ ಯಾರು ಹೇಳಲೂ, ಈ ಸೃಷ್ಟಿ ಹೇಗೆ ಎಲ್ಲಿಂದ ಬಂದಿತೆಂದು ಸಾಧ್ಯವಿಲ್ಲವೆಂದು, ಹೇಳಲಾರದೆ ಆತನಿಗೇ ಗೊತ್ತಿದೆಯೋ ? ಆತನಿಗೇ ತಿಳಿಯದೋ “ಸೂ ಅಂಗ ವೇದಾಯದಿವಾನವೇದಂ” ಎಂದು ಮುಕ್ತಾಯಗೊಳಿಸಿದ್ದಾರೆ.

**ಅವಜಾನಂತಿ ಮಾಂ ಮೂಢಾ। ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವಮಜಾನಂತೋ। ಮಮ ಭೂತಮಹೇಶ್ವರಮ್ ॥**

ಮನುಷ್ಯ ಶರೀರವನ್ನು ಆಶ್ರಯಿಸಿದ ನನ್ನ ಸರ್ವೇಶ್ವರತ್ವವನ್ನೂ (ಭೂತಮಹೇಶ್ವರ) ಮತ್ತು ಪರಂಭಾವ (ಉತ್ಕೃಷ್ಟ ಸ್ವರೂಪ)ವನ್ನೂ ತಿಳಿಯದೆ ಮೂಢರು ತಿರಸ್ಕರಿಸುವರು. ಮಾನವನ ಉದ್ಧಾರಕ್ಕಾಗಿಯೇ (ಅ ೪, ಶ್ಲೋಕ ೭–೮ರಲ್ಲಿ) ಅಭಯ ಕೊಟ್ಟಂತೆ ಮಾನವರೂಪದಲ್ಲಿಯೇ ಹುಟ್ಟಿ ಜಗದ್ರಕ್ಷಣೆಯನ್ನೂ, ಲೋಕಕಲ್ಯಾಣವನ್ನೂ ಎಸಗುವ ಪರಮಾತ್ಮನನ್ನು ಮೂಢರು ತಿಳಿಯದೆ, ಒಪ್ಪಿಕೊಳ್ಳರು. ಮನುಷ್ಯ

ಜನ್ಮದ ಪ್ರತಿಬಂಧಕ ನಿರ್ಬಂಧಗಳಲ್ಲೇ ಹೇಗೆ ಧರ್ಮವನ್ನು ಬಿಡದೆ ಸತ್ಯಮಾರ್ಗ ಪರಿಪಾಲನೆ ಮಾಡಬಹುದೆನ್ನುವುದನ್ನು ತೋರಿದನು ಶ್ರೀರಾಮಾವತಾರದಲ್ಲಿ. ಅಲ್ಲದೆ ಪ್ರತ್ಯಕ್ಷ ಪರಮಾತ್ಮನ ಮೇಲ್ಪಂಗ್ತಿಯನ್ನನುಸರಿಸಿ ಆ ಸತ್ಸಹವಾಸದಲ್ಲಿ ಜೀವವನ್ನು ಪವಿತ್ರಮಾಡಿಕೊಳ್ಳ ಬಹುದಾದ ಸದವಕಾಶ ಸತ್ಪುರುಷರಿಗೆ ಒದಗುತ್ತದೆ. ಆದೇ ಮೂಢರು ಇದನ್ನರಿಯದೆ ಆ ಸದವಕಾಶವನ್ನು ಕೂಡ ತಿರಸ್ಕರಿಸುವರು. ಇದಕ್ಕೆ ಕಾರಣ

**ಮೋಘಾಶಾ ಮೋಘಕರ್ಮಾಣೋ । ಮೋಘಜ್ಞಾನಾ ವಿಚೇತಸಃ ।**
**ರಾಕ್ಷಸೀಮಾಸುರೀಂ ಚೈವ । ಪ್ರಕೃತಿಂ ಮೋಹಿನೀಂ ಶ್ರಿತಾಃ ॥೧೨॥**

ನಿಷ್ಫಲವಾದ ಆಶೆ, ಕರ್ಮ, ಜ್ಞಾನದಿಂದ ಮತ್ತು ಚಿತಸ್ಸಿಲ್ಲದಿರುವುದು ವಿಚಾರಮಾಡಿ ಸತ್ಫಲವಾದ ಆಶೆ, ಕರ್ಮ ಜ್ಞಾನದ ಕಡೆಗೆ (ಅಮೋಘ) ತಿರಿಗಿಸಲು, ರಾಕ್ಷಸೀ ಅಸುರೀ ಪ್ರಕೃತಿಯಿಂದ ಮೋಹಗೊಂಡು ಅದನ್ನೇ ಆಶ್ರಯಿಸುತ್ತಾರೆ. ಚೇತಸ್ಸು– ಸ್ವವಿಚಾರವಲ್ಲದುದೇ ಕಾರಣ. ರಾಕ್ಷಸೀ ಅಸುರೀ ಎಂದು ಒಂದೇ ಅರ್ಥಕೊಡುವ ಎರಡು ಪದವನ್ನೂ ಉಪಯೋಗಿಸಿದ್ದಾನೆ, ದೇಹವೇ ತಾನೆಂಬ ಮೋಹ ವ್ಯಾಪಿಸಿದರೆ, ಮೋಹಿನಿ ಹಿಡಿದಂತೆಯೇ, ಆಗ ಅದಕ್ಕಾಗಿ ಆಶೆ, ದೇಹಪೋಷಣ ರಕ್ಷಣ ಸುಖದ ಮೇಲೇ ವೃಥಾ ಆಸೆ, ಅದಕ್ಕಾಗಿಯೇ ಎಲ್ಲಾ ಕೆಲಸ ತಪ್ಪು ಜ್ಞಾನದಿಂದ ಮಾಡುತ್ತಿರುತ್ತಾರೆ. ಆಶ್ರಯಿಸಬೇಕಾದ ಪರಮಾತ್ಮನನ್ನು ಬಿಟ್ಟು, ಮೋಹಿನಿಯನ್ನು ಆಶ್ರಯಿಸುವರು. ಇದೇ ಮೋಹ ಮಾಯೆ. ಈ ಮಾಯಾ ಜಾಲಕ್ಕೆ ಸಿಲುಕಿ, ಸರಿಯಾದ ಜ್ಞಾನವಿಲ್ಲದೆ ನಿಷ್ಫಲ ವಾದುದರಲ್ಲೇ ಆಸಕ್ತರಾಗುತ್ತಾರೆ.

**ಮಹಾತ್ಮಾನಸ್ತು ಮಾಂ ಪಾರ್ಥ । ದೈವೀಂ ಪ್ರಕೃತಿಮಾಶ್ರಿತಾಃ ।**
**ಭಜಂತ್ಯನನ್ಯಮನಸೋ । ಜ್ಞಾತ್ವಾ ಭೂತಾದಿಮವ್ಯಯಮ್ ॥೧೩॥**

ದೈವೀ ಪ್ರಕೃತಿಯನ್ನು ಆಶ್ರಯಿಸಿರುವ (ಮೇಲೆ ಹೇಳಿದ ಅಸುರೀ ರಾಕ್ಷಸೀ ಪ್ರಕೃತಿಗೆ ವಿರೋಧವಾದುದು) ಮಹಾತ್ಮರು, ಅನನ್ಯ ಮನಸ್ಸಿನಿಂದ ಅವ್ಯಯ ಸ್ವರೂಪನಾದ ಮೂಲಭೂತವನ್ನು ತಿಳಿದು ಭಜಿಸುವರು.

"ಮಹಾತ್ಮಾ" ಪದವನ್ನು ಎಷ್ಟು ಸಾರಿ ಎಷ್ಟು ಚಮತ್ಕಾರವಾಗಿ ಉಪಯೋಗಿಸುತ್ತಾನೆ ಸ್ವಾಮಿ. ಅವನ ಅನನ್ಯ ಭಕ್ತರು "ಮಹಾತ್ಮ"-ಮಹದಾತ್ಮ-ಪರಮಾತ್ಮ-ತಾನೇ ಎಂದು ತಿಳಿಯಲು ಸ್ವಾಮಿ ಅವರ ನ್ನಾದರಿಸುತ್ತಾನೆ. "ದೈವಾಧೀನಂ ಜಗತ್ಸರ್ವಂ, ಮಂತ್ರಾಧೀನಂತು। ದೈವತಂ । ತನ್ಮಂತ್ರಂ ಬ್ರಾಹ್ಮಣಾಧೀನಂ ಬ್ರಾಹ್ಮಣಾಮಮದೈವತಂ" ಮಹಾಭಾರತದಲ್ಲಿ ಶ್ರೀಕೃಷ್ಣನೇ ಧರ್ಮರಾಯನಿಗೆ ಹೇಳಿರುವಂತೆ ಜಗತ್ತು ಸರ್ವವೂ, ದೈವಾಧೀನವಾಗಿದೆ, ಆ ದೈವವು ಮಂತ್ರಾಧೀನ, ಆ ಮಂತ್ರ ಬ್ರಾಹ್ಮಣಾಧೀನ, ಆದುದರಿಂದ ಬ್ರಾಹ್ಮಣರೇ ನನ್ನ ದೈವ. ಬ್ರಾಹ್ಮಣರೇ ಎಂದರೆ ಜನ್ಮ ಬ್ರಾಹ್ಮಣರಲ್ಲ, ಬ್ರಹ್ಮಾನ್ವೇಷಣರು, ಮಂತ್ರಯುಕ್ತ ವಾಗಿದೇವನನ್ನೂ, ಜಗತ್ ಸರ್ವವ್ಯಾಪಿಯಾದ ಪರಮಾತ್ಮನನ್ನೂ ತಿಳಿಯಲು ಪ್ರಯತ್ನಿಸುವವರು. ಶ್ಲೋಕಾರ್ಥದ ಹಾಗೆಯೇ "ಅನನ್ಯ" ಪದವೂ ಅನನ್ಯವಾಗಿದೆ. "ಬ್ರಾಹ್ಮಣಾ ಮಮದೈವತಂ" ಎನ್ನುವಂತೆ, ಬ್ರಹ್ಮನ್ವೇಷಗಳಾದ ಮಹಾತ್ಮರೇ ಅವನಿಗೆ ದೇವರ ಸಮಾನರು. ಮುಂದೆ ಬಂದ ಧ್ಯಾನವೇ ಈ "ದೇವಾಸುರಸಂಪದ್ವಿ ಭಾಗ ಯೋಗ"ವೆಂದು ೧೬ನೇ ಅಧ್ಯಾಯವನ್ನೇ ವಿಸ್ತರಿಸಿದ್ದಾನೆ ಸ್ವಾಮಿ. ಆದುದರಿಂದ ಈ ದೈವ, ಅಸುರೀ ಸಂಪದ್‌ಲಕ್ಷಣಗಳು, ಸ್ವಾಮಿಯನ್ನು ತಿಳಿಯಲು ಎಷ್ಟು ಮುಖ್ಯವೆಂದು ತಿಳಿಯಬಹುದು. ಇದು ಮಾನವನ ಪ್ರಕೃತಿ ಗತವಾಗಿ ಅವನನ್ನು ಮೂಢನನ್ನೊ ಮಹಾತ್ಮನನ್ನೊ ಮಾಡಿರುತ್ತದೆ. ಅಸುರೀ ಪ್ರಕೃತಿಯುವರೇ ಮೂಢರು, ದೈವೀ ಪ್ರಕೃತಿಯುವರೇ ಮಹಾತ್ಮರು. ದೇವನನ್ನು ತಿಳಿಯಲು ಅಥವಾ ತಿರಸ್ಕರಿಸಲು ಅವರ ಈ ಸ್ವಭಾವವೇ ಕಾರಣ. ಅವ್ಯಯವಾಗಿ (ನಾಶವಾಗದೆ) ಭೂತಗಳಲ್ಲಿರುವ ವವನೆಂದು ತಿಳಿದು (ಇದೇ ಜ್ಞಾನ) ಜ್ಞಾತ್ವಾ- ಅನನ್ಯ ಮನಸ್ಸಿನಿಂದ ಭಜಿಸುವುದೇ ಮಹಾತ್ಮರ ಲಕ್ಷಣ. ಸರ್ವಭೂತಗಳಲ್ಲಿರುವ ಪರಮಾತ್ಮಾ ರಾಧನೆಯೇ ದೈವೀ ಸಂಪತ್ತು. ತಾನುಂಟೋ, ಮೂರು ಲೋಕವುಂಟೋ ಎಂದು ಸ್ವಾರ್ಥದಿಂದ ಎಲ್ಲಾ ತಾನೇ ಉಭಭೋಗಿಸುವದೇ ಅಸುರೀ ಸಂಪತ್ತು. ಉಪಭೋಗಕ್ಕೂ ಉಪಾಸನೆಗೂ ಇದೇ ವ್ಯತ್ಯಾಸ.

**ಸತತಂ ಕೀರ್ತಯಂತೋ ಮಾಂ । ಯತಂತಶ್ಚ ದೃಢವ್ರತಾಃ ।**
**ನಮಸ್ಯಂತಶ್ಚ ಮಾಂ ಭಕ್ತ್ಯಾ । ನಿತ್ಯಯುಕ್ತಾ ಉಪಾಸತೇ ॥೧೪॥**

ಯಾವಾಗಲೂ ನನ್ನನ್ನೇ ಕೀರ್ತನೆ ಮಾಡುತ್ತಾ ದೃಢವ್ರತರಾಗಿ ನಮಸ್ಕಾರ ಮಾಡುತ್ತಾ ನನ್ನ ಭಕ್ತರು ನಿತ್ಯವೂ ಯೋಗ್ಯ ರೀತಿಯಿಂದ ಉಪಾಸನೆ ಮಾಡುವರು. ತ್ರಿಕರಣ ಶುದ್ಧಿಯ ಪೂಜೆ ಇದು ಪರಮ ಭಕ್ತನದು. ವಾಕ್, ಮನ, ಕಾಯಗಳೆಲ್ಲದರಲ್ಲೂ ಪರಮಾತ್ಮನೇ ತುಂಬಿ ಸತತವಾಗಿ ನಿತ್ಯ (ಶಾಶ್ವತವಾಗಿ) ಯೋಗ್ಯ ರೀತಿಯಲ್ಲಿ (ಯುಕ್ತಾ) ಅವನನ್ನೇ ಹೊಂದಿಕೊಂಡು ಮಾಡುವ ಉಪಾಸನೆ, ಅನನ್ಯವಾಗಿ ನಡೆಯುತ್ತದೆ. ಈ ಶ್ಲೋಕವು ೮ ನೇ ಅಧ್ಯಾಯದ ೧೪ ನೇ ಶ್ಲೋಕದ ಪದಗಳಲ್ಲೇ ರಚಿತವಾಗಿ ಆ "ಅನನ್ಯ ಚೇತಾಃ ಸತತಂ, ಯೋಮಾಂಸ್ಮರತಿನಿತ್ಯಶಃ ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥" ಎನ್ನುವುದನ್ನು ಮನಸ್ಸಿಗೆ ತರುತ್ತದೆ. ಅದೇ ಅನನ್ಯ, ಸತತ, ನಿತ್ಯಯುಕ್ತ ಬಂದು 'ಯೋಗಿಗೆ' ಬದಲು 'ಭಕ್ತ' ಬಂದಿದೆ. ಆ ಶ್ಲೋಕದ ಶಂಕರರ ಭಾಷ್ಯದಲ್ಲಿ ಸತತವೆಂದರೆ ನೈರಂತರ್ಯವೆಂದೂ, ನಿತ್ಯಶಃ ಎಂದರೆ ದೀರ್ಘಕಾಲತ್ವವೆಂದೂ, ಯಾವಜ್ಜೀವ ನಿರಂತರವಾಗಿ ಸ್ಮರಿಸುವದೆಂದು ವ್ಯಾಖ್ಯಾನ ಮಾಡಿದ್ದಾರೆ. ಅದೇ ಅನನ್ಯಾ. ಆಗ ಸುಲಭವಾಗಿ ಎಂದರೆ "ಸುಖವಾಗಿ ಲಭ್ಯ" ಎಂದಿದ್ದಾರೆ. ಎರಡೂ ಎಷ್ಟು ಸಮನ್ವಯವಾಗಿದೆ. ಭಕ್ತ, ಯೋಗಿ ಎಲ್ಲರ ಭಗವತ್ ಸ್ಮರಣೆ ಒಂದೇ, ಸುಖವಾಗಿ ಭಗವಂತನನ್ನು ಹೊಂದುವ ಮಾರ್ಗ.

ಸತತ ಕೀರ್ತನೆ ಮಾಡುವುದು ವಾಕ್ ತಪ, ಸತತ ದೃಢವ್ರತವಾಗಿರುವುದು ಮನೋತಪ, ಸತತ ನಮಸ್ಕಾರ ಮಾಡುತ್ತಿರುವುದು ಶಾರೀರಕ ತಪ; ಹೀಗೆ ತ್ರಿಕರಣ ಶುದ್ಧಿಯಿಂದ ವಾಕ್ ಮನೋ, ಶರೀರದಿಂದ ಉಪಾಸನೆಯಾಗಿ ಸತತ ಚರಣೆ ನಿತ್ಯಯುಕ್ತವಾಗಿ ಆಚರಿಸುವನು– "ಮಾಂಭಕ್ತ್ಯಾ" ಅವನಲ್ಲಿ ನಿಜವಾದ ಭಕ್ತ. ದೇಶಭಕ್ತಿಯಿಲ್ಲದವನು ಹೇಗೆ ದೇಶದ್ರೋಹಿಯೋ ಹಾಗೆಯೇ ಭಗವದ್ಭಕ್ತನಲ್ಲದವನನ್ನು ಭಗವದ್ರೋಹಿಯೆಂದೇ ಅನ್ನಬಹುದು. (ರಾಕ್ಷಸಾಃ)

**ಜ್ಞಾನಯಜ್ಞೇನ ಚಾಪ್ಯನ್ಯೇ । ಯಜಂತೋ ಮಾಮುಪಾಸತೇ ।**
**ಏಕತ್ವೇನ ಪೃಥಕ್ತ್ವೇನ । ಬಹುಧಾ ವಿಶ್ವತೋಮುಖಮ್ ॥೧೫॥**

ಈ ಭಕ್ತರಲ್ಲಿ, ಉಪಾಸನಾಧಿಕಾರಿಗಳಲ್ಲಿ, ಉತ್ತಮಾಧಿಕಾರಿಗಳು ಜ್ಞಾನಯಜ್ಞದಿಂದ ಉಪಾಸಿಸುವರು. ಏಕರೂಪ, ಬೇರೆ ಬೇರೆ ನಾನಾ ರೂಪ (ವಿಶ್ವತೋಮುಖಂ)ಗಳಿಂದ ಇತರ ಉಪಾಸಕರು ಭಜಿಸುವರು ಜ್ಞಾನವೆನ್ನುವುದೇ ಪರಮಯಜ್ಞ, ತಪಸ್ಸು, 'ಪರಮಾತ್ಮನೇ ಸರ್ವಸ್ವವು' ವೆಂದು ತಿಳಿದ ಮಹಾತ್ಮನು ಸತತವೂ ಅವನ ಚಿಂತೆಯಲ್ಲಿರುವುದೇ ಅವನ ಉಪಾಸನೆ. ಅವನು ಮಹದಾತ್ಮನನ್ನೇ ಉಪಾಸಿಸುತ್ತಿರುವನು ಸದಾ, ಅವನಿಗೆ ಬೇರೆ ದೇವರೇ ಇಲ್ಲ. ಆ ಜ್ಞಾನ ಸ್ಥಿತಿಯನ್ನು ಪಡೆಯದ ಇತರ ಉಪಾಸಕರಲ್ಲಿ ಕೆಲವರು, ಏಕದೇವತೆಯನ್ನೂ, ಇನ್ನು ಕೆಲವರು, ಬೇರೆ ಬೇರೆ ದೇವರನ್ನೂ ಮತ್ತೆ ಕೆಲವರು ಅನೇಕ ದೇವರನ್ನೂ (ವಿಶ್ವತೋಮುಖ) ಉಪಾಸಿಸುತ್ತಾರೆ. ಅಂತು ಈ ರೀತಿ ಉಪಾಸಕರೆಲ್ಲಾ ದೈವೀ ಪ್ರಕೃತಿಯುಳ್ಳವರೇ, ದೇವನೊಬ್ಬನಿದ್ದಾನೆಂದೂ ಅವನನ್ನು ಭಜಿಸಬೇಕೆಂದೂ ತಿಳುವಳಿಕೆ ಬರಬೇಕಾದರೇ ಸಂಸ್ಕೃತಿ ಬೇಕು, ದೈವೀ ಪ್ರಕೃತಿಯಿರಬೇಕು ಯಾವ ರೂಪದಲ್ಲಾಗಲಿ, ಅನೇಕ ರೂಪದಲ್ಲಾಗಲೀ ಭಜಿಸಲು ಆಸಕ್ತಿ ಹುಟ್ಟಬೇಕಾದರೇ ಆ ಪ್ರಕೃತಿ ಅವನಲ್ಲಿರಬೇಕು. ಅಸುರೀ ಸಂಪತ್ತು ತುಂಬಿದ ಹಿರಣ್ಯಕಸಿಪುವಿನ ಹೊಟ್ಟೆಯಲ್ಲಿ ಹುಟ್ಟಿದ ಪ್ರಹ್ಲಾದನಿಗೆ "ಅನನ್ಯ" "ಭಕ್ತ್ಯಾ" ಭಗವದ್ಭಜನೆ ಮಾಡಲು ಹೇಳಿ ಕೊಟ್ಟವರ್ಯಾರು? ಆ ದೈವೀಪ್ರಕೃತಿಯೇ. ಆರಕ್ತಗತವಾಗಿದ್ದ ಪರಮಾತ್ಮ ಭಕ್ತಿ, ಆ ಅಸುರೀ ಸಂಪತ್ತಿನ ಜನನ, ಸನ್ನಿವೇಶ, ಆವೇಶ, ಆಕ್ರೋಶ ಗಳನ್ನೆಲ್ಲಾ ಎದುರಿಸಿ, ಜ್ಞಾನಯಜ್ಞದಿಂದ ದೃಢವ್ರತವಾಗಿ ಸತತವೂ ದೃಢವ್ರತದಿಂದ ಭಗವತ್ಕೀರ್ತನವನ್ನು ಮಾಡಲು ಶಕ್ತಿ ಕೊಟ್ಟಿತು. ಇದೇ ಸಂಸ್ಕಾರ. ರಾವಣನೂ ಭಗವದ್ಭಕ್ತನೆ. ಈಶ್ವರನ ಪರಮಭಕ್ತ. ಆದರೆ ಅಸುರಭಕ್ತ. ಅಸು (ದೇಹ)ವನ್ನೇ ಆತ್ಮವೆಂದು ಭಾವಿಸಿ ಸರ್ವವನ್ನೂ ತನ್ನ ಸುಖಕ್ಕಾಗಿ ಅಪೇಕ್ಷಿಸುತ್ತಿದ್ದ. ತಪಸ್ಸು ಮಾಡಿದುದೆಲ್ಲಾ ಪಶುಶಕ್ತಿ ಅಸುರಬಲ ಅಜೇಯತ್ವವನ್ನು ಹೊಂದಲು ಉಪಭೋಗ, ಸಾಮರ್ಥ್ಯನೆ ಗಾಗಿ ಈ ಉಪಾಸನೆಯೇ ಹೊರತು, ಭೋಗತ್ಯಾಗ ಮಾಡಲು ಈ

ಉಪಾಸನೆಯಲ್ಲ. ಅಸುರ ಉಪಾಸನೆಯೇ ಉಪಾಸನದ ಧ್ಯೇಯವಲ್ಲಾ. ಸ್ವಾರ್ಥಫಲಕ್ಕಾಗಿ ಉಪಾಸನೆ. ದೇವನನ್ನು ಮೀರಲೇ ಹೊರತು ದೇವನನ್ನು ಸೇರಲಲ್ಲ. ಆದರೂ ವಿರೋಧ ಚಿಂತನದಿಂದಲೇ ಹರಿಭಕ್ತನಾದ, ಅವನ ಕೈಯಿಂದಲೇ ಕೈವಲ್ಯವನ್ನು ಹೊಂದಿದ.

ಬೇರೆ ಬೇರೆ ಮತ್ತು ವಿಶ್ವತೋಮುಖವಾಗಿ ಉಪಾಸನೆ ಮಾಡುವುದೂ ಪೃಥ್ವಿಯಲ್ಲಿನ ಇತರ ಮತಾವಲಂಬಿಗಳನ್ನೂ, ಇತರ ಮಾರ್ಗಾರಾಧಿಸುವವರನ್ನೂ ಸೂಚಿಸಬಹುದು. ಅವನನ್ನು ಸೇರುವುದಕ್ಕೆ ಇತರ ದಾರಿಗಳೂ ಸಾಧಕರಿಗಿದೆಯೆಂದು ತೋರಿಸುತ್ತದೆ. ಎಲ್ಲಾ ಅವನೇ.

"ಏಕತ್ವೇನ, ಪೃಥಕ್ತ್ವೇನ ಬಹುಧಾ ವಿಶ್ವತೋಮುಖಂ" ಎನ್ನುವುದು ನಾರದಭಕ್ತಿಸೂತ್ರದ (ಸೂ ೭೪, ೭೫) "ವಾದೋನಾವಲಂಬ್ಯಃ"— "ಬಾಹುಲ್ಯಾವಕಾಶತ್ವಾದ್, ಅನಿಯನ್ತ್ರಿ ತತ್ವಾಚ್ಚ" ಎನ್ನುವುದನ್ನು ಮನಕ್ಕೆ ತರುತ್ತದೆ. ಈ ಏಕದೇವತಾ ಬಹುದೇವತಾ ರೂಪದಿಂದ, ವಿಶ್ವತೋಮುಖನಾದ ದೇವನನ್ನು ಆರಾಧಿಸಲು "ಬಹುಲ್ಯಾವಕಾಶತ್ವಾದ್" ಬಹಳ ಅವಕಾಶವಿದೆ. ವಾದದಲ್ಲಿ ಪ್ರವೇಶಿಸಬಾರದು. ಬರೀ ವಾದದಿಂದ ನ್ಯಾಯವಾದಿಗಳು ಒಂದೇ ಸಮಸ್ಯೆಯ ಮೇಲೆ ಬಹುವಾಗಿ ಇತ್ಯರ್ಥವಾಗಲಾಸ್ಪದವಾಗುವಂತೆ, ಅನೇಕ ಮುಖದಿಂದ ವಾದಿಸುವರು. ಅಂತೇ ಒಂದೇ ಸತ್ತತ್ವವನ್ನು ಅನೇಕ ಮುಖವಾಗಿ, ಬಹು ಮುಖವಾಗಿ ಬೇರೆ ಬೇರೆ ಕಡೆಯಿಂದ ನೋಡಲವಕಾಶವಿದೆ. ಬರೀ ತರ್ಕಕ್ಕೇ ನಿಲುಕದ ವಸ್ತುವಿದು, 'ನಯಮಾತ್ಮಾ ಪ್ರವಚನೇನ ಲಭ್ಯೋನಮೇಧಯಾನ ಬಹುನಾಶ್ರುತೇನ' (ಮುಂ ೩, ೨, ೩,) ಕೇವಲ ಶ್ರದ್ಧಾ ಭಕ್ತಿಯಿಂದ, ಅವನ ಪ್ರಸಾದದಿಂದಲೇ, ಅಂತರಾತ್ಮದಲ್ಲಿ ಪ್ರಕಾಶವಾದ ತತ್ವ. ಶಿವಗಂಗಾ ಪರ್ವತವು, ಒಂದೊಂದು ದಿಕ್ಕಿನಿಂದಾ ಒಂದೊಂದಾಕಾರವಾಗಿ ಕಾಣುತ್ತದೆ. ತುಂಕೂರಿಂದ ಲಿಂಗಾಕಾರವಾಗಿಯೂ, ಬೆಂಗಳೂರು ಮಾರ್ಗದಲ್ಲಿ ಬಸವಾಕಾರವಾಗಿಯೂ ಒಂದು ದಿಕ್ಕಿನಿಂದ ಸರ್ಪಾಕಾರವಾಗಿಯೂ, ಎದುರು ದಿಕ್ಕಿನಿಂದ ಗಣೇಶಾಕಾರವಾಗಿಯೂ ನೋಡಿದ ದಿಕ್ಕಿಗನುಗುಣವಾಗಿ ಕಾಣುತ್ತೆ. ಸರ್ವತೋಮುಖವಾಗಿರುವ ಈ ಪರ್ವತವನ್ನು

ತಾನು ನೋಡಿದ ದಿಕ್ಕಿನಿಂದ ಕಂಡಾಕಾರವೊಂದೇ ನಿಜವೆಂದು ಲಿಂಗ, ಬಸವ, ಸರ್ಪ, ಗಣೇಶಾಕಾರಗಳಲ್ಲೊಂದೇ ಎಂದು ವಾದಿಸಲಾಗುತ್ತದೆಯೇ ? ಅವನು ಕಂಡ ರೂಪ, ಭಾವ ಆ ದಿಕ್ಕಿನ ದೃಷ್ಟಿಯಿಂದ ನ್ಯಾಯವಾಗಿರಬಹುದು. ಇತರ ದಿಕ್ಕಿನ ದೃಷ್ಟಿಯುವರಿಗೆ ಬೇರೇ ರೂಪ ತೋರಬಹುದು. ಅವರ ಸ್ಥಾನದಲ್ಲಿ ನಿಂತು ನಾವು ನೋಡಿದ ಮೇಲೆ ನಿಜವೇನೆಂದು ತಿಳಿದು ವಾದಿಸಬೇಕೇ ಹೊರತು, ನಿಂತಲ್ಲಿಯೇ ನಮ್ಮ ದೃಷ್ಟಿ ರೂಪವೊಂದೇ ನಿಜವೆಂದು ಹೋರಾಡುವುದು ಸರಿಯಲ್ಲಾ. ಇಂತೇ ಇತರ ಮತಾಲಂಬಿಗಳ ದೃಷ್ಟಿಕೋಣವನ್ನೂ, ಅವರ ಶ್ರದ್ಧಾ ನಂಬಿಕೆಗಳನ್ನೂ ಸಾನುಭೂತಿಗಳಿಂದ ಅವರ ಸ್ಥಾನದ ದೃಷ್ಟಿಕೋಣದಿಂದ ನಿಜವಿರಬಹುದೆಂದು ಭಾವಿಸಿ, ಅವಲೋಕಿಸಬೇಕು. ಯಾವ ರೂಪದಲ್ಲಿ ಪೂಜಿಸಿದರೂ ಅವನದೇ. ಅವನಿಗೇ ತಲಪುತ್ತದೆ. ಯಾವ ರೀತಿ ಪೂಜಿಸಿದರೂ ಅವನಿಗೇ ಸೇರುತ್ತದೆ ಎಂದು ಅವನೇ ಆಶ್ವಾಸನವಿತ್ತಿದ್ದಾನೆ. 'ಮನವಿದ್ದಂತೆ ಮಹೇಶ್ವರ' ಎಂದು ಭಾವಿಸಿದಂತೆ ಭುವನೇಶ್ವರ. ಮತತತ್ವ ತಿಳಿಯದ ಮೂಢರಲ್ಲಿ ಪೈಪೋಟಿಯಿರಬಹುದೇ ಹೊರತು, ತತ್ವಾರ್ಥ ತಿಳಿದವನು ಯಾವ ಮಾರ್ಗವನ್ನೂ ಅಲ್ಲಗಳೆಯುವುದಿಲ್ಲಾ. ಯಾವದಾದರೂ ಸತ್ಪಥದಲ್ಲಿ ಕಾಲಿಟ್ಟು, 'ಏಕಮೇವಾಂ, ಅದ್ವಿತೀಯಂ'ನಲ್ಲಿ ನಂಬಿ ಶ್ರದ್ಧೆಯಿಂದ ಆರಾಧಿಸುತ್ತಿದ್ದರೆ ಸರಿ. ಇದೇ ಪರಮಾತ್ಮ ಪ್ರಪಂಚದಲ್ಲಿನ ಸರ್ವತೋಮುಖಾರಾಧನೆಯನ್ನು ತಿಳಿಸಿ, ಎಲ್ಲದರಲ್ಲೂ ಸಹಾನುಭೂತಿ ತೋರಿದಂತೆ ಬೋಧಿಸುವನು. ಮುಂದಿನ ೪ ಶ್ಲೋಕಗಳಲ್ಲಿ ಎಲ್ಲಾ ಮಾರ್ಗಗಳೂ ತಾನೇ, ಎಲ್ಲರ ಗುರಿಯೂ ತಾನೇ, ಎಲ್ಲರಲ್ಲಿಯೂ ತಾನೇ ಎಂದು ತನ್ನ ವಿಶ್ವರೂಪವನ್ನು ಸಂಕ್ಷೇಪವಾಗಿವಿವರಿಸಿರುವನು.

**ಅಹಂ ಕ್ರತುರಹಂ ಯಜ್ಞಃ । ಸ್ವಧಾಹಮಹಮೌಷಧಮ್ ।**
**ಮಂತ್ರೋಽಹಮಹಮೇವಾಜ್ಯ-ಮಹಮಗ್ನಿರಹಂ ಹುತಮ್ ॥೧೬॥**

**ಪಿತಾಹಮಸ್ಯ ಜಗತೋ । ಮಾತಾ ಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರಮೋಂಕಾರ-ಋಕ್ ಸಾಮ ಯಜುರೇವ ಚ ॥೧೭॥**

ಗತಿರ್ಭರ್ತಾ ಪ್ರಭುಃ ಸಾಕ್ಷೀ । ನಿವಾಸಃ ಶರಣಂ ಸುಹೃತ್ ।
ಪ್ರಭವಃ ಪ್ರಲಯಃ ಸ್ಥಾನಂ । ನಿಧಾನಂ ಬೀಜಮವ್ಯಯಮ್ ॥೧೮॥

ತಪಾಮ್ಯಹಮಹಂ ವರ್ಷಂ । ನಿಗೃಹ್ಣಾಮ್ಯುತ್ಸೃಜಾಮಿ ಚ ।
ಅಮೃತಂ ಚೈವ ಮೃತ್ಯುಶ್ಚ । ಸದಸಚ್ಚಾಹಮರ್ಜುನ ॥೧೯॥

ಕ್ರತು, ಯಜ್ಞ, ಸ್ವಧಾ, ಮಹತ್ತಾದ ಔಷಧ, ಮಂತ್ರ ಆಜ್ಯ, ಅಗ್ನಿ, ಆಹುತಿ ಎಲ್ಲವೂ ನಾನೇ-ಇವೆಲ್ಲಾ ವೇದದ ಕಾಲದ್ದು. ಈಗ ಯಜ್ಞಯಾಗಾದಿಗಳಿರಲಿ, ಮಾತುಗಳಿಗೇ ಅರ್ಥ ಗೊತ್ತಿಲ್ಲಾ. ವೇದಗಳ ಕಾಲದಲ್ಲಿ ಯಜ್ಞಯಾಗಾದಿಗಳು, ದೇವತೆಗಳಿಗೂ, ಪಿತೃಗಳಿಗೂ ಪ್ರೀತ್ಯರ್ಥವೆಂದು ನೈಮಿತ್ತಿಕ ಕರ್ಮಗಳಾಗಿದ್ದವು. ಅವುಗಳನ್ನು ಬಹಳ ಶ್ರದ್ಧೆಯಿಂದ, ಮಂತ್ರತಂತ್ರ ಸಹಿತ ಆಚರಿಸುತ್ತಿದ್ದರು. ಇದರಿಂದ ದೇವಪಿತೃಗಳು ಸಂತುಷ್ಟರಾಗುವರೆಂದೂ, ಅವಕ್ಕೆ ಪ್ರತಿಫಲವಾಗಿ ಸಾರ್ವಜನಿಕ ಫಲವಾದ ಮಳೆಬೆಳೆಗಳನ್ನು ಕರುಣಿಸುತ್ತಿದ್ದರೆಂದೂ ಮತ್ತು ಆಯಾಯಾ ಕಾಮಫಲಯುಕ್ತವಾದ ಯಜ್ಞ, ಯಾಗಾದಿಗಳಿಗೆ ಆ ಫಲಗಳನ್ನು ಕರುಣಿಸುತ್ತಿದ್ದರೆಂದೂ ಪೂರ್ಣವಾಗಿ ನಂಬಿದ್ದರು. ಪರಸ್ಪರ ತೃಪ್ತಿಗಾಗಿ ದೇವಮಾನವರ ಕರ್ಮವಾಗಿ ವಿದಿತವಾಗಿತ್ತು. ಅದೆಲ್ಲಾ ತಾನೇ ಎಂದು ಪರಮಾತ್ಮ ಹೇಳುತ್ತಾನೆ. ಅಗ್ನಿ, ಆಜ್ಯ, ಆಹುತಿ, ಆ ಮಂತ್ರ ಎಲ್ಲಾ ಕ್ರತು, ಯಜ್ಞಯಾಗಾದಿಗಳಲ್ಲೂ ಅವನೇ. ಅವನೇ ಅನ್ನರೂಪವಾದ ಔಷಧ.

ಜಗತ್ತಿಗೆ ತಾಯಿ, ತಂದೆ, ತಾತ, ಫಲದಾತ, ತಿಳಿಯಬೇಕಾದ ವಸ್ತು ಪವಿತ್ರವಾದ "ಓಂ"ಕಾರ ಪ್ರಣವಕ್ಷರ, ಋಕ್, ಸಾಮ, ಯಜುರ್ವೇದಗಳೂ ತಾನೇ– ಪುರುಷರೂಪವಾಗಿ ತಂದೆಯೂ ಪ್ರಕೃತಿ ರೂಪವಾಗಿ ತಾಯಿಯೂ ಜಗತ್ತಿಗೆ ಕಾರಣಭೂತರು. ಈ ಪುರುಷ ಪ್ರಕೃತಿಗಳಿಗೆ ಹೇತುವಾದುದರಿಂದ ಅವನೇ ಪಿತಾಮಹ. (ತಾತ, ತಂದೆ ತಾಯಿಗಳಿಗೆ ತಂದೆ ತಾಯಿ) ಜಗತ್ತಿನಲ್ಲಿ ಕರ್ಮಫಲದಾತೃವಾಗುವುದರಿಂದ ಧಾತಾ. ಹುಟ್ಟಿಗೆ, ಪಾಲನೆಗೆ ಎಲ್ಲದಕ್ಕೂ ಅವನೇ ಕಾರಣ. ತಿಳಿವಿಗೆ (ವೇದ)

ಕಾರಣವಾದ ಆದಿ ಜ್ಞಾನಭಂಡಾರಗಳಾದ ಋಕ್, ಯಜು, ಸಾಮವೆಂಬ ತ್ರಿವೇದಗಳೂ, ಅದರಲ್ಲಿ ವಿಸರಿತವಾದ ಪವಿತ್ರವಾದ ಓಂಕಾರ ವಿವರಣೆಯೂ ತಾನೇ. ವೇದಗಳನ್ನು ಪರಮಾತ್ಮನ ಕೇವಲ ನಿಶ್ವಾಸಗಳು, ಪ್ರಯತ್ನವೇ ಇಲ್ಲದೆ, ಹೊರಟ ವಚನಗಳು ಎಂದು ಸನಾತನ ಧರ್ಮದಲ್ಲಿ ನಂಬಿಕೆಯಿದೆ. ಇವು ಅಪೌರುಷ ಕೇವಲ ದೇವದತ್ತ, ಇವರಲ್ಲಿ ಪಾವನವನ್ನಾಗಿಮಾಡಿ ಕಾಪಾಡುವ ಪವಿತ್ರ ಸ್ವರೂಪ ತಿಳಿಸುವ "ಓಂ" ಎಂಬ ಬೀಜಾಕ್ಷರವಿದೆ ಎಂದೇ ಸನಾತನ ಧರ್ಮಿಗಳು ನಂಬಿದ್ದರು ಅದೇ ಪರಮಾತ್ಮ ಸ್ವರೂಪವೆಂಬ ಪೂಜ್ಯ ಭಾವನೆಯೂ ಉಂಟು. ಜಗತ್ತಿಗೆ ತಾಯಿ ತಂದೆ ತಾತ ತಾನೇ ಎಂದೂ (ಉತ್ಪತ್ತಿ ಕಾರಣ) ಜಗತ್ತಿಗೆ ತಾನೇ ಗುರು, ಜ್ಞಾನದಾಯಕವಾದ ತ್ರಿವೇದ, ಓಂಕಾರ ಸ್ವರೂಪವೆಂದೂ ಪರಮಾತ್ಮ ಹೇಳಿದ್ದಾನೆ. ಸೃಷ್ಟಿಸಿದಮೇಲೆ ಜ್ಞಾನ ಪಾಲನೆಯನ್ನು ಅವನೇ ಮಾಡಿದ್ದಾನೆ.

ಜಗತ್ತಿಗೆ ಮತ್ತು ಮನುಷ್ಯನಿಗೆ (ಸಮಷ್ಟಿ ವ್ಯಷ್ಟಿ) ಗತಿ, (ಪ್ರಾಪ್ಯ ಸ್ಥಾನ) ಭರ್ತಾ (ಪೋಷಕ) ಪ್ರಭು (ಶಾಸನಕರ್ತ) ಸಾಕ್ಷಿ (ನೋಡುತ್ತಿರುವವನು) ನಿವಾಸಃ (ವಾಸಿಸಲು ಸ್ಥಾನ, ಮನೆ) ಶರಣಂ (ಮೊರೆ ಹೋಗಲು ಜಾಗ) ಸುಹೃತ್ (ಸಹಾಯಮಾಡಲು ಸಹೃದಯ ಉಳ್ಳವನು) ಪ್ರಭವಃ (ಮೊದಲನೆಯವ ಆದಿಕರ್ತ) ಪ್ರಲಯಃ (ಸಂಹಾರಕ, ಅಂತ್ಯನು) ಸ್ಥಾನ (ಇರುವ ಪ್ರದೇಶ) ನಿಧಿನಿಕ್ಷೇಪ ಬೀಜಂ (ಕಾರಣ) ಅವ್ಯಯಂ. (ವ್ಯಯ, ಖರ್ಚು, ಆಗದಿರುವವನು) ಶ್ವೇತಾಶ್ವತರೋಪನಿಷತ್ತಿನಲ್ಲಿ (೩, ೧೭ನೇ) "ಸರ್ವೇಂದ್ರಿಯ ಗುಣಾ ಭಾಸಗ್ ಸರ್ವೇಂದ್ರಿಯ ವಿವರ್ಜಿತಂ। ಸರ್ವಸ್ಯ ಪ್ರಭು ಮೀಶಾನಗ್ ಸರ್ವಸ್ಯ ಶರಣಗ್ ಸುಹೃತ್ |" ಎಂದಿದೆ. ಪೂರ್ವಾರ್ಧವು ೧೩ನೇ ಅಧ್ಯಾಯದ ೧೪ನೇ ಶ್ಲೋಕದ ಪೂರ್ವಾರ್ಧವಾಗಿ ಅಕ್ಷರಶಃ ಬಂದಿದೆ. ಅಲ್ಲಿ ಅದರ ವಿಮರ್ಶೆ ಮಾಡುವ ಉತ್ತರಾರ್ಧದಲ್ಲಿನ "ಸರ್ವಸ್ಯ ಪ್ರಭು ಮೀಶಾನಗ್ ಸರ್ವಸ್ಯ ಶರಣಗ್ ಸಹೃತ್" ಎಲ್ಲರ ಶಾಸನಕರ್ತ, ಒಡೆಯ, ಮೊರೆಹೋಗಲು ಸ್ಥಾನ ಸಹಾಯಮಾಡಲು ಸಹೃದಯ ಉಳ್ಳವನು" ಎಂದು ಈ ಶ್ಲೋಕದ ಪೂರ್ವಾರ್ಧದ ಅಭಿಪ್ರಾಯ ಅದೇ ಪದ ಸಮೂಹಗಳಿಂದ ಬಂದಿದೆ.

ಜಗತ್ತಿಗೆ ಮಾತಾ ಪಿತೃ ಗುರು ಆದಮೇಲೆ ಮುಂದಿನ ಗತಿಯಾರು ಎಂದರೆ ಗತಿಯೂ ಅವನೇ; ಇರುವಾಗ ಪೋಷಕನು, ಸಾಯುವಾಗ ಯಾರು ಎಂದರೆ ಅವನೇ. "ಕಲ್ಲಿನಲ್ಲಿ ಇರುವಾ ಕಪ್ಪೆಗೆ ಅಲ್ಲಿ ಉದಕ ಕೊಡುವ" ಮುಂತಾದ ದಾಸರ ಪದಗಳಲ್ಲೂ, "ಹುಟ್ಟಿಸಿದ ದೇವರು ಹುಲ್ಲು ಮೇಯಿಸುತ್ತಾನೆಂ"ಬ ನಾಡು ಗಾದೆಗಳಲ್ಲೂ ಈ ದೇವರೇ ಪೋಷಕನೆಂಬ ನಂಬಿಕೆಯು ಸ್ಥಿರವಾಗಿದೆ. ತಾಯಿಯಿಲ್ಲದ ಎಳೆಪಸುಳೆಯನ್ನು ಕೂಡಾ ಯಾರಾದರೂ ದಾಯಿ, ನೆಂಟರ ಮೂಲಕ ಸಲಹುತ್ತಾನೆ. ನನಗೆ ನಾಳೆಗೆ ಎಂಬ ಯೋಚನೆಯೇ ಇಲ್ಲವೆ, ಎಷ್ಟೋ ಮಹಾತ್ಮರು ಕಾಲ ಹಾಕುವರು. ಪೋಷಕನವನಿರುವಾಗ ಏನು ಯೋಚನೆ. ಈ ವಿಷಯದಲ್ಲಿ ಶ್ರೀರಾಮಕೃಷ್ಣರು ಒಂದು ಕಥೆ ಹೇಳುತ್ತಿದ್ದರು. ಒಬ್ಬ ಅಬಾಲಬ್ರಹ್ಮ ಚಾರಿಯಾದ ಸನ್ಯಾಸಿಯು ಭಿಕ್ಷೆಗಾಗಿ ಒಂದು ಮನೆಗೆ ಹೋದನಂತೆ. ಭಿಕ್ಷೆನೀಡಲು ಒಬ್ಬ ಯುವತಿ ಬಂದಳು. ಅವಳನ್ನು ಹುಡುಗಿಯ ಸ್ಥಿತಿ ಯಲ್ಲೂ ನೋಡಿದ್ದ. ಯುವತಿಯನ್ನು ಕಂಡು ಅಲ್ಲಿದ್ದವರನ್ನು ಏನೂ ತಿಳಿ ಯದೆ ಕೇಳಿದ, "ಏನಿದು ಆಕೆಯ ಎದೆ ಬಾತುಕೊಂಡಿವೆ. ಉಬ್ಬರಿಸಿವೆ" ಎಂದು. ಅವರು ಹೇಳಿದರು. "ಮುಂದೆ ಆಕೆಯು ಮಕ್ಕಳನ್ನು ಹೆತ್ತರೆ ಅವುಗಳ ಪೋಷಣೆಗೆ ಹಾಲು ಭರಿಸಲು ದೇವರು ಆಕಗೆ ಅವನ್ನು ಪಾಲಿಸಿದಾನೆ" ಎಂದರು. ಬ್ರಹ್ಮಚಾರಿಗೆ ಏನೋ ಜ್ಞಾನೋದಯ ವಾದವನಂತೆ ದೂರ ನೋಟನೋಡಿ ಭಿಕ್ಷಾಕ ಪಾತ್ರೆಯನ್ನೆಸೆದು "ಮುಂದೆ ಹುಟ್ಟುವ ಹಸುಳೆಗೆ ಹಾಲನ್ನು ಪಾಲಿಸುವ ಭಾರ ಭಗವಂತ ಹೊತ್ತಿದ್ದ ಮೇಲೆ ನಾನು ಈ ಹಾಳು ಹೊಟ್ಟೆಗೆ ಇವತ್ತು ನಾಳೆಗೆಂದು ಏಕೆ ಬಿಕ್ಷೆಬೇಡಬೇಕು. ನಿಶ್ಚಿಂತೆಯಾಗಿ ಧ್ಯಾನಮಾಡುವೆನು" ಎಂದು ದೃಢ ವೈರಾಗ್ಯದಿಂದ ಹೊರಟುಹೋದನಂತೆ. ನಾವು ಸುಮ್ಮನೆ ಪರದಾಡುವೆವು, ಉದರ ಪೋಷಣೆಗೆ. ನಾವು ಹುಟ್ಟುವ ಮೊದಲೇ ನಮ್ಮ ತಾಯಿ ಪೋಷಣೆಗೆ ಸಿದ್ಧವಾಗಿರುತ್ತಾಳೆ; ನಮ್ಮ ಅನ್ನ ಪ್ರಕೃತಿ ಯಲ್ಲುತ್ಪತ್ತಿಯಾಗುತ್ತಿದೆ, ಸುಮ್ಮನೆ ಇಲ್ಲದ ಹಾಹಾಕಾರ. "ಹಡಗು ತುಂಬಲು ಹೋದವನು ವಾಪಸು ಬಂದಾ ಹೊಟ್ಟೆತುಂಬಲು ಹೋದವನು ವಾಪಸು ಬರಲೇ ಇಲ್ಲಾ" ಎಂಬುದೊಂದು ಸಮಸ್ಯೆ. ಹಡಗನ್ನಾದರೂ,

ಎಷ್ಟು ದೊಡ್ಡದಿರುವುದನ್ನಾದರೂ, ಕೊಂಚವಾಗಿ ಹಾಕಿಹಾಕಿ ಭರ್ತಿಮಾಡ ಬಹುದು. ಆದರೆ ಈ ಹೊಟ್ಟೆಗೆ ಎಷ್ಟು ಹಾಕಿದರೂ ಖಾಲಿಯಾಗುತ್ತಿರು ತ್ತದೆ. ತಳಮಳ ತಲ್ಲಣಿಸುತ್ತದೆ ತುತ್ತಿನ ಚೀಲ. ಹಾಕಿದುದೆಲ್ಲಾ ಜೀರ್ಣಿ ಸಿಕೊಂಡು ಹೊತ್ತುಹೊತ್ತಿಗೂ ಇನ್ನೂ ಬೇಕೆನ್ನುತ್ತಿರುತ್ತದೆ. ಇದನ್ನು ಭರಿಸಿ ತೃಪ್ತಿಪಡಿಸುವವನ್ಯಾರು.

ಹೊಟ್ಟೆ ತುಂಬುವುದೆನ್ನುವುದರಲ್ಲಿ ಉದರಪೋಷಣ ಒಂದೇ ಅಲ್ಲದೇ ದೇಹಪಾದ್ಯಂತ ಪೋಷಣೆಯೂ ಸೇರಿಹೋಗುತ್ತೆ. ಪಂಚಜ್ಞಾನೇಂದ್ರಿಯ ಕರ್ಮೇಂದ್ರಿಯ ತೃಪ್ತಿಯೂ ಸೇರುತ್ತೆ. ಅವಕ್ಕೆಲ್ಲಾ ಬೇಕಾದ ಆಹಾರ ಸಕಾಲದಲ್ಲಿ ಮನುಷ್ಯ ಅವಡಿಸುತ್ತಿರಬೇಕಾಗಿದೆ. ಎಷ್ಟು ಅನುಭವಿಸಿದರೂ ಸಾಲದು, ಏನು ಅನುಭವಿಸಿದರೂ ಸಾಲದು. ಇನ್ನೂ ಅನುಭವಿಸ ಬೇಕೆನ್ನುತ್ತವೆ. ಅದಕ್ಕೆ ತೃಪ್ತಿಪಡಿಸಲೆತ್ನಿಸದೆ, ಸಾಕಾದಷ್ಟು ದೇಹಾ ಭರಣಕ್ಕೆ ಬೇಕಾದಷ್ಟು ಮಾತ್ರ ಉಪಭೋಗಿಸುವ ಜಾಣ. "Eat to live and not live to eat." ಹೊಟ್ಟೆಗೆ ಕಷ್ಟಪಡುವರಿದ್ದಾರೆಯೋ ಹೊರತು, ಹೊಟ್ಟೆಗಿಲ್ಲದವರಿಲ್ಲಾ. ವೃಥಾ ಹೆಚ್ಚು ತಿಂದು, ರೋಗ ರುಜಿನಗಳಿಂದ ನರಳುವವರು ಜಾಸ್ತಿಯೇ ಹೊರತು, ಹೊಟ್ಟೆಗಿಲ್ಲ ದವರಿಲ್ಲಾ. ರುಚಿರುಚಿಯಾಗಿ ಬಗೆಬಗೆಯ ಆಹಾರ ಅವರಪೇಕ್ಷೆಯಂತೆ ದೊರಕದವರಿದ್ದಾರೆಯೋ ಹೊರತು ಹೊಟ್ಟೆಗಿಲ್ಲದವರಿಲ್ಲಾ. ಒಂದು ಲೋಟ ನೀರು ಕುಡಿಯಬೇಕಾದರೂ ಋಣಾನುಬಂಧವಿರಬೇಕು. ಅವರವರ ಅವತ್ತಿನವತ್ತಿನೂಟ ಎಲ್ಲೆಲ್ಲಿಯೋ ಒದಗಿಸಿರುತ್ತಾನೆ. ಪ್ರಯಾಣ ದೀರ್ಘವಾದಾಗ ಬುತ್ತಿಕಟ್ಟಿಕೊಂಡು ಹೋಗುವವರೂ ಇದ್ದಾರೆ. ಅಲ್ಪ ಫಲ, ಉದುಕಗಳಲ್ಲೇ ತೃಪ್ತಿಹೊಂದಿ ಫಲಹಾರದಲ್ಲಿ ಕಾಲಹಾಕಿ ಹೋಗುವವರೂ ಇದ್ದಾರೆ. ಉಪವಾಸಹೋಗುವವರೂ ಇದ್ದಾರೆ. ಇದರಲ್ಲಿ ಕೊನೆಯ ಪಂಗಡದವರೇ ಸುಖಿಗಳು.

ಪ್ರಭು, ಶಾಸನಕರ್ತ ಏನೇನು ಮಾಡಬೇಕೆಂದು ವಿಧಾಯಕ ಮಾಡುವವನೂ ಅವನೇ. ನಮಗೆ ಇಹದಲ್ಲಿ ರಾಜನಾಗಲೀ ಶಾಸನ ಸಭೆಯಾಗಲೀ ಶಾಸನ ಮಾಡುವಂತೆ ಕಂಡರೂ ಅವು ಅಲ್ಪಾವಧಿಯ, ಅಲ್ಪವ್ಯಾಪ್ತಿಯ, ಅಲ್ಪಜನಕ್ಕನುಗುಣವಾದ ಶಾಸನಗಳು. ಇವನು

ವಿಶ್ವಶಾಸನಕರ್ತ. ಸರ್ವಕಾಲಕ್ಕೂ ಸರ್ವಜನಕ್ಕೂ ಸರ್ವದೇಶಕ್ಕೂ ಪ್ರಭು, ಶಾಸನಕರ್ತ. ಪ್ರಭು ಗಳಿಗೆ ಪ್ರಭು. ಶಾಸನ ಮಾಡುವವರಿಗೆ ಶಾಸನ ಮಾಡತಕ್ಕವನು. ಅವನ ಶಾಸನ ಮೀರಿ ನಡೆಯಲು ಯಾರಿಗೂ ಸಾಧ್ಯವಿಲ್ಲಾ.

ಸಾಕ್ಷಿ: ಎಲ್ಲವನ್ನೂ ಯಾವಾಗಲೂ ನಿರ್ಲಿಪ್ತವಾಗಿ ನೋಡುತ್ತಿರುವನು ನಡೆಯುವುದರಲ್ಲಿ ಭಾಗವಹಿಸದೆ ನೋಡುತ್ತಿರುವವನು. ದಾಸರ ಕಥೆಯೊಂದರಲ್ಲಿ ಅವರ ಗುರುಗಳು ತಮ್ಮ ಶಿಷ್ಯರಿಗೆಲ್ಲಾ ಒಂದೊಂದು ಬಾಳೆಯಹಣ್ಣನ್ನು ಕೊಟ್ಟು, ಯಾರೂ ನೋಡದಂತೆ ತಿಂದುಬನ್ನಿ ಎಂದು ಹೇಳಿದರಂತೆ. ಯಾರಿಗೂ ಕಾಣದಂತೆ ಒಬ್ಬ ಮರದ ಮರೆಯಲ್ಲಿ ನಿಂತು ತಿಂದ, ಒಬ್ಬ ಮಾಳಿಗೆಯ ಮೇಲೆ ಹೋಗಿ ತಿಂದ, ಒಬ್ಬ ಮುಸುಕುಹಾಕಿಕೊಂಡು ತಿಂದ. ಇತ್ಯಾದಿ ಆದರೆ ಎಲ್ಲರೂ ತಿಂದು ಬಂದರೂ, ದಾಸರು ಮಾತ್ರಾ ಹಣ್ಣು ತಿನ್ನದೆ ವಾಪಸು ಹಿಂದಕ್ಕೆ ತಂದು "ಸಾಧ್ಯವಿಲ್ಲಾ" ಎಂದು ಕೊಟ್ಟರಂತೆ. "ಏನಯ್ಯಾ ಇದು ?" "ಸರ್ವಸಾಕ್ಷಿ, ಸರ್ವದಾ ಸಾಕ್ಷಿ. ಭಗವಂತ ಎಲ್ಲೆಡೆಯೂ ಸಾಕ್ಷಿಯಾಗಿರುವಾಗ, ನಾನು ಈ ಹಣ್ಣನ್ನು ಯಾರಿಗೂ ಕಾಣವೆ ಹೇಗೆ ತಿನ್ನಲು ಸಾಧ್ಯ. ಅವ ನೋಡಿಯೇ ನೋಡುತ್ತಾನೆ, ಎಲ್ಲಿ ಹೇಗೆ ತಿಂದರೂ" ಅಂದರಂತೆ.

ನಿವಾಸಃ ವಾಸಸ್ಥಾನ. ಎಲ್ಲರೂ ಅವನಲ್ಲಿಯೇ ಇರುವುದು. ನಾವೇನೋ ನಮ್ಮ ಮನೆಯಲ್ಲಿದ್ದೀವಪ್ಪಾ ಅಂದರೆ ಅದೂ ಅವನದೇ. ಜಗತ್ತೇ ಅವನಲ್ಲಿದೆ.

ಶರಣಃ ಮೊರೆಹೋಗಲು ಆಸರೆ. 'ನಂಬಿ ಕೆಟ್ಟವರಿಲ್ಲವೋ' ಎಂಬ ದಾಸರ ಪದದಂತೆ. ಶರಣಾಗತವತ್ಸಲ ಸ್ವಾಮಿ. ಅವನ ಅವತಾರಗಳಲ್ಲಿ ಸ್ವಾಮಿ ತನ್ನ ಶರಣು ಹೊಕ್ಕವರನ್ನು ಕಾಪಾಡಲು ಎಷ್ಟು ಕಷ್ಟಗಳನ್ನಾದರೂ ಸಹಿಸುತ್ತಾನೆ. 'ಶರಣರು' ಎಂದು ಮಹಾತ್ಮರಲ್ಲಿ ಒಂದು ಪಂಗಡವುಂಟು. ಇದು ಪ್ರಪತ್ತಿಯ ಲಕ್ಷಣ. ಸುಮ್ಮನೆ "ಸಂಕಟ ಬಂದಾಗ ವೆಂಕಟರಮಣ" ಎಂದು ಕಷ್ಟಪರಿಹಾರಕ್ಕೆ ಶರಣು ಹೋಗುವುದಲ್ಲಾ. ಎಲ್ಲಾ ನೀನೇ 'ಹಾಲಿನಲ್ಲಾದರೂ ಅದ್ದು ನೀರಿನಲ್ಲಾದರೂ ಅದ್ದು' ಎಂದು ಮೊರೆಹೋಗುವುದು. ಇದರಲ್ಲಿ ಬರುವ ಶಾಂತಿ

ಅಘಾದ. ಸುಗ್ರೀವ ಶರಣು ಬಂದುದು, ವಿಭೀಷಣ ಶರಣು ಬಂದುದು ಅವುಗಳ ಸನ್ನಿವೇಶ, ಮಾಧುರ್ಯ, ಶ್ರೀರಾಮರ ಕೃಪಾಕಟಾಕ್ಷ ಇವುಗಳನ್ನು ಸ್ವಾರಸ್ಯವಾಗಿ ಕವಿಗಳು ವಿವರಿಸಿರುವುದನ್ನು ನೀವು ಕೇಳಿರಬಹುದು. ಸ್ವಾಮಿಗೆ ಶರಣು ಬರುವುದಕ್ಕೂ ಒಂದು ದೀನತೆ ಬೇಕು. ದೈನ್ಯದಿಂದ ಮೊರೆಯೊಕ್ಕವರನ್ನು ಯಾವಾಗಲೂ ಕಾಪಾಡುವನು. ಹೆಚ್ಚೇಕೆ. ನಮ್ಮ ಪುರಾಣಗಳು ಅವತಾರಗಳೆಲ್ಲಾ ಕಷ್ಟಬಂದಾಗ ಮಾನವ ದೇವದಾನವರು ದೇವನನ್ನು ಶರಣುಹೊಕ್ಕುದು ಶರಣಾಗತರನ್ನು ಅವ ಕಾಪಾಡಿದುದೇ ಅಲ್ಲವೇ.

ಸುಹೃತ್–ಸಹೃದಯದಾತ ಅವನು. ಸ್ನೇಹಿತನೆಂದೇ ಅನ್ನಬಹುದು. ಪ್ರತಿಫಲಾಪೇಕ್ಷೆಯಿಲ್ಲದೆ ಕಷ್ಟಕಾಲದಲ್ಲಿ ಸಹಾಯ ನೀಡುವವನು, ಸುಖಕಾಲದಲ್ಲಿ ನೋಡಿ ಸಂತೋಷಪಡುವವನು. ಈ ಸರಳ ಹೃದಯದ ದಯಾಸಾಗರನವನು. "ಶರಣಂ ಸುಹೃತ್" ಎರಡೂ ಸೇರಿ ದಿವ್ಯ ದಯಾಗುಣ. ಪ್ರಭವಃ ಪ್ರಲಯಃ ಸ್ಥಾನಂ, ನಿಧಾನಂ, ಬೀಜಂ, ಅವ್ಯಯಂ—ಎನ್ನುವುವು, ಸಾವು ಹುಟ್ಟು, ನಾಯಕನ, ಮುಂದೆ ಹುಟ್ಟಲು ಬೀಜವಾಗಿರುವ, ಇರುವಾಗ ಪೋಷಣೆ ಮಾಡುವ–ಎಲ್ಲಾದಕ್ಕೂ ಹೇತುವಾದ ನಾಶವಿಲ್ಲದ ಪರಮಾತ್ಮ ತತ್ತ್ವವನ್ನು ಹೊಗಳಿದೆ. ಈ ಗುಣಗಳು ಪರಮಾತ್ಮನನ್ನು ಆತ್ಮಸಂಬಂಧದಲ್ಲಿ ಸಿಂಹಾವಲೋಕನ ಮಾಡಿ ವರ್ಣಿಸಿದೆ. ನಮ್ಮ ಈ ಇಹಜೀವನದಲ್ಲಿ ಎಲ್ಲಾ ಅವನೇ ಎನ್ನುವುದು ತೋರಿಸಿದೆ. ಪರಮಾತ್ಮ ನಿಜಸ್ವರೂಪವೇನು, ಜೀವನನ್ನು ಹೇಗೆ ಕಾಪಾಡುತ್ತಾನೆ ಎನ್ನುವುದನ್ನು ಶ್ಲಾಘಿಸಿದೆ. ಇಹಪರವೆರಡೂ ಅವನೇ.

ವಿಶ್ವದಲ್ಲಿ ಸರ್ವವೂ ಪರಮಾತ್ಮನೇ ಎನ್ನುವುದನ್ನು ಪ್ರಕೃತಿಯಲ್ಲಿ ನಡೆಯುವ ರಕ್ಷಕ ಕಾರ್ಯಗಳನ್ನು ರಕ್ಷಕ ರೂಪಗಳನ್ನೂ ಶ್ಲಾಘಿಸಿದೆ. ಸೂರ್ಯರೂಪದಿಂದ ತಪವನ್ನುಂಟುಮಾಡುವವನು (ಬೆಳಕು, ಶಾಖ ಎರಡೂ ಸೂರ್ಯನ ಮುಖ್ಯ ಕಿರಣಗಳು. ಅವುಗಳಿಂದಲೇ ಜಗತ್ತೆಲ್ಲವೂ ರಕ್ಷಿಸಲ್ಪಟ್ಟಿವೆ) ಬೆಳಗಾಗುತ್ತಲೆ ಜೀವಕಳೆಯನ್ನು ತರುವನು. ಶಾಖದಿಂದ ಜೀವಚೈತನ್ಯವನ್ನು ಪ್ರಚೋದನೆ ಮಾಡುವನು. ಸೂರ್ಯಪ್ರಭೆ

ಯಿಂದ ಕತ್ತಲೆಯೋಡುವುದು ಅವನ ಶಾಖದಿಂದ ಮೊಬ್ಬಿರುವ ಮಂಜು, ತಮ (ಶೈತ್ಯ) ಓಡುವುದು.

ಸೂರ್ಯನೇ ಪ್ರತ್ಯಕ್ಷದೇವತಾ. ಆರ್ಯರಲ್ಲಿ ಸೂರ್ಯನನ್ನು ಅಂತೆ ಆರಾಧಿಸು ವವರಿದ್ದರು, ಇರುವರು. ಭಗವಂತನಿಗಿರುವ ಉತ್ತಮವಾದ ಗುಣಗಳನ್ನೆಲ್ಲಾ ಸೂರ್ಯನಲ್ಲಿ ಕಾಣುವೆವು. ಸಗುಣಬ್ರಹ್ಮ. ನಮಗೆ ಬೇಕಾದ ಬೆಳಕು, ಶಾಖಗಳಲ್ಲದೆ, ಜೀವಿಗಳ ಜೀವನಕ್ಕೆ ಅತ್ಯಗತ್ಯವಾದ ನೀರನ್ನೊದಗಿಸು ವವನೂ ಸೂರ್ಯಪರಮಾತ್ಮನೆ. ಕಿರಣಗಳಿಂದ ಉಪಯೋಗಿಸಲು ಪಯೋಗ್ಯವಲ್ಲದ ಸಮುದ್ರ ನೀರಿನಿಂದ, ಸಿಹಿ ನೀರನ್ನು ಆಕರ್ಷಿಸಿ, ಮಳೆ ನೀರನ್ನು ಧಾರಾಪೂರ್ವಕವಾಗಿ ಸುರಿಸುವನು. ಅದೇ ನಮ್ಮ ನದೀ, ಸರೋವರ, ಭೂಜಲಗಳಿಗೆಲ್ಲಾ ಆಧಾರ. ಒಂದೊಂದೊರ್ಷ ಮಳೆ ಸರಿಯಾಗಾಗದಿದ್ದರೆ ಎಷ್ಟು ಹಾಹಾಕಾರವಾಗುತ್ತೆ ದೇಶಪ್ರದೇಶಗಳಲ್ಲೆನ್ನು ವುದನ್ನು ನಾವು ಕಾಣುತ್ತೇವೆ. ಈ ಜಲವೇ ಬೆಳೆಯ ಆಧಾರ. ಸುವೃಷ್ಟಿಯಾದರೆ ಸುಭಿಕ್ಷ, ಹೊಟ್ಟೆ ತುಂಬ ತಿಂಡಿ, ನಲಿದಾಟ. ಇಲ್ಲವಾದರೆ ಎಷ್ಟು ಕಷ್ಟಪಟ್ಟರೆ ತಾನೆ ಏನು, ಪೈರು ಬೆಳೆಯುತ್ತದೆಯೇ. ಹಸುರು ಬೆಳೆಯಬೇಕಾದರೆ, ಜೀವಕಳೆ ತುಂಬಬೇಕಾದರೆ, ಜೀವನಾಧಾರ ವಾಗಬೇಕಾದರೆ ಈ ವರ್ಷ ಧಾರೆಯೇ ಆಧಾರ ಪ್ರಪಂಚಕ್ಕೆ. ಅದಕ್ಕೆ ಸಕಾಲಕ್ಕೆ ಮಳೆಗಳಾಗಲೆಂದೇ ಎಷ್ಟೋ ಜಪ, ತಪ, ಯಜ್ಞಗಳನ್ನು ಪೂರ್ವಿಕರು ಮಾಡುತ್ತಿದ್ದರು. ಸುಧಾರಿಸಿದ ವಿಜ್ಞಾನಪ್ರಪಂಚದಲ್ಲಿ, ಇನ್ನೂ ನಾವಿನ್ನೂ ನಮಗೆ ಬೇಕಾದಂತೆ ಮಳೆ ಬರಿಸಿಕೊಳ್ಳಲು ಶಕ್ತ ರಾಗಿಲ್ಲಾ. ಆ ಶಕ್ತಿ ಪರಮಾತ್ಮನದೇ ಎಂದು ಈಗಲಾದರೂ ಸತ್ಯಕ್ಕೆ ಒಪ್ಪಿಕೊಳ್ಳೋಣ.

ಅಮೃತವೂ, ಮೃತ್ಯುವೂ ಸದಸತ್ ಸ್ವರೂಪನೂ ನಾನೇ ಆಗಿರು ವೆನು. ಆಗದೇ ಇರುವುದು ಯಾವುದೂ ಬಿಟ್ಟಿಲ್ಲಾ. ಅಮೃತ, ಮೃತ್ಯು; ಸತ್; ಅಸತ್ ಎಂದು ವಿರೋಧ ರೂಪಗಳನ್ನು ಒಂದೇ ವಸ್ತುಗನ್ವಯಿಸಿದೆ. ಸತ್ ಅಮೃತ, ಅಸತೇ ಮೃತ್ಯು. ಆದರೂ ಜಗತ್ತಿನ ಪ್ರಕೃತಿಗನ್ವಯಿಸುವಂತೆ ಬೇರೆ ಬೇರೆ ಬಿಡಿಸಿ ಹೇಳಿದೆ. ಸತ್ ಚಿತಾನಂದ ಸ್ವರೂಪ ಸ್ವಾಮಿಯೆಂದು, ಸದಾ ಇರುವಿಕೆ (ಅಮೃ

ತತ್ತ್ವ) ಯ ವಿಶೇಷಣವನ್ನೆ ಮೊದಲು ಪ್ರಾಧಾನವಾಗಿ ತ್ರಿಗುಣ ವಿಶೇಷಣ ಗಳಲ್ಲಿ ಉಲ್ಲೇಖಿಸಿದೆ. ಅಮೃತವು ಮೃತ್ಯುವನ್ನೊಳಗೊಂಡಿರುವಂತೆಯೇ ಸತ್ತಾ ಅಸತ್ತನ್ನೂ ಒಳಗೊಂಡಿದೆ. ಬೃಹದಾರಣ್ಯದಲ್ಲಿ (೪ ಅ ೩ ಬ್ರಾಂ ೧ ಮಂ) "ದ್ವೇವಾವ ಬ್ರಹ್ಮರೂಪಂ,........ಮರ್ತ್ಯಂಚಾಮೃತಂ........ ಸಚ್ಚತ್ಯಚ್ಚ" ಎಂದು ಹೇಳಿದೆ. ಎರಡೂ ಬ್ರಹ್ಮರೂಪವೇ ಅಲ್ಲೇ ಮುಂದೆ (೭ ಅ, ೪ ಬ್ರಾಂ. ಕೊನೆ ಮಂತ್ರ) 'ಸತ್ಯಮಿತಿ.... ಪ್ರಥಮೋತ್ತಮೇಕ್ಷರೇ (ಸ) ಸತ್ಯಂ, ಮಧ್ಯತೋ (ತ್) ಅನೃತಂ........' ಎಂದು ಸತ್ಯವೆಂಬ ಪದದಲ್ಲೇ ಅಸತ್‌ಸತ್‌ಗಳೆರಡೂ ಇವೆಯೆಂದಿದೆ. ಬ್ರಹ್ಮನನ್ನು ಸತ್, ಅಸತ್, ಸದಸತ್ ವಸ್ತುವೆಂದೇ ಗ್ರಹಿಸಿದೆ. ಇವುಗಳೆಲ್ಲದುದರಿಂದ (೧೬–೧೯) ಹೇಗೆ ಒಂದೇ ಅಧಿಕಾರವು ಪ್ರಪಂಚವನ್ನೆಲ್ಲಾ ವ್ಯಾಪಿಸಿದೆ ಯೆಂದೂ, ಹೇಗೆ ಆತನ ಪ್ರಭಾವದಿಂದ ಪ್ರಪಂಚದ ವ್ಯಾಪಾರವೆಲ್ಲವೂ ನಾಗುತ್ತಿದೆಯೆಂದೂ, ಎಲ್ಲಾ ಪರಮಾತ್ಮನೇ ಎಂದು ವಿಶದೀಕರಿಸಿದ್ದಾನೆ ಸ್ವಾಮಿ. ಇಹ, ಪರ, ವರ್ತಮಾನ, ಭವಿಷ್ಯ ಎಲ್ಲಾ ಸರ್ವವ್ಯಾಪಿ ಅವನು.

ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ-
ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।
ತೇ ಪುಣ್ಯಮಾಸಾದ್ಯ ಸುರೇಂದ್ರಲೋಕ-
ಮಶ್ನಂತಿ ದಿವ್ಯಾನ್ ದಿವಿ ದೇವಭೋಗಾನ್ ॥೨೦॥

ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ
ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ।
ಏವಂ ತ್ರಯೀ ಧರ್ಮಮನುಪ್ರಪನ್ನಾ-
ಗತಾಗತಂ ಕಾಮಕಾಮಾ ಲಭಂತೇ ॥೨೧॥

ಕಾಮ್ಯಫಲಗಳಿಗಾಗಿ ಯಾಗಾದಿಗಳನ್ನು ಮಾಡುವ ಕರ್ಮಠರ ಗತಿ ವಿವರಿಸುತ್ತಾನೆ ಸ್ವಾಮಿ. ಋಗ್ವೇದಾದಿ ಮೂರು ವೇದಗಳನ್ನು ಬಲ್ಲ ವರು, ಸೋಮಪಾನದಿಂದ ಪಾಪ ಬಿಡುಗಡೆ ಹೊಂದಿ ಕಾಮ್ಯಯಜ್ಞ ಗಳಿಂದ ಸ್ವರ್ಗವನ್ನು ನನ್ನಿಂದ ಪ್ರಾರ್ಥಿಸಿ, ಆ ಪುಣ್ಯಫಲದಿಂದ,

ಸುರೇಂದ್ರಲೋಕವನ್ನು ಸೇರಿ, ದೇವತೆಗಳಿಗರ್ಹವಾದ ದಿವ್ಯಭೋಗಗಳನ್ನನುಭವಿಸುತ್ತಾರೆ. ಏನೋ ದೇವ, ನಮಗೂ ಬಾಯಲ್ಲಿ ನೀರು ಕರೆಯುವಂತೆ ಮಾಡುತ್ತೀಯಲ್ಲೊ! 'ಸೋಮಪಾನ' 'ಪಾಪವಿಮೋಚನೆ' 'ಸ್ವರ್ಗ' 'ಪುಣ್ಯ' 'ದಿವ್ಯದೇವಭೋಗ' ಯಾರಿಗೆ ತಾನೆ ಬೇಡಾ. ಆದರೆ "ಯಜ್ಞೈರಿಷ್ಟ್ವಾ" ಒಂದೇ ಆ ಕಾಮವಾಸನೆಯ, ಕಾಂಕ್ಷೆಯ (ಯಜ್ಞ) ಕರ್ಮವನ್ನು ಮಾತ್ರ ಕೊಕ್ಕೆತಂದುಹಾಕಿದೆ,-ಸ್ವಾರ್ಥತೆ. ಮುಂದಿನ ಶ್ಲೋಕದಲ್ಲಿ ಒಂದೇ ಏಟಿನಲ್ಲಿ ಈ ಕನಸೆಲ್ಲವನ್ನೂ ಒಡೆದು ಹಾಕಿಬಿಟ್ಟಿ. ಶಾಶ್ವತವಲ್ಲಾ. "ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ" 'ಗತಾ ಗತಂ ಕಾಮ ಕಾಮಾ ಲಭಂತೆ" ಅಶಾಶ್ವತ. ಚಕ್ರ ಬರುವುದು ಹೋಗುವುದು. ಛಾಂದೋಗ್ಯ (೮, ೧, ೬ ಶ್ಲೋ.) ದಲ್ಲಿ "ತದ್ಯಥೇಹ ಕರ್ಮ ಜಿತೋ ಲೋಕಃ ಕ್ಷೀಯತ, ಏವ ಮೇವಾಮುತ್ರ, ಪುಣ್ಯ ಜಿತೋ ಲೋಕಃ ಕ್ಷೀಯತೇ" ಇದ ಲೋಕದಲ್ಲಿ ಕರ್ಮದಿಂದ ಸಂಪಾದಿಸಿದ ಲೋಕವೆಂತು ಕ್ಷೀಣಿಸುತ್ತದೆಯೋ, ಅಂತೇ ಪುಣ್ಯದಿಂದ ಸಂಪಾದಿಸಿದ ಲೋಕವೂ (ಸ್ವರ್ಗಾದಿಗಳು) ಕ್ಷೀಣಿಸುತ್ತದೆ, ಎಂದಿದೆ. ಕಷ್ಟಪಟ್ಟು ಕೃಷಿಮಾಡಿ ಯಾವುದಾದರೂ ಫಸಲನ್ನು ಬೆಳೆದು ಸಂಪಾದಿಸಿದ್ದು ಕಾಲಾನುಗುಣವಾಗಿ ಆ ಫಸಲನ್ನು ಊಟಮಾಡುವುದರಿಂದ ಮುಗಿದು ಹೋಗುವಂತೆ, ಪುಣ್ಯದಿಂದ ಸಂಪಾದಿಸಿದ ಸ್ವರ್ಗಸುಖವೂ ಅನುಭವಿಸುತ್ತಾ ಪುಣ್ಯಮುಗಿದ ಮೇಲೆ ತೀರಿಹೋಗುತ್ತದೆ, ಶಾಶ್ವತವಲ್ಲಾ. ಮುಗಿದಮೇಲೆ ಪುನಃ ವಾಪಸು.

"ಯಥಯ ಇಹಾತ್ಮಾನ ಮನುವಿದ್ಯವ್ರ ಜಂತ್ಯೇತಾಗ್‌ಶ್ಚ ಸತ್ಯಾನ್ ಕಾಮಾಗ್, ಸ್ತ್ರೀಷಾಗ್, ಸರ್ವೇಷುಲೋಕೇಷು, ಕಾಮಾಚಾರೋ ಭವತಿ"—ಆತ್ಮವನ್ನು ತಿಳಿದು ಇಲ್ಲಿಂದ ಹೋದವರು, ಸತ್ಯಕಾಮರಾಗಿ ಸರ್ವಲೋಕಗಳಲ್ಲೂ ಸ್ವತಂತ್ರರಾಗುತ್ತಾರೆ ಎಂದು ಮುಂದೆ ಇದೇ ಶ್ಲೋಕ ಸಮಾಪ್ತಿಯಿದೆ. ವಿಶಾಲವಾದ ಸ್ವರ್ಗಲೋಕ ಸುಖವನ್ನನುಭವಿಸುತ್ತಿರುವವರು, ಪುಣ್ಯ ಕ್ಷೀಣವಾಗಲು ಮರ್ತ್ಯಲೋಕವನ್ನು ಸೇರುವರು. ತ್ರಿವೇದಗಳಲ್ಲಿನ ಧರ್ಮವನ್ನು (ಯಜ್ಞ ಕರ್ಮಕಾಂಡ) ಮಾಡುತ್ತಾ

ಸಕಾಮಿಗಳು ಅವರುಗಳ ಕಾಮುಕರ್ಮದ ಫಲದನುಸಾರವಾಗಿ ಹೋಗುತ್ತಲೂ (ಸ್ವರ್ಗಲೋಕಕ್ಕೆ) ಬರುತ್ತಲೂ (ಪುಣ್ಯ ಕ್ಷೀಣವಾಗುತ್ತಲೇ ಮರ್ತ್ಯಲೋಕಕ್ಕೆ ಪುನಃ) ಇರುತ್ತಾರೆ. ಹೋದಾ ಪುಟ್ಟ ಬಂದ ಪುಟ್ಟ ಎನ್ನುವಂತೆ. ವಾಪಸು ಬರುವುದೇನೋ ಖಂಡಿತ, ಅಂತರ ಹೆಚ್ಚು ಕಮ್ಮಿ, ಸುಖಾನುಭವ ಅಶಾಶ್ವತ. ಬ್ಯಾಂಕಿನಲ್ಲಿರುವ ಕಾಸು ಖರ್ಚಾಗುವವರೆಗೆ, ಆಮೇಲೆ ಒಂದು ಚಿಕ್ಕಾಸು ಹೆಚ್ಚಾಗಿ ಸಲ್ಲುವುದಿಲ್ಲಾ. ಒಂದು ಕುರುಡು ಕವಡೆಯಷ್ಟು ಫಲ ಹೆಚ್ಚಿಗೆ ಅಪೇಕ್ಷಿಸಿದರೂ ಇಲ್ಲಾ-ಅರ್ಧ ಚಂದ್ರ ಪ್ರಯೋಗ ಅಲ್ಲಿಂದಾ ಏನು ಎಲ್ಲಾ ಇಹ ವ್ಯಾಪಾರದಂತೇ ಆಗಿ ಹೋಯಿತು. ಗಂಟು ಕರಗಿದ ಮೇಲೆ ಮನ್ನಣೆಯೇ ಇಲ್ಲಾ. ಆ ಪುಣ್ಯ ಇರೋವರೆಗೇ ಆ ಸ್ವರ್ಗ ಸುಖ. ಆಮೇಲೆ ದಗಲ್ಬಾಟ್ಟೇ. ಪುನರಾಯನ್ ಮುಹುಕಪಿಃ. ಪುನಃ ಈ ಮರ್ತ್ಯಲೋಕದ ವ್ಯವಹಾರ, ವ್ಯಾಪಾರ. ಕಷ್ಟ ಇದೇ ತಲೆಗೆ ಗಂಟುಬೀಳುತ್ತೆ. ಏನೂ ಹುರುಳಿಲ್ಲಾ.

**ಅನನ್ಯಾಂಶ್ಚಿಂತಯಂತೋ ಮಾಂ । ಯೇ ಜನಾಃ ಪರ್ಯುಪಾಸತೇ**
**ತೇಷಾಂ ನಿತ್ಯಾಭಿಯುಕ್ತಾನಾಂ । ಯೋಗಕ್ಷೇಮಂ ವಹಾಮ್ಯಹಮ್ ॥**

ಪುನಃ ತಂದನಲ್ಲಪ್ಪಾ "ಅನನ್ಯಾ", ಆದರೂ ಪರವಾಯಿಲ್ಲಾ ಆ ದಗಲ್ಬಾಟ್ಟ ಅವಸ್ಥೆ ವಿವರಣೆ ಮೇಲೆ ಈ ಅಭಯಹಸ್ತ. "ಅನನ್ಯಾಶ್ಚಿಂತಯಂತೋ ಮಾಂ" ಆ ಕಾಮಿಕ ಕರ್ಮಗಳೇ ಬೇಡ್ರಿ. ನಿಶ್ಚಿಂತೆಯಾಗಿ ಯಾವಾಗಲೂ ಭಗವಚ್ಚಿಂತನೇನೇ ಸಾಕು. ಶ್ಲೋಕವೇ ಎಷ್ಟು ಸುಖವಾಗಿದೆಯುರೀ,-ಹಾಲು ಕುಡಿದ ಹಾಗೆ, ಅಮೃತ ಹಸ್ತ ಕೊಟ್ಟ. ಬ್ಯಾಡರೋ ಆ ಪಶ್ಚಾತ್ತಾಪಾ, ಆ 'ಗತಾಗತಂ' ನಿಮಗೆ. "ಧರ್ಮ್ಯಂ, ಸುಸುಖಂ, ಕರ್ತುಮವ್ಯಯಂ" ಎಂದು ೨ ನೇ ಶ್ಲೋಕದಲ್ಲಿ ಹೇಳಿದನಲ್ಲಾ ಆ ಸುಖಮಾರ್ಗ-ಈ ಶ್ಲೋಕ ಪೂರ್ವಾರ್ಧದಲ್ಲಿ, ಅದರ ಪ್ರತ್ಯಕ್ಷಫಲ ಈ ಶ್ಲೋಕದ ಉತ್ತರಾರ್ಧದಲ್ಲಿ. ಮೂಢನಾದ ನನ್ನನ್ನು ಸಹ ಮುಗ್ಧನನ್ನಾಗಿ ಮಾಡಿದ ಗೀತಾ ಶ್ಲೋಕಗಳಲ್ಲೊಂದಿದು. ಯಾವ ಜನರು ಅನನ್ಯವಾಗಿ ನನ್ನನ್ನೇ ಚಿಂತಿಸುತ್ತಾರೋ, ಸೇವಿಸುತ್ತಾರೋ ಅವರ (ನಿತ್ಯ) ಪ್ರತಿದಿನದ ಯೋಗಕ್ಷೇಮವನ್ನೂ ನಾನೇ ವಹಿಸುವೆನು.

"ಯೇ ಜನಾಃ" ಸಾಮಾನ್ಯ ಜನರು ಯಾರೇ ಆಗಲೀ; ಲೋಕದ ಜನಕ್ಕೆಲ್ಲರಿಗೂ ಇದು ಆಹ್ವಾನ, ಅವರ ಕರ್ತವ್ಯ, ಅವರು ಪಡೆಯ ಬಹುದಾದ ಹಕ್ಕುಬಾಧ್ಯತೆಯ ಸೂತ್ರ. ಎಲ್ಲರೂ ಕೇಳಿರೈ, ಯಾರೇ ಆಗಲೀ, ಮಹಾತ್ಮನಾಗಬೇಕಾದುದಿಲ್ಲಾ, ಭಕ್ತನಾಗಬೇಕಾಗಿಲ್ಲಾ, ಜ್ಞಾನಿಯಾಗಬೇಕಾದುದಿಲ್ಲಾ, ಯೋಗಿಯಾಗಬೇಕಾದುದಿಲ್ಲಾ, ಎಲ್ಲರ ಆ ಜನ್ಮ ಹಕ್ಕಿದು. ಯಾರು ಬೇಕಾದರೂ ಭಗವಂತನನ್ನು ಅನನ್ಯವಾಗಿ ಚಿಂತಿಸಿ, ಉಪಾಸಿಸಬೇಕಷ್ಟೆ. ಇನ್ನೇನೂ ಮಾಡಬೇಕಾದುದಿಲ್ಲಾ. ಕ್ಷುದ್ರ ದೇವತೆಗಳಂತೆ ಗಳಿಗೆ ಅರಗಳಿಗೆ ಚಿಂತನೆ, ಉಪಾಸನೆ ಒಲ್ಲ ಗೀತೆಯ ಈ ಭಗವಂತ. ಚಿಂತೆ ಅನನ್ಯವಾಗಿರಬೇಕು. ಉಪಾಸನೆ ಸದಾ ಜೀವಮಾನ ಪರ್ಯಂತವಿರಬೇಕು. ಏನೂ ಸಲಕರಣೆನೂ ಬೇಡಾ. ಏನೂ ಪ್ರಾರ್ಥನೆ, ಯಾಚನೆ, ಸಕಾಮ ಪೂಜೇನೂ ಬೇಡಾ. ಏನೂ ಕೇಳಿಕೊಳ್ಳೋದೇ ಬೇಡಾ, ಕರ್ತವ್ಯ ಇಷ್ಟೆ. ಅವನ್ನ ಸದಾ ಚಿಂತನೆಮಾಡ ಬೇಕು. ನಮ್ಮ ಯೋಗಕ್ಷೇಮಕ್ಕೆ ಇಂಥಾದ್ದು ಬೇಕೆಂದು ನಮಗೆ ತಿಳು ವಳಿಕೆ ಇದ್ದರೆ ತಾನೆ ನಾವು ಕೇಳೋದು. ಆದರೆ ಅವನಿಗೆ ಗೊತ್ತಿದೆ ನಮಗೇನು ಬೇಕು, ಯಾವುದು ಕ್ಷೇಮಕರ ಅನ್ನುವುದು. ನಾವು ಕೇಳೋದೇಬೇಡಾ. ಅಷ್ಟು ಮಾಡುವವರ ಯೋಗಕ್ಷೇಮ, ಸುಖಸೌಕರ್ಯ ಎಲ್ಲಾ ತಾನೇ ನೋಡಿಕೊಳ್ಳುತ್ತೇನೆಂದು ವಾಗ್ದಾನಮಾಡಿಬಿಟ್ಟಿದ್ದಾನೆ.

ನಾವೆಲ್ಲಾ ಯಾಕಪ್ಪಾ ಇಷ್ಟು ಪರಿಪಾಟಲು ಬೀಳೋದು. ಬೆಳಗೆದ್ದರೆ, ನಿತ್ಯಾ, ಅನವರತ, ನಮ್ಮ ನಮ್ಮ ಯೋಗಕ್ಷೇಮಕ್ಕೆ ತಾನೆ-ಸುಖ ಸಂತೋಷಕ್ಕೆ ತಾನೇ. ಕಾಗದ ಬರಿದರೂ ಭೆಟ್ಟಿ ಆದರೂ ಪರಸ್ಪರ ಯೋಗಕ್ಷೇಮ ತಾನೇ ಪ್ರಸ್ತಾಪ. ಇನ್ನು ನಿತ್ಯದ ಯೋಗಕ್ಷೇಮಾನೆಲ್ಲಾ ಯಜಮಾನ ಪ್ರಪಂಚದ ಒಡೆಯ, ಭಗವಂತನೇ ನೋಡಿಕೊಳ್ಳುತ್ತಾ ನೆಂದು ವಾಗ್ದಾನ ಮಾಡಿದ ಮೇಲೆ ಇನ್ನು ಚಿಂತೆ ಇನ್ನೇನು. ದಿನ ಬೆಳಗಾದರೆ ಇದ್ದೇ ಇತ್ತು ಚಿಂತೆ. ಇದಕ್ಕೆ ಪಡೆದುಕೊಂಡು ಬರೋದು ಹೇಗಪ್ಪಾ (ಯೋಗದ ಚಿಂತೆ, ಅಪ್ರಾಪ್ಯ ವಸ್ತುವನ್ನು ಪಡೆಯುವುದರ ಚಿಂತೆ, ಯೋಗಾಭ್ಯಾಸದ್ದಲ್ಲಾ) ಇದನ್ನು ರಕ್ಷಣೆಮಾಡೋದು ಹೇಗಪ್ಪಾ (ಕ್ಷೇಮದ ಚಿಂತೆ ಇದ್ದುದನ್ನು, ಪಡೆದುದನ್ನೂ ಕಾಪಾಡಿಕೊಳ್ಳುವ

ಚಿಂತೆ ಇತರರ ಕ್ಷೇಮಾ ಅಲ್ಲಾ. ತನ್ನ ಸ್ವಂತ ಕ್ಷೇಮ. ಕಾಗದದಲ್ಲಿ ಮೊದಲೇ ಬರಿಯುವಂತೆ, ಮೊದಲು ನಾನು ಕ್ಷೇಮ, ಆ ಮೇಲೆ ಮಿಕ್ಕ ವರ ಕ್ಷೇಮಸಮಾಚಾರ ವಿಚಾರ) ಎಂದು ದಿನವಹಿ ಆ ಸ್ವಂತಯೋಗ ಕ್ಷೇಮದ ತನ್ನ ಬಾಂಧವರ ಆಶ್ರಿತರ ಯೋಗಕ್ಷೇಮದ ಚಿಂತೆಯೇ ಆಗಿತ್ತು. ತನ್ನ ಯೋಗಕ್ಷೇಮಕ್ಕೋಸ್ಕರವೇ ಇತರರ ಯೋಗಕ್ಷೇಮವೂ. ಅವರು ಸುಖವಾಗಿದ್ದರೆ ತನಗೆ ಕಷ್ಟ ತಪ್ಪುತ್ತೆ. ಇನ್ನೇನು ದಿನವಹಿಯ ಯೋಗಕ್ಷೇಮವನ್ನೂ ಭಗವಂತನೇ ನೋಡಿಕೊಳ್ಳುವುದಾಗಿ ಅಭಯ ಕೊಟ್ಟಮೇಲೆ ನಮಗಿನ್ನೇನು ಚಿಂತೆ. ಯಾಕೆ ನಿಶ್ಚಿಂತೆಯಾಗಿ ಅನನ್ಯ ವಾಗಿ ಅವನ ಚಿಂತನೆ ಮಾಡಬಾರದು. ಎಲ್ಲಾ ಭಾರಾನೂ ಅವನೇ ಹೊತ್ತು ನಮ್ಮನ್ನು ನಿಶ್ಚಿಂತರನ್ನಾಗಿ ಮಾಡಿದಮೇಲೆ. ತಲೆಮೇಲೆ ಗಂಟು ಹೊತ್ತುಹೋಗುತ್ತಿದ್ದ ಪ್ರಯಾಣಿಕನನ್ನು, ಗಾಡಿಯವನು ಕರುಣೆಯಿಂದ "ಬಾರೋಪ್ಪಾ, ಗಾಡೀಲಿ ಕೂತುಕೋ, ಆಯಾಸವೇಕೆ. ಕರೆದುಕೊಂಡು ಹೋಗುತ್ತೇನೆ" ಎಂದು ಗಾಡಿಯಲ್ಲಿ ಕೂಡಿಸಿಕೊಂಡರೂ, ನಿಶ್ಚಿಂತೆಯಿಂದ ಗಂಟನ್ನು ಗಾಡಿಯಲ್ಲಿ ಕೆಳಗಿಡದೆ, ತೊಡೆಯ ಮೇಲೇ ಹೊತ್ತಿದ್ದರೆ ತಪ್ಯಾರದು ? ಭಾರ ತಾ ಹೊರೊಕ್ಕೆ ಸಿದ್ಧವಾಗಿರುವಾಗ ಸ್ವಾಮಿ, ನಾವು ನಮ್ಮ ಯೋಗಕ್ಷೇಮದ ಭಾರವನ್ನೆಲ್ಲಾ ಅವನ ತಲೆಯ ಮೇಲೆ ಹಾಕಿಬಿಟ್ಟು ನಿಶ್ಚಿಂತೆಯಿಂದ ಅನನ್ಯವಾಗಿ ಅವನ ಚಿಂತನೆ ಮಾಡೋದು ಬಿಟ್ಟರೆ ತಪ್ಯಾರದು ? ಯಾರಿಚ್ಛೆಗರೀ, ಹೊರಲೀ ಅವನೇ ಭಾರ. ತಂದೆ ನಾನೆ, ತಾಯಿ ನಾನೆ, ಭರ್ತಾ, ಸುಹೃತು, ನಿವಾಸಃ ಎಂದು ಅವನೇ ಹೇಳಿಕೊಳ್ಳಲಿಲ್ಲವೇನ್ರಿ, ಎಲ್ಲಾ ತಾನೇ ಅಂತ. ಹಾಗಾದರೆ ನಿತ್ಯದ ಯೋಗಕ್ಷೇಮಾನೂ ನೋಡಿಕೊಳ್ಳಲಿ. ಎಲ್ಲರ ಯೋಗಕ್ಷೇಮಾನೂ ನೋಡಿಕೊಳ್ಳಲಿ. ಆದರೆ ಅವನ ಚಿಂತನೆಯಲ್ಲಿಯೇ ಕಾಲ ಹಾಕುತ್ತಾ ತಮ್ಮ ಯೋಗಕ್ಷೇಮದ ಚಿಂತನ ಅವನಿಗೊಪ್ಪಿಸಿಬಿಡಬೇಕು ಜನ ಅಷ್ಟೆ. ಅದು ಮಾಡೊಕ್ಕೆ ಯಾರು ಸಿದ್ಧರಾಗಿದ್ದಾರೋ ಅವರು ಗೆದ್ರು. ಯೋಗ ಕ್ಷೇಮ ನೋಡಿಕೊಳ್ಳುವುದಕ್ಕೆ ಸ್ವಯಂಸಿದ್ಧನಾಗಿರುವವನನ್ನು ಪಡೆದು ಗೆದ್ರು, ಇನ್ನು ಇಹದ ಚಿಂತೆನೂ ಅವನೇ ಹೊತ್ತಾ. ಅವನನ್ನೇ

ಅನನ್ಯ ಚಿಂತಿಸುತ್ತಿದ್ದ ಮೇಲೆ ಇನ್ನು ಪರದ ಚಿಂತೆ ತಾನೆ ಏಕೆ, ಅವನೇ ಜೀವನ್ಮುಕ್ತ.

ಕಲಿಸಂತಾರಣೋಪನಿಷತ್ತಿನಲ್ಲಿ "ಯದ್ದಿವ್ಯನಾಮಸ್ಮರತಾಂ, ಸಂಸಾರಂ ಗೋಷ್ಪದಾಯತೆ । ಸ್ವಾನನ್ಯ ಭಕ್ತಿರ್ಭವತಿ, ತದ್ರಾಮಪದಮಾಶ್ರಯೇ ॥" ಎಂದಿದೆ. ನಾಮಸ್ಮರಣ ಭಗವಚ್ಚಿಂತನದಿಂದ ಸಂಸಾರಸಾಗರವು ಒಂದು ಗೋವಿನ ಪಾದದಷ್ಟು ಸುಲಭವಾಗಿ ದಾಟಿ, ಅನನ್ಯಭಕ್ತಿಯುಂಟಾಗಿ, ಪರಮಾತ್ಮನ ಪಾದವನ್ನು ಆಶ್ರಯಿಸುವಂತೆ ಮಾಡುತ್ತದೆ ಎಂದು ಈ " ಪರ್ಯಟನ್ಕಲಿಂ " ಕಾಲದಲ್ಲಿ ಭಗವಚ್ಚಿಂತನಕ್ಕಿಂತ "ನಾತಃ ಪರತರೊ ಪಾಯಂ ಸರ್ವವೇದೇಶುದೃಷ್ಟತೇ — ಕಲಿಕಲ್ಮಶ ನಾಶನಕ್ಕೆ ಈ ಭಗವ ಚ್ಚಿಂತನಕ್ಕಿಂತ ಶ್ರೇಷ್ಠವಾದ ಉಪಾಯವು ಸರ್ವ ವೇದಗಳಲ್ಲೂ ಕಾಣುವು ದಿಲ್ಲಾ ಎಂದು ಬ್ರಹ್ಮನೇ ನಾರದರಿಗೆ ಉಪದೇಶ ಮಾಡಿದ್ದಾರೆ.

ಭಗವಚ್ಚಿಂತನ—> ಸಂಸಾರ ದಾಟುವುದು—> ಅನನ್ಯ ಭಕ್ತಿ —> ಭಗವಂತನ ಪಾದದಾಶ್ರಯ. ಹೀಗೆ ಪರ್ಯವಸಾನ.

**ಯೇऽಪ್ಯನ್ಯದೇವತಾ ಭಕ್ತಾ-ಯಜಂತೇ ಶ್ರದ್ಧಾಯಾನ್ವಿತಾಃ ।**
**ತೇऽಪಿ ಮಾಮೇವ ಕೌಂತೇಯ । ಯಜಂತ್ಯವಿಧಿಪೂರ್ವಕಮ್ ॥೨೩॥**

ಇತರ ದೇವತಾಭಕ್ತರು, ಶ್ರದ್ಧೆಯಿಂದ ಯಾವ ದೇವತೆಯನ್ನು ಪೂಜಿಸುತ್ತಾರೋ, ಅವರೂ ಕೂಡಾ ನನ್ನನ್ನೇ ವಿಧಿಪೂರ್ವಕ ಪೂಜಿಸುತ್ತಾರೆ. ಪ್ರಪಂಚದಲ್ಲಿ ಎಲ್ಲಾ ಭಗವಂತ ತಾನೇ ಎಂದು ಘೋಷಿಸಿದ ಮೇಲೆ, ಯಾವುದನ್ನು ಶ್ರದ್ಧೆಯಿಂದ ಪೂಜೆಮಾಡಿದರೂ ಇವನನ್ನೇ ಪೂಜಿಸಿದಂತಲ್ಲವೇ, ಇವನಿಗೇ ತಲುಪುತ್ತಲ್ಲವೇ. ಶ್ರದ್ಧೆಯಿಂದ ಯಾವ ಪದ್ಧತಿ, ಮತಾಚಾರದಿಂದ ಯಾವ ದೇವತಾ ಸ್ವರೂಪವನ್ನಾದರೂ ಪೂಜಿಸಿದರೂ ಅದೆಲ್ಲಾ ಇವನೇ. 'ಏಕೋದೇವಃ' ಆದರೆ ಅದು ಬೇರೆ ತಾನು ಬೇರೆ ಎಂದು ಮಾತ್ರ ಭಾವಿಸಿ ಪೂಜಿಸಬಾರದು. ನನ್ನಲ್ಲಿರುವ ಆತ್ಮನೇ ಮಹದಾತ್ಮನಾತ ಸರ್ವದರಲ್ಲೂ ಇದ್ದಾನೆಂದು, ಯಾವುದರಲ್ಲಿ ಆ ಆತ್ಮ ನನ್ನು ಆವಾಹನೆ ಮಾಡಿ ಪೂಜಿಸಿದರೆ ಅಲ್ಲೇ ಪರಮಾತ್ಮ. ಸರ್ವಮತ ಸಹಿಷ್ಣುತೆಯನ್ನೂ ಕಲಿಸುತ್ತದೆ. ಯಾವ ಕೋಣದಿಂದ ದೃಷ್ಟಿಸಿದರೇನು

ಪರಮಾತ್ಮನನ್ನು. ಅವ ಒಬ್ಬನೇ. ಆವನನ್ನು ತಲುಪಲು ಈ ಮತಗಳು ಬೇರೆಬೇರೆ ದಾರಿಗಳು. ಅವರೂ ಆ ಒಬ್ಬನೇ ಆದ ದೇವರನ್ನೇ ಪೂಜಿಸುತ್ತಿದ್ದಾರೆ. ಇನ್ನು ಮತದ್ವೇಷಗಳೇತಕ್ಕೆ. ಎಲ್ಲರೂ ಒಬ್ಬ ತಂದೆಯ ಮಕ್ಕಳೇ, ಅಣ್ಣತಮ್ಮಂದಿರು. ಅವರಿಗೂ ನಮ್ಮ ತಂದೆ ದೇವನೇ ಆ ರೂಪ, ಮಾರ್ಗತೋರಿದ್ದಾನೆ.

**ಅಹಂ ಹಿ ಸರ್ವಯಜ್ಞಾನಾಂ । ಭೋಕ್ತಾ ಚ ಪ್ರಭುರೇವ ಚ ।**
**ನ ತು ಮಾಮಭಿಜಾನಂತಿ । ತತ್ತ್ವೇನಾತಶ್ಚ್ಯವಂತಿ ತೇ ॥೨೪॥**

ನಾನು ಸರ್ವಯಜ್ಞಗಳ (ಸಕಲವಿಧವಾದ ಪೂಜೆಗಳು) ಭೋಕ್ತನೂ (ಅನುಭವಿಸುವನು.) ಉಂಬುವವನು ಮತ್ತು ಪ್ರಭವೂ ಆಗಿರುವೆನು. ಇದನ್ನು ತಿಳಿಯದವರು ಯಥಾರ್ಥವಾದ ಫಲದಿಂದ ಭ್ರಷ್ಟರಾಗುವರು. (ಮೋಕ್ಷವನ್ನು ಹೊಂದುವುದಿಲ್ಲಾ.) ಎಲ್ಲಾ ಯಜ್ಞಗಳಿಗೂ (Sacrifices of all kinds) ಎನ್ನುವುದರಲ್ಲಿ ಬರೀ ಕ್ರತು, ಯಾಗಗಳು ಮಾತ್ರವೇ ಅಲ್ಲಾ. ಎಲ್ಲಾ ತರಹ ಪರಮೇಶ್ವರ ಪ್ರೀತ್ಯರ್ಥವಾಗಿ, ಫಲಾಪೇಕ್ಷೆಯಿಲ್ಲದೆ ಮಾಡುವ ಸುಕೃತ ಕಾರ್ಯಗಳೆಲ್ಲಾ ಸೇರಿವೆ. ಆ ರೀತಿ ಮಾಡಿದ ಸೇವೆಯೇ ಪರಾರ್ಥವಾಗಿ ಸರ್ವರ ಹಿತಕ್ಕಾಗಿ ಮಾಡಿದ ಸೇವೆಯೇ ನಿಜವಾದ ಯಜ್ಞ. ಅವೆಲ್ಲಾ ಪರಮಾತ್ಮನಿಗೆ ತಲುಪುವುದು. ಅದರ ಫಲ ವಿನಿಯೋಗವೂ ಪ್ರಭುವಿನದೇ. ಆ ಸತ್ಕರ್ಮಮಾಡುವುದೇ ಒಂದು ಫಲ.

**ಯಾಂತಿ ದೇವವ್ರತಾ ದೇವಾನ್ ಪಿತೄನ್ ಯಾಂತಿ ಪಿತೃವ್ರತಾಃ ।**
**ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿನೋಽಪಿ ಮಾಮ್॥**

ದೇವತಾ ಭಕ್ತರಾದವರು ದೇವತೆಗಳನ್ನು ಸೇರುತ್ತಾರೆ. ಪಿತೃಭಕ್ತರಾದವರು ಪಿತೃಗಳನ್ನು ಸೇರುತ್ತಾರೆ. ಭೂತಗಣಗಳ ಭಕ್ತರಾದವರು ಆಯಾ ಭೂತಗಳನ್ನೇ ಸೇರುತ್ತಾರೆ. ನನ್ನ ಭಕ್ತನಾದವನು ನನ್ನನ್ನೇ ಸೇರುವನು. ತನ್ನ ತನ್ನ ಇಷ್ಟದೇವತಾ ಪೂಜೆಮಾಡಿ, ಅವರವರು ಬೇಡಿದ ಫಲಗಳನ್ನು ಪಡೆದು ಆ ದೇವರನ್ನೇ ಸೇರುವರು. 'ಯತ್ ಭಾವಂ ತದ್ ಭವತಿ'

**ಪತ್ರಂ ಪುಷ್ಪಂ ಫಲಂ ತೋಯಂ । ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತ-ಮಶ್ನಾಮಿ ಪ್ರಯತಾತ್ಮನಃ ॥೨೬॥**

ಪತ್ರ, ಪುಷ್ಪ, ಫಲ, ಜಲವನ್ನಾಗಲೀ ಭಕ್ತಿಯಿಂದ ಯಾವನು ಅರ್ಪಿಸುವನೋ, ಆ ಭಕ್ತಿಯಿಂದ ಸಮರ್ಪಿಸಿದುದನ್ನು ಆ ಶುದ್ಧ ಚಿತ್ತ ಭಕ್ತಿಗಾಗಿ ನಾನು ಆದರದಿಂದ ಸ್ವೀಕರಿಸುವೆನು. ಏನು ಅರ್ಪಿಸುವುದೆನ್ನುವುದು ಮುಖ್ಯವಲ್ಲಾ. ಹೇಗೆ ಸಮರ್ಪಿಸಿರುವುದೆನ್ನುವುದೇ ಮುಖ್ಯ. ಕ್ರಿಯೆಗಿಂತ ಕ್ರಿಯಾವಿಶೇಷಣ ಗುಣಗಳಿಗೇ ಗಮನ ಕೊಡುತ್ತಾನೆ ಸ್ವಾಮಿ. (God is more fond of adverbs than verbs) ಎಂದು ಆಂಗ್ಲ ಭಾಷೆಯಲ್ಲಿ ಒಬ್ಬಾತ ಹೇಳಿದ್ದಾನೆ. ಮಾಡುವ ಕರ್ಮದ ಮೇಲಲ್ಲಾ, ಯಾವ ರೀತಿ ಮಾಡುತ್ತಾನೆನ್ನುವುದರಮೇಲೆ ಅವನ ಗಮನ ಕೊಡುವ ಹಿರಿಮೆಯಲ್ಲಲ್ಲಾ ಯಾವ ಭಾವದಿಂದ ಕೊಡುತ್ತಾನೆನ್ನುವುದರಮೇಲೆ ಅವನ ದೃಷ್ಟಿ, ಸೇವೆ ಎಷ್ಟು ಮಾಡುತ್ತಾನೆಂದಲ್ಲಾ, ಯಾವ ರೀತಿ ಅನನ್ಯ ದೈನ್ಯ ಸೇವೆಮಾಡುತ್ತಾನೆನ್ನುವುದನ್ನೇ ನೋಡುತ್ತಾನೆ. ಈ ರೀತಿ, ಈ ಕ್ರಿಯಾವಿಶೇಷಣ ಗುಣವನ್ನು ಕಂಡುಹಿಡಿಯಲು, ಬಸವಣ್ಣನವರು ಹೇಳಿರುವಂತೆ, ಅಲ್ಲಾಡಿಸಿನೋಡುವನು ದೇವ. "ಮನವನಲ್ಲಾಡಿಸಿ ನೋಡುವನು, ತನುವನಲ್ಲಾಡಿಸಿ ನೋಡುವನು, ಧನವನ್ನಲ್ಲಾಡಿಸಿ ನೋಡುವನು." ಆ ಪರೀಕ್ಷೆಗಳಲ್ಲೆಲ್ಲಾ ತೇರ್ಗಡೆ ಹೊಂದಿದರೆ ಅವನ ಕ್ರಿಯಾ ವಿಶೇಷಣ, ಅನನ್ಯ, ಶುದ್ಧ, ಚಿತ್ತ, ಶ್ರದ್ಧೆ, ಆಸಕ್ತಿ ಎಲ್ಲಾ ಪೂಜಾ, ಸೇವಾದಿ ಕ್ರಿಯೆಯಲ್ಲಿ ಕಂಡು "ಒಲಿವ ಕೂಡಲ ಸಂಗಮದೇವ" ಭಾವಮುಖ್ಯ.

ಎಷ್ಟು ಕೊಟ್ಟರು ಎನ್ನುವುದು ಮುಖ್ಯವಲ್ಲ. ಕೊಟ್ಟುದರ ಹಿಂದಿನ ಮನೋವೃತ್ತಿ ಮುಖ್ಯ. ವಿನಯದಿಂದ ಆದರದಿಂದ ಅರ್ಪಿಸಿದುದು ಭಕ್ತಿಯಾಗುತ್ತದೆ. ನಾವು ಪುರಾಣ ಪುಣ್ಯಕಥೆಗಳಲ್ಲಿ ಈ ವಿಷಯ ಎಷ್ಟೋ ಕೇಳುತ್ತೇವೆ. ಶ್ರೀಕೃಷ್ಣನಿಗೆ ಕುಚೇಲ ಒಂದು ಹಿಡಿ ಅವಲಕ್ಕಿ ಒಪ್ಪಿಸಿದುದೂ, ವಿದುರನ ಹೆಂಡತಿ ಭಕ್ತಿ ಆವೇಶದಲ್ಲಿ ಬಾಳೆಯ ಹಣ್ಣನ್ನು ಬಿಡಿಸಿ ಹಣ್ಣು ಬಿಸುಟು, ಸಿಪ್ಪೆ ಬಾಯಿಗೆ ತುರುಕಿದುದೂ, ಅವನ್ನೇ ಸ್ವಾಮಿ ಅತ್ಯಾದರದಿಂದ ಸೇವಿಸುದುದೂ ಓದಿದ್ದೇವೆ. ಶಬರಿ ಶ್ರೀರಾಮ

ರಿಗೆ ಎಂಜಲು ಹಣ್ಣುಗಳನ್ನೇ ಅರ್ಪಿಸಿದರೂ ಅತ್ಯಾದರದಿಂದ ಸ್ವೀಕರಿಸಿದ ಸ್ವಾಮಿ. ಕಾಯಿಗಳನ್ನೂ ಮಧುರವಿಲ್ಲದವನ್ನೂ ರುಚಿ ನೋಡಿ ನೋಡಿ ಬಿಸುಟು, ತಿಂದು ಚೆನ್ನಾಗಿದ್ದ ಫಲಗಳನ್ನೇ ಶೇಖರಿಸಿಟ್ಟುಕೊಂಡು ಎಂತು ಎದುರು ನೋಡುತ್ತಿರಬೇಕು, ಭಕ್ತ ಶಬರಿ, ರಾಮನ ಬರುವನ್ನೇ. ಶಿವಲಿಂಗಕ್ಕೆ ಬೇಡರಕಣ್ಣಪ್ಪನು, ಬಾಯಿನಲ್ಲಿ ನೀರು ತುಂಬಿ ತಂದು ಅಭಿಷೇಕಿಸಿ, ಹಳೇ ಬೇಟೆ ಮಾಂಸಗಳನ್ನೇ ನೇವೇದ್ಯ ಮಾಡಿದರೂ, ಸುಪ್ರೀತನಾದ ಸ್ವಾಮಿ. ಇವರ ಅಮಿತ ಹಿನ್ನೆಲೆಯ ಭಕ್ತಿಯೇ ಇದಕ್ಕೆ ಕಾರಣ. ಭಕ್ತರ ನೈಜ ಭಕ್ತಿಗೆ ವಶನಾದ ಸ್ವಾಮಿ ಆ ನೈಜಭಕ್ತಿಯನ್ನು ನೋಡುತ್ತಾನಷ್ಟೆ. ಸಮಗ್ರ ಐಶ್ವರ್ಯ ಸಂಪತ್ತುಳ್ಳ ಸ್ವಾಮಿಗೆ, ಅಲ್ಪರಾದ ನಾವು ಏನನ್ನು ತಾನೇ ಕೊಟ್ಟೇವು? ಏನುತಾನೇ ಬೇಕಾಗಿದೆ ಅವನಿಗೆ. ವಜ್ರ ವೈಢೂರ್ಯಗಳನ್ನರ್ಪಿಸುವವರ ಅಟ್ಟಹಾಸ ನೋಡಿ ನಗುತ್ತಾನೇನೊ ಶ್ರೀಪತಿ. ಅಷ್ಟೈಶ್ವರ್ಯ ಸಂಪನ್ನನಾಗಿ, ನಿತ್ಯ ಸಂತುಷ್ಟನಾದ ಸ್ವಾಮಿಗೆ ಏನುತಾನೆ ಕಮ್ಮಿ, ಏನುತಾನೇ ಅರ್ಪಿಸೇವು. ಆದುದರಿಂದ ಅರ್ಪಿಸುವ ಪದಾರ್ಥ, ಅದರ ಬೆಲೆ ಮುಖ್ಯವಲ್ಲಾ. ಹಿನ್ನೆಲೆಯಲ್ಲಿರುವ ವಿನಯಪೂರ್ವಕವಾದ ಭಕ್ತಿಯೇ ಮುಖ್ಯ. ಸೂರ್ಯ ಪರಮಾತ್ಮನಿಗೆ ಅರ್ಘ್ಯಪ್ರದಾನ ಮಾಡುತ್ತಾರೆ ತ್ರಿವೇಳೆ ಪ್ರತಿದಿನವೂ. ಮೂರು ಬಗಸೇ ನೀರಷ್ಟೆ. ಅದರಿಂದಲೇ ಸುಪ್ರೀತನಾಗುತ್ತಾನೆ ಪರಮಾತ್ಮ. ಅವನಿಗೇ ಬೇಕಾಗಿ, ಅವನ ಕಿರಣಗಳ ಮೂಲಕವೇ ಆಕರ್ಷಿಸಿ ಸದಾ ಎಳೆದುಕೊಂಡು, ಅದೇ ನೀರನ್ನೇ ವರ್ಷರೂಪದಲ್ಲಿ ಧಾರಾವೃಷ್ಟಿಯಾಗಿ ಸುರಿಸುವ ಪರಮಾತ್ಮನಿಗೆ ನಾವು ಮೂರು ಬಗಸೆ ನೀರು ವಿನಯ ಭಕ್ತಿ ಪೂರ್ವಕವಾಗಿ ಒಪ್ಪಿಸಿದರೆ ಅದೇ ಅವನಿಗೆ ಆದರ ವಲ್ಲವೇ ? ಇನ್ನೇನು ತಾನೇ ಒಪ್ಪಿಸೇವು. ಎಲ್ಲಾ ಅವನದೇ. ಒಪ್ಪಿಸುವುದೂ ಅವನದೇ. ಸರ್ವ ಜಗತ್ತಿನ ಸ್ವಾಮಿತ್ವವೇ ಅವನದಾದ ಮೇಲೆ ಅವನವಲ್ಲದ, ನಮ್ಮದಾದ ಏನನ್ನು ತಾನೇ ನಾವು ಅವನಿಗೆ ಅರ್ಪಿಸಲು ಶಕ್ತರು.

ಶ್ರೀಯಮುನಾಚಾರ್ಯರು ಸ್ತೋತ್ರ ರತ್ನದಲ್ಲಿ "ಮಮನಾಥ ಯದಸ್ತಿ ಯೋ ಸ್ಮ್ಯಹಂ, ಸಕಲಂ ತದ್ಧಿತವೈವ ಮಾಧವ । ನಿಯತಸ್ವಮಿತಿ

ಪ್ರಬುದ್ಧಧೀ ರಥವಾಕಿಂನು ಸಮರ್ಪಯಾಮಿತೇ ||"—ನನದೂ, ನಾನೂ ಎಲ್ಲವೂ ನನಸಾಥ, ನಿನ್ನದೇ ಶ್ರೀನಿಧೇ, ಇದ ತಿಳಿತಿಳಿದೂ ನನ್ನದೆಂದೇ ನನ್ನ ನಿನ್ನದಾಗಿರುವುದನ್ನ, ನಿನ್ನಪಾದಕ್ಕರ್ಪಿಸಲಿ ಸ್ವೀಕರಿಸೆಂದು, ಪ್ರಭೊ—ಎಂದು ಕೇಳಿದ್ದಾರೆ.

"ಕೆರೆಯ ನೀರನು ಕೆರೆಗೆ ಚಲ್ಲಿ ಧನ್ಯ"ರಾಗಿರೆಂದು ದಾಸರು ಹೇಳುವಂತೆ. ಅವನದೇ ಅವನಿಗರ್ಪಣ. ಬೇರೆಲ್ಲಿಂದ ಬರಬೇಕು, ನಮಗೆ ಅರ್ಪಿಸುವದಕ್ಕೆ. ಆದರದನ್ನು ವಿನಯಭಕ್ತಿಯಿಂದ ಅರ್ಪಿಸಬೇಕು.

ಬಂಗಾಳಿ ವೈಷ್ಣವ ಕವಿತೆಗಳಲ್ಲಿ ಬರುವಂತೆ "ಯಹಾ, ದಿತೆಪಾಯಿ, ತಾಯಿ ದಿಯಿ, ದೇವತಾರೇ, ಆರ್ ಪಾಬೇಕೊಥಾ?" ಬೇರೆ ಎಲ್ಲಿ ಅರ್ಪಣೆಗೆ ನಮಗೆ ಸಿಗುತ್ತೆ, ಅವನವೇ ಅಲ್ಲವೆ. ಪತ್ರ, ಪುಷ್ಪ, ಫಲ, ತೋಯ ಎಲ್ಲಾ ಪ್ರಕೃತಿಯಲ್ಲಿ ಧಾರಾಳವಾಗಿ ಒದಗಿಸಿದ್ದಾನೆ ಸ್ವಾಮಿ. ಕಷ್ಟಪಡಬೇಕಾದುದೇ ಇಲ್ಲಾ. ನಾವು ತಿನ್ನುವ, ಇತರರಿಗೆ ಕೊಡುವ ಫಲವನ್ನೇ ಕೃಷ್ಣಾರ್ಪಣ ಎಂದು ದೇವನಿಗೆ ಭಕ್ತಿಯಿಂದ ಅರ್ಪಿಸಿ ಉಪಯೋಗಿಸಿದರಾಯಿತು ಅವನ ಪ್ರಸಾದವೆಂದು. ಸುಲಭವಾಗಿ ಇದನ್ನು ಮಾಡಲೆಂದೇ ಹೇಳುತ್ತಾನೆ ಸ್ವಾಮಿ.

**ಯತ್ಕರೋಷಿ ಯದಶ್ನಾಸಿ । ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ । ತತ್ ಕುರುಷ್ವ ಮದರ್ಪಣಮ್ ॥೨೭॥**

ನೀನು ಯಾವುದನ್ನು ಮಾಡುವೆಯೋ, ಯಾವುದನ್ನು ತಿನ್ನುವೆಯೋ ಯಾವುದನ್ನು ಯಜ್ಞದಲ್ಲಿ ಅರ್ಪಿಸುವೆಯೋ, ಯಾವುದನ್ನು ಸತ್ಪಾತ್ರದಲ್ಲಿ ದಾನ ಮಾಡುವೆಯೋ, ಯಾವುದು ತಪಸ್ಸೆಂದು ಆಚರಿಸುವೆಯೋ ಅವೆಲ್ಲವನ್ನೂ ನನಗೆ ಅರ್ಪಣ ಮಾಡು. ಇದೇ ಭಕ್ತಿಯ ಸಾರಂಶ. ಎಲ್ಲಾ ಅವನದೇ, ಅವನಿಗೇನೇ ಅವನ ಪ್ರಿತ್ಯರ್ಥವಾಗಿಯೇ ಮಾಡುವುದು. ಬೇರೇ ಯಾವುದೂ ಅವನಿಗೆ ಪ್ರಿತ್ಯರ್ಥವೆಂದೂ, ಅವನ ಉಪಾಸನೆಯೆಂದೂ ಮಾಡಬೇಕೆಂದು ಹೇಳಿಲ್ಲಾ. ನಮ್ಮ ದಿನಚರಿ ಸತ್ಕರ್ಮಗಳನ್ನೂ ನಮ್ಮ ನಿತ್ಯನೈಮಿತ್ತಿಕ ಕರ್ಮಗಳನ್ನು ಮೇಲಾಗಿ ಸ್ವಭಾವವಾಗಿ ನಾವು

ದೇಹಪೋಷಣೆಗೆ ಮಾಡುವ ದಿನ ಕೆಲಸಗಳನ್ನೂ (ಊಟ ಮಾಡುವುದು ಮೊದಲುಗೊಂಡ) ಶ್ರೀಕೃಷ್ಣಾರ್ಪಣಮಸ್ತು (ಮದರ್ಪಣಂ) ಎಂದು ಅವನಿಗೇ ಅರ್ಪಣ, ಅವನ ಸೇವೆ, ಅವನ ಪೂಜೆಯೆಂದು ಭಕ್ತಿಭಾವ ದಿಂದ ಮಾಡಬೇಕು.

ಮಾಡುವವರೂ ನಾವಲ್ಲಾ, ಫಲವೂ ನಮ್ಮದಲ್ಲ, ಇನ್ನು ಮಾಡುವ ಸಂಕಲ್ಪ ತಾನೇ ನಮ್ಮದೇಕಾಗಿರಬೇಕು. ಆದ್ದರಿಂದ ಸಂಕಲ್ಪ, ಮಾಡುವ ಕಾರ್ಯ, ಮಾಡುವ ಫಲ ಎಲ್ಲವೂ ಅವನದೇ ಆಗಿರಲಿ. ನಾವು ಮಾಡಿ ದರೂ, ಅವನಿಗೆ ಅರ್ಪಿಸಿಬಿಡುವ. ಇದರಿಂದ ನಮ್ಮ ಭಾರ ಎಷ್ಟು ಹಗುರವಾಗಿಹೋಯಿತು. ನಮ್ಮ ಯೋಚನೆ ಎಷ್ಟು ಕಮ್ಮಿಯಾಗಿ ಬಿಟ್ಟಿತು. ಪ್ರತಿಯೊಂದಕ್ಕೂ ಲೆಖ್ಖಾಚಾರ ಹಾಕಬೇಕಾದುದಿಲ್ಲಾ, ನಡೆದುಹೋದುದಕ್ಕೆ ವ್ಯಸನ ಪಡಬೇಕಾದ್ದಿಲ್ಲಾ, ಬರುವ ಫಲಕ್ಕೆ ನಿರೀಕ್ಷಿಸಿಕೊಂಡಿರಬೇಕಾದುದಿಲ್ಲಾ. ಎಲ್ಲಾ ಅವನಿಗೇ ಅರ್ಪಣ.

ಸರ್ವಸಾರೋಪನಿಷತ್ತಿನ ಕೊನೆಯಲ್ಲಿ, "ನಾಹಂದೇಹೋ ಜನ್ಮ ಮೃತ್ಯೂಕುತೋಮೆ, ನಾಹಂಕಾರಃ ಕ್ಷುತ್ಪಿಪಾಸೇ ಕುತೋಮೇ ನಾಹಂ ಚೇತ ಶ್ಶೋಕಮೋಹೌ ಕುತೋಮೆ, ನಾಹಂ ಕರ್ತಾ ಬನ್ಧಮೋಕ್ಷೌ ಕುತೋಮೇ" ನಾನು ದೇಹವೇ ಅಲ್ಲಾ, ನನಗೆ ಜನ್ಮಮರಣವೆಲ್ಲಿಯದು, ನಾನೆಂಬುದೇ ಅಲ್ಲಾ (ಅಹಂಕಾರ ನಾನಲ್ಲ ಹಸಿವು ಬಾಯಾರಿಕೆಗಳು ನನಗೆಲ್ಲಿಯವು, ನಾನು ಚೇತಸ್ಸೇ (ಮನ) ಅಲ್ಲಾ ಶೋಕಮೋಹಗಳು ನನಗೆಲ್ಲಿಯವು. ನಾನು ಮಾಡುವವನೇ ಅಲ್ಲಾ, ನನಗೆ ಬಂಧ ಮೋಕ್ಷ ಗಳು, (ಕರ್ಮ ಸಂಕೋಲೆ ಬಿಡುಗಡೆಗಳು) ಎಲ್ಲಿಯವು, – ಎಂದು ಕರ್ಮದ ಕರ್ತೃತ್ವ, ಭೋಕ್ತೃತ್ವವೆಲ್ಲವನ್ನೂ ಅಲ್ಲಗಳೆದಿರುವರು. ಎಲ್ಲಾ "ಆತ್ಮಾಹಂ ಸರ್ವಭೂತಾನಾಂ, ವಿಭುಸ್ಸಾಕ್ಷಿ ನ ಸಂಶಯಃ" ಎಂದು ನಿಸ್ಸಂದೇಹವಾಗಿ ಸರ್ವ ಭೂತಾತ್ಮನಾದ ವಿಭುಸಾಕ್ಷಿಯದೇ ಸರ್ವಸ್ವವೂ. "ನಾಹಂ ಕರ್ತಾ ನೈವ ಭೋಕ್ತಾ ಪ್ರಕೃತೇ ಸಾಕ್ಷಿರೂಪಕಃ । ಮತ್ಸಾನ್ನಿ ಧ್ಯಾತ್ಪ್ರವರ್ತಂತೇ ದೇಹಾದ್ಯಾ ಅಜಡಾ ಇವ ॥" ಆ ಸಾನ್ನಿಧ್ಯದಿಂದ ಈ ಜಡ ದೇಹವು ಪ್ರವರ್ತಿಸುತ್ತದೆಯಷ್ಟೆ–ಎಂದಿದೆ.

"ಅನನ್ಯ ಚಿಂತನ"ದಂತೆ "ಮದರ್ಪಣವೂ" ಒಂದು "ಧರ್ಮ್ಯಂ ಸುಸುಖಂ ಕರ್ತುಮವ್ಯಯಂ" ಸೌಖ್ಯವಾಗಿ ಧರ್ಮವನ್ನು ಕಾಪಾಡಿ ಕೊಂಡು ಬರಲು ಮಾಡುವ ಕೆಲಸಗಳಿಗೆ ವಿಧಿಸಿರುವ ಒಂದು ಸುಸೂತ್ರ, ದುಃಖನಾಶಕ. ಇದು ಅಭ್ಯಾಸವಾಗಿಬಿಟ್ಟರೆ ನಾನೆನ್ನುವುದೇ ಹೋಗಿ ಬಿಡುತ್ತೆ. "ನನ್ನನಳಿಸು ನೀನೇ ನೆಲಸು"ಗೆ ಸುಲಭೋಪಾಯ. "ನಾನು" ಎನ್ನುವುದು ಹೋಗುವುದು ಅಷ್ಟು ಸುಲಭವಲ್ಲ, ಅದಕ್ಕೇ ಮಾಡುವ ಪ್ರತಿಯೊಂದನ್ನೂ ಅವನಿಗೇ ಅರ್ಪಿಸುತ್ತಾ ಅಭ್ಯಾಸಮಾಡಿದರೆ, ನಾನು ಹೋಗಿ ನೀನಾಗುತ್ತದೆ. ನಾನೆಂದರೆ ಪರಮಾತ್ಮನಿಗೆ ಅಪಚಾರಮಾಡಿ ದಂತೆ. ಅಹಂಭಾವವೂ, ನಮ್ಮ ಭಾವವೂ ಹೋಗಲಭ್ಯಾಸಕ್ಕಾಗಿ ಈ "ಮದರ್ಪಣ" ಬೋಧಿಸಿದ್ದಾನೆ ಪರಮಾತ್ಮ. ಈ ೫೦ ರೂಪಾಯಿ ನನ್ನದು, ಈ ಮನೆ ನನ್ನದು, ಈ ಭೂಮಿ ನನ್ನದು ಎಂಬ ಭಾವನೆ ಯಿಂದ ನಮ್ಮ ವಸ್ತುವನ್ನು ಪ್ರತ್ಯೇಕಮಾಡಿಕೊಂಡರೆ, ನಮ್ಮಪ್ಪನ ಅಪಾ ರಹಣ, ಪರಂಧಾಮ ವಿಶಾಲ ಜಗತ್ತಿನಿಂದ ನಮ್ಮ ಕೃಪಣತ್ವದಿಂದ ದೂರಮಾಡಿಕೊಂಡಂತಾಯಿತು. ಎಲ್ಲಾ ಅವನದೇ ಎಂದಮೇಲೆ ಅವನ ಅಪಾರ ಐಶ್ವರ್ಯ, ಕೈವಲ್ಯಧಾಮ, ವಿಶಾಲ ವಿಶ್ವದಲ್ಲಿ ಕಿಂಚಿತ್ತಾದ ನಾನೂ ಭಾಗಿಯಾಗಿ, ಅತಿ ಐಶ್ವರ್ಯವಂತನಾದೆ. ನಾವು ಮಾಡಿದುದನ್ನೆಲ್ಲಾ ಅವನಿಗೆ ಅರ್ಪಿಸಿಬಿಟ್ಟಮೇಲೆ ನಾನು ಬೇರೆಂಬ ಭಾವ ತೊಲಗಿತು. ಅವನಲ್ಲೊಂದಾದೆವು. ನಮ್ಮಲ್ಲಿರುವ ಕುರುಡುಕಾಸನ್ನೂ ಲಕ್ಷಾಧಿಕಾರಿಯು ಬಂಡವಾಳದೊಡನೆ ಸೇರಿಸಿ ಅವನ ಜೊತೆಯಲ್ಲಿ ಪಾಲುಗಾರರಾಗೋಣ. ನೀಲಗಿರಿಯಲ್ಲಿ ಒಂದು ಮನೆ ಕಟ್ಟಿಕೊಂಡು ಅದಕ್ಕೆ ಸುದರ್ಶಿನಿ ಎಂದು ಹೆಸರಿಟ್ಟುಕೊಂಡು ಎಲ್ಲಿಂದಲೋ ಅಲ್ಲಿಗೆ ಬಂದು ಅದರೆದುರು ನಿಂತು ಕಾಣುವ ದೃಶ್ಯವನ್ನು ನೋಡುವವನೆಲ್ಲಿ. ವಿಹಾರಕ್ಕಾಗಿ ನೀಲಗಿರಿಗೆಂದು ಬಂದು ಕೆಳಬೆಟ್ಟದಿಂದ ದೊಡ್ಡಬೆಟ್ಟದವರೆವಿಗೂ ವಿಶಾಲವಾಗಿರುವ ಚಲುವು ದೃಶ್ಯವನ್ನು ಸಂತೋಷದಿಂದ ನೋಡಿ ಆನಂದಿಸುವವನೆಲ್ಲಿ. ಗ್ರೀಕ್ ನಾಟಕವೊಂದರಲ್ಲಿ ಸೊಗಸಾದ ಜಾಗವೊಂದನ್ನು ನೋಡಿ ಅಲ್ಲಿ ಉಸ್ತುವಾರಿಗಿರುವ ಬಡಮಾಲಿಯನ್ನು ಒಬ್ಬನು ಯಾರದು ಈ ಸುಂದರ

ಜಾಗವೆಂದು ಕೇಳಿದ. ಆ ಮಾಲಿ ಹೇಳುತ್ತಾನೆ, "Cleon owns the lands but the view I" "ಜಾಗದ ಮಾಲಿಕ ಹೊಣೆಗಾರ ಕ್ಲಿಯಾನನು ಅದರ ಸುಂದರ ನೋಟದ ಸ್ವಾಮಿತ್ವ ನನ್ನದು" ಎಂದು.

**ಶುಭಾಶುಭಫಲೈರೇವಂ । ಮೋಕ್ಷ್ಯಸೇ ಕರ್ಮಬಂಧನೈಃ ।**
**ಸಂನ್ಯಾಸಯೋಗಯುಕ್ತಾತ್ಮಾ । ವಿಮುಕ್ತೋ ಮಾಮುಪೈಷ್ಯಸಿ ॥೨೮॥**

ಈ ಮದರ್ಪಣದ ಅಭ್ಯಾಸದಿಂದಾಗುವ ಅಪಾರವಾದ ಲಾಭವನ್ನು ಹೇಳುತ್ತಾನೆ ಸ್ವಾಮಿ. ಈ ಸುಲಭ ಅಭ್ಯಾಸದಿಂದ, ಮದರ್ಪಣ ಬುದ್ಧಿಯಿಂದ ಸಮಸ್ತ ಕಾರ್ಯಗಳನ್ನೂ ಮಾಡುವುದರಿಂದ, ಕಾರ್ಯದ ಶುಭಾಶುಭ ಫಲರೂಪವಾದ ಬಂಧನದಿಂದ ಬಿಡುಗಡೆ ಹೊಂದುವೆ. ಸಮಸ್ತ ಕರ್ಮಗಳನ್ನೂ ಸ್ವಾಮಿಯಲ್ಲೇ ಅರ್ಪಿಸುವ ಅಭ್ಯಾಸದಲ್ಲಿ ಅದೇ ಸ್ವಭಾವವಾಗಿ, ಸಂನ್ಯಾಸಯೋಗಯುಕ್ತನಾದ ಆತ್ಮನಾಗಿ ಕರ್ಮ ಬಂಧನಗಳಿಂದ ಬಿಡುಗಡೆ ಹೊಂದಿ ಪರಮಾತ್ಮನನ್ನೇ ಸೇರುವೆ. ಮೋಕ್ಷ ಮಾರ್ಗವೇ ಆಯ್ತು. ವೈರಾಗ್ಯ ಅಭ್ಯಾಸದಿಂದ ಮೋಕ್ಷಕ್ಕೆ ಮೆಟ್ಟಿ ಲಾಯ್ತು.

**ಸಮೋಽಹಂ ಸರ್ವಭೂತೇಷು । ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।**
**ಯೇ ಭಜಂತಿ ತು ಮಾಂ ಭಕ್ತ್ಯಾ । ತೇ ತೇಷು ಚಾಪ್ಯಹಮ್ ॥೨೯॥**

ಸ್ವಾಮಿ ಸಮಸ್ತ ಭೂತಗಳಲ್ಲೂ ಸಮಭಾವನೆಯುಳ್ಳವನು. ಅವನಿಗೆ ಶತೃವಾಗಲೀ ಮಿತ್ರರಾಗಲೀ ಇಲ್ಲಾ. ಅವನನ್ನು ಯಾರು ಭಕ್ತಿ ಪೂರ್ವಕವಾಗಿ ಭಜಿಸುವರೋ ಅವರು ಅವನಲ್ಲೇ ಇರುವರು. ಅವನೂ ಅವರಲ್ಲೇ ಇರುವನು. ಅಗ್ನಿಯಂತೆ. ಅಗ್ನಿಗೆ ಎಲ್ಲರೂ ಒಂದೇ. ಆದರೆ ಯಾರು ಸನ್ನಿಧಿಗೆ ಹೋಗುವರೋ ಅವರಿಗೆ ಬೆಚ್ಚಗೆ ಮಾಡುವನು (ಶಾಖ ಕೊಡುವವನು) ಮಿತ್ರರಾಗಲೀ ಶತೃವಾಗಲೀ ಇಲ್ಲಾ. ಸ್ವಾಮಿ ಯನ್ನು ಭಕ್ತಿಪೂರ್ವಕವಾಗಿ ಭಜಿಸಿದರೆ ಸ್ವಾಮಿಯೂ ಯಾರೆಂದು ನೋಡದೆ ಅವನಲ್ಲಿ ಸೇರಿಸಿಕೊಳ್ಳುವನು. ಸದಾಚಾರರ ವಿಷಯ ವಾಯ್ತು.

**ಅಪಿ ಚೇತ್ಸುದುರಾಚಾರೋ । ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮಂತವ್ಯಃ । ಸಮ್ಯಗ್ವ್ಯವಸಿತೋ ಹಿ ಸಃ ॥೩೦॥**

ದುರಾಚಾರದವರಂದರೋ? ಅವರಿಗೆ ಗತಿಯೇ ಇಲ್ಲವೇ. ಅವರೂ ಅನನ್ಯಭಾವದಿಂದ ಭಜಿಸುವವರಾದರೆ, ಆ ದುರ್ಮಾರ್ಗದಿಂದ ಪರಿವರ್ತನೆಯಾಗಿ ಸದಾಚಾರ ಸಂಪನ್ನನೇ ಆಗುವನು.

ಪರಮಾತ್ಮನ ಕಡೆ ಮನಸ್ಸು ತಿರುಗಿದರಾಯಿತು ಮಿಕ್ಕಕಡೆ ಗಮನ ಹೋಗದು. ಭಕ್ತನ ಮನದಲ್ಲಿ ಸತತವೂ ಪರಮಾತ್ಮನಿರುವುದರಿಂದ ಅಲ್ಲಿ ದುರಾಚಾರ, ದುರಾಲೋಚನೆಗಳಿಗೆ ಎಡೆಯಿಲ್ಲಾ. ಭಗವಚ್ಚಿಂತನವು ಅವನ ಪಾಪವೆಲ್ಲಾ ದಹಿಸಿಬಿಡುವುದು. ಮನಸ್ಸೇ ಪರಿವರ್ತನೆಯಾಗುವುದು. ಆಗ ಅವನ ಯೋಗಕ್ಷೇಮವನ್ನು ಸ್ವಾಮಿಯೇ ವಹಿಸುವನು, ಭಕ್ತನೂ ಮಾಡುವ ಕಾರ್ಯವನ್ನೆಲ್ಲಾ ಸ್ವಾಮಿಗೇ ಅರ್ಪಣ ಮಾಡುವನು. ಅವನ ನಿತ್ಯಯೋಗಕ್ಷೇಮ ಸ್ವಾಮಿ ವಹಿಸಿದಮೇಲೆ ಅವನಿಗೆ ದುರಾಲೋಚನೆಯಾಗಲೀ ದುರಾಚಾರವಾಗಲೀ ಸ್ವಾಮಿ ಕೊಡುವುದೇ ಇಲ್ಲಾ. ಕೆಟ್ಟದಾರಿ ತೋರಿಯಾನೇ? ಭಕ್ತನೂ ತಾನು ಮಾಡುವುದೆಲ್ಲಾ ಸ್ವಾಮಿಗೆ ಒಪ್ಪಿಸಬೇಕಾದುದರಿಂದ ಕೆಟ್ಟ ಯೋಚನೆಯಾಗಲೀ ಕೆಟ್ಟ ಕೆಲಸವನ್ನಾಗಲೀ ಮಾಡುವುದಿಲ್ಲಾ. ದುರಾಚಾರಿಯ ಮನ ಸ್ವಾಮಿಯ ಕಡೆಗೆ ತಿರುಗಿದರೆ ಸಾಕು ಅವನನ್ನು ಸದಾಚಾರ ಸಂಪನ್ನನಾಗಿ ಮಾಡುತ್ತಾನೆ ಸ್ವಾಮಿ. ಶಿಕ್ಷೆ ಕೊಡುವುದು ಸ್ವಾಮಿಯ ಶಾಸನದಲ್ಲಿಲ್ಲಾ. ಉದಾಸೀನನಾಗಿರುತ್ತಾನೆ. ಆದರೆ ದುರಾಚಾರಿಯೇ ತನ್ನ ಪಾಪಗಳಿಗೆ ಪರಿತಾಪಪಟ್ಟು ಸ್ವಾಮೀ ನನ್ನನ್ನು ರಕ್ಷಿಸೆಂದು ದೈನ್ಯದಿಂದ ಸ್ವಾಮಿಯ ಕಡೆಗೆ ತಿರುಗಿದರೆ ಸಾಕು, ಸ್ವಾಮಿಯು ರಕ್ಷಿಸಲು ಕಾದೇ ಇದ್ದಾನೆ. ಸದಾಚಾರಗಳನ್ನು ಅವರ ಸದಾಚಾರವೇ ರಕ್ಷಿಸುವುದು, ತಪಸ್ವಿಗಳನ್ನು ಅವರ ತಪವೇ ರಕ್ಷಿಸುವುದು. ರಕ್ಷಣೆ ಬೇಕಾಗಿರುವುದೆಲ್ಲಾ ದುರಾಚಾರಿಗಳಿಗೇ ಅವರ ದುರಾಚಾರದಿಂದ ಬಿಡಿಸಲು, ತಪವಿಲ್ಲದವರಿಗೇ ತಿಳಿವಿಲ್ಲದವರಿಗೆ.

**ಕ್ಷಿಪ್ರಂ ಭವತಿ ಧರ್ಮಾತ್ಮಾ । ಶಶ್ವಚ್ಛಾಂತಿಂ ನಿಗಚ್ಛತಿ ।**
**ಕೌಂತೇಯ ಪ್ರತಿಜಾನೀಹಿ । ನ ಮೇ ಭಕ್ತಃ ಪ್ರಣಶ್ಯತಿ ॥೩೧॥**

ನನ್ನನ್ನು ಭಜಿಸುವ ಧರ್ಮಾತ್ಮನು ಶೀಘ್ರವಾಗಿ ಶಾಶ್ವತವಾದ ಶಾಂತಿಯನ್ನು ಹೊಂದುವನು. ಧರ್ಮಾತ್ಮನಾದೊಡನೆಯೇ ಶಾಂತಿ. ನನ್ನ ಭಕ್ತನು ನಾಶಹೊಂದುವುದಿಲ್ಲಾ (ಹಾಳಾಗುವುದಿಲ್ಲ) ವೆಂದು ನೀನು ಪ್ರತಿಜ್ಞೆ ಮಾಡಬಹುದು. "ನಂಬಿ ಕೆಟ್ಟವರಿಲ್ಲವೋ" ಎನ್ನುವ ದಾಸರ ಪದಭಾವದಂತೆ. ದುರಾಚಾರಿ ಕೂಡ ಪಶ್ಚಾತ್ತಾಪವೆಂಬ ಪ್ರಾಯಶ್ಚಿತ್ತ ಮಾಡಿಕೊಂಡರೆ, ಧರ್ಮಾತ್ಮನಾಗಿ ಪರಮಾತ್ಮನನ್ನು ಭಜಿಸಿ ಶಾಂತಿ ಹೊಂದುತ್ತಾನೆ. ದುರಾಲೋಚನೆ, ದುರಾಚಾರದಲ್ಲಿ ಶಾಂತಿ ಎಲ್ಲಿ. ಮಾಡುವುದು ಕೆಟ್ಟ ಕೆಲಸವೆಂದು ಮನಸ್ಸಿನಲ್ಲೇ ಕೊರೆದು ಅಶಾಂತಿಯನ್ನುಂಟುಮಾಡಿರುತ್ತದೆ. ಭಕ್ತರ ಉದ್ಧಾರಕ್ಕೇ ಭಗವಂತನು ಎಷ್ಟೋ ತಾನೇ ಕಷ್ಟ ವಹಿಸಿರುವುದು ಪುರಾಣ ಪುಣ್ಯಕಥೆಗಳಲ್ಲಿ ನೋಡುತ್ತೇವೆ. ಅವರ ಕಷ್ಟವೇ ತನ್ನ ಕಷ್ಟ. ಇನ್ನು ನಾಶಹೊಂದಲುಬಿಟ್ಟಾನೇ. ಪ್ರಹ್ಲಾದನನ್ನು ರಕ್ಷಿಸಲು ಹೇಗೆ ಬಂದ. ಗಜೇಂದ್ರನನ್ನು ಹೇಗೆ ರಕ್ಷಿಸಿದ. ಅವರ ನಿತ್ಯಯೋಗಕ್ಷೇಮವನ್ನೇ ನೋಡಲು ಪಣತೊಟ್ಟಿರುವಾಗ ಅವರು ನಾಶವಾಗುವುದಿಲ್ಲವೆಂದು ನಾವು ಖಂಡಿತ ನಂಬಬಹುದು. ನೋಡಿಕೊಳ್ಳವನೇ ಪರಮಾತ್ಮನಾದ ಮೇಲೆ ಭಕ್ತನಿಗೆ ನಾಶದ ಚಿಂತೆಯೆಲ್ಲಿ.

**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ । ಯೇಽಪಿ ಸ್ಯುಃ ಪಾಪಯೋನಯಃ ।**
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾ–ಸ್ತೇಽಪಿ ಯಾಂತಿ ಪರಾಂ ಗತಿಮ್ ॥**

ನನ್ನನ್ನು ಆಶ್ರಯ ಮಾಡಿಕೊಂಡಿರುವ ಯಾವ ಪಾಪಯೋನಿಯಲ್ಲಿ ಜನಿಸಿದವರೂ, ಸ್ತ್ರೀ, ವೈಶ್ಯ, ಶೂದ್ರಾದಿಗಳು ಕೂಡಾ ಪರಮಗತಿಯನ್ನು ಹೊಂದುವರು. ಎಲ್ಲರಿಗೂ ಅಭಯಹಸ್ತ. ಎಲ್ಲರೂ ಒಂದಲ್ಲದಿದ್ದರೊಂದು ದಿನ ಅವನ ಪಾದ ಸೇರುವರು.

"ಎಲ್ಲರನು ಸಲಹುವನು, ಇದಕೆ ಸಂಶಯವಿಲ್ಲಾ" ಎನ್ನುವ ಪುರಂಧರ ದಾಸರ ಕೀರ್ತನೆ ಜ್ಞಾಪಕಕ್ಕೆ ಬರುತ್ತೆ. ತನ್ನ ಮಕ್ಕಳಾದ ಎಲ್ಲರಲ್ಲೂ

ಸಮಭಾವನೆಯಿಂದ, ಎಲ್ಲರನ್ನೂ ಸಲಹುವನು—ಎಂದು ಧೈರ್ಯವಾಗಿರಬಹುದು.

ಪಾಪ ಜನ್ಮ ತಾಳಿದವರು ಕೂಡ ನನ್ನನ್ನು ಸೇರುವರು, ಸ್ತ್ರೀಯರೂ, ವೈಶ್ಯರೂ ಶೂದ್ರರು ಕೂಡಾ ನನ್ನನ್ನು ಸೇರುವರು ಎಂದು ಓದಿಕೊಳ್ಳಬೇಕು. ಸ್ತ್ರೀಯರೂ, ವೈಶ್ಯರೂ, ಶೂದ್ರರೂ "ಪಾಪಯೊ ನಯಃ" ಎಂದು ಓದಿಕೊಳ್ಳಬಾರದು. ಎಲ್ಲರೂ ಪರಮಾತ್ಮನನ್ನಾಶ್ರಯಿಸಿದರೆ ಪರಮಗತಿಯನ್ನು ಹೊಂದುವರು. ಪಾಪಯೋ ನಿಜರುಗಳು ಪಶ್ಚಾತ್ತಾಪಪಟ್ಟು ಮಾರ್ಪಟ್ಟು ಸ್ವಾಮಿಯನ್ನಾಶ್ರಯಿಸಿ ಸೇರುವರು. ಬ್ರಾಹ್ಮಣ ಕ್ಷತ್ರಿಯ ವರ್ಣದಲ್ಲಿ ಹುಟ್ಟಿದವರಿಗಿರುವಷ್ಟು ಅಸ್ಪದ ವಿರಾಮ ವೈಶ್ಯ ಶೂದ್ರರರಿಗಿರುವುದಿಲ್ಲಾ. ಆ ಕುಲಗಳಲ್ಲಿ ಹುಟ್ಟಿದವರು ತಮ್ಮ ಜೀವನಕ್ಕಾಗಿ ವ್ಯಾಪಾರ, ಬೇಸಾಯಗಳಲ್ಲಿ ನಿರತರಾಗಿ, ಜನಾಂಗಕ್ಕೆಲ್ಲಾ ಅನ್ನ ಬಟ್ಟೆಗಳನ್ನೊದಗಿಸುವುದರಲ್ಲಿ ಹೆಚ್ಚು ಕಾಲ ಕಳೆಯಬೇಕಾಗಿರುವುದರಿಂದ ಸ್ವಾಮಿಯ ಧ್ಯಾನಕ್ಕೆ ಅವಕಾಶಮಾಡಿಕೊಳ್ಳಬೇಕು, ತಮ್ಮ ಕಾರ್ಯದಲ್ಲಿ ನಿರತರಾಗಿರುವಾಗಲೇ ಸ್ವಾಮಿ ಧ್ಯಾನ ಮಾಡಿಕೊಂಡಿರಬೇಕು. ಬ್ರಾಹ್ಮಣ ಕ್ಷತ್ರಿಯ ಕುಲದಲ್ಲಿ ಹುಟ್ಟಿದವರಿಗಾದರೊ, ಅವರ ನಿತ್ಯನೈಮಿತ್ತಿಕ ಕರ್ಮಗಳಲ್ಲೇ ಸದಾ ಭಗವಚ್ಚಿಂತನೆ ಸೇರಿಬಿಟ್ಟಿದೆ. ಅವನ್ನು ತ್ಯಜಿಸಿ ಕಲಿಕಾಲದಲ್ಲಿ ಎಲ್ಲಕ್ಕೂ ಕೈಹಾಕಿ ಬ್ರಹ್ಮಚಿಂತನವನ್ನೇ ಬಿಟ್ಟ ಬ್ರಾಹ್ಮಣರನ್ನು ಬಿಟ್ಟುಬಿಡಿ. ಅವರು ಹುಟ್ಟುಬ್ರಾಹ್ಮಣರಷ್ಟೆ, ನಿಷ್ಠಬ್ರಾಹ್ಮಣರಲ್ಲ. ಬ್ರಾಹ್ಮಣತ್ವವು ಜಾತಿ, ಹುಟ್ಟುಗಳಲ್ಲಿಲ್ಲಾ. ಬ್ರಹ್ಮನನ್ನು ಹುಡುಕುತ್ತಾ ಸತ್ಯಮಾರ್ಗದಲ್ಲಿ ನಡೆವರೇ ಬ್ರಾಹ್ಮಣರು. ಅವರು ಯಾವ ಕುಲದವರಾದರೇನು?

ಸ್ತ್ರೀಯರಿಗಂತೂ ಗೃಹಕೃತ್ಯ ಮತ್ತು ಮಕ್ಕಳನ್ನು ಹೆರುವುದು ಪೋಷಿಸುವುದರಲ್ಲಿಯೇ ಜೀವಮಾನ ಕಳೆಯುತ್ತದೆ. ಅಲ್ಲದೆ ಸನಾತನ ಧರ್ಮದ ಪ್ರಕಾರ ಪರಾಧೀನ. ಗಂಡನೇ ದೇವರೆಂದು ಭಾವಿಸಿ ಅವನನ್ನನುಸರಿಸಿ ನಡೆಯಬೇಕು. ಈಗಿನ ಕಾಲದ ಮಾತು ಬಿಡಿ. ಗಂಡಸೇ ಹೆಂಗಸನ್ನನುಸರಿಸಿ ನಡೆಯಬೇಕಾಗಿದೆ. ಎಲ್ಲಿ ನೋಡಿದರೂ ಸ್ತ್ರೀ ಸ್ವಾತಂತ್ರ್ಯದ ಕೂಗು; ಪುರುಷರೊಡನೆ ಭುಜಕ್ಕೆ ಭುಜಕೊಟ್ಟು ವ್ಯಾಪಾರ

ವ್ಯವಹಾರ ಮಾಡಬೇಕೆಂದು ಪ್ರಯತ್ನ. ಆದರೂ ಪರಮಾತ್ಮ ಚಿಂತನೆಗೆ ಅವರೂ ವ್ಯವಧಾನ ಮಾಡಿಕೊಳ್ಳಬೇಕು. ಎಷ್ಟಾದರೂ ಈಗಿನ ಕಲಿಕಾಲ ದಲ್ಲಿ ಕೂಡಾ, ಕೊಂಚಮಟ್ಟಿಗೆ ಮನೆಗಳಲ್ಲಿ ಪೂಜೆ ಪುರಸ್ಕಾರಾದಿಗಳು ಳಿದು, ಸದಾಚಾರ ನಡೆದು, ಧರ್ಮ ಕರ್ಮ, ದಾನ ಸಂತರ್ಪಣೆಗಳು ನಡೆಯುತ್ತಿರುವುದಾದರೂ ನಮ್ಮ ಸ್ತ್ರೀಗಳ ಧಾರ್ಮಿಕ ಸ್ವಭಾವದಿಂದಲೆ. ಗಂಡಸು ಎಷ್ಟೇ ಬಿಟ್ಟಿರಲಿ, ಎಷ್ಟೇ ಪಾಶ್ಚಿಮಾತ್ಯ ಪ್ರಭಾವದಿಂದ ಆಚಾರ ವ್ಯವಹಾರ ತ್ಯಜಿಸಿರಲಿ, ಗೃಹಿಣಿಯು ಮಾತ್ರ ತನ್ನ ಗೃಹದಲ್ಲಿ ಆ ಸನಾತನ ಸಧರ್ಮಗಳನ್ನು ಬಿಟ್ಟಿಲ್ಲಾ. ದೇವರಪೂಜೆ, ಗುರು ಹಿರಿಯರ ಮರ್ಯಾದೆ, ಧಾರ್ಮಿಕ ಕಾರ್ಯಗಳು, ದಾನ, ಸತ್ಪಾತ್ರದಲ್ಲಿ ಊಟ ಉಪಚಾರ, ಎಲ್ಲರಲ್ಲಿಯೂ ಕರುಣೆ, ಸತ್ಯ ವ್ಯವಹಾರ ಎಲ್ಲವೂ ಮನೆ ಯಲ್ಲಿ ಈಗಲೂ ತಾನೇ ಯಜಮಾನತಿಯಾದ ಗೃಹಣಿಯಿಂದ ನಡೆ ಯುತ್ತಾ ಇವೆ. ಅದೆಲ್ಲಾ ಗೊಡ್ಡಾಚಾರಗಳೆಂದು ಸುಧಾರಿಸಿದ ಪುರುಷರು ಅಲ್ಲಗಳೆದರೂ 'ನಿಮಗ್ಯಾಕೆ ಅದರ ಚಿಂತೆ, ಹೋಗಿ' ಎಂದು ಅವರನ್ನು ಅಟ್ಟಿಯೇ ಬಿಡುವರು. ಇದರಿಂದಲಾದರೂ ಮಕ್ಕಳು ಮರಿಗಳಿಗೆ ಸದಾಚಾರ ಕೊಂಚ ಅಭ್ಯಾಸವಾಗಿ, ಮುಂದಕ್ಕೆ ಉಳಿವಂತಾಗುತ್ತದೆ. ಸ್ತ್ರೀಯರಿಗೂ ವೇದಾಂತ ವಿಚಾರಗಳಲ್ಲಿ ಹಕ್ಕುಂಟು, ಗಾರ್ಗಿ, ಮೈತ್ರೇಯಿ ಮೊದಲಾದವರು ಅವರ 'ಪರಾವಿದ್ಯೆ'ಯ ಆಸಕ್ತಿ, ಪ್ರೌಢಿಮೆಗಳಲ್ಲಿ ಉಪ ನಿಷತ್ತುಗಳಲ್ಲಿ ರಾರಾಜಿಸುತ್ತಾರೆ. ಭಗವಂಚ್ಚಿಂತನೆಯಲ್ಲಿ, ಮೀರಾ, ಅಕ್ಕಮಹಾದೇವಿಯರು ಯಾರು ಯಾವ ಯೋಗಿಗೂ ಕಮ್ಮಿಯಿರಲಿಲ್ಲಾ. ಸ್ತ್ರೀಯರು ಭಕ್ತಿಯಲ್ಲಿ ಪುರುಷರನ್ನು ಮೀರಿಸಿದವರು. ಸ್ತ್ರೀ ಪ್ರಕೃತಿಯೇ ಭಕ್ತಿಗೆ ಸೌಲಭ್ಯವನ್ನು ಕೊಡುವುದು. ಅವರ ಮೃದುಸ್ವಭಾವ, ಕರಗುವ ಮನಸ್ಸು, ಕನಿಕರದ ಹೃದಯ, ಸರ್ವ ಕೋಮಲತ್ವವು ಪರಮಾತ್ಮನ ಏಕಾಂತ ಭಕ್ತಿಗೆ ಅನುಕೂಲವಾಗಿದೆ. ಎಲ್ಲರಿಗೂ ಪರಾಂ ಗತಿಗೆ ಹಕ್ಕುಂಟು, ಎಲ್ಲರೂ ಪಡೆಯುವರು. ಕೆಲವರು ಅನುಕೂಲ ಮಾಡಿಕೊಂಡು, ಭಗವದಾಶ್ರಯದಿಂದ ಹೊಂದಬೇಕು. ಪ್ರತಿಕೂಲ ಗಳಿದ್ದರೂ, ಅದಕ್ಕೆ ಪ್ರಯತ್ನಪಡುವವರ ಪ್ರಯಾಸವನ್ನೇ ಶ್ಲಾಘಿಸ ಬೇಕು. ತಪ್ಪು ದಾರಿಯಲ್ಲಿ ನಡೆವುದು ಪಾಪಯೋನಿಯಲ್ಲಿ ಜನಿಸುವುದು

ತಪ್ಪಲ್ಲಾ. ಅದನ್ನು ತಿದ್ದಿಕೊಳ್ಳದಿರುವುದು ತಪ್ಪು. ನಡೆವವನು ಎಡವಿಯೇ ಎಡೆವುತ್ತಾನೆ. ಪುನಃ ಎಡವದಂತೆ ಹುಷಾರಾಗಿರಬೇಕು. ಪ್ರಕೃತಿ ಗುಣಗಳ ವಶನಾದವನು ತಪ್ಪುಮಾಡಿಯೇ ಮಾಡುತ್ತಾನೆ. ಪುನಃ ತಪ್ಪುಮಾಡದಂತೆ ಎಚ್ಚರಿಕೆಯಿಂದಿದ್ದರೆ ತಪ್ಪುಮಾಡಿದುದರಿಂದ ಪಾಠ ಕಲಿತಂತಾಯಿತು, ತಪ್ಪುಮಾಡಿದುದು ಸಾರ್ಥಕವಾಯಿತು.

ತಪ್ಪುಮಾಡುವವರಿಗಿಂತ ತಪ್ಪುಮಾಡುವುದಕ್ಕೆಡೆ ಕೊಡುವವರೂ, ತಪ್ಪುಮಾಡುವ ಕೇಂದ್ರ ಸ್ಥಾಪಿತರೂ ಹೆಚ್ಚು ತಪ್ಪುಮಾಡುತ್ತಾರೆ. ಪಾಪೋದ್ಭವಕ್ಕೇ ಕಾರಣರಾಗಿರುತ್ತಾರೆ. ವ್ಯಭಿಚಾರ, ದರೋಡೆ, ಮಾದಕವಸ್ತು ವ್ಯಾಪಾರ ಇವೆಲ್ಲಾ ಆ ಪಾಪಸಂಘಟನಕ್ಕೆ ಸೇರಿದುವು. ಅವುಗಳಲ್ಲಿ ನಿರತರಾದವರು ಕೂಡಾ, ಬದಲಾವಣೆ ಹೊಂದಿ, ಹಾಳೆ ತಿರುವುಹಾಕಿ, ಭಗವಂತನನ್ನಾಶ್ರಯಿಸಿದರೆ ಪರಾಂಗತಿಯನ್ನು ಹೊಂದುವರು. ಪ್ರಪಂಚದಲ್ಲಿನ ಎಲ್ಲಾ ತರಹ ಜನಗಳನ್ನೂ ಸಿಂಹಾವಲೋಕನ ಮಾಡಿದೆಯಷ್ಟೆ. ಇಹದಲ್ಲಿ ವ್ಯಾಪಾರದಲ್ಲೂ ಧರ್ಮದಲ್ಲಿದ್ದು, ತಾಯಿ ತಂದೆಯರನ್ನೇ ದೇವರಂತೆ ಕಾಣುತ್ತಿದ್ದ ಧರ್ಮವ್ಯಾಧನ ಕಥೆಯುಂಟು. ಕಟುಕ ವೃತ್ತಿಯನ್ನನುಸರಿಸುತ್ತಿದ್ದರೇನು? ಧರ್ಮಬಿಡದೆ ನಡೆಯುತ್ತಿದ್ದ. ಸದಾಚಾರ ಸಂಪನ್ನನಾಗಿದ್ದ. ಮಾತೃಪಿತೃಗಳನ್ನು ಪೂಜಿಸುತ್ತಿದ್ದ. ದೇವರನ್ನಾಶ್ರಯಿಸಿದ್ದ. ಮಾಡುತ್ತಿದ್ದ ಕಾರ್ಯವನ್ನೆಲ್ಲಾ ಭಗವದರ್ಪಣ ಮಾಡುತ್ತಿದ್ದ. ಇಂತಹವನು ಯಾವ ಯೋಗಿಗೆ ತಾನೇ ಕಮ್ಮಿ. ಶೂದ್ರನಾದರೂ, ತುಲಾಧಾರವೈಶ್ಯನಾದರೂ "ತಕ್ಕಡಿ ಕಡ್ಡಿ ಸಮನಾಗಿಡಬೇಕು — ನನ್ನ ಜ್ಞಾನವೆಲ್ಲಾ ಇದೇ" ಎಂದು ಹೇಳಿದ. ಅವನು ವ್ಯಾಪಾರ ಮಾಡಿದರೂ ಅದು ಸ್ವಚ್ಛವೂ ಪವಿತ್ರವೂ, ಸೇವಾಮಯವೂ, ಯಜ್ಞರೂಪವೂ ಆಗಿದೆ. ಎಲ್ಲರಿಗೂ ನ್ಯಾಯಮಾಡುವುದು, ಸಮತ್ವ, ಹೆಚ್ಚುಕಮ್ಮಿ ಇಲ್ಲದ ನಡವಳಿಕೆ, ಅಲುಗಾಡದ, ದ್ವಂದ್ವಗಳಿಗೆ ಸಿಲುಕದ ಮನಸ್ಸು ಎಲ್ಲಾ ಸೇರಿತು "ತಕ್ಕಡಿ ಕಡ್ಡಿ ಸಮನಾಗಿಡಬೇಕು" ಅವನಲ್ಲಿ.

ಅವರವರ ವೃತ್ತಿ ಜೀವನವನ್ನೇ ಪವಿತ್ರ ಮಾಡಿಕೊಂಡು ಅದರಲ್ಲೇ ಪರಮಾತ್ಮನನ್ನು ನೋಡಬಹುದು. ಕೃಷಿ ವ್ಯವಸಾಯದಲ್ಲಿ "ನೇಗಿಲು

ಯೋಗಿ " ಯಾಗುವ ಭಾಗ್ಯವಿಲ್ಲವೇ. "ಒಂದೆಸಲು ಬೆಳವಡೆ ಎರಡು ಬೆಳವನೇ " ಯೋಗಿ, ಪರರಸೇವೆಗಾಗಿ ಭೂದೇವಿಯನ್ನು ಕೃಷಿಮಾಡಿ ಬೆಳೆಯನ್ನು ಮಕ್ಕಳಂತೆ ಸಾಕಿ, ಅನ್ನಬ್ರಹ್ಮ ಸೃಷ್ಟಿಸುವವನು ಯೋಗಿ ಯಲ್ಲದೆ ಮತ್ತೇನು. ಅವನೂ ಅದನ್ನೇ ಪರಮಾತ್ಮನ ಸೇವೆಯೆಂದು, ತನ್ನ ಬದುಕನ್ನೆಲ್ಲಾ ಅವನಿಗರ್ಪಣ ಮಾಡಿದರೆ ಪರಾಂಗತಿಯನ್ನು ಹೊಂದುವನು. ಯೋನಿಗತವಾಗುವುದೇ ಒಂದು ಪಾಪವಿಶೇಷ; ಇನ್ನು ಅದರಲ್ಲಿ ಪಾಪಯೋನಿಜರೇನು! ಉತ್ತಮ ಕುಲದಲ್ಲಿ ಜನ್ಮ ಸಿಕ್ಕಿದರೆ ಒಂದು ಸುಕೃತ, ಭಗವದಾಶ್ರಯ ಸುಲಭ. ಇಲ್ಲವಾದರೆ ಹುಟ್ಟು ಮಟ್ಟ ವನ್ನು ಗೆದ್ದು ಪ್ರಯತ್ನಿಸಿ, ಪರಿವರ್ತನೆ ಹೊಂದಿ ಭಗವಂತನನ್ನಾ ಶ್ರಯಿಸುವುದು ಹೆಚ್ಚಿನ ಸುಕೃತ.

**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ-ಭಕ್ತಾ ರಾಜರ್ಷಯಸ್ತಥಾ ।**
**ಅನಿತ್ಯಮಸುಖಂ ಲೋಕ-ಮಿಮಂ ಪ್ರಾಪ್ಯ ಭಜಸ್ವ ಮಾಮ್ ॥೩೩॥**

ಹೀಗಿರುವಲ್ಲಿ, ಪಾಪಯೋನಿಜರೂ, ಸ್ತ್ರೀ, ವೈಶ್ಯ ಶೂದ್ರರೂ ಪರಾಂಗತಿ ಪಡೆಯಲಾಸ್ಪದವಿರುವಲ್ಲಿ, ಪುಣ್ಯಭಕ್ತರಾದ ಬ್ರಾಹ್ಮಣರೂ, ರಾಜರ್ಷಿ ಗಳೂ ಪರಾಂಗತಿಯನ್ನು ಹೊಂದಿ ಸ್ವಾಮಿಯನ್ನು ಸೇರುವದರಲ್ಲಿ ಸಂಶಯ ವೇನು? ಇದರಿಂದ ಅನಿತ್ಯ, ಅಸುಖವಾದ ಲೋಕದಲ್ಲಿ ಜನ್ಮತಾಳಿದ ನೀನು ಕೂಡಾ ನನ್ನನ್ನೇ ಭಜಿಸುವನಾಗು. ಲೋಕದಲ್ಲಿ ಜನ್ಮತಾಳಿದ ಪ್ರತಿಯೊಬ್ಬರಿಗೂ ಈ ಅನಿತ್ಯ, ಅಸುಖ, ಲೋಕವನ್ನು ತಪ್ಪಿಸಿಕೊಳ್ಳು ವುದಕ್ಕೂ ಸ್ವಾಮಿಯ ಪಾದಾವರೆಗಳನ್ನು ಸೇರುವುದಕ್ಕೂ ಸ್ವಾಮಿ ಭಜನೆ ಅಗತ್ಯ.

ನಾನು ಬ್ರಾಹ್ಮಣ, ನಾನು ಕ್ಷತ್ರಿಯ, ನನಗಿನ್ನೇನು ಎಂದು ಪರಾಂ ಗತಿಗೆ ಕೈಕಟ್ಟಿಕೊಂಡು ಕೂತರಾಗುವುದಿಲ್ಲಾ. ನಿಜ ಈ ಅಂತಸ್ತನ್ನು ಪಡೆವುದಕ್ಕೆ ಪುಣ್ಯಫಲವಿರಬೇಕು. ಪಡೆದಮೇಲೆ ಮುಂದಕ್ಕೆ ಪ್ರಯಾಣ ಮಾಡಲು, ಪಡೆದುದಕ್ಕೆ ಸಾರ್ಥಕಪಡಿಸಿಕೊಳ್ಳಲು ಭಕ್ತರಾಗಿ ಭಗವ ದಾಶ್ರಯ ಪಡೆದು ಜನ್ಮವನ್ನು ಸಾರ್ಥಕಪಡಿಸಿಕೊಳ್ಳಲು ಪ್ರಯತ್ನಿಸ ಬೇಕು. ಇಲ್ಲವಾದರೆ ಪಾಪಯೋನಿಜರಿಗಿಂತಲೂ ಕೀಳೇ. ಓಟದಲ್ಲಿ

ನಾಲ್ಕು ಹೆಜ್ಜೆ ಮುಂದೆ ಅವಕಾಶ ಸಿಕ್ಕಿದೆಯೆಂದು, ಸ್ಪರ್ಧೆಯಲ್ಲಿ ಪ್ರಯತ್ನಿಸದಿದ್ದರೆ ಜಯ ಲಭಿಸುವುದೇ? ಗುರಿ ಕಣ್ಣಿನ ಮುಂದೆ ಕಟ್ಟಿದಂತಿರಬೇಕು, ಗುರಿ ಸಾಧಿಸಲು ಮಾರ್ಗ ನಿಶ್ಚಿತವಾಗಿ ತಿಳಿದಿರಬೇಕು, ಸಾಧಿಸಲು ಸರ್ವ ಪ್ರಯತ್ನವೂ ಶ್ರದ್ಧೆಯಿಂದ ಮಾಡಲೇಬೇಕು. ಏನಾದರೂ ಹೆಚ್ಚು ಸೌಲಭ್ಯ ಲಭಿಸಿದರೆ ಅದು ಸದುಪಯೋಗ ಮಾಡಿಕೊಳ್ಳಬೇಕು. ಎಲ್ಲರೂ ಆ ಸತ್ಪಂಥದಲ್ಲಿದ್ದೇವಷ್ಟೆ. ಕೆಲವರು ನಾಲ್ಕು ಮಾರು ಮುಂದು, ಕೆಲವರು ಹಿಂದು. ಭಗವಂತನೇ ಗುರಿ. ಅವನನುಗ್ರಹದಿಂದ ಭಕ್ತಿ ಮಾರ್ಗದಲ್ಲಿ ಶೀಘ್ರವಾಗಿ ಅವನನ್ನು ಪಡೆಯಲು ಸತ್ಪ್ರಯತ್ನ ಸತತವಾಗಿ ನಡೆಯಲೇಬೇಕು. ಬ್ರಾಹ್ಮಣ, ರಾಜರ್ಷಿಗಳಾಗಿರುವುದು ಅವನನುಗ್ರಹವೇ ಸರಿ. ಆದ್ದರಿಂದ ಹೆಚ್ಚಿನ ಭಾರವೂ ಉಂಟು, ಹೆಚ್ಚು ನಿರೀಕ್ಷಣೆಯೂ ಉಂಟು. ಕೀಳು ದರ್ಜೆಯವ ಏನಾದರೂ ಅಕಾರ್ಯ ಮಾಡಿದರೂ, "ಪಾಪ!" ಎನ್ನುವರಷ್ಟೆ. ಮೇಲ್ದರ್ಜೆಯವರು ಸುಕಾರ್ಯದಿಂದ ತಪ್ಪಿದರೂ "ನೋಡಿದೆಯಾ ಅವಿವೇಕಿಸಾ" ಎನ್ನುತ್ತಾರೆ. ಅರ್ಜುನನನ್ನೇ ಸ್ವಾಮಿಯು ಪರಾಂಗತನಾಗಿ "ಭಜಸ್ವಮಾಂ" ಎಂದು ಆಜ್ಞೆ ಇತ್ತಿರುವಾಗ ಮಿಕ್ಕ ಇತರರಿಗೆ, ಬ್ರಾಹ್ಮಣರಾಗಲೀ, ಮತ್ತೆಷ್ಟು ಹೆಚ್ಚಿನವಶ್ಯಕ ಇದು. ಎಲ್ಲರೂ ಈ ಅನಿತ್ಯವು ಸುಖಲೋಕದಲ್ಲಿ ಬಂಧಿತರಾಗಿದ್ದೇವೆ. ನಿತ್ಯ ಸುಖವನ್ನು ಪಡೆಯಲು ಆಹ್ವಾನವಿತ್ತಿದ್ದಾನೆ. ಅದಕ್ಕೆ ದಾರಿ "ಭಜಸ್ವಮುವ್" ಅದು ಹೇಗೆ ಮಾಡಬೇಕೆಂದರೆ

**ಮನ್ಮನಾ ಭವ ಮದ್ಭಕ್ತೋ । ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಯುಕ್ತ್ವೈವ-ಮಾತ್ಮಾನಂ ಮತ್ಪರಾಯಣಃ ॥೩೪॥**

ನನ್ನಲ್ಲಿಯೇ ಮನಸಿಡು. ನನ್ನ ಭಕ್ತನಾಗು, ನನ್ನನ್ನ ಪೂಜಿಸು ನನ್ನನ್ನು ನಮಸ್ಕರಿಸು. ನನ್ನನ್ನೆ ಆಶ್ರಯಿಸಿ (ಪ್ರವೇಶಿಸಿ) ಐಕ್ಯಾನುಸಂಧಾನಮಾಡುವೆಯಾದರೆ (ಯುಕ್ತ– ಜೊತೆ ಸೇರುವುದು.) ನನ್ನನ್ನೇ ಹೊಂದುವೆ (ಆತ್ಮೈಕ್ಯ) ಈ ಶ್ಲೋಕದ ಮುಕ್ಕಾಲುಭಾಗ (ಮೂರು ಪಾದಗಳು) ೧೮ ನೇ ಅಧ್ಯಾಯದ ೬೫ನೇ ಶ್ಲೋಕವಾಗಿ ಪುನರುಕ್ತವಾಗಿ

೬೬ನೇ ಶ್ಲೋಕವು ಪ್ರಸಿದ್ಧವಾದ "ಸರ್ವಧರ್ಮಾನ್ ಪರಿತ್ಯಜ್ಯ" ಬಂದಿದೆ. ಅಭಿಪ್ರಾಯಗಳು ಪಾದಗಳೂ ಕೆಲವು ಪುನರುಕ್ತವಾಗಿದ್ದರೂ ಈ ರೀತಿ ಮುಕ್ಕಾಲು ಶ್ಲೋಕ ಪದಶಃ ಪುನರುಕ್ತವಾಗಿರುವುದು ಈ "ಮನ್ಮನಾ ಭವ"ಯೊಂದುವರಿಂದ ಇದರ ಪ್ರಾಮುಖ್ಯತೆ ವ್ಯಕ್ತವಾಗುತ್ತೆ. ರಾಜಯೋಗ ರಾಜಗುಹ್ಯವನ್ನೆಲ್ಲಾ ವಿವರಿಸಿ ಕೊನೆಯ ಅಧ್ಯಾಯದ ಮಂಗಳ ಶ್ಲೋಕದಂತೆ ಇದು ರಾರಾಜಿಸುತ್ತದೆ. "ಮ"ಕಾರವು ಹೇಗೆ ಪ್ರತಿಪದದ ಆದಿಯಲ್ಲೂ ಪ್ರಯೋಗವಾಗಿ ಪರಮಾತ್ಮ ತತ್ವವನ್ನು ಒತ್ತಿ ಹೇಳುತ್ತದೆ. ಅವನಲ್ಲಿಯೇ ಐಕ್ಯವಾಗುವುದಕ್ಕೆ ದಾರಿ. ಇದರಂತೆ ನಡೆದರೆ ಜೀವನ್ಮುಕ್ತತ್ವವೇ. ಜೀವನದಲ್ಲೇ ಜೀವವಿರುವಾಗಲೇ ಅವನನ್ನೆ ಸೇರಿದಂತೆ. ಸತತವಾಗಿ ಪ್ರತಿಕ್ಷಣದಲ್ಲಿ ನಮ್ಮ ತನುಮನ ಆತ್ಮಗಳನ್ನಾಕ್ರಮಿಸಿದಂತೆ.

ಜ್ಞಾನೇಶ್ವರರು ಸಮಾಧಿ ಹೊಂದುವಾಗ ಈ ಅಧ್ಯಾಯವನ್ನು ಪಠಿಸುತ್ತಿದ್ದರಂತೆ. ಇದು ರಾಜಯೋಗ, ರಾಜಗುಹ್ಯ, ಧರ್ಮ ಸುಸುಖ ಕರ್ತವ್ಯ ಎಲ್ಲಾ ಸೂರೆಗೊಂಡಿದೆ, ಮನೋವಾಕ್ಕುಗಳಿಗೆ ನಿಲುಕದ, ಪ್ರತ್ಯಕ್ಷಾನುಭವದಲ್ಲಿ ಮಾತ್ರ ಸಿಗುವ, ಸ್ವಸಿದ್ಧಿಗೆ ಮಾತ್ರ ಸಾಧ್ಯವಾದ ವಿಷಯಗಳು ತುಂಬಿದೆ. ನಮ್ಮ ಜಗತ್ತಿನ ಜೀವನವನ್ನೆಲ್ಲಾ ಭಗವಚ್ಚಿಂತನಮಯವಾಗಿ ಮಾಡುವ ಮಾರ್ಗ ಹೇಳಿದೆ. ವೇದಗಳಲ್ಲಡಗಿದ ಮೋಕ್ಷ ಮಾರ್ಗವನ್ನು ಭಗವಂತ ಈ ರಾಜಯೋಗವೆಂಬ ರಾಜ ಮಾರ್ಗಕ್ಕೆ ತಂದಿಳಿಸಿದ. ನಿತ್ಯದ ಕರ್ಮವೇ ಸೇವಾಮಯವಾಗಿ ಯಜ್ಞ ರೂಪವಾಗಲೆಂದು ಕರ್ಮದಲ್ಲಿನ ಸೇವಾಮರ್ಮವನ್ನು ಹೇಳಿದ. ನಮ್ಮ ಪ್ರತಿಯೊಂದು ಕಾರ್ಯಕ್ಕೂ, ಪ್ರತಿಕ್ಷಣದ ಜೀವನಕ್ಕೂ ಪ್ರತಿಜೀವನ ಧಾರಣ ಕರ್ಮಕ್ಕೂ ಅವನ ಸಂಬಂಧವಿರಲಿ. ನಮಗೂ ಪರಮಾತ್ಮನಿಗೂ ಇರುವ ನಿಕಟ ಸಂಬಂಧ, ಅದನ್ನು ದೃಢಪಡಿಸಿಕೊಂಡು ಅವನನ್ನೇ ಸೇರಲು ಮಾರ್ಗ ತಿಳಿಸಿದೆ. ಅಶಾಶ್ವತ ಅಸುಖವಾದ ಈ ಲೋಕ ಸಂಸಾರಗಳಿಂದ ಪಾರಾಗುವ ದಿವ್ಯೌಷಧಿಯನ್ನು ತೋರಿದೆ. ಔಷಧಿಯಾದರೂ ಕಹಿಯಲ್ಲ, ಅಮೃತವು. ಸೇವಿಸಲೂ ಸುಖ.

ಶ್ರೀರಾಮಕೃಷ್ಣರು ಹೇಳುವಂತೆ ಮಕ್ಕಳು ಕಂಬದ ಸುತ್ತಲೂ ಗರಗರನೆ ತಿರುಗುವಾಗ ಕಂಬವನ್ನು ಭದ್ರವಾಗಿ ಹಿಡಿದಿದ್ದರೆ, ಅದರಾಶ್ರಯ ದಿಂದ ಎಷ್ಟೇ ಜೋರಾಗಿ ತಿರುಗಿದರೂ ಬೀಳುವ ಭಯವಿಲ್ಲದಂತೆ, ನಾವೂ ಈ ಜೀವನ ಆಟಪಾಟ ತಿರುಗುವಿಕೆಯಲ್ಲಿ ಭಗವತ್ಪಾದವನ್ನು ಭದ್ರವಾಗಿ ಮನದಲ್ಲಿ ಯಾವಾಗಲೂ ಧರಿಸಿದ್ದರೆ, ಆ ಲೋಕವ್ಯಾವಹಾರ ದಲ್ಲಿ ಬೀಳುವ ಭಯವಿಲ್ಲಾ. ಕಂಬಬಿಟ್ಟರೆ ಸುತ್ತುವ ಮಗು ಬೀಳುವ ಸಂಭವವಿರುವಂತೆ ಪರಮಾತ್ಮನ ಪಾದಬಿಟ್ಟರೆ ಅಧೋಗತಿ.

ಶ್ರೀಮದ್ಭಗವದ್ಗೀತೆ ಎನ್ನುವ
ಉಪನಿಷತ್ತಿನ, ಬ್ರಹ್ಮವಿದ್ಯೆಯ, ಯೋಗಶಾಸ್ತ್ರದ
ಶ್ರೀ ಕೃಷ್ಣಾರ್ಜುನ ಸಂವಾದದಲ್ಲಿ ರಾಜವಿದ್ಯಾ ರಾಜಗುಹ್ಯ
ಯೋಗವೆನ್ನುವ ಒಂಬತ್ತನೆಯ ಅಧ್ಯಾಯ ಸಮಾಪ್ತಿ

# ಅಧ್ಯಾಯ ೧೦ : ವಿಭೂತಿ ಯೋಗ

## ಮಂದಪ್ರಜ್ಞ ಮುಮುಕ್ಷುಗಳ ಉಪಾಸನಾ ಸಿದ್ಧಿಗಾಗಿ
## ಆ ಉಪಾಸನಾ ಫಲ ಭಕ್ತಾನುಗ್ರಹಕವಾಗಿ ಅವನ ವಿಭೂತಿಗಳು

**ಭೂಯ ಏವ ಮಹಾಬಾಹೋ । ಶೃಣು ಮೇ ಪರಮಂ ವಚಃ ।**
**ಯತ್ತೇಽಹಂ ಪ್ರಿಯಮಾಣಾಯ । ವಕ್ಷ್ಯಾಮಿ ಹಿತಕಾಮ್ಯಯಾ ॥೧॥**

ಮಹಾಬಾಹುವೇ ಕೇಳು. ಅತ್ಯಂತ ಪ್ರಿಯನಾಗಿರುವುದರಿಂದ, ನಿನಗೆ, ಹಿತನಾದುದನ್ನು, ಫಲದಾಯಕವಾದುದನ್ನು (ಕಾಮ್ಯ) ಪರಮವಚನ (ಸರ್ವೋತ್ಕೃಷ್ಟವಾದ ವಾಕ್ಯ) ಗಳನ್ನು ಹೇಳುತ್ತೇನೆ. ಇಹದಲ್ಲಿ ಕೆಲವು ವಿಷಯಗಳು ಎಷ್ಟು ಸಾರಿ ಹೇಳಿದರೂ ಸಾಲದು ಎಷ್ಟುಸಾರಿ ಕೇಳಿದರೂ ಸಾಲದು. ಅವುಗಳ ಪೈಕಿ ಮುಖ್ಯ ವಾದುದು ಈ "ಪರಮಂವಚಃ"–ಸ್ವಾಮಿ ಸಂಭಂಧವಾದುದು. ಅದೂ ಅವನ ಬಾಯಿಂದಲೇ ಬರುತ್ತಿರುವ ವಾಕ್ಯಗಳು. ಅದೂ ಕೇಳುವವನ ಹಿತ ದೃಷ್ಟಿಯಿಂದಲೂ, ಒಳ್ಳೇ ಫಲದಾಯಕವಾಗ ಲೆಂದೂ ಕೇಳುತ್ತಿರುವುದು–ಪ್ರೀತಿಯಿಂದ. ಪರಮ ಸಖ್ಯನಾದ ಮಹಾ ವೀರನಾದ ಅರ್ಜುನನ ಮೇಲೆ ಸ್ವಾಮಿಗೆ ಬಹು ಪ್ರೀತಿ, ಅದರ ಮೇಲೆ ಹತ್ತಿರದ ಬಂಧು. ಭಕ್ತರೆಲ್ಲರ ಯೋಗಕ್ಷೇಮವನ್ನೂ ನೋಡಿಕೊಳ್ಳುವು ದಾಗಿ ಆಶ್ವಾಸನವಿತ್ತ ಸ್ವಾಮಿ, ಹತ್ತಿರದ ಬಂಧು, ಪ್ರಿಯಸ್ನೇಹಿತ, ಪರಮಭಕ್ತನಾದ ಮಹಾಬಾಹುವಾದ ಅರ್ಜುನನ ಹಿತವನ್ನು ನೋಡಿ ಕೊಳ್ಳುವುದಿಲ್ಲವೇ. "ವಾಕ್ಯಂ, ಸತ್ಯಂ ಪ್ರಿಯ, ಹಿತಂಚಯತ್" ಎಂದು ಮುಂದೆ (೧೭ ಅ, ಶ್ಲೋ ೧೫) ಪರಮಾತ್ಮನೇ ಹೇಳಿರುವಲ್ಲಿ ಈ ಮಹಾ ವಚನವನ್ನು ಹೇಳುವಾಗ ಅವನ ಹಿತಕ್ಕೂ, "ಅಧರ್ಮವಿರುದ್ಧೋ ಕಾಮಾಯ" ಧರ್ಮಮಾರ್ಗದ ಕಾಮಕ್ಕೂ ಸ್ವಾಮಿ ಪ್ರೀತಿಯಿಂದ ಬೋಧಿಸಿದನು. ಹೇಳುವ ವಿಷಯವನ್ನು ಹೇಳುವ ವಿಧದಲ್ಲಿದೆ. ಹಿತವಾದ ವಿಷಯವನ್ನೇ ಕಠಿಣವಾಗಿ ಹೇಳಿದರೆ ಅದರಲ್ಲಿ ಶ್ರದ್ಧೆ ಬರುವು

ದಿಲ್ಲಾ ಹೇಳುವ ವಿಷಯುವನ್ನು ಅದೂ ಅತಿ ಮುಖ್ಯವಾಗಿದ್ದಾಗ ಪ್ರೀತಿ ಯಿಂದ. ಹಿತವಾಗುವಂತೆ ಹೇಳಬೇಕು.

**ನ ಮೇ ವಿದುಃ ಸುರಗಣಾಃ । ಪ್ರಭವಂ ನ ಮಹರ್ಷಯಃ ।**
**ಅಹಮಾದಿರ್ಹಿ ದೇವಾನಾಂ । ಮಹರ್ಷೀಣಾಂ ಚ ಸರ್ವಶಃ ॥೨॥**

ಇವನೇ ಯಾತಕ್ಕಪ್ಪ ಹೇಳಬೇಕೆಂದರೆ, ಇನ್ಯಾರೂ ಅರಿಯರು. ದೇವಗಣವೂ, ಮಹರ್ಷಿಗಳೂ ಇವನು ಆವಿರ್ಭವಿಸಿರುವುದನ್ನ ಅರಿಯರು. ದೇವತೆಗಳಿಗೂ ಮಹರ್ಷಿಗಳಿಗೂ ಇವನು ಆದಿ ಮುಂಚಿನವನು, ಉತ್ಪತ್ತಿಗೆ ಕಾರಣನು. ತಮಗಿಂತ ಮುಂಚೆ ಅಜನಾಗಿರುವ ಇವನ ಇರುವನ್ನು ಅವರೆಂತು ತಿಳಿದಾರು, ಅದಕ್ಕಾಗಿ ಅವನೇ ಹೇಳಬೇಕು. ಅಲ್ಲದೇ ಇವ ಸರ್ವಕಾಲ ಸರ್ವವ್ಯಾಪಿ, ಒಂದೆಡೆ ಒಂದು ಕಾಲದಲ್ಲಿದ್ದವರೆಂತು ತಿಳಿವರು.

**ಯೋ ಮಾಮಜಮನಾದಿಂ ಚ । ವೇತ್ತಿ ಲೋಕಮಹೇಶ್ವರಮ್**
**ಅಸಮ್ಮೂಢಃ ಸ ಮರ್ತ್ಯೇಷು । ಸರ್ವಪಾಪೈಃ ಪ್ರಮುಚ್ಯತೇ ॥೩॥**

ನಾನು ಅಜಂ, ಅನಾದಿ, ಸಮಸ್ತ ಲೋಕ ಮಹೇಶ್ವರನೆಂದು ಯಾವನು, ಮರ್ತ್ಯರಲ್ಲಿ ವಿವೇಕಿಯಾದವನು, ತಿಳಿದಿರುವನೋ ಅವನು ಸರ್ವಪಾಪ ವಿಮುಕ್ತನಾಗುವನು. ಕೇವಲ ಮನುಷ್ಯಮಾತ್ರದವ (ಮರ್ತ್ಯ) ಅಸಮ್ಮೂಢಃ ತಿಳಿದುಕೊಳ್ಳಬೇಕಾದುದು ಇವು ಮೂರು; ಪರಮಾತ್ಮ ಹುಟ್ಟಿಲ್ಲದವನು, ಆದಿ ಇಲ್ಲದವನು, ಸನಾತನನು, ಮತ್ತು ಸರ್ವಲೊಕಕ್ಕೂ ಒಡೆಯ—ಎಂದು ಈ ಮೂರು ಪರಮಾತ್ಮನ ಸ್ವರೂಪ ತಿಳಿದರೆ ಪಾಪಗಳಿಂದ ಬಿಡುಗಡೆ ಹೊಂದುವನು, ಆಗ ಪಾಪ ಕಾರ್ಯಗಳಲ್ಲಿ ಪ್ರವರ್ತಿಸುವುದಿಲ್ಲಾ ಆಗ ತಾನು ಈ ಜನ್ಮ ಜರಾದಿ ದುಃಖಗಳಿಂದ ಪಾರಾಗಬೇಕೆಂದೂ ಅಜನಾದ ಸ್ವಾಮಿಯೊಡನೆ ಸೇರಬೇಕೆಂದೂ ಜ್ಞಾನೋದಯವಾಗುವುದು. ಅನಾದಿಯಾದ ಪರಮಾತ್ಮನೇ ಸರ್ವಕ್ಕೂ ಆದಿಯೆಂದೂ, ಸರ್ವಲೋಕವನ್ನು ಕಾಪಾಡುವ ಮಹೇಶ್ವರನಿರುವಾಗ ಪಾಪಕಾರ್ಯಗಳಲ್ಲಿ ಪ್ರವರ್ತಿಸಬಾರದೆಂದೂ ತಿಳಿವಳಿಕೆ ಬರುತ್ತದೆ. ಪಾಪ

ವನ್ನು ಬಿಡುವುದು ಮೊದಲನೇ ಮೆಟ್ಟಿಲು ಆ ಮೇಲೆ ಸತ್ಕರ್ಮಾಚರಣೆ ಭಗವದನುಗ್ರಹದಿಂದ ತಾನಾಗಿ ತಾನೇ ಬರುತ್ತೆ.

**ಬುದ್ಧಿರ್ಜ್ಞಾನಮಸಮ್ಮೋಹಃ । ಕ್ಷಮಾ ಸತ್ಯಂ ದಮಃ ಶಮಃ ।**
**ಸುಖಂ ದುಃಖಂ ಭವೋ ಭಾವೋ । ಭಯಂ ಚಾ ಭಯಮೇವ ಚ ॥೪॥**

**ಅಹಿಂಸಾ ಸಮತಾ ತುಷ್ಟಿ-ಸ್ತಪೋ ದಾನಂ ಯಶೋಽಯಶಃ ।**
**ಭವಂತಿ ಭಾವಾ ಭೂತಾನಾಂ । ಮತ್ತ ಏವ ಪೃಥಗ್ವಿಧಾಹಃ ॥೫॥**

ಬುದ್ಧಿ, ಜ್ಞಾನ, ಮೂಢಭಾವವಿಲ್ಲದಿರುವುರುವುದು, ಕ್ಷಮಾ, ಸತ್ಯಂ, ದಮಃ, ಶಮಃ, ಸುಖ ದುಃಖ, ಭಾವ, ಅಭಾವ, ಭಯ, ಅಭಯ, ಅಹಿಂಸಾ, ಸಮತಾ, ತುಷ್ಟಿ, ತಪ ದಾನಂ, ಯಶ ಅಯಶಃ—ಇವೆಲ್ಲಾ ನಾನಾ ವಿಧವಾದ ಭಾವಗಳು, ಪ್ರಪಂಚದ ಪ್ರಾಣಿಗಳಿಗೆ (ಭೂತ) ನನ್ನಿಂದಲೇ ಉಂಟಾಗುವುವು. ಈ ಗುಣ ಸಮ್ಮೋಹಗಳೆಲ್ಲಾ ಜೀವಿಯನ್ನು ಊರ್ಧ್ವಕ್ಕೆ ತೆಗೆದುಕೊಂಡು ಹೋಗುವುವು, ದೇವದತ್ತವಾದ ಗುಣಗಳು. ಕೇವಲ ಪಶುಶಕ್ತಿ ಮೀರಿ ಅಧ್ಯಾತ್ಮ ಮಾರ್ಗಕ್ಕೆ ತೆಗೆದುಕೊಂಡು ಹೋಗುವ ಸದ್ಗುಣಗಳು. ಬುದ್ಧಿ ವಿಚಾರಮಾಡಿ ಸಾರಾಸಾರ ವಿವೇಕವನ್ನು ಕೊಡುವ ನೈಪುಣ್ಯ ಕಾಯದೆ ಮಾಡುವ ಖಾತೆ. ಜ್ಞಾನವು ನೈಜವಾದ ತಿಳುವಳಿಕೆ, ಯಥಾರ್ಥ ಅಗ್ರಹಣ ಮೋಹದಿಂದ ಕೂಡದಿರುವಿಕೆಯೇ ಅಸಮ್ಮೊಹ. ಈ ಮೋಹಜಾಲವು ನಿಜವಾದ ಇರುವಿಕೆಯನ್ನು ಮುಚ್ಚುವುದು, ಇದ್ದದ್ದು ಇದ್ದಹಾಗೆ ಗೋಚರವಾಗದಂತೆ ಮಾಡುವುದು, ಈ ಮೋಹದ ತೆರೆಯು ತೆಗೆದುಬಿಡುವುದೇ ಅಸಮ್ಮೋಹ. ಆಗ ಸತ್ಯವು ಸರಿಯಾಗಿ ಕಾಣುವುದು. ಮಾಯೆಯ ತೋರುವಿಕೆಯಲ್ಲಾ ಮಾಯವಾಗುವುದು. ಕ್ಷಮೆ ತನಗೆ ಅಪಕಾರ ಮಾಡಿದವರನ್ನು ಕ್ಷಮಿಸುವುದು. ಇದು ಹೆಚ್ಚಿನ ಸದ್ಗುಣ, ಮುಯ್ಯಿಗೆಮುಯ್ಯಿ ಮಾಡುವುದೇ ಜೀವಿಗಳ ಸ್ವಭಾವ. ಕೆಡುಕನ್ನು ಮಾಡಿದವರಿಗೆ ಏನಾದರೂ ಮಾಡಿ ಕೆಟ್ಟದನ್ನು ಮಾಡುವುದೂ ಕೋರುವುದೂ ಕೀಳುದರ್ಜೆಯ ಸ್ವಭಾವ. ಅದನ್ನು ಮನ್ನಿಸಿ, ಉದಾಸೀನ ಭಾವದಿಂದಿರುವುದಲ್ಲದೆ, ಅವರಿಗೆ ಒಳ್ಳೆಯದನ್ನು ಕೋರುವುದು ಕ್ಷಮಾ. "ದೇವರೇ ಅವರನ್ನು ಮನ್ನಿಸು.

ಅವರೇನು ಮಾಡುತ್ತೇವೆಂಬ ವಿವೇಚನೆಯೋ ಅವರಿಗಿಲ್ಲಾ" ಎಂದು ಕ್ರಿಸ್ತನು ಅವನ ವೈರಿಗಳ ಘಾತುಕರ ವಿಷಯವಾಗಿ ಒಂದೆಡೆ ನುಡಿದಿರುವನು. ತಪ್ಪುಮಾಡುವುದು ಅದನ್ನು ಮಾಡುವವನ ತಪ್ಪಲ್ಲಾ ತಿಳುವಳಿಕೆ ಇಲ್ಲದಿರುವುದರಿಂದಲೇ ತಪ್ಪುಮಾಡುವರು ಜನ. ಆದ್ದರಿಂದ ಕೆಡುಕುಮಾಡಿದವರಿಗೆ ಒಳ್ಳೆ ಬುದ್ಧಿಯನ್ನು ಕೆಡಕುಮಾಡದಂತೆ ಕೊಡಲೆಂದು ಭಗವಂತನನ್ನು ಪ್ರಾರ್ಥಿನಬೇಕೇ ಹೊರತು ಅವರಿಗೆ ಪ್ರತಿಯಾಗಿ ಕೆಡಕುಮಾಡಲು ಹೋಗಬಾರದು. ಕ್ಷಮೆಯಿಂದಲೇ ಅವರಿಗೆ ಅವಮಾನವಾಗಿ ಒಳ್ಳೆಯ ಬುದ್ಧಿ ಬರುವುದು. ಪ್ರತೀಕಾರಮಾಡಿದ ಕ್ಷಣವೇ ಕೋಪಬರುವುದು, ಅದಕ್ಕೆ ತಕ್ಕುದು ಶಿಕ್ಷೆಮಾಡಬೇಕೆಂದು ಆಕ್ರೋಶ ಬರುವುದು. ಅದು ತಡೆಗಟ್ಟಬೇಕು. ಸಮಾಧಾನ ತೆಗೆದುಕೊಂಡು ಶಾಂತಿಯಿಂದಿರಬೇಕು. ತಪ್ಪು ಮಾಡಿದವರಿಗೆಲ್ಲಾ ಶಾಸನ ಮಾಡಲು ನಮದೇನಧಿಕಾರವಿದೆ. ಅವರನ್ನು ಮನ್ನಿಸುವವಕಾಶವಿದೆ. ಅದನ್ನೇ ಉಪಯೋಗಿಸೋಣ. ತಪ್ಪು ಮಾಡುವುದು ಮನುಷ್ಯನ ಸ್ವಭಾವವಲ್ಲಾ. ತಪ್ಪು ತಿಳುವಳಿಕೆಯೇ ತಪ್ಪು ಮಾಡಿಸುತ್ತದೆ. ಅದನ್ನು ತೊಡೆದುಹಾಕಲು ಪ್ರಯತ್ನಿಸಬೇಕು. ಶಕ್ತಿವಂತನಾದ ಎದುರಾಳಿಗೆ ಪ್ರತೀಕಾರವನ್ನು ಮಾಡಲಾಗದೆ, ಅವ ಮಾಡಿದುದನ್ನೆಲ್ಲಾ ಸೈರಿಸಿಕೊಂಡಿರುವುದು ಕ್ಷಮೆಯಲ್ಲಾ. ಪ್ರತೀಕಾರ ಮಾಡಲು ಶಕ್ತಿಯಿದ್ದೂ, ಆಸ್ಪದವಿದ್ದೂ, ಏನೂ ಮಾಡದೆ ಸಹನೆಯಿಂದ ಆ ತಪ್ಪನ್ನೆಲ್ಲಾ ಮನ್ನಿಸಿ ಅವನಿಗೆ ಒಳ್ಳೆಯ ಬುದ್ಧಿ ಬರಲೆಂದೂ, ಒಳ್ಳೆಯದಾಗಲೆಂದೂ ಹರಸುವುದು ಕ್ಷಮಾ. ಸತ್ಯಂ–ಸತ್ಯ ಆಚರಣೆ, ಸತ್ಯ ಉಚ್ಚರಣೆ, ಸತ್ಯ ಮನೋಭಾವನೆ ಎಲ್ಲಾ ಈ ಸತ್ಯಂನಲ್ಲಿ ಸೇರಿಹೋಗಿವೆ. ಯಾವುದು ಯಾವಾಗಲೂ ಮಾರ್ಪಟ್ಟಿಲ್ಲದೆ ಒಂದೇ ಆಗಿದೆಯೋ ಅದೇ ಸತ್ಯ. ಇದ್ದದ್ದು ಇದ್ದಹಾಗೇ ಹೇಳುವುದು ಸತ್ಯವೆಂದು ಒಂದು ಮಗುವಿಗೆ ಹೇಳಿಕೊಡುತ್ತೇವೆ. ಇದ್ದದ್ದನ್ನು ಇಲ್ಲದಂತೆ ಹೇಳುವುದೂ ಸಾಧ್ಯವೇ ಎಂದು ಅದಕ್ಕೆ ಸಂದೇಹ ಬರುತ್ತೆ. ಕೊರಚರ ಮಕ್ಕಳಿಗೆ "ಲೇದು ಲೇದು" ಎಂದು ಏನು ಕೇಳಿದರೂ ಉತ್ತರ ಹೇಳುವಂತೆ ಹೊಡೆದುಹೊಡೆದು ಅಭ್ಯಾಸ

ಮಾಡಿಸುತ್ತಾರಂತೆ. ಏಕೆಂದರೆ ಸತ್ಯವೇ ನಿತ್ಯ ಗುಣ. ಅಸತ್ಯವನ್ನು ನುಡಿಯಬೇಕಾದರೂ ಅದಕ್ಕೆ ತಯಾರಿಕೆ ಬೇಕು. ಇದ್ದದ್ದು ಇದ್ದಹಾಗೆ ಹೇಳುವುದೇ ಸ್ವಭಾವ ಗುಣ-ಮುಂದಾಗಿ ತಾನಾಗಿ ಬರುತ್ತೆ. ದಮಃ ಶಮಃ—ಅಂತರೇಂದ್ರಿಯ ಭಾಹ್ಯೇಂದ್ರಿಯನಿಗ್ರಹ. ಜ್ಞಾನೇಂದ್ರಿಯ ಕರ್ಮೇಂದ್ರಿಯಗಳ ನಿಗ್ರಹ. ಇವಕ್ಕೆ ತಡೆ, ಲಗಾಮು. ಸಂಯಮ ಎಂದು ಮುಂಚೆ ಸ್ವಾಮಿ ಹೇಳಿರುವಂತೆ, ಎಲ್ಲಾ ತನ್ನ ಸ್ವಾಧೀನದಲ್ಲಿಟ್ಟು ಕೊಂಡಿರುವುದು. ಇವು ಸ್ವೇಚ್ಛಾವಿಹಾರವಾಗಿ ಹೊರಗೆ ಅಧೀನ ಮೀರಿ ಹೋಗಲೆತ್ನಿಸುವುವು. ಅವನ್ನು ಹತೋಟಿಯಲ್ಲಿಟ್ಟಿರುವುದು. ಆಮೇಲೆ ನಾಲ್ಕು ದ್ವಂದ್ವಗಳು ಸಾಧಾರಣವಾಗಿ ಜೀವನದಲ್ಲಿ ಸಂಭವಿಸುವುದನ್ನು ಹೇಳುತ್ತಾನೆ ಸ್ವಾಮಿ. ನೆರಳು ಬಿಸಲುಗಳಂತೆ ಇವು ಸದಾ ಜೋಡಿ. ಒಂದು ಬೇಕು, ಒಂದು ಬೇಡವೆಂದರಾಗದು. ಸುಖ ದುಃಖ, ಇರುವುದೂ ಇಲ್ಲದಿರುವುದು (ಭಾವ, ಅಭಾವ) ಭಯ ಅಭಯ, ಯಶ ಅಯಶ ಇವೆಲ್ಲಾ ದ್ವಂದ್ವಗಳು. ಇವು ಮನುಷ್ಯನಿಗೆ ಉಂಟಾಗುತ್ತಿರುತ್ತವೆ. ಇವೆಲ್ಲಾ ಸ್ವಾಮಿಯಿಂದಲೇ ಉಂಟಾಗುತ್ತದೆ. ಪ್ರಿಯವಾದುದು ಬಂದಾಗ ಹಿಗ್ಗುವುದು ಅಪ್ರಿಯವಾದುದು ಬಂದಾಗ ತಗ್ಗುವುದೂ ಇರಬಾರದು. ದ್ವಂದ್ವಾತೀತನಾಗೆಂದು ಭಗವಂತ ಹೇಳಿದ್ದಾನೆ. ಇವು ಸುತ್ತುವ ಚಕ್ರ ದಂತೆ. ಒಂದಾಗುತ್ತಲೂ ಒಂದು ಸಂಭವಿಸುತ್ತಿರುವುವು. ಇವುಗಳಿಂದ ತಪ್ಪಿಸಿಕೊಳ್ಳಲಾಗುವುದಿಲ್ಲಾ. ಇವೇ ಜೀವನ, ಜೀವನದ ಸಾರಂಶ. ಅಹಿಂಸಾಃ ಹಿಂಸೆ ಇಲ್ಲದಿರುವ ಪ್ರಾಣಿದಯೆ. ಇದು ಧರ್ಮಸಾರಂಶ. ಬುದ್ಧನು ಬುದ್ಧನಾದುದು ಇದರಿಂದಲೇ. ಈ ತತ್ವವನ್ನು ಎತ್ತಿ ಹಿಡಿದ ಭಗವಾನ್ ಬುದ್ಧನ ಧರ್ಮ, ಬೌದ್ಧಧರ್ಮವೆಂದು ಲೋಕ ದಲ್ಲೆಲ್ಲಾ ಬೆಳಗಿದೆ. ಗಾಂಧಿಯರನ್ನು ಮಹಾತ್ಮರನ್ನಾಗಿ ಮಾಡಿದುದೂ ಈ ಅಹಿಂಸಾಧರ್ಮ. ಯಾವನು ಸರ್ವವಸ್ತುಗಳಲ್ಲೂ ತನ್ನಾತ್ಮನನ್ನೇ ಕಾಣುವನೋ ಅವನಿಗೆ ಹಿಂಸೆ ಕನಸಿನಲ್ಲೂ ಬರದು, ಅದೇ ಸಮತಾ, ಎಲ್ಲದರಲ್ಲೂ ಸಮದೃಷ್ಟಿಯಿರುವುದೊಂದು, ಏರು ಇಳಿತಗಳಿಗೆ ಸಿಲುಕ ದಿರುವುದೊಂದು ಸಮತಾ ಲಕ್ಷಣಗಳು. ಏನೇ ಬರಲಿ ಅಳ್ಳಾಡುವುದಿಲ್ಲಾ. ಇದು ಶಾಂತಿಭಾವದ ಪರಮಾವಧಿ. 'ಸಮತ್ವಂಯೋಗ ಉಚ್ಯತೇ'

ಎಂದು ಇದೇ ಯೋಗವೆಂದೂ ಸ್ವಾಮಿ ಹೇಳಿರುವುದು. ತಗ್ಗದೆ ಹಿಗ್ಗದೆ ದ್ವಂದ್ವಗಳಿಂದ ಅಲ್ಲಾಡಿಸಲ್ಪಡದೇ ಇರಬೇಕಾದರೆ ಎಷ್ಟು ಆತ್ಮಶಕ್ತಿ ಬೇಕು.

ತುಷ್ಟಿ ತೃಪ್ತಿ, ಸಂವೃದ್ಧಿಯ ಮನೋಭಾವ. "ಯದೃಚ್ಛಾಲಾಭಸಂತಪ್ಟೋ" ಎಂದು ಸ್ವಾಮಿ ಹೇಳಿದ್ದಾನಲ್ಲಾ ಅದು. ಸ್ವಾಮಿಯು ನನಗರ್ಹತೆಯಿರುವುದಕ್ಕಿಂತ ಜಾಸ್ತಿ ಪಾಲಿಸಿದ್ದಾನೆ, ಸ್ವಾಮಿ ನನಗೆ ಬೇಕಾದುದಕ್ಕಿಂತ, ಅಗತ್ಯಕ್ಕಿಂತ ಹೆಚ್ಚು ಕರುಣಿಸಿದ್ದಾನೆ ಎಂದು ದೃಢವಾಗಿ ನಂಬುವ ಮನಸ್ಸಿನ ಸ್ಥಿತಿ, ಇಲ್ಲವಾದರೆ ಕೊನೆಯುಲ್ಲಿಗೆ. ನೆರೆಹೊರೆಯವರನ್ನು ನೋಡಿ ಕರುಬುವುದು, ನೋಡಿದ್ದೆಲ್ಲಾ ಬೇಕೆಂದು ಆಸೆಪಡುವುದು, ಎಷ್ಟಿದ್ದರೂ ಸಾಲದೆಂಬ ಮನೋಭಾವ ಎಲ್ಲಾ ಅಸಂತೃಪ್ತಿಯ ಕುರುಹು. ತೃಪ್ತಿಯೇ ಮಹಾ ಸಂಪತ್ತು. ಇರುವುದಕ್ಕಿಂತ ಹೆಚ್ಚಿನದು, ಅಪೇಕ್ಷಿಸದವನೇ ಧನಿಕ. ಆಶಿಸಿದಷ್ಟೂ ಬಡತನ. "ನಾನ್ಯಾಕೆ ಬಡವನೋ, ನಾನ್ಯಾಕೆ ಪರದೇಶಿ, ಶ್ರೀನಿಧೇ ನೀ ನನಗೆ ಇರಲು" ಎಂದು ಪಾಡುವ ದಾಸರ ಮನೋವೃತ್ತಿ. ಸಕಲೈಶ್ವರ್ಯ ಸಂಪನ್ನನಾದ ಸ್ವಾಮಿಯೇ ನಮ್ಮ ಪಾಲಿಗಿರಲು ನಾವೇಕೆ ಬಡವರಾದೇವು, ಪರದೇಶಿಯಾದೇವು. ಅವನೇ ನಮ್ಮ ತಾಯಿ, ತಂದೆ, ನಮ್ಮ ಸರ್ವಸ್ವವು. ಈ ಸೃಷ್ಟಿಯೂ ಭಗವಂತನ ಕೃಪಾನುಗ್ರಹವೇ—ಜೀವರಿಗೆ. ತಪಃ ಧ್ಯಾನ, ಭಗವಚ್ಚಿಂತನೆ.—ಇವೂ ಭಗವದನುಗ್ರಹವೇ. ಯಾವನಲ್ಲಿ ಭಗವಂತನಿಗೆ ಅನುಗ್ರಹ ಬರುತ್ತದೆಯೋ ಅವನನ್ನು ಆರಿಸಿ ಪ್ರಸಾದರೂಪವಾಗಿ ಈ ತಪಶಕ್ತಿಯನ್ನು ಅವನನ್ನು ಧ್ಯಾನಿಸಿ, ಚಿಂತಿಸಿ, ತಿಳಿದುಕೊಳ್ಳುವ ಶಕ್ತಿಯನ್ನು ಕೊಡುತ್ತಾನೆ. ತಪ ಅಂದರೆ ಉರಿಯುವುದು. ಒಂದೇ ಸಮನೆ ಅದೇ ಚಿಂತೆಯಲ್ಲಿ ಉಜ್ವಲಿಸುವುದಕ್ಕೆ ತಪವೆಂದು ಹೆಸರು. ದಾನಂ ನ್ಯಾಯಾರ್ಜಿತವಾದುದನ್ನು ಸತ್ಪಾತ್ರದಲ್ಲಿ ವಿನಿಯೋಗಿಸುವುದು. "ಕೊಟ್ಟದ್ದು ತನಗೆ, ಇಟ್ಟದ್ದು ಪರರಿಗೆ" ಎಂಬ ನಾಣ್ನುಡಿಯಿದೆ. ಒಂದು ಕೆರೆ ಕಟ್ಟಿದರೆ ನೀರು ಭರ್ತಿ ಶೇಖರಿಸಿ ಅದರ ಒಡತದಿಂದ ಕೆರೆಒಡೆದು ಹೋಗಬಾರದೆಂದು, ಕೋಡಿಯೂ, ತೂಬೂ, ನೀರು ಸದ್ವಿನಿಯೋಗವಾಗಲು ಕಟ್ಟುತ್ತಾರೆ. ಅಂತೆಯೇ ಶೇಖರವಾದ ನಿಧಿಯು

ನಿಂತು ಕೊಳೆಯುದಂತೆಯೂ, ಹೆಚ್ಚಾಗಿ ಪಾತ್ರವನ್ನೇ ಹಾಳುಮಾಡದಂತೆಯೂ, ದಾನವು ಮುಖ್ಯ ವಿನಿಯೋಗ ದಾರಿ. ಇತರರಲ್ಲಿಯೂ ತನ್ನನ್ನು ಕಾಣಲು ದಾನವು ಮಾರ್ಗ. ಕೊಟ್ಟು ಕೆಟ್ಟವರಿಲ್ಲಾ. ಕೊಡುಕೈ ತನ್ನನ್ನೂ ಪಾತ್ರವನ್ನೂ ಎರಡನ್ನೂ ಪಾವನಮಾಡುತ್ತದೆ. ಸರ್ವವನ್ನೂ ದಾನಮಾಡಿ, ತನ್ನನ್ನೇ ದಾನಮಾಡಿಬಿಟ್ಟ ಬಲಿಯು ಚಿರಾಯುವಾದನಲ್ಲದೆ, ಹರಿಯೇ ತನ್ನ ಬಾಗಿಲು ಕಾಯುವ ಸಂಪತ್ತು ಪಡೆದ. ಹಬ್ಬ, ಹರಿದಿನ, ಪೂಜಾದಿಗಳ ಚರಣೆಯಲ್ಲಿ "ಬಲಿಪಾಡ್ಯಮಿ" ಮೊದಲು. ದಾನದಲ್ಲಿ ಪಾತ್ರ ಮುಖ್ಯ. ಏಕೆಂದರೆ ಕೊಟ್ಟ ದಾನದಿಂದ ಅಧರ್ಮ, ದುರ್ನಡತೆ, ಪಾಪಗಳಿಗೆಡೆಯಾಗಬಾರದು. ಅವಕ್ಕೆ ಉತ್ತೇಜನವಾಗಬಾರದು. ಅಪಾತ್ರಗಳಲ್ಲಿ ಮಾಡಿದ ದಾನವು ದಾನವೇ ಅಲ್ಲಾ. ದಾನದಲ್ಲಿ ತ್ಯಾಗದಂಶವೂ ಶ್ರೇಯಸ್ಕರ. ತ್ಯಾಗಮಾಡಿ, ತನಗೆ ಬೇಕಾದ ಸುಖಸಂಪತ್ತನ್ನೇ ಇತರರಿಗಗತ್ಯವಾಗಿ ಬೇಕಾದ ನಿರ್ಭಾಗ್ಯರಿಗೆ ಕೊಟ್ಟರೆ ಅದು ಶ್ರೇಷ್ಟ. "ತನ್ನಂತೆಯೆ ಪರರ ಬಗೆದರೆ ಇಹವೆ ಕೈಲಾಸವಕ್ಕು."

ಇಂತಹ ದೇವಗುಣಗಳನ್ನೆಲ್ಲಾ ಸ್ವಾಮಿ ಜೀವಿಗಳಿಗೆ ದಯಪಾಲಿಸಿದ್ದಾನೆ. ಆದರೂ ನಾವು ಕೇವಲ ಸಂಕುಚಿತ ಭಾವದಿಂದ ಕೃಪಣತ್ವ, ದ್ವೇಷ, ಮತ್ಸರ, ಹಿಂಸೆ, ಅಸತ್ಯ, ಆಸೆ ಇವುಗಳಿಗೆಡೆ ಕೊಟ್ಟು ಸಂಕಟಪಡುವೆವು. ಇವು ತ್ರಿಗುಣಾತ್ಮಿಕವಾಗಿ ಪ್ರಕೃತಿಯಲ್ಲಿ ಅವರವರ ಪೂರ್ವಕರ್ಮ ಪ್ರಕಾರ ಜೀವಿಗಳಲ್ಲುಂಟಾಗುವ ದುರ್ಗುಣಗಳು. ಅವುಗಳನ್ನು ಈ ದೇಹಭಾವನೆಗಳಿಂದ ಪರಮಾತ್ಮ ಕೃಪಾಪೋಷಿತರಾಗಿ ಗೆದ್ದು, ಸದ್ಭಾವದಲ್ಲೇ ನಡೆಯಬೇಕು.

**ಮಹರ್ಷಯಃ ಸಪ್ತ ಪೂರ್ವೇ । ಚತ್ವಾರೋ ಮನವಸ್ತಥಾ ।**
**ಮದ್ಭಾವಾ ಮಾನಸಾ ಜಾತಾ-ಯೇಷಾಂ ಲೋಕ ಇಮಾಃ ಪ್ರಜಾಃ ॥**

ಸಪ್ತಮಹರ್ಷಿಗಳೂ, ಅವರಿಗಿಂತಾ ಪೂಜ್ಯರಾದ ಸನಕಾದಿ ನಾಲ್ವರು ಮಹರ್ಷಿಗಳೂ, ಲೋಕದಲ್ಲಿರುವ ಸಕಲ ಪ್ರಜೆಗಳೂ ನನ್ನಿಂದುತ್ಪನ್ನವಾದ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟರು. ಸೃಷ್ಟಿಯಾದಿಯಿಂದ ಇದುವ

ರೆಗೂ ಇರುವ ಋಷಿಗಳೂ, ಸಾಮಾನ್ಯ ಜನರೂ ಎಲ್ಲರೂ ಸ್ವಾಮಿಯ ಸಂಕಲ್ಪದ ಮೇರೆಗೆ ಬ್ರಹ್ಮ ಸೃಷ್ಟಿಸಿರುವನು.

**ಏತಾಂ ವಿಭೂತಿಂ ಯೋಗಂ ಚ । ಮಮ ಯೋ ವೇತ್ತಿ ತತ್ತ್ವತಃ ।**
**ಸೋऽವಿಕಂಪೇನ ಯೋಗೇನ । ಯುಜ್ಯತೇ ನಾತ್ರ ಸಂಶಯಃ ॥೭॥**

ಈ ವಿಭೂತಿ ಯೋಗವನ್ನೂ, ತತ್ವತಃ ನನ್ನನ್ನೂ ಅವಿಕಂಪದಿಂದ ಕೂಡಿದ ಯೋಗದಿಂದ ನಿಸ್ಸಂಶಯವಾಗಿ ಸೇರುವನು.

**ಅಹಂ ಸರ್ವಸ್ಯ ಪ್ರಭವೋ । ಮತ್ತಃ ಸರ್ವಂ ಪ್ರವರ್ತತೇ ।**
**ಇತಿ ಮತ್ವಾ ಭಜಂತೇ ಮಾಂ । ಬುಧಾ ಭಾವಸಮನ್ವಿತಾಃ ॥೮॥**

ನಾನು ಸಮಸ್ತ ಪ್ರಪಂಚದ ಉತ್ಪತ್ತಿಗೆ ಕಾರಣನಾಗಿರುವೆನು ನನ್ನಿಂದಲೇ ಎಲ್ಲವೂ ಸಾಗಿದೆ. ಈ ರೀತಿಯಾಗಿ ನನ್ನ ನಿಜವಾದ ಭಾವವನ್ನು ತಿಳಿದ ಜ್ಞಾನಿಗಳು ನನ್ನನ್ನೇ ಭಜಿಸುತ್ತಾರೆ.

**ಮಚ್ಚಿತ್ತಾ ಮದ್ಗತಪ್ರಾಣಾ- ಬೋಧಯಂತಃ ಪರಸ್ಪರಮ್ ।**
**ಕಥಯಂತಶ್ಚ ಮಾಂ ನಿತ್ಯಂ । ತುಷ್ಯಂತಿ ಚ ರಮಂತಿ ಚ ॥೯॥**

ನನ್ನಲ್ಲೇ ಚಿತ್ತವುಳ್ಳವರಾಗಿ, ನನ್ನಲ್ಲೇ ಹೊಂದಿಸಿದ ಪ್ರಾಣವುಳ್ಳವರಾಗಿ ಪರಸ್ಪರ ಪರತತ್ವವನ್ನೇ ಬೋಧಿಸುತ್ತಾ, ನನ್ನ ಕಥನ ಮಾಡುತ್ತಾ ಸಂತುಷ್ಟರಾಗಿ ರಮಿಸುತ್ತಿರುವರು.

ಇದೇ ಭಾವ, ಇದೇ ಅಕ್ಷರತಃ ವರಾಹೋಪನಿಷತ್ತಿನಲ್ಲಿ "ಮಚ್ಚಿಂತನಂ, ಮತ್ಕಥನ ಮನ್ಯೋನ್ಯಂ ಮತ್ಪ್ರಭಾಷಣಂ, ಮದೇಕ ಪರಮೋ ಭೂತ್ವಾ, ಕಾಲಂ ನಯಮಹಾಮತೇ" ಎಂದು "ಮಹಾಮತೆ" "ಬೋಧಯಂತಃ" ರು ಅವನ ಚಿಂತನ, ಅವನ ಕಥಾಭಾಷಣದಲ್ಲೇ ಅವನಲ್ಲೇ ಐಕ್ಯವಾಗಿ ಕಾಲಹಾಕುವವರು ಎಂದು ಹೇಳಿದೆ. ಇದೇ ಜ್ಞಾನದ ಕುರುಹು. ಇದೇ ಜ್ಞಾನಿಗಳ ಜೀವನ, ನಿತ್ಯವ್ಯವಹಾರ. "ಯಾಚೇಹಂ ಕರುಣಾಸಿಂಧೋ, ಯಾವಜ್ಜೀವಮಿದಂತವ । ಅದೈನ್ಯಂ ದೇಹ ದಾರ್ಢ್ಯಂಚ, ತತ್ಪಾದಾಂಬುಜ ಸದ್ರತಾ । ಅನಾದ್ಯಂತ ಕಾಲೇಷು

ಭೃತ್ಯೋಽಹಂ ತ್ವಂ ಹಿ ಮೆ ಪ್ರಭುಃ | ಸಂತುಷ್ಟೋ ಽ ಹಾತವಾರುಷ್ಟ್ವನ್ಯಾತ್ಮವಿ ನರ್ಮೆಽಗತಿರ್ನಃಹಿ ||-ಎಂದು ಕರುಣಾಸಿಂಧುವನ್ನು, ಯಾವಜ್ಜೀವವೂ ಅದೈನ್ಯ, ದೇಹದಾರ್ಢ್ಯವನ್ನೂ ಅದರ ಅನಾದ್ಯಂತ ಕಾರ್ಯವಾಗಿ ಸರ್ವ ಕಾಲದಲ್ಲೂ, ಭಗವಂತನ ಪಾದಾರವಿಂದದಲ್ಲಿ ಸದ್ಭಕ್ತಿಯು ಪ್ರೇಮವನ್ನು (ಸದ್ರತಿಂ) ತನಗೆ ಅನ್ಯಗತಿಯಿಲ್ಲದೇ ಪರಮಾತ್ಮನನ್ನೇ ನಂಬಿದ ಭಕ್ತನು ಸಂತುಷ್ಟಿಯಾಗಲಿ ಬಿಡಲಿ,—ಈ ಮೂರನ್ನೂ ಪಾಲಿಸೆಂದು ಯಾಚಿಸಿದ್ದಾರೆ. ಪರಮಾತ್ಮನ ಭಕ್ತರಿಗೆ ಅವನ ಪಾದ ಪಂಕಜದ ಧ್ಯಾನ, ಕಥನವಲ್ಲದೆ ಅನನ್ಯ ಕಾಲದಲ್ಲೂ ಬೇರೆ ಪ್ರೀತಿ ವ್ಯವಹಾರವೇ ಬೇಕಿಲ್ಲಾ.

"ವಕ್ತಾರಃ ತುಷ್ಯಂತಿ, ಶ್ರೋತಾರಃ ರಮಯಂತಿ" ಕಥನ ಮಾಡುವ ವರು ಹೇಳುವವರು ಸಂತುಷ್ಟರಾಗುವರು. ಅಮೃತ ವಾಕ್ ಕೇಳುವ ವರು ಸಂತೋಷಿಸು (ರಮಿಸು) ವರು. ಭಗವಚ್ಚಿಂತನ ಸತತವೂ ಮಾಡುತ್ತಾ, ಅವನಲ್ಲೇ ಸೇರಿದ ಪ್ರಾಣವುಳ್ಳವರಾಗಿ (ಅವನಲ್ಲೇ ಸದಾ ಪಾನಮಾಡುತ್ತಾ) ತತ್ವವನ್ನು ತಿಳಿದ ಜ್ಞಾನಿಗಳ ಆತ್ಮಾನಂದವು, ತಾನಾಗಿ ಉಕ್ಕಿ ಹರಿದು ಹರಿಕಥಾರೂಪವಾಗಿ, ಆ ದಿವ್ಯಭಾವವನ್ನು ವಿವರಿಸಲು ಕಥಾಕಾಲಕ್ಷೇಪವಾಗಿ ವಾಕ್ಕಾಗಿ ಪರಿಣಮಿಸಿ ಅವರಿಗೆ ಸಂತುಷ್ಟಿಯನ್ನುಂಟುಮಾಡುತ್ತದೆ. ಈ ಗುಣಗಾನ ರೂಪವು ಕೇಳುವ ವನ ಮನದಲ್ಲಿ ಪುನಃ ಆತ್ಮಾನಂದ ರೂಪವಾಗಿ ಪರಿಣಮಿಸಿ, ಅವನು ಸತತವೂ ಮಾಡುತ್ತಿದ್ದ ಭಗವಚ್ಚಿಂತನವನ್ನೂ, ಭಗವದ್ಗತವಾಗಿರುವ ಪ್ರಾಣವನ್ನೂ, ತತ್ವಸ್ವರೂಪವನ್ನೂ ಪ್ರಚೋದಿಸಿ ಆನಂದಸಾಗರದಲ್ಲಿ ಮುಳುಗಿಸಿ ಅತಿ ಆಸಕ್ತಿಯಿಂದ ಸಂತಸ (ರಮಿಸು) ವನ್ನುಂಟುಮಾಡು ತ್ತದೆ. ಹೇಳುವವರ, ಕೇಳುವವರ ಮನದಲ್ಲಿರುವ ಈ ಭಗವಂತನ ತತ್ವವೊಂದೇ. ಸದಾ ಚಿಂತನ, ಗತಪ್ರಾಣದಿಂದ ಅದು ಆನಂದವಾಗಿ ಉಕ್ಕಿ ಹರಿಯಲು ಕಾದಿರುತ್ತದೆ. ಅಂಥಃ ಸತತ(ನಿತ್ಯ) ಭಕ್ತರು ಪರಸ್ಪರ ಸಂಧಿಸಿದಾಗ ತನುಮನಗಳು ತುಂಬಿದ ಈ ತತ್ವದ ವಿಚಾರ ಆಲಾಪ ನೆಯೇ ಹೊರಟು, "ತುಷ್ಯಂತಿ ಚ ರಮಂತಿ ಚ, ನಿತ್ಯಂ" ಯಾವಾಗಲೂ

ಸಂತುಷ್ಟಿ ಆನಂದವನ್ನುಂಟುಮಾಡುತ್ತದೆ. ಸತ್ಸಂಗದ ಪರಿಣಾಮ. ಸತ್ಪುರುಷರು ಸೇರುವೆಡೆ ನಡೆವ ವಿಚಾರ, ವಿಹಾರ.

ಎಲ್ಲಾದರೂ ಭೇಟಿಯಾದರೆ ಕಳ್ಳನನ್ನು ಕಳ್ಳನು ತಕ್ಷಣ ಗುರುತಿಸುವಂತೆ ಈ ಭಗವದ್ಭಕ್ತರೂ ಪರಸ್ಪರ ಭೇಟಿಯಾದಾಗ ಒಬ್ಬರನ್ನೊಬ್ಬರು ಗುರುತಿಸಿಬಿಡುತ್ತಾರೆ. ನಂತರ ಆಡುವುದಕ್ಕೆ ಯಾವುದಾದರೂ ಮಾತು ಬೇಕಲ್ಲಾ ' ರಾಂರಾಂ ' ಅಂತ ಶುರುಮಾಡುತ್ತಾರೆ. ಅವರಿಗಿನ್ಯಾವುದರಲ್ಲೂ ಆಸಕ್ತಿಯಿಲ್ಲಾ. ಮನದ ತುಂಬ ಹರಿಚಿಂತನೆ ತುಂಬಿರುತ್ತೆ. ಪ್ರಾಣವನ್ನೆಲ್ಲಾ ಅವನಲ್ಲೇ ಇರಿಸಿರುತ್ತಾರೆ. ಯಾವುದು ಮನಪ್ರಾಣಗಳು ತುಂಬಿರುತ್ತೇವೆಯೋ ಅದೇ ಮೊದಲು ಹೊರಡುವುದು ವಾಕ್‌ನಲ್ಲಿ. ಹರಿ ಅವರಲ್ಲಿ ಹರಿ ತುಂಬಿರುವುದರಿಂದ ಹರಿಕಥನವೇ ಪರಸ್ಪರ ಮಾತು ಹರಿಯುತ್ತದೆ. ಆತನ ಲೀಲೆ, ವಿಭೂತಿ, ಪ್ರಸನ್ನತೆಗಳ ವಿಷಯವಾಗಿ ಮನಃಪೂರ್ತಿಯಾಗಿ ಒಬ್ಬರೊಬ್ಬರಿಗೆ ತಿಳಿವಿಗೆ ಹೇಳುತ್ತಾರೆ. ಯಾವುದನ್ನಾದರೂ ಅತಿ ಆಸಕ್ತಿಯಿಂದ ಸಂತೋಷಕ್ಕಾಗಿ ಅನುಭವಿಸುವುದಕ್ಕೆ "ರಮಿಸು "ವುದೆಂದು ಹೇಳುತ್ತಾರೆ ; ರತಿಕ್ರೀಡೆಯನ್ನು ರಮಿಸುವುದೆನ್ನುವಂತೆ. ಇನ್ನು ಬೇಕಿಲ್ಲವೆನ್ನುವವರಿಗೆ ಬೇಕಾದುದು ಅನುಭವಕ್ಕೆ ದೊರೆತರೆ ಸಂತುಷ್ಟಿಯೆನ್ನುತ್ತಾರೆ. ಸುಭೋಜನ ಸಮೃದ್ಧಿಯಾದ ಮೇಲೆ, "ಸಂತುಷ್ಟಿ" ನಾಕಾಯಿತೆನ್ನುವಂತೆ. ಮನಸ್ಸಿಗೆ ಸಂತಸವಿದ್ದಾಗ ತಾವಾಗಿ ಹಾಡಿಕೊಳ್ಳುವಂತೆ, ಭಕ್ತರೂ ತಾವಾಗಿ ಆತನ ಗುಣಗಾನ ಮಾಡಿ ಸಂತುಷ್ಟಿ ಮಾಡಿಕೊಳ್ಳುತ್ತಾರೆ. ಆ ಭಗವದ್ಗುಣಗಾನ ಮಾಡಲು ಕೇಳುವವರು ಸಿಕ್ಕಿಯಾರೇಎಂದು ಮನ ಹಾತೊರೆಯುತ್ತಿರುತ್ತೆ. ಭಗವನ್ನಾಮಾಮೃತವು ಅಂತಹ ದಿವ್ಯ ಆನಂದ ವಸ್ತು.

ಭಗವತ್ಕಾಲಕ್ಷೇಪಗಳಲ್ಲಿ ನಾವೆಷ್ಟೋ ಸಾರಿ ನೋಡಿದ್ದೇವೆ. ಉದರ ನಿಮಿತ್ತಂ ಮಾಡುವ ದಾಸರಿಗೆ ಮಂಗಳಾರತಿ ತಟ್ಟೆಯ ಮೇಲೆ ಅಥವಾ ಸುತ್ತುತ್ತಿರುವ ಚಂದಾಪಟ್ಟಿಯ ಮೇಲೆ ಜ್ಞಾನವಿರುತ್ತೆ. ಅದೇ ಜೀವನ, ಅದೇ ಪ್ರಾಣ (ಮುದ್ಗತ ಪ್ರಾಣದಂತೆ) ಆದಷ್ಟು ಮನರಂಜನೆ ಮಾಡಬೇಕೆಂದು ಸೇರಿರುವ ಸಭೆಯಲ್ಲಿನ ವ್ಯಕ್ತಿಗಳ ತುಲನಕ್ಕೆ, ತಕ್ಕಂತೆ ಕಥೆ ಬೆಳೆಯುತ್ತೆ. ಮಧ್ಯೆ ಮಧ್ಯೆ ಗಲಾಟೆ, ಮಕ್ಕಳ ಅಳು, ಬರುವವರು

ಹೋಗುವವರು, ಇರುವವರ ಮನ ಸೆಳೆಯುವವರು. ಕೇಳುವವರಿಗೂ ಮನೆಗೆ ಹೋಗುವ ಚಿಂತೆ, ಹಸಿವು ಇತ್ಯಾದಿ. ಏನೋ ಕಲಿಕಾಲಕ್ಕೆ ತಕ್ಕಂತೆ ನಮ್ಮ ಸುಧಾರಿಸಿದ, ಈಚಿನ, ಸರ್ವಸಮಾನ ಸಮಾಜಕ್ಕೆ ಇದೇ ಭಗವನ್ನಾಮ ಸಂಕೀರ್ತನ. ಆದರೆ ನಿಜವಾದ ಭಕ್ತರು ಮುನಿಗಳು-ಮೌನವಾಗಿರುವರು. ಅವರು ಸಂತೆಯಲ್ಲಿ ತತ್ವವನ್ನು ಸಾರುವುದಿಲ್ಲಾ. ಅವರಿಗೆ ತಕ್ಕಂತೆ ಭಕ್ತರು ಸಿಕ್ಕಿದರೆ ಪರಸ್ಪರ ಬೋಧೆಯಾಗುವಂತಿದ್ದರೆ ಆನಂದದಿಂದ ಹರಿಕಥನ ಮಾಡುತ್ತಾರೆ. ಇಲ್ಲವಾದರೆ ಏನೂ ತಿಳಿಯದ ಮಾತು ಬರದ ಗಮಾರನಂತೆ ಸಾಮಾನ್ಯರಿಗೆ ಕಾಣುತ್ತಾರೆ. ಬಲ್ಲೋರೆ ಬಲ್ಲರು ಬೆಲ್ಲದ ಸವಿಯು. ಪುರಂಧರದಾಸರು ಹರಿನಾಮವನ್ನು ಅದಕ್ಕೇ ಕಲ್ಲುಸಕ್ಕರೆಗೆ ಹೋಲಿಸಿದ್ದಾರೆ. ಚಪ್ಪರಿಸಿದಷ್ಟೂ ಸವಿ ಹೆಚ್ಚು. ಹರಿನಾಮ ಚಿಂತಿಸಿದಷ್ಟೂ, ಸಂಕೀರ್ತನ ಮಾಡಿದಷ್ಟೂ ರುಚಿ ಜಾಸ್ತಿ, ಈ ಗುಟ್ಟು ಮಹರ್ಷಿಗಳಿಗೂ ಭಕ್ತರಿಗೂ ಗೊತ್ತು. (ಬುಧಾಃ) ತಿಳಿದವರು ಭಾವ ಸಮನ್ವಿತರಾಗಿ ಅದೇ ಚಿಂತನೆಯಲ್ಲಿ ನಿರತರಾಗಿ, ಅದೇ ಕಥನದಲ್ಲಿ ಸಂತುಷ್ಟಿ ಹೊಂದಿ ಅತ್ಯಾನಂದವನ್ನನುಭವಿಸುತ್ತಾರೆ.

**ತೇಷಾಂ ಸತತಯುಕ್ತಾನಾಂ । ಭಜತಾಂ ಪ್ರೀತಿಪೂರ್ವಕಮ್ ।**
**ದದಾಮಿ ಬುದ್ಧಿಯೋಗಂ ತಂ । ಯೇನ ಮಾಮುಪಯಾಂತಿ ತೇ ॥೧೦॥**

ಪ್ರೀತಿಪೂರ್ವಕವಾಗಿ ನಿರಂತರವಲ್ಲೂ ಮನಸ್ಸಿಟ್ಟು ಯಾರು ಭಜಿಸುತ್ತಾರೊ, ಅವರಿಗೆ ನನ್ನನ್ನು ಸೇರಲು (ಬುಧಿಯೋಗಂ) ಜ್ಞಾನೋಪಾಯವನ್ನು ಪಾಲಿಸುವೆನು. ಅದರಿಂದ ಅವರು ನನ್ನನ್ನು ಹೊಂದುವರು. ಪರಮಾತ್ಮ ಕೊಡೋದು ಸದ್ಬುದ್ಧಿ, ಅದನ್ನ ಸದುಪಯೋಗ ಮಾಡಿಕೊಂಡು ಆ ಪರಮಾತ್ಮನನ್ನು ಸೇರಬೇಕು. ಹಾಳುಮಾಡಿಕೊಳ್ಳಬಾರದು. ಹೆದರಿಕೊಂಡೇನು ಮಾಡಬೇಕಾದ್ದಿಲ್ಲಾ. ಪ್ರೀತಿಯಿಂದ ಯಾವಾಗಲೂ ಅದೇ ಮನಸ್ಸಿನಿಂದ ಭಜಿಸಬೇಕು. ಕಾರುಣ್ಯ ಸಿಂಧು, ಅತಿ ಸುಲಭ. ಭಕ್ತವತ್ಸಲ, ನಮ್ಮ ತಂದೆ ತಾಯಿ ಸ್ವರೂಪನೇ ಆದ ಅವನಲ್ಲಿ ಸಂಪೂರ್ಣ ಪ್ರೀತಿಯಿರಬೇಕು. ಜುಲುಂಸಿಂದ ಮಾಡುವ ಕೆಲಸವೂ ಅಲ್ಲಾ. ತಾನಾಗಿ ಪ್ರೇಮಾಸ್ಪದವಾಗಿರಬೇಕು. ಭಕ್ತಿಯನ್ನೆ

'ಪರಮ ಪ್ರೇಮಸ್ವರೂಪ'ವೆಂದು ವರ್ಣಿಸಿದ್ದಾರೆ. ಪ್ರೀತಿಯಿಂದ ಮಾಡಿದರೆ ಸತತವಾಗಿ ನಡೆಯುತ್ತೆ, ಮನಸ್ಸಿಟ್ಟು ಮಾಡುತ್ತಾರೆ. ಹೆದರಿಕೆಗೆ ಜುಲುಂನಿಂದ ಮಾಡಿದುದು ಯಾವಾಗಲೂ ನಡೆಯುವುದಿಲ್ಲಾ. ಮನಃಪೂರ್ತಿಯೂ ಸಾಗುವುದಿಲ್ಲ. ಅಂತೇ ಭಜನೆ. ಅಂತಹವರಿಗೆ ಬುದ್ಧಿ ಉಪಾಯ ಕೊಡುತ್ತಾನೆ. ಆಮೇಲೆ ಸ್ವಪ್ರಯತ್ನದಿಂದ ಅವನನ್ನು ಸೇರಬೇಕು.

**ತೇಷಾಮೇವಾನುಕಂಪಾರ್ಥ-ಮಹಮಜ್ಞಾನಜಂ ತಮಃ ।**
**ನಾಶಯಾಮ್ಯಾತ್ಮಭಾವಸ್ಥೋ । ಜ್ಞಾನದೀಪೇನ ಭಾಸ್ವತಾ ॥೧೧॥**

ಅಂಥಾ ಭಕ್ತರ ಅನುಗ್ರಹಾರ್ಥ (ಅನುಕಂಪ) ದಯದಿಂದ ಅವರಲ್ಲಿರುವ ಅಜ್ಞಾನವೆಂಬ ಕತ್ತಲೆಯನ್ನು ಆತ್ಮಭಾವವೆಂಬ ಜ್ಞಾನದೀಪದ ಪ್ರಭೆಯಿಂದ ನಾನು ನಾಶಮಾಡುತ್ತೇನೆ.

ಪೈಂಗಳೋಪನಿಷತ್ತಿನಲ್ಲಿ "ದೇಹೆಜ್ಞಾನೇನ ದೀಪಿತೇ ಬುದ್ಧಿರ ಖಂಡಾಕಾರ ರೂಪಾಯದಾ ಭವತಿ, ತದಾ ವಿದ್ವಾನ್ಬ್ರಹ್ಮಜ್ಞಾನಾಗ್ನಿನಾ ಕರ್ಮಬಂಧಂನಿರ್ದಹೇತ್"—ಜ್ಞಾನದೀಪದಿಂದ ಬುದ್ಧಿಯು ಅಖಂಡಾಕಾರ ರೂಪವಾಗಿ ಯಾವಾಗ ಆಗುತ್ತದೆಯೋ, ಆಗ ಜ್ಞಾನಿಯು, ಬ್ರಹ್ಮಜ್ಞಾನದಿಂದ ಕರ್ಮಬಂಧನವನ್ನು ಸುಡುತ್ತಾನೆಂದು ಹೇಳಿದೆ.

'ಕಂಪ' ಎಂದರೆ ನಡುಗುವುದು. ಅನುಕಂಪ ಎಂದರೆ ಸಹಾನುಭೂತಿಯಿಂದ ನಡುಗುವುದು. Sympathetic Vibration.

ಅನುಕಂಪದಲ್ಲಿ ದಯಾ ಅನುಗ್ರಹದ ಭಾವವಿದೆ. ಮತ್ತೊಬ್ಬರ ಕಷ್ಟ ನೋಡಿ ಮರಗುವುದು. ಈ ಅಜ್ಞಾನಾಂಧಕಾರಮಯವಾದವರನ್ನು ನೋಡಿ ಕನಿಕರದಿಂದ, ದಯೆ ತೊರಲು ತಾನೇ ಜ್ಞಾನ ದೀಪ ಪ್ರಭೆಯಿಂದ ಆ ಕತ್ತಲೆ (ತಮ) ನಾಶಮಾಡುತ್ತಾನೆ ಸ್ವಾಮಿ — ಆ ಸಹಾನುಭೂತಿ ಭಕ್ತರಿಗೆ. ಒಂದು ಮಗು ಅತ್ತರೆ ಅದು ನೋಡಿ ಮತ್ತೊಂದು ಮಗುವೂ ಅಳುತ್ತೆ. ಕಾರಣ ಗೊತ್ತಿಲ್ಲಾ. ಆ ಸಹಜ ಸಹಾನುಭೂತಿಯಿಂದ "ಅನುಕಂಪ", ಅಳುವುದು. ಎಷ್ಟು ಕಾಲದಿಂದ ಇದ್ದ ಕತ್ತಲಾ

ದರೂ, ಎಷ್ಟು ಗಾಢವಾದ ಕತ್ತಲಾದರೂ (ಕತ್ತಲು ಗವಿಯಲ್ಲಡಗಿರುವ ಕತ್ತಲೇ) ಒಂದೇ ಒಂದು ಕಡ್ಡಿಗೀರಿದರೆ ಎಲ್ಲಾ ಮಾಯವಾಗಿ ಬೆಳಗುತ್ತೆ. ಹಾಗೆಯೇ ಹೃದಯ ಗುಹೆಯಲ್ಲಿರುವ ಅಜ್ಞಾನ, ಅವಿದ್ಯಾ ರೂಪವಾದ ಕತ್ತಲೆ (ತಮ)ಯೂ ಈ ಪರಮಾತ್ಮ ಕಾರುಣಿತವಾದ "ಆತ್ಮ ಭಾವಸ್ಥ" ನೆಂಬ ಜ್ಞಾನದೀಪದಿಂದ ಬೆಳಗುತ್ತದೆ. ಆಗ ಸ್ವಯಂ ಪ್ರಕಾಶನಾಗುತ್ತಾನೆ. ತಮನೆಂಬುದು ಗುಣತ್ರಯದಲ್ಲಿ ಕೀಳಾದುದು. ನಿದ್ರೆ, ಆಲಸ್ಯ, ಅಜ್ಞಾನ ಎಲ್ಲಾ ನೀಡಿದೆ. ಇದೇ ಮೃತ್ಯು. ಇದನ್ನು ಗೆದ್ದರೆ ಅಮರನಾಗುತ್ತಾನೆ. ಇದಕ್ಕೆ ಆತ್ಮಭಾವವೇ ತಕ್ಕ ದೀಪ. ಜ್ಞಾನ ಬೆಳಗಿದರೆ ಆತ್ಮಭಾವ ವೇದ್ಯವಾಗುತ್ತೆ. ಆಗ ಅಜ್ಞಾನದಿಂದ ಇದ್ದ ಅನಾತ್ಮ ಭಾವವೆಲ್ಲಾ ನಾಶವಾಗುತ್ತೆ. ಇದು ಪರಮಾತ್ಮನ ಕರುಣೆಯಿಂದ ಸಹಾನುಭೂತಿ ತೋರಲು ಪ್ರಸಾದ.

**ಪರಂ ಬ್ರಹ್ಮ ಪರಂಧಾಮ । ಪವಿತ್ರಂ ಪರಮಂ ಭವಾನ್ ।**
**ಪುರುಷಂ ಶಾಶ್ವತಂ ದಿವ್ಯ-ಮಾದಿದೇವಮಜಂ ವಿಭುಮ್ ॥೧೨॥**

**ಆಹುಸ್ತ್ವಾಮೃಷಯಃ ಸರ್ವೇ । ದೇವರ್ಷಿರ್ನಾರದಸ್ತಥಾ ।**
**ಅಸಿತೋ ದೇವಲೋ ವ್ಯಾಸಃ । ಸ್ವಯಂ ಚೈವ ಬ್ರವೀಷಿ ಮೇ ॥೧೩॥**

ಅರ್ಜುನ ಹೇಳುತ್ತಾನೆ. ಹೇಳುತ್ತಾನೆಂದು ಹೇಳಲಾಗುವುದಿಲ್ಲಾ. ಅವನ ವಚನ ದಿವ್ಯ ಪ್ರಾರ್ಥನಾರೂಪವಾಗಿದೆ. ಪರಬ್ರಹ್ಮ, ಪರಂಧಾಮ (ಸ್ಥಾನ, ವಿಶ್ರಾಂತಿ ಗೃಹ) ಪವಿತ್ರಂ ಪರಮಂ ಭವಾನ್. ಪುರುಷಂ, ಶಾಶ್ವತಂ, ದಿವ್ಯಂ, ಆದಿದೇವಂ, ಅಜಂ, ವಿಭುಂ—ಎಂದು ಪರಮಾತ್ಮನ ದಿವ್ಯ ಗುಣಗಾನ ಮಾಡುತ್ತಾನೆ. ಇವೆಲ್ಲಾ ಪರಮಾತ್ಮ ತಾನೇ ಎಂದು ಹೇಳಿಕೊಂಡ ವಿಶೇಷಣ ಪದಗಳಲ್ಲೇ ಅರ್ಜುನ ಪ್ರಾರ್ಥಿಸಿದ್ದಾನೆ. ಹೀಗೆಂದು ಈ ಪವಿತ್ರ ಸಂಕೇತಗಳಲ್ಲಿ ಎಲ್ಲಾ ಋಷಿಗಳು ದೇವರ್ಷಿಯಾದ ನಾರದ, ಅಸಿತ, ದೇವಲ, ವ್ಯಾಸರೇ ಮುಂತಾದವರು ಹೊಗಳಿದ್ದಾರೆ. ತಾವೂ ಹಾಗೇ ಹೇಳುವಿರಿ. ಇಲ್ಲಿ ಉಕ್ತವಾಗಿರುವ ಗುಣಗಳಿಂದ ಸಗುಣಬ್ರಹ್ಮ ವಿವರಣೆಯಾಗಿದೆ. ಋಷಿಗಳ ಭಾವನೆಯೂ ಇದೇ ರೀತಿ ಇದೆ.

**ಸರ್ವಮೇತದೃತಂ ಮನ್ಯೇ । ಯನ್ಮಾಂ ವದಸಿ ಕೇಶವ ।**
**ನ ಹಿ ತೇ ಭಗವನ್ ವ್ಯಕ್ತಿಂ । ವಿದುರ್ದೇವಾ ನ ದಾನವಾಃ ॥೧೪॥**

ದೇವತೆಗಳೂ ದಾನವರೂ ನಿನ್ನ ಯಥಾರ್ಥ ಸ್ವರೂಪವನ್ನು ತಿಳಿಯರು, ಆದುದರಿಂದ ನೀನು ನನಗೆ ಏನು ಹೇಳುತ್ತಿರುವೆಯೋ ಅದೆಲ್ಲವನ್ನೂ 'ಋತಂ'ವೆಂದು ಮನ್ನಿಸುತ್ತಿದ್ದೇನೆ, ಕೇಶವನೇ.

**ಸ್ವಯಮೇವಾತ್ಮನಾऽऽತ್ಮಾನಂ । ವೇತ್ಥ ತ್ವಂ ಪುರುಷೋತ್ತಮ ।**
**ಭೂತಭಾವನ ಭೂತೇಶ । ದೇವದೇವ ಜಗತ್ಪತೇ ॥೧೫॥**

ಎಲೈ ಪುರುಷೋತ್ತಮನೇ, ಭೂತಭಾವನ (ಉತ್ಪಾದಕ)ನೇ ಭೂತೇಶ (ನಿಯಾಮಕ)ನೇ, ದೇವದೇವನೇ, ಜಗತ್ಪತಿಯೇ, ನಿನ್ನ ಸ್ವರೂಪವನ್ನು ನೀನು ಬಲ್ಲೆಯೋ ವಿನಾ ಇತರರು ಅರಿಯರು. ಪ್ರಕೃತಿ ಪುರುಷವಾಗಿ ಭೂತಕ್ಕೆ ಸಂಬಂಧಿಸಿರುವ ಜಗದುತ್ಪತ್ತಿ, ಸ್ಥಿತಿ, ಲಯಗಳಿಗೆ ಕಾರಣನಾದ ಜಗತ್ಪತಿಯ ಭಾವವನ್ನು ಈ ಪ್ರಾರ್ಥನೆಯಲ್ಲಿ ಅರ್ಜುನ ಶ್ಲಾಘಿಸಿದ್ದಾನೆ. ಅವನೇ ಸತ್, ಚಿತ್, ಆನಂದ ರೂಪವಾಗಿ ಎಲ್ಲಾ ವ್ಯಾಪಿಸಿರುವುದರಿಂದ ಅವನು ಆತ್ಮನ ಆತ್ಮವನ್ನು ಬಲ್ಲವನು.

**ವಕ್ತುಮರ್ಹಸ್ಯಶೇಷೇಣ । ದಿವ್ಯಾಹ್ಯಾತ್ಮ ವಿಭೂತಯಃ ।**
**ಯಾಭಿರ್ವಿಭೂತಿಭಿರ್ಲೋಕಾ-ನಿಮಾಂ ಸ್ತ್ವಂ ವ್ಯಾಪ್ಯ ತಿಷ್ಠಸಿ ॥೧೬॥**

ಯಾವ ವಿಭೂತಿಗಳಿಂದ ಈ ಲೋಕವನ್ನು ಆವರಿಸಿ ವ್ಯಾಪಿಸಿಕೊಂಡಿರುವೆಯೋ ಆ ದಿವ್ಯ, ಆತ್ಮ ವಿಭೂತಿಗಳನ್ನು ಅಶೇಷವಾಗಿ ನನಗೆ ಹೇಳು. ಈ ಲೋಕವನ್ನ ವ್ಯಾಪಿಸಿಕೊಂಡಿರುವುದು ನಿಜ. ಆದರೆ ಅವನನ್ನು ಈ ಮಾಯೆ ಮುಚ್ಚಿದೆ. ಆದುದರಿಂದ ನಮಗೆ ವೇದ್ಯವಾಗುವುದಿಲ್ಲ. ಎಲ್ಲದರಲ್ಲೂ 'ಸೂತ್ರೇಮಣಿಗಣಾ ಇವ' ಎನ್ನುವಂತೆ ಅಂತರ್ಯಾಮಿಯಾಗಿ ಜೋಡಿಸಿಕೊಂಡಿದ್ದಾನೆ. ಆದರೆ ಹೆಚ್ಚಿನ ಪ್ರಭೆಯುಳ್ಳ ವಸ್ತುಗಳಲ್ಲಿ ವಿಭೂತಿರೂಪವಾಗಿರುವುದರಿಂದ ಅದನ್ನು ಸಂಪೂರ್ಣವಾಗಿ ತಿಳಿಯಲಿಚ್ಛಿಸಿದ್ದಾನೆ.

**ಕಥಂ ವಿದ್ಯಾಮಹಂ ಯೋಗಿಂ-ಸ್ತ್ವಾಂ ಸದಾ ಪರಿಚಿಂತಯನ್ ।**
**ಕೇಷು ಕೇಷು ಚ ಭಾವೇಷು । ಚಿಂತ್ಯೋಽಸಿ ಭಗವನ್ಮಯಾ ॥೧೭॥**

ಯೋಗಿಗಳು ಸದಾ ಬಗೆಬಗೆಯಾಗಿ ಚಿಂತಿಸುತ್ತಿರುವ ನಿನ್ನಸ್ವರೂಪವನ್ನು ನಾನು ಹೇಗೆ ತಿಳಿದುಕೊಳ್ಳಲಿ. ಯಾವಯಾವ ನಿನ್ನ ಭಾವಗಳಲ್ಲಿ ನನ್ನಿಂದ ಚಿಂತಿಸಲ್ಪಡಲು ಯೋಗವಾಗಿದ್ದೀ. "ಅನನ್ಯಾನಂ" ಚಿಂತನೆ ಮಾಡುತ್ತಿರು ; "ಮತ್ವಾ ಭಜಂತೇ ಮಾಂ ಬುಧಾ ಭಾವ ಸಮನ್ವಿತಾಃ" ಜ್ಞಾನಿಗಳು ಯಾವಾಗಲೂ ನನ್ನ ಭಾವದಿಂದ ಕೂಡಿ ಭಜಿಸುತ್ತಿರುತ್ತಾರೆ ಎಂದು ಹೇಳಿದ ಚಿಂತನಾರ್ಹವಾದ ಭಗವದ್ಭಾವಗಳ ವಿವರಣೆಯನ್ನು ಅರ್ಜುನ ಕೇಳುತ್ತಾನೆ. ಇದು ಸಗುಣ ಪೂಜೆಗೆ, ಭಗವಚ್ಚಿಂತನೆಗೆ ಅರ್ಹವಾದ ಭಗವದ್ಭಾವ ವಿವರಣೆ ಕೇಳುತ್ತಾನೆ.

**ವಿಸ್ತರೇಣಾತ್ಮನೋ ಯೋಗಂ । ವಿಭೂತಿಂ ಚ ಜನಾರ್ದನ ।**
**ಭೂಯಃ ಕಥಯ ತೃಪ್ತಿ ರ್ಹಿ । ಶೃಣ್ವತೋ ನಾಸ್ತಿ ಮೇಽಮೃತಮ್ ॥೧೮॥**

ಜನಾರ್ದನನೇ, ವಿಸ್ತಾರವಾಗಿ ನಿನ್ನ ಆತ್ಮಯೋಗ ಮಹಿಮೆಯನ್ನು ಹೇಳು. ಅದು ಅಚಿಂತ್ಯೈಶ್ವರ್ಯಯುಕ್ತವಾದುದರಿಂದ ಚಿಂತಿಸಲು ಸಾಧ್ಯವಾದ ಭಾವವನ್ನು ಪುನಃ ತಿಳಿಸು. ಅಮೃತರೂಪವಾದ ಆ ವಿಭೂತಿ ವಿವರಣೆಯು ಸಂಕ್ಷೇಪವಾಗಿ ನಿನ್ನಿಂದ ಹೇಳಲ್ಪಟ್ಟಿದ್ದರಿಂದ ಕೇಳಿ ನನಗೆ ತೃಪ್ತಿಯಾಗಲಿಲ್ಲ. (೯ ಅಧ್ಯಾ ೧೬ ರಿಂದ ೧೯ ಶ್ಲೋಕಗಳಲ್ಲಿ 'ಅಹಂಕ್ರತು .... ಸದಸತ್ ' ಎಂದು ವಿವರಣೆ ಮಾಡಿದುದು.)

"ಬೋಧಯಂತ ಪರಸ್ಪರಂ" ಒಬ್ಬರಿಗೊಬ್ಬರು ಬೋಧಿಸಿದ ಮೇಲೆ ಭಗವತ್ ವಿಭೂತಿ ಶ್ರವಣದಲ್ಲಿ ತುಷ್ಟಿಯಾಗಬೇಕು. ತೃಪ್ತಿಯಾಗಲಿಲ್ಲ ಅರ್ಜುನನಿಗೆ. ಆ ಸಂಕ್ಷೇಪ ವಿಭೂತಿ ವಿವರಣೆ ಕೇಳಿ ಇವನ ಭಗವತ್ ವಿಭೂತಿ ಶ್ರವಣದಲ್ಲಿ ಆಸಕ್ತಿ ಕೆರಳಿದೆ. ಇನ್ನೂ ಹೆಚ್ಚು ವಿಸ್ತಾರವಾಗಿ ಎಲ್ಲಾ ಕೇಳಿ ಸರಿಯಾಗಿ ಗ್ರಹಿಸಬೇಕೆಂಬ ಆಸೆ ಹುಟ್ಟಿದೆ. ಅದಕ್ಕಾಗಿ ಪ್ರಾರ್ಥನಾ ರೂಪದಲ್ಲಿ ಪರಮಾತ್ಮನ ದಿವ್ಯವಿಭೂತಿಗಳನ್ನೇ ನೆನೆಯುತ್ತಾ ಅವನನ್ನೇ ಮೊರೆಹೊಕ್ಕಿದ್ದಾನೆ. ನಿನ್ನ ಸ್ವರೂಪವನ್ನು ನೀನಲ್ಲದೆ ಮತ್ಯಾರೂ ಅರಿಯರು ಎಂಬ ದೃಢಭಕ್ತಿಯಿಂದ ಅವನ ಸ್ವರೂಪವನ್ನೇ

ನಾಮಗಳಿಂದ ಭೂತಭಾವನ, ಭೂತೇಶ, ಜಗತ್ಪತೇ, ದೇವದೇವ ಎಂದು ಅವನ ಸರ್ವಾಂತರ್ಯಾಮಿತ್ವ, ಸರ್ವೇಶ್ವರತ್ವ, ಜಗತ್ಪಾಲನತ್ವ, ಸರ್ವಶ್ರೇಷ್ಠತ್ವ ಎಲ್ಲಾ ವಿದಿತವಾಗುವಂತೆ ಪ್ರಾರ್ಥಿಸಿದ್ದಾನೆ. ಕೇಳಿದಷ್ಟೂ ಕೇಳಬೇಕೆನ್ನುವಂತಹ ವಿಷಯ, ಭಗವತ್ ವಿಭೂತಿ ವಿಷಯ. ಅಸಂಖ್ಯಾತವಾದುದು ಅತಿ ವಿಸ್ತಾರವಾದುದು.

**ಹಂತ ತೇ ಕಥಯಿಷ್ಯಾಮಿ । ದಿವ್ಯಾ ಹ್ಯಾತ್ಮವಿಭೂತಯಃ ।**
**ಪ್ರಧಾನ್ಯತಃ ಕುರುಶ್ರೇಷ್ಠ । ನಾಸ್ತ್ಯಂತೋ ವಿಸ್ತರಸ್ಯ ಮೇ ॥೧೯॥**

ಭಗವಂತ ಹೇಳುತ್ತಾನೆ. ಕುರುಶ್ರೇಷ್ಠನೇ ಎಂದು ಸಂಬೋಧನೆ. ಶ್ರೇಷ್ಠವಾದ ವಸ್ತುಗಳಲ್ಲೆಲ್ಲಾ ತಾನೇ ಇರುವುದಾಗಿ ಮುಂದೆ ತಾನೇ ಹೇಳುತ್ತಾನೆ ಪರಮಾತ್ಮ. ಬಂಧುವೂ, ಸ್ನೇಹಿತನೂ ಆದ ಅರ್ಜುನನನ್ನು ಕುರುಶ್ರೇಷ್ಠನೇ ಎಂದು ಸಂಬೋಧಿಸಿದಾಗ, ಕುರುಕುಲಶ್ರೇಷ್ಠನೆಂದು ಉದ್ಭವಿಸಿದ ಕುಲದಲ್ಲಿ ಉತ್ತಮನಾದವನೆಂದು ಅರ್ಥ. ಆ ಶ್ರೇಷ್ಠನಲ್ಲಿ ಸ್ವಾಮಿ ಇದ್ದೇ ಇರಬೇಕು. ಭಗವದಂಶ ಹೆಚ್ಚು ಪ್ರಕಾಶಿಸುತ್ತಿರುವುದರಿಂದ ಕುಲಕ್ಕೆ ಶ್ರೇಷ್ಠನಾದ ಅರ್ಜುನ ಕುರುಕ್ಷೇತ್ರ ಯುದ್ಧದಲ್ಲೂ ಯೋಧರಲ್ಲೆಲ್ಲಾ ಶ್ರೇಷ್ಠನಾದವನು ಅರ್ಜುನ, ಗಂಡರಗಂಡ, ಧನುರ್ವಿದ್ಯೆಯಲ್ಲಿ ಅಪ್ರತಿಮ ಪ್ರವೀಣ ಹಾಗೂ ಭಗವದಂಶದಿಂದ ಅತಿ ವೀರನಾದ ಯೋಧನಾದುದರಿಂದಲೂ ಭಗವಂತನಿರಬೇಕು ಅವನಲ್ಲಿ. ಈ ಸಂಬೋಧನೆಯಿಂದಲೇ ಅರ್ಜುನನು ತಾನೂ ಪರಮಾತ್ಮನೂ ಒಂದೇ ಎಂದು ಅರಿಯಬೇಕು. ಅತ್ಯಂತ ಪ್ರಧಾನಗಳಾದ ನನ್ನ ದಿವ್ಯ ಆತ್ಮ ವಿಭೂತಿಗಳನ್ನು ಮಾತ್ರ ನಿನಗೆ ಹೇಳುವೆನು, ಕೇಳು. ಏಕೆಂದರೆ ನನ್ನ ವಿಭೂತಿ ವಿಸ್ತಾರಕ್ಕೆ ಅಂತ್ಯವೇ ಇಲ್ಲಾ. ಅನಂತ ಪರಮಾತ್ಮನ ಗುಣಗಾನಮಾಡಿ ಮುಗಿಸುವುದು ಶಕ್ಯವೇ.

**ಅಹಮಾತ್ಮಾ ಗುಡಾಕೇಶ । ಸರ್ವಭೂತಾಶಯಸ್ಥಿತಃ ।**
**ಅಹಮಾದಿಶ್ಚ ಮಧ್ಯಂ ಚ । ಭೂತಾನಾಮಂತ ಏವ ಚ ॥೨೦॥**

ನಾನು ಆತ್ಮ. ನಿದ್ರಾವಸ್ಥೆಯನ್ನು ಗೆದ್ದವ. ಸರ್ವ ಭೂತಗಳ ಅಂತಃಕರಣದಲ್ಲಿ ಆಶಯವಾಗಿ ಇರುವವನು. ಸರ್ವ ಭೂತಗಳಿಗೂ

ನಾನು ಆದಿಯೂ, ಮಧ್ಯವೂ (ಜೀವನ) ಮತ್ತು ಅಂತ್ಯವೂ ಆಗಿರುವೆನು. ಉತ್ಪತ್ತಿ, ಸ್ಥಿತಿ, ಲಯನಾಗಿರುವೆನು. ನಿದ್ರಾವಸ್ಥೆಯನ್ನು ಅವಸ್ಥಾತ್ರಯದ ಪ್ರತಿನಿಧಿಯಾಗಿ ತೆಗೆದುಕೊಂಡಿದ್ದಾನೆ; ನಿದ್ರಾವಸ್ಥೆಯನ್ನು ಗೆದ್ದವನೆಂದರೆ ಅವಸ್ಥಾತ್ರಯವನ್ನೂ ಗೆದ್ದವನು. ಎಚ್ಚರ, ಕನಸು, ಸುಷುಪ್ತಿಗಳಾಚೆಯಿರುವವನು. ಎಲ್ಲಕ್ಕೂ ಸಾಕ್ಷಿಯಾಗಿ ಅವುಗಳಲ್ಲಿದ್ದರೂ ಮೂರು ಅವಸ್ಥೆಗಳ ಬಂಧನವಿಲ್ಲದವನು. ನಮ್ಮ ಅನುಭವ ಸಿದ್ಧಾಂತವೆಲ್ಲಾ ಈ ಮೂರು ಅವಸ್ಥೆಯಲ್ಲಿನ ಅನುಭವದ ಮೇಲೆಯೇ. ಇವು ಮೂರೂ ಜೀವನ ಜೀವನಾಂಶವನ್ನೆಲ್ಲಾ ಆವರಿಸಿರುವುವು. ಏನು ನಡೆದರೂ, ಏನು ಕಲಿತರೂ ಏನು ತಿಳಿದರೂ, ಈ ಮೂರು ಅವಸ್ಥೆಯ ಅನುಭವದಿಂದಲೇ. ಈ ಮೂರರಲ್ಲೂ ನಾನೆಂಬ ಸಾಕ್ಷಿ ಅನುಭವಿಸುವಂತೆ ತೋರಿದರೂ ಅವನು ನಿರ್ಲಿಪ್ತನು. ಆತ್ಮನಿಗೆ ಈ ಮೂರವಸ್ಥೆಗಳೂ ಅಂಟುವುದಿಲ್ಲಾ. ಪರಮಾತ್ಮನ ಸ್ವರೂಪವೂ ಹೇಗೆ ಕಾಲಾತೀತ, ಕರ್ಮಾತೀತ, ದೇಶಾತೀತವೋ—ಅಂತೇ ಅವಸ್ಥಾತೀತವು. ಇವಕ್ಕೆ ಸಿಲುಕದವನು. ಆದರೂ ಸರ್ವಭೂತಗಳ ಆಶಯವೂ ಇವನೇ, ಏನು ಆಶಯವನ್ನನುಭವಿಸಿದರೂ ಇವನ ಸಾನ್ನಿಧ್ಯದಿಂದಲೇ. ಹುಟ್ಟಿ ಬೆಳೆದು ಸಾಯುವವರೆಗೂ ಇವನೇ ಜ್ಯೋತಿ ಒಳಗೆ. ಸರ್ವಕಾಲದಲ್ಲೂ ಜೀವನದಲ್ಲಿ ಇವನೇ ಆಧಾರ ಸ್ವರೂಪ. ಇದೇ ಇವನ ವಿಭೂತಿಯ ಸಾರಾಂಶ. ಈತನನ್ನು, ಎಲ್ಲ ಭೂತಗಳಲ್ಲೂ ಆದಿಮಧ್ಯಾಂತವಂತನಾಗಿ ತಾನೇ ಆದಿಮಧ್ಯಾಂತ ರಹಿತನಾಗಿ ಭೂತವಲ್ಲದೆ, ಆತ್ಮನಾಗಿದ್ದಾನೆ. ಅವ್ಯಕ್ತನನ್ನು ವ್ಯಕ್ತವಾಗಿ ಗ್ರಹಿಸಬೇಕಾದರೆ ಇಷ್ಟೇ. ಯಾವ ದೇಹವನ್ನಾಶ್ರಯಿಸಿರುತ್ತಾನೋ ಅದೇ ರೂಪ. ವಿಶ್ವವೂ ಅವನನ್ನೇ ಆಶ್ರಯಿಸಿದೆ. ಅವನೇ ವಿಶ್ವದಲ್ಲೂ ಇದ್ದಾನೆ. ಆದುದರಿಂದ ವಿಶ್ವದ ಆದಿಮಧ್ಯಾಂತವೂ ಅವನೇ. ಇದಕ್ಕೆ ಶ್ವೇತಾಶ್ವತರೋಪನಿಷತ್ತಿನಲ್ಲಿ ಎರಡು ವ್ಯತಿರಿಕ್ತಭಾವವುಳ್ಳ ಶ್ಲೋಕಗಳು ಬಂದು ದಿವ್ಯವಾಗಿ ಒಂದನ್ನೊಂದು ಕ್ರೋಢೀಕರಿಸಿವೆ. (೪ ಅ. ೩ ನೇ ಶ್ಲೋ) "ತ್ವಂ ಸ್ತ್ರೀ, ತ್ವಂಪುಮಾನಸಿತ್ವಂ ಕುಮಾರ ಉತವಾ ಕುಮಾರೀ, ತ್ವಂ ಜೀರ್ಣೋದಂಡೇನ ವಂಚಸಿ, ತ್ವಂಜಾತೋಭವತಿ ವಿಶ್ವತೋಮುಖಃ" ಎಂದು ಹೇಳಿ ನಂತರ ೫ ಅ, ೧೦ ನೇ ಶ್ಲೋಕದಲ್ಲಿ

"ನೈವಸ್ತ್ರೀ ನಪುಮಾನೇಷೋ ನೈವಚಾಯಂ ನಪುಂಸಕಃ, ಯದ್ಯಚ್ಛರೀರಮಾದತ್ತೇ ತೇನ ತೇನ ಸಯುಜ್ಯತೇ॥" ಎಂದು ಹೇಳಿದೆ. ಲಿಂಗವಿರುವ ಪ್ರಾಣಿಗಳೇ ಅಲ್ಲದೆ "ನೀಲಃಪತಂಗೋ ಹರಿತೊ ಲೋಹಿತಾಕ್ಷಸ್ತಡಿದ್ಗರ್ಭ ಋತುವ ಸ್ಸಮುದ್ರಾಃ" ಎಂದು ಹಕ್ಕಿ ಪತಂಗಗಳನ್ನೂ, ಋತು, ಸಮುದ್ರ ಗಳನ್ನು ಮಿಂಚುಹೊಳಪನ್ನು ನೀನೇ ಎಂದು ದೇವನ ವಿಶ್ವತೋಮುಖ ವನ್ನು ವರ್ಣಿಸಿದೆ. ಆದರೆ ಈ ವ್ಯಕ್ತ ದೇಹಗಳೇ ದೇಹಿಯೆಂದು ತಿಳಿದು ಬಿಟ್ಟಾರೆಂದು, ಅಲ್ಲಿರುವ ಅವ್ಯಕ್ತ ಅಂತಶ್ಶಕ್ತಿಯು ಅವನಂಶವೆಂದು ತಿಳಿಸಲು, ನೀನು ಪುಂ ಸ್ತ್ರೀ ಜೀವಿಯಲ್ಲ, ನಪುಂಸಕಶಕ್ತ್ಯಾತ್ಮಕ ಋತು, ಸಮುದ್ರ ಮಿಂಚೂ ಅಲ್ಲಾ. ಆದರೆ ಯಾವ ಶರೀರವನ್ನು ಹೊಂದುವೆಯೋ ಅದರೊಡನೆ ಪೂರ್ಣಮಿಲನವಾಗುತ್ತೀಯೆ ಎಂದು ವರ್ಣಿಸಿದ್ದಾರೆ. "ವಿಶ್ವತೋಮುಖಃ" ಎಂದು ಪರಮಾತ್ಮನ ವರ್ಣನೆಯಿದ್ದ, ಆದರೂ ಅವ್ಯಕ್ತ. ಕಾಣುವ ಆಕಾರ, ದೇಹ, ರೂಪ, ನಾಮಗಳು ಅವನಲ್ಲ. ಅವರಲ್ಲಿರುವ ಚೈತನ್ಯ-ಪ್ರಜ್ಞೆ, ಸಾಕ್ಷಿಯಾದವನು. ಅದು ಯಾವವು ಗಳಲ್ಲಿ ಹೆಚ್ಚಿನದಾಗಿರುತ್ತದೆಯೋ ಅದರಲ್ಲೇ ಪರಮಾತ್ಮನನ್ನು ಸ್ಪಷ್ಟವಾಗಿ ಕಾಣಬಹುದೆಂದು ಆಯಾಯ ಪಂಗಡದಲ್ಲಿ ತಾನು ಯಾವ ರೀತಿ ಉತ್ಕೃಷ್ಟವಾದುವುಗಳಲ್ಲಿ ಪ್ರಜ್ವಲ್ಯಮಾನವಾಗಿದ್ದೇನೆಂದು ಭಗವಂತ ಮುಂದೆ ವಿಶದವಾಗಿ ತಿಳಿಸುತ್ತಾನೆ. ಮಿಕ್ಕವುಗಳಲ್ಲಿಲ್ಲವೆಂದಲ್ಲಾ, ಎಲ್ಲದರಲ್ಲೂ ವ್ಯಾಪಿಸಿದ್ದಾನೆ. ವಾಸುದೇವಂ ಸರ್ವಮಿತಿ. ಸ್ಪಷ್ಟವಾಗಿ ತಿಳಿಯಲು ಹೆಚ್ಚು ಪ್ರಭೆಯುಳ್ಳ ಉಪಾಧಿಗಳನ್ನು ಹೇಳುತ್ತಾನೆ. ಮಕ್ಕಳಿಗೆ ಹೇಳಿ ಕೊಡುವದಪ್ಪ ಅಕ್ಷರಮಾಲೆಯಂತೆ ಚೆನ್ನಾಗಿ ಕಾಣುವ, ಅವನ ಶಕ್ತಿಯನ್ನು ಸುಲಭವಾಗಿ ತಿಳಿಯುವ ದೇಹಿಗಳ ವಿವರಣೆ.

**ಆದಿತ್ಯಾನಾಮಹಂ ವಿಷ್ಣು-ರ್ಜ್ಯೋತಿಷಾಂ ರವಿರಂಶುಮಾನ್ ।**
**ಮರೀಚಿರ್ಮರುತಾಮಸ್ಮಿ । ನಕ್ಷತ್ರಾಣಾಮಹಂ ಶಶೀ ॥೨೧॥**

ಆದಿತ್ಯರುಗಳಲ್ಲಿ ನಾನು ವಿಷ್ಣು, ಕಿರಣ ಪ್ರಕಾಶಕರಲ್ಲಿ ರವಿಯು, ಮರುತ್‌ಗಳಲ್ಲಿ ಮರೀಚಿ, ನಕ್ಷತ್ರಗಳಲ್ಲಿ ಚಂದ್ರ. ಮಹೋಪನಿಷತ್ತಿನಲ್ಲಿ "ಆದಿತ್ಯ ಸನ್ನಿಭೌಲೋಕಶ್ಶ್ರೇಷ್ಟತೇ ಸ್ವಯಮೇವತು, ತದಾಮ

ತ್ಸನ್ನಿಧಾವೇವ ಸಮಸ್ತಂ ಚೇಷ್ಟತೇ ಜಗತ್" ಆದಿತ್ಯ ಸನ್ನಿಧಿ ಮಾತ್ರ ದಿಂದಲೇ, ಲೋಕವು ಸ್ವಯಮೇವ ವ್ಯಾಪಾರ ಮಾಡುತ್ತದೆ, ಜೀವ ಜಂತುಗಳಿಗೆ ಚೈತನ್ಯಕ್ಕೆ ಅವನ ಸಾನ್ನಿಧ್ಯವೇ ಕಾರಣ. ಸಮಸ್ತ ಚರಾಚರ ವ್ಯಾಪಾರಕ್ಕೂ ಆವನ ಸಾಕ್ಷಿತ್ವ, ಲೀಲೆಯೇ ಪ್ರಚೋದಿತ, ಎಂದು ಹೇಳಿದೆ.

ನಮಗೆ ಗೋಚರಾಗೋಚರವಾದ ಬ್ರಹ್ಮಾಂಡದಲ್ಲಿ, ವ್ಯಕ್ತವಾದ ಸೂರ್ಯವ್ಯೂಹವು ದಿನರಾತ್ರಿ ವೇದ್ಯವಾಗುವುದು. ಅವ್ಯಕ್ತ ಪುರುಷನಿಂದ, ವ್ಯಕ್ತಶಕ್ತಿ ಪುರುಷನಾಗಿ ಸಮಸ್ತ ಸೃಷ್ಟಿ ಸ್ಥಿತಿಗಳಿಗೊಡೆಯನಾದ ಮಹಾವಿಷ್ಣುವು ಅವನೇ. ಪ್ರಥಮ ಪುರುಷರಲ್ಲಿ ಪ್ರಥಮನು. ನಂತರ ಜೀವರಾಶಿಗಳ ಉತ್ಪತ್ತಿ, ಸ್ಥಿತಿಗಳಿಗೆ ಪ್ರತ್ಯಕ್ಷಾಧಾರನಾದ ಸೂರ್ಯದೇವನೂ ಅವನೇ. ನಮಗೆ ವ್ಯಕ್ತವಾಗಿ ಕಣ್ಣಿಗೆ ಕಾಣುವ ಸೂರ್ಯನೊಬ್ಬನಲ್ಲದೆ, ಕಿರಣಗಳು ನಮಗೆ ತಲಪುವುದೇ ಕೋಟ್ಯಾಂತರ ವರುಷಗಳಾಗುವಷ್ಟಂತರ ದಲ್ಲಿರುವ ಅನೇಕ ಸೂರ್ಯರುಗಳು ಬ್ರಹ್ಮಾಂಡದಲ್ಲಿ ಪ್ರಕಾಶಿಸುತ್ತಿರುವುವು. ಅವುಗಳ ವ್ಯೂಹವೂ ಅಗೋಚರ. ಆ ಸೂರ್ಯರೇ ನಮಗೆ ನಕ್ಷತ್ರಗಳಂತೆ ಪ್ರಕಾಶಿಸುವಷ್ಟು ದೂರದಲ್ಲಿರುವುವು. ಈ ಸೂರ್ಯನೇಕರುಗಳಲ್ಲಿ ನಮಗೆ ಪ್ರಾಣಪೋಷಕನಾದ ಸೂರ್ಯಪರಮಾತ್ಮನು ಭಗವಂತನೇ. ಅವನು ಉದಯಿಸಿದರೆ ಲೋಕಗಳೇ ಏಳುವುವು. ಅವ ಅಸ್ತಮಿಸಿದರೆ ಲೋಕ ಗಳೇ ನಿದ್ರಿಸುವುವು. ಬೆಳಕಲ್ಲದೆ ಪ್ರಾಣೋತ್ಪತ್ತಿಗೂ, ಆಹಾರೋ ತ್ಪತ್ತಿಗೂ, (ಮಳೆ) ವರ್ಷಕ್ಕೂ ಜೀವನಾಧಾರವಾದ ಸೂರ್ಯನನ್ನು ನಾವು ಸಾಕ್ಷಾತ್ ಭಗವಂತನೆಂದು ಕಾಣಬಹುದು. ನಮ್ಮ ಪೂರ್ವಿಕರೂ ಸೂರ್ಯನನ್ನೇ ಭಗವಂತನೆಂದು ಆರಾಧಿಸುತ್ತಿದ್ದರು.

ಬೃಹದಾಕಾಶವು ಅಹೋರಾತ್ರಿಯೂ ಮಾನವನನ್ನು ವಿಸ್ಮಯಗೊಳಿಸಿದೆ. ಹಗಲಿನಲ್ಲಿ ಸೂರ್ಯ ತೇಜಸ್ಸೂ, ರಾತ್ರಿ ಚಂದ್ರನೂ ಜನಗಳನ್ನಾಕರ್ಷಿ ಸಿದ್ದಾರೆ. ಚಂದ್ರ ಪ್ರಭೆಯು ಆಹ್ಲಾದಕರವೂ, ಹಿತವೂ, ಆನಂದ ಮಯವೂ ಆಗಿದೆ. ಪ್ರೇಮಿಗಳ ವಿಹಾರಕ್ಕಂತೂ ಬೆಳದಿಂಗಳು ಅತಿ ಮಧುರ. ಎಲ್ಲಾ ಉನ್ನತಿಗೂ ಚಂದ್ರನೆ ಅಧಿಪತಿಯೆಂದು ಜ್ಯೋತಿಷ್ಯರು ಹೇಳುತ್ತಾರೆ. ವಂಶ ಶ್ರೇಷ್ಠನಾದವನನ್ನು 'ಚಂದ್ರ', ರಘುಕುಲ

ಚಂದ್ರಲಲಾಮ '— ಶ್ರೀರಾಮಚಂದ್ರ ಎಂದು, ಶ್ರೀರಾಮರನ್ನು ಕವಿಗಳು ವರ್ಣಿಸಿದ್ದಾರೆ. ನಮಗೆ ಸರ್ವಕಾಲದಲ್ಲೂ ಗೋಚರವಾಗುವ, ಅಖಂಡ ಸಾದೃಶ ಪರಮಾತ್ಮನನ್ನು ದೇವರು ಎಂದು ಮೊದಲು ಭಗವಂತ ತೋರಿಸಿದ್ದಾನೆ. ಓಂ ಪ್ರಥಮದಲ್ಲಿ ದಪ್ಪನಾದ ಅಕ್ಷರ ಮರಳಿನಲ್ಲಿ ತಿದ್ದಿ ಹಾಕಿಕೊಟ್ಟಂತೆ.

**ವೇದಾನಾಂ ಸಾಮವೇದೋಽಸ್ಮಿ । ದೇವಾನಾಮಸ್ಮಿ ವಾಸವಃ ।**
**ಇಂದ್ರಿಯಾಣಾಂ ಮನಶ್ಚಾಸ್ಮಿ । ಭೂತಾನಾಮಸ್ಮಿ ಚೇತನಾ ॥೨೨॥**

ವೇದಗಳಲ್ಲಿ ಸಾಮವೇದ ನಾನು, ದೇವತೆಗಳಲ್ಲಿ ಇಂದ್ರ, ಇಂದ್ರಿಯಗಳ ಮಧ್ಯೆ ಮನಸ್ಸು, ಭೂತಗಳಲ್ಲಿ ಚೈತನ್ಯ. ನಮ್ಮ ಜ್ಞಾನಭಂಡಾರವೆಲ್ಲ ವೇದಗಳು ಅಂದರೆ ತಿಳಿಯಬೇಕಾದ ವಿದ್ಯೆಗಳು, ಯಾವುದರಿಂದ ಅವನು ವೇದ್ಯನಾಗುವನೋ ಅವೇ ವೇದಗಳು – ಪರವಿದ್ಯೆ. ಅವು ನಾಲ್ಕು. ಅವುಗಳಲ್ಲಿ ಗಾನ ಪ್ರಧಾನ, ಮಂತ್ರ ಪ್ರಧಾನ, ಭಾವನ ಪ್ರಧಾನವಾದ ವೇದ – ಸಾಮ. ಚತುರೋಪಾಯಗಳಲ್ಲಿ ಸಾಮವೇ ಮೊದಲು. ಚಮತ್ಕಾರವಾಗಿ ಬೋಧಿಸುವುದು ಸಾಮವೇದ. ಸಾಮವೇದ ಪಠಣ ಮಾಡುತ್ತಿದ್ದರೆ ದಿವ್ಯ ಅಪ್ಸರಗಾನ ಕೇಳಿದಂತಾಗುತ್ತದೆ.

ಇಹದಲ್ಲಿಯೋ ಅಲ್ಲ ಪರದಲ್ಲಿಯೂ ದೇವತೆಗಳಲ್ಲೂ, ರಾಜನಾದ ಇಂದ್ರನೇ ನಾನು. ಸರ್ವವ್ಯಾಪಿ ಪರಮಾತ್ಮ.

ಜ್ಞಾನೇಂದ್ರಿಯ ಪಂಚಕ, ಕರ್ಮೇಂದ್ರಿಯ ಪಂಚಕ, ಇವುಗಳಲ್ಲಿನ ಮನಸ್ಸು ನಾನು, ಮನಸ್ಸು ಭಾಗವಹಿಸದಿದ್ದರೆ ಇಂದ್ರಿಯ ವ್ಯಾಪಾರವು ನಡೆಯುವುದಿಲ್ಲಾ. ಈ ಇಂದ್ರಿಯಗಳಲ್ಲೊಂದಲ್ಲಾ ಮನಸು. ಆದರೂ ಅವುಗಳನ್ನು ಕೆಲಸಮಾಡುವಂತೆಮಾಡುವುದು ಮನಸ್ಸು. ಯಾವ ಕೆಲಸದಲ್ಲಾಗಲೀ ಮನಸ್ಸಿಲ್ಲದಿದ್ದರೆ ಅದು ಫಲವೇ ಇಲ್ಲಾ. ಕಣ್ಣು ಏನನ್ನೋ ನೋಡುತ್ತಿರಬಹುದು, ಕಿವಿ ಏನನ್ನೋ ಕೇಳುತ್ತಿರಬಹುದು, ಮನಸ್ಸು ಬೇರೆ ಕಡೆಯಿದ್ದರೆ, ನೋಟ ಕಾಣುವುದೂ ಇಲ್ಲಾ, ಶಬ್ದ ಕೇಳುವುದೂ ಇಲ್ಲಾ. ಈ ಇಂದ್ರಿಯಗಳ ಮೇಲೇರಿ ಮನಸ್ಸು ವ್ಯಾಪಾರಮಾಡುತ್ತ

ದೆಂದು ಉಪನಿಷತ್ತುಗಳಲ್ಲಿ ಹೇಳುತ್ತದೆ. "ಮನಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ" ಎಂದು ಉಪನಿಷತ್‌ಗಳಲ್ಲಿ ಸಾರಿದೆ. ಮನಸ್ಸಿನಿಂದಲೇ ಸ್ವರ್ಗ ನರಕಗಳು. ಈ ಇಂದ್ರಿಯಗಳ ಮಧ್ಯದಲ್ಲಿ ಮನಸ್ಸು ಇದೆ. ಎಲ್ಲಿದೆ ಹೇಗೆ ವ್ಯಾಪಾರ ನಡೆಸುತ್ತದೆ ಎನ್ನುವುದು ಇನ್ನೂ ಶಾಸ್ತ್ರಜ್ಞರು ಕೂಡಾ ನಿರ್ಧರಿಸಿಲ್ಲಾ. ಆದರೂ ಸರ್ವವ್ಯಾಪಿ. ಮನವೇ ಮನುಷ್ಯನೆಂದೂ ಹೇಳಬಹುದು.

ಭೂತಗಳಲ್ಲಿನ ಚೇತಸ್ಸು ಅವನೆ. ಚೈತನ್ಯವೇ ಪ್ರಾಣಿಗಳ ಪ್ರಾಣ. ಜಡವಸ್ತುಸಿಗೂ ಜೀವಿತ ವಸ್ತುಗಳಿಗೂ ಇರುವ ವ್ಯತ್ಯಾಸವೇ ಚೈತನ್ಯ. ಈ ಚೈತನ್ಯ ಜಾಸ್ತಿ ಇದ್ದಷ್ಟೂ ಪ್ರಾಣಿವರ್ಗದ ಅಂತಸ್ತಿನಲ್ಲಿ ಶ್ರೇಷ್ಠ. ಎಷ್ಟು ಸಹಜಚೈತನ್ಯದಿಂದ ತುಂಬಿದೆಯೆಂದು ಹೇಳುತ್ತಾರೆ.

ಮನುಷ್ಯನ ಅಂತಃಕರಣದಲ್ಲಿ ಮನಸ್ಸು, ಚಿತ್ತ, ಬುದ್ಧಿ ಅಹಂಕಾರ ದಿಂದ ಜ್ಞಾನ ಸಂಬಂಧವಾದ ವ್ಯಾಪಾರ ನಡೆಯುತ್ತದೆ. ಮನಸ್ಸು, ಕರ್ಮೇಂದ್ರಿಯ, ಜ್ಞಾನೇಂದ್ರಿಯಗಳನ್ನು ಹೇಗೆ ಪ್ರಚೋದಿಸುತ್ತದೆಯೋ, ಹಾಗೇ ಚಿತ್ತದಿಂದ ದುಡಿಯುದುದು ಚೇತನವೆನ್ನಬಹುದು. ಇದೇ ಆತ್ಮ ಪ್ರಭಾವ. ಚಿತ್ತ ವಾಸನಾಮಯ.

**ರುದ್ರಾಣಾಂ ಶಂಕರಶ್ಚಾಸ್ಮಿ । ವಿತ್ತೇಶೋ ಯಕ್ಷರಕ್ಷಸಾಮ್ ।**
**ವಸೂನಾಂ ಪಾವಕಶ್ಚಾಸ್ಮಿ । ಮೇರುಃ ಶಿಖರಿಣಾಮಹಮ್ ॥೨೩॥**

ರುದ್ರರಲ್ಲಿ ಶಂಕರನು ನಾನು. ಯಕ್ಷರಕ್ಷಸ್ಸರಲ್ಲಿ ಕುಬೇರನು ನಾನು. ಅಷ್ಟವಸುಗಳಲ್ಲಿ ಅಗ್ನಿಯು ನಾನು. ಪರ್ವತ ಶಿಖರಗಳಲ್ಲಿ ಮೇರುವು ನಾನು.

ಶಿಕ್ಷಕರಲ್ಲಿ ಶುಭವನ್ನುಂಟುಮಾಡುವ ಶಂಕರನು ನಾನು. ಶಂಕರನು ಪ್ರಳಯಕರ್ತನು ರುದ್ರಭೂಮಿ ನಾಯಕನು. ಯಾವುದಾದರೂ ಶಿಥಿಲವಾಗಿದ್ದರೆ, ಅದರ ಪುನರ್‌ವ್ಯವಸ್ಥೆಯಾಗಬೇಕಾದರೆ ಅದರ ನಾಶ ಅವಶ್ಯಕ. ಜೀರ್ಣವಾದ ವಸ್ತು ನಿರ್ಮೂಲವಾಗಿ ಹೊಸ ಚೇತನ ವಸ್ತು ಉದ್ಭವವಾಗಬೇಕು. ವಿಧಾಯ ಕಾರ್ಯವೆಷ್ಟು ಅವಶ್ಯಕವೋ, ವಿನಾಶ ಕಾರ್ಯವೂ ಅಷ್ಟೇ ಅವಶ್ಯಕ. ಬೆಳೆ ಬೆಳೆಯಬೇಕಾದರೆ ಕಳೆಕೀಳಬೇಕು. ಉಪಯೋಗವಿಲ್ಲದೆ ಜಡವಾಗುತ್ತಿರುವ ಜೀರ್ಣವಾದ ವಸ್ತುಗಳು, ನವ

ಜೀವಿಗಳಿಗೆಡೆ ಮಾಡಲು ನಾಶವಾಗಬೇಕು. ಆ ಲಯ ನಾಯಕರಲ್ಲಧಿಪತಿ ಶಂಕರ. ನಾಶಮಾಡುವುದು "ಶಂ"—ಶುಭವನ್ನು, ಸಂತೋಷವನ್ನು, ಕರ—ಮಾಡುವುದಕ್ಕಾಗಿ. ಸೃಷ್ಟಿ, ಸ್ಥಿತಿ, ಲಯಗಳಿಗೂ ಕಾರಣ ನಾದವನೇ ಪರಮಾತ್ಮ.

ಭೋಗ್ಯವಸ್ತು ಶೇಖರದಲ್ಲಿ, ರಕ್ಷಿಸಿ ಕಾಪಾಡಿಕೊಂಡಿರುವುದರಲ್ಲಿ ಕುಬೇರನು ವಿತ್ತೇಶ. ವಿತ್ತವನ್ನು ಸಂಪಾದಿಸುವುದು ಕಷ್ಟವಲ್ಲ. ಅದನ್ನು ಕಾಪಾಡಿ ಸದ್ವಿನಿಯೋಗಿಸುವುದು ಕಷ್ಟ. ವಿತ್ತ ಶೇಖರಣೆಯೇ ಸುಖವಲ್ಲ ಅದರ ವಿನಿಯೋಗ ವಿತರಣೆಯೇ ಸುಖ. ಅದಕ್ಕೆ ಹೆಸರಾಂತವ ಕುಬೇರ.

ಅಗ್ನಿಯು ಮಾನವನಿಗೂ, ಪಿತೃಗಳಿಗೂ, ದೇವತೆಗಳಿಗೂ ಮಧ್ಯಾವರ್ತಿ ಎಂದು ವೇದಗಳಲ್ಲಿನ ನಂಬಿಕೆ. ಅಗ್ನಿಗೆ ಹಾಕಿದ ಆಹುತಿ ಅವರವರಿಗೆ ತಲುಪಿಸುವವನೆಂದು ಹೇಳಿದ್ದಾರೆ. ಅಗ್ನಿಯಲ್ಲಿಯ ಉಷ್ಣಾಂಶದಿಂದಲೇ ಜೀವನಕ್ಕೆ ಎಷ್ಟೋ ಸಹಾಯವಿದೆ. ಅಗ್ನಿಯು ದೇವಸ್ವರೂಪನು ನಿಷ್ಪಕ್ಷಪಾತಿಯಾಗಿ, ಹತ್ತಿರಕ್ಕೆ ಬಂದವರಿಗೆ ಶಾಖ ಕೊಡುವನು. ದೂರದಲ್ಲಿದ್ದವರಿಗೆ ಅವನ ಪ್ರಭಾವ ಸಂಬಂಧವಿಲ್ಲ. ತಿಳಿದಾಗಲೀ, ತಿಳಿಯದೆಯಾಗಲೀ ಕೈ ಇಟ್ಟವರನ್ನು ಸುಡುವನು. ಹಾಕಿದುದನ್ನು ಪಚಿಸುವನು, ದಹಿಸುವನು. ಚೆನ್ನಾಗಿ ಶುದ್ಧಿಯಾಗಬೇಕಾದರೆ ಅಗ್ನಿಯಿಂದಲೇ. ಅದಕ್ಕೆ ಅಗ್ನಿ ಶುದ್ಧಿ ಎನ್ನುವರು. ಎಲ್ಲಾ ದುರ್ವಾಸನೆ, ದೋಷ, ಕಲ್ಮಷ ನಾಶಮಾಡುವನು. ಲೋಹಗಳು ಶುದ್ಧಿಯಾಗುವುದು ಅವನ ಪ್ರಭಾವದಿಂದ. ಆಂಜನೇಯನು ಲಂಕಾದಹನ ಮಾಡಿದ ಮರ್ಮವನ್ನು ಅಗ್ನಿ ಶುದ್ಧಿ ಎಂದು ಹೇಳುವರು. ಲಂಕೆಯು ಪಾಪ, ಪಾತಕ, ರಾಕ್ಷಸೀ ಕೃತ್ಯಗಳಿಂದ ಹೊಲಸಾಗಿ ಅಪವಿತ್ರವಾಗಿದ್ದಿತು; ಅದನ್ನು ದೇವಾವತಾರನಾದ ಶ್ರೀರಾಮನು ಪ್ರವೇಶಿಸಲು ಅರ್ಹವನ್ನಾಗಿ ಮಾಡಲು ಅಗ್ನಿ ಶುದ್ಧಿಯೇ ಅವಶ್ಯಕವಾಗಿದ್ದಿತು. ಆದುದರಿಂದ ಬುದ್ಧಿಮಾನ್ ಹನುಮನು ತನ್ನ ಪ್ರಭು ಬರಲು ಅದನ್ನು ಯೋಗ್ಯವಾಗಿ ಮಾಡಲು ಸಂಕೇತವಾಗಿ ಲಂಕೆಯನ್ನು "ಅಗ್ನಿ ಶುದ್ಧಿ" ಮಾಡಿದನು. ರಾತ್ರಿ ಶ್ರೀ ಸೀತಾದೇವಿಯರನ್ನು ಹುಡುಕುವುದರಲ್ಲಿ ಎಲ್ಲೆಡೆಯೂ ಹೊಕ್ಕು, ಆಂಜನೇಯನು ಆ ರಾಜಧಾನಿಯಾದ ಲಂಕಾಪುರಿಯ ಭವ್ಯ

ಭವನಗಳಲ್ಲಿನ ಅನಾಚಾರ, ಅತ್ಯಾಚಾರಗಳನ್ನೂ ಪಾಪಭೀರುಗಳ ನಡತೆ ಅನ್ಯಾಯಗಳನ್ನೂ ಸಾಕ್ಷಾತ್ ನೋಡಿ ಆಶ್ಚರ್ಯಪಟ್ಟಿರಬೇಕು. ಆ ಪಾಪನಗರವನ್ನು ಹೊಕ್ಕು ಸೀತಾ ಸಂರಕ್ಷಣೆಮಾಡಲು, ಶ್ರೀರಾಮರು ಬರಬೇಕಾದರೆ, ಮುನ್ನ ಅದನ್ನು ಅಗ್ನಿಯಿಂದ ಶುದ್ಧಿಮಾಡಿ ಅವರ ಬರುವಿಕೆಗೆ ಪವಿತ್ರವಾಗಿ ಮಾಡಲು, ಯೋಚಿಸಿ, ಹನುಮರು, ಬಾಲಕ್ಕೆ ಬೆಂಕಿ ಇಟ್ಟುದನ್ನೇ ನೆಪಮಾಡಿಕೊಂಡು ಲಂಕಾದಹನ ಮಾಡಿರಬೇಕು. ಇಂಥಾ ಅಗ್ನಿ ನಾನೇ.

ಪರ್ವತ ಶಿಖರರೋಹಣಗಳು ಅನೇಕವಾಗಿ ನಡೆಯುತ್ತಿರುವ ಈ ಕಾಲದಲ್ಲಿ, ಅವುಗಳ ಆಕರ್ಷಣೆಯು ಮಾನವನಿಗೆ ಹೇಗಿದೆ ಎಂದು ಹೇಳಬೇಕಾದುದೇ ಇಲ್ಲ. ಉನ್ನತ ಶಿಖರಗಳ ಸೊಬಗೇ ಸೊಬಗು. ಉನ್ನತಾಕಾಶಕ್ಕೆ ತಲೆ ಎತ್ತಿ ಮೆರೆಯುತ್ತಾ ಶೋಭಿಸುವುವು. ಬಹು ಬುದ್ಧಿಶಾಲಿಯಾದವರನ್ನು ಪರ್ವತಶಿಖರಕ್ಕೆ ಹೋಲಿಸುತ್ತಾರೆ. (Peak) ಅದರಲ್ಲಿ ಉನ್ನತವಾದ ಮೇರುವೇ ತಾನೆಂದು ಭಗವಂತ ಹೇಳಿದ್ದಾನೆ.

**ಪುರೋಧಸಾಂ ಚ ಮುಖ್ಯಂ ಮಾಂ । ವಿದ್ಧಿ ಪಾರ್ಥ ಬೃಹಸ್ಪತಿಮ್ ।**
**ಸೇನಾನೀನಾಮಹಂ ಸ್ಕಂದಃ । ಸರಸಾಮಸ್ಮಿ ಸಾಗರಃ ॥೨೪॥**

ಪುರೋಹಿತರಲ್ಲಿ ಮುಖ್ಯನಾದ ಬೃಹಸ್ಪತಿಯು ನಾನು. ಸೇನಾಪತಿಗಳಲ್ಲಿ ಸ್ಕಂದ (ಪಾರ್ವತೀ ಪರಮೇಶ್ವರರ ದ್ವಿತೀಯ ಪುತ್ರನಾದ ಕಾರ್ತಿಕೇಯ ಮಹಾಶೂರ) ನಾನು. ಜಲಾಶಯಗಳಲ್ಲಿ ಸಾಗರನು ನಾನು.

"ಪುರೋಹಿತ" ಎನ್ನುವ ಶಬ್ದ ಎಷ್ಟು ಅರ್ಥಗರ್ಭಿತವಾಗಿದೆ. ಶಾಸ್ತ್ರಪಂಡಿತನಾದ, ಜನಗಳಿಗೆ ಒಳ್ಳೆಯ ಕೆಟ್ಟ ಕಾರ್ಯಗಳಲ್ಲಿ ಮಾಡಬೇಕಾದ ವಿಧಿಗಳನ್ನು ಮಾಡಿಸುವ ಬ್ರಾಹ್ಮಣ ಗುರುವಿಗೆ ಪುರೋಹಿತನೆಂಬ ಹೆಸರು. ವ್ಯಕ್ತಿಗಳಿಗೇ ಅಲ್ಲ ಸಕಲರಿಗೂ, ಆ ಪಟ್ಟಣಕ್ಕೆ ಹಿತ ಬಯಸುವ ಗುರುವು.

ಈಗಿನ ದಕ್ಷಿಣೆಗಾಗಿ ಗಂಟೆ ಬಾರಿಸುವ ಪುರೋಹಿತರ ವಿಷಯ ಬೇಡಾ. ಸರಿಯಾದ ಹೇಳಬೇಕಾದ ಮಂತ್ರ ಹೇಳುತ್ತಾರೋ, ಅವರವನ್ನು

ಹೇಳುತ್ತಾರೋ, ಮಾಡುವವನಿಗೆ ಮಂತ್ರ ಗಂಧವೇ ಇಲ್ಲದ ಈ ಕಾಲದಲ್ಲಿ, ದಂಭಾಚಾರಕ್ಕಾಗಿ ವ್ರತನಿಯಮ ಪೂಜೆಗಳನ್ನು ಮಾಡುವ ಜನಗಳ ಮಧ್ಯೆ, ಏನು ಹೇಳಿದರೂ ಪರವಾಯಿಲ್ಲಾ. ಈ ಕಾಲದಲ್ಲಿ ಅವರನ್ನು ಕರೆಸುವುದೇ ಕಷ್ಟ. ಜನಸಮುದಾಯವೆಲ್ಲಾ, ಪೋಲೀಟಿಕ್ಸ್ಗೆ ಹೋಗಿ ಬಿಟ್ಟು, ದೇವರಿಗೂ ತಮಗೂ ಪೂಜೆ ವ್ರತಗಳಿಗೆ ಮಧ್ಯಸ್ತಿಕೆ ಯಾಕೆ ಬೇರೊಬ್ಬರೆಂದು ತಾವೇ ಮಂತ್ರವಿಲ್ಲದೆ ತಂತ್ರ ಪೂಜೆಯನ್ನೇ ಮಾಡಿಬಿಡು ವರು. ಇನ್ನು ಪುರೋಹಿತರಿಗೆ ದಕ್ಷಿಣೆ ದಂಡವೇಕೆ. ಪೂರ್ವದಲ್ಲಿ ಯಾವ ಶುಭ ಕಾರ್ಯವಾಗಲೀ, ಶ್ರಾದ್ಧವಾಗಲೀ ಪುರೋಹಿತರ ಮೂಲಕವೇ ಮಾಡಿ ಸುತ್ತಿದ್ದರು. ಅವರಿಗೆ ಕೊಟ್ಟ ಅಲ್ಪ ದಕ್ಷಿಣೆಯಲ್ಲಿ ತಮ್ಮನ್ನು ಆಶೀರ್ವದಿಸಿ ಅವರು ತಮ್ಮನ್ನು ಸನ್ಮಾರ್ಗಕ್ಕೆ ಬರಲೆಂದು ಹರಸುವರೆಂದು ಭಯಭಕ್ತಿ ಯಿಂದ ನಮಸ್ಕಾರ ಮಾಡುತ್ತಿದ್ದರು. ಗುರುಗಳೂ, ತಮ್ಮ ಆಶೀರ್ವಾದ ಲಭಿಸಲೆಂದು, ತಮ್ಮ ಸ್ಥಾನಕ್ಕೆ ತಕ್ಕಂತೆ ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾಡುತ್ತಾ, ತಪ, ಪೂಜೆ ಜಪಗಳಲ್ಲೇ ಕಾಲ ಹಾಕುತ್ತಿದ್ದರು. ಸರ್ವರ ಹಿತವನ್ನೂ ಬಯಸುತ್ತಿದ್ದರು. ಸರ್ವರ ಹಿತಕ್ಕಾಗಿ ತಪವನ್ನಾಚರಿಸು ತ್ತಿದ್ದರು. ಪಾಪಿ ಪರದೇಶಿಯಾದರೂ ಅವರಿಗೂ ಸದುಪದೇಶಮಾಡು ತಿದ್ದರು. ಎಲ್ಲರನ್ನೂ ಸಮನಾಗಿ ಕಾಣುತ್ತಾ ತಾವು ವಾಸಿಸುವ ಪುರಕ್ಕೇ ಹಿತ ಬಯಸುತ್ತಿದ್ದರಾದುದರಿಂದ ಅವರಿಗೆ "ಪುರೋಹಿತ"ರೆಂಬ ನಾಮ ಅನ್ವರ್ಥನಾಮವಾಗಿತ್ತು.

ಅಂಥಹ ಪುರೋಹಿತರ ಪೈಕಿ ಬೃಹಸ್ಪತಿಯು ಸಾಕ್ಷಾತ್ ದೇವತೆಗಳಿಗೇ ಗುರುವಾಗಿದ್ದನು. ಬೃಹಸ್ಪತಿಯೆಂದರೇ ಸರ್ವವನ್ನೂ ತಿಳಿದವನೆಂದು; ಈಗ "ಬಿಡೋ ಅವನು ಬೃಹಸ್ಪತಿ" ಎಂದು ವ್ಯಂಗವಾಗಿ ನುಡಿದರೆ– "ಏನೂ ತಿಳಿಯದವನು" ಎಂದರ್ಥವಷ್ಟೆ. ಸರ್ವಶಾಸ್ತ್ರ, ವಿಧಿನಿಯಮ ಗಳನ್ನರಿತಿದ್ದರು ಬೃಹಸ್ಪತಿಗಳು. ದೇವತೆಗಳೂ, ಅವರೊಡೆಯನಾದ ಇಂದ್ರನೂ, ಇವರನ್ನು ಆಚಾರ್ಯನೂ ಗುರುವೆಂದೂ ಸ್ವೀಕರಿಸಬೇಕಾದರೆ ಇವರ ವಿದ್ವತ್ತಿನ್ನೆಷ್ಟಿರಬೇಕು.

ಸೇನಾಧಿಪತಿಯ ಬುದ್ಧಿಯ ಮೇಲೆಯೇ ಸೈನಿಕರ ಜೀವನವೂ, ದಳದ ಜಯಾಪಜಯಗಳೂ, ನಿಂತಿವೆ. ಯುದ್ಧದ ಪ್ರಕೃತ ಸರ್ವವಿದ್ಯ

ಮಾನವೇ ಅಲ್ಲದೇ ಮುಂದಾಲೋಚನೆ ಆಗಬಹುದಾದ ಊಹಾಪೋಹಗಳ ಸಿಂಹಾವಲೋಕನಬೇಕು, ಸೇನಾಧಿಪತಿಗೆ; ಅವರುಗಳಲ್ಲಿ ಪರಮೇಶ್ವರ ಪಾರ್ವತೀ ಪುತ್ರನಾದ ಷಣ್ಮುಖನು ಅದ್ವಿತೀಯನು.

ಭೂಮಂಡಲದಲ್ಲಿ ಕೂಡಾ, ಭೂಭಾಗಕ್ಕಿಂತ, ಜಲಭಾಗವಾದ ಸಾಗರವೇ ಹೆಚ್ಚು ವಿಸ್ತೀರ್ಣವಾದುದು. ಎಲ್ಲಾ ಜಲಕ್ಕೂ ಆಶ್ರಯ. "ನದೀನಾಂ ಸಾಗರೋಗತಿಃ" ಎನ್ನುವಂತೆ ನೀರು ಭೂಭಾಗದಲ್ಲೆಲ್ಲಿ ಬಿದ್ದರೂ ಕೂಡಾ ಅದಕ್ಕೆ ಗತಿ, ಆಶ್ರಯಸ್ಥಾನ ಸಾಗರವೇ. ಸಾಗರದಲ್ಲಿ ಅಸಂಖ್ಯಾತಜೀವಿಗಳೂ, ರತ್ನಗಳೂ ತುಂಬಿವೆ. ಸಾಗರವನ್ನು ಪೂರ್ಣ ಚಂದ್ರ ಕೂಡಾ ಆಕರ್ಷಿಸುವನು. ಅಲೆಗಳಿಂದ ಅಲ್ಲೋಲಕಲ್ಲೋಲವಾದ ಎಲ್ಲೆ ಇಲ್ಲದ ಸಾಗರ ದೃಶ್ಯವೇ ಸುಂದರ. ಅದೂ ಭಗವಂತನ ಒಂದು ಸ್ವರೂಪವೇ.

**ಮಹರ್ಷೀಣಾಂ ಭೃಗುರಹಂ । ಗಿರಾಮಸ್ಮ್ಯೇಕಮಕ್ಷರವ್ ।**
**ಯಜ್ಞಾನಾಂ ಜಪಯಜ್ಞೋಽಸ್ಮಿ । ಸ್ಥಾವರಾಣಾಂ ಹಿಮಾಲಯಃ ॥೨೫॥**

ಮಹರ್ಷಿಗಳಲ್ಲಿ ಭೃಗು ನಾನು. ವಾಣಿಗಳಲ್ಲಿ ಏಕಾಕ್ಷರ "ಓಂ" ಕಾರ ನಾನು. ಯಜ್ಞಗಳಲ್ಲಿ ಜಪ ನಾನು. ಸ್ಥಿರವಸ್ತುಗಳಲ್ಲಿ ಹಿಮಾಲಯವು ನಾನು.

ಋಷಿಗಳಲ್ಲಿ ದೇವರ್ಷಿಗಳು ರಾಜರ್ಷಿಗಳು ಮಹರ್ಷಿಗಳೆಂದು ಹೇಳುವರು. ಮಹಿಯಲ್ಲಿರುವ, ಮಹತ್ತಾದ ತಪೋಪ್ರಭೆಯುಳ್ಳ ಭೂಲೋಕದ ಋಷಿಗಳು ಮಹರ್ಷಿಗಳು. ಅವರಲ್ಲಿ ಭೃಗುಋಷಿಗಳು ಅತ್ಯಂತ ಶ್ರೇಷ್ಠರು.

ವಾಕ್, ವಾಣಿ, ಶಬ್ದಗಳಲ್ಲಿ "ಓಂ" ಪ್ರಥಮವು. ಇದು ವಿಶ್ವವನ್ನೇ ಆವರಿಸಿರುವ ಶಬ್ದ ಬ್ರಹ್ಮ. ಉಪನಿಷತ್ತುಗಳಲ್ಲೆಲ್ಲಾ "ಓಂ" ಪ್ರತಿಪಾದಿತವಾಗಿದೆ. ತೈತ್ತರೀಯ, ಶಿಕ್ಷಾವಲ್ಲಿಯಲ್ಲಿ "ಓಮಿತಿ ಬ್ರಹ್ಮ, ಓಮಿದಂಗ್ ಸರ್ವಂ" ಎಂದು ಮುಂದಕ್ಕೆ "ಓಂ" ಎಂದು ಸಾಮಗಾನ ಮಾಡುತ್ತದೆ, ಓಂ ಎಂದು ಶಾಸ್ತ್ರಗಳು ಘೋಷಿಸುತ್ತದೆ, "ಓಂ" ಎಂದು ಅಗ್ನಿ ಹೋತ್ರಿಗಳೂ, ಬ್ರಾಹ್ಮಣರೂ ಪ್ರಾರ್ಥಿಸುತ್ತಾರೆಂದು "ಓಂ"

ಸರ್ವವ್ಯಾಪಕತ್ವವನ್ನು ಲ್ಲೇಖಿಸಿದೆ. ನಮ್ಮಲ್ಲಿ ಈಗಲೂ ಶ್ರೀ "ಓಂ" ನಾಮ ಎಂದೇ ಅಕ್ಷರಾಭ್ಯಾಸ ಶುರುಮಾಡುತ್ತಾರೆ. "ಓಂ" ಎಂದು ನಿಶಬ್ದ ನಿರ್ಮಲ, ನಿರಾಕಾಶದಲ್ಲಿ ಶಬ್ದ ಹೊರಡುತ್ತದೆ. "ಓಂ" ಎನ್ನುವುದು ಯೋಗಧ್ಯಾನದ ಉಸಿರು.

ಯಜ್ಞಗಳಲ್ಲಿ ಬಾಹಿರ್‌ಯಜ್ಞಗಳಿಗಿಂತ, ಗುಪ್ತವಾಗಿ ಮಾಡುವ ಅಂತರ್‌ಯಜ್ಞ "ಜಪ" ಧ್ಯಾನವೇ ಶ್ರೇಷ್ಠವಾದುದು. "ಪ್ರಕಟೋ ಭ್ರಷ್ಟಃ ಗುಪ್ತೋ ಮುಕ್ತಃ" ಎನ್ನುವಂತೆ, ಆಡಂಬರ ಹಾರಾಟಗಳಿಲ್ಲದೇ, ಗುಪ್ತವಾಗಿ ಧ್ಯಾನ ಮಾಡುವವನು ಮುಕ್ತನಾಗುವುದರಿಂದ "ಜಪ" ಅತಿ ಶ್ರೇಷ್ಠವಾದುದು. ಎಷ್ಟೋ ಮಹನೀಯರುಗಳು, ತಾವೇನೇ ಮಾಡುತ್ತಿದ್ದರೂ, ಜಪಮಾಲೆಯ ಮೇಲೆ ಕೈಯಾಡಿಸುತ್ತಾ, ದೇವಧ್ಯಾನ ಮಾಡುತ್ತಿರುವವರು, ಮೌನವಾಗಿ.

ಸೃಷ್ಟಿಯಲ್ಲಿ ಸ್ಥಾವರ, ಜಂಗಮಗಳೆಂದು ಎರಡು ಭಾಗವಿದೆ. ಚಲಿಸದೇ ಇದ್ದ ಕಡೆಯೇ ಇರುವ ಸೃಷ್ಟಿ ವಸ್ತು–ಸ್ಥಾವರ. ಅವುಗಳಲ್ಲಿ ಹಿಮಾಲಯವು ನಾನು. ಕಾಳಿದಾಸ ಮಹಾಕವಿಯು ಹಿಮಾಲಯ ವನ್ನು, ಪೃಥ್ವಿಯನ್ನು ಅಳೆಯುವ ಕೋಲೋ ಎಂಬಂತೆ ಕಾಶ್ಮೀರದಿಂದ, ಬ್ರಹ್ಮದೇಶದವರೆವಿಗೂ ಪಸರಿಸಿ ಮೆರೆಯುತ್ತಿದೆ ಎಂದು ವರ್ಣಿಸಿರು ವನು. ಇದು ಹಿಮಾಚಲ, ಹಿಮವು ಶುಭ್ರತ್ವವನ್ನು ತೋರುವ ಅಚ್ಚ ಬಿಳಿವರ್ಣ ಹೊಂದಿ ಪ್ರಕಾಶಿಸುವುದು; ಹಿಮವು ತಂಪು–ಶೀಕರ. ಈ ಎರಡನ್ನೂ ಹೊಂದಿ, ಶುಭ್ರನಾಗಿ ತಂಪಿನಿಂದ ಅಗಾಧವಾಗಿ ಪ್ರಕಾಶಿಸು ವನು ಹಿಮವತ್ಪರ್ವತ. ಈ ಹಿಮದಿಂದ ಉನ್ನತವಾದ ಪರ್ವತ ಶ್ರೇಣಿ ಗಳಿಂದಲೇ ಜೀವಾಧಾರವಾದ ಜೀವನ ನದಿಗಳಲ್ಲಿ ಶ್ರೇಷ್ಠವಾದ, ಸಿಂಧು (ಪಂಚ ಆಪ್) ಗಂಗಾ (ಯಮುನಾ ಸಹಿತ) ಬ್ರಹ್ಮಪುತ್ರಾ ಐರಾವತಿ ನದಿಗಳಾದಿಯಾಗಿ ಉತ್ಪತ್ತಿಯಾಗಿ, ಭರತಖಂಡ ಬ್ರಹ್ಮದೇಶವನ್ನು ಪಾಲಿಸುತ್ತಿವೆ. ಇಂಥಾ ಉಪಕಾರ ನದಿ ಮೂಲಸ್ಥಾನವಾದುದೇ ಹಿಮಾಚಲ ಪರ್ವತ. ಅದರಲ್ಲೇ ಮಹರ್ಷಿಗಳೂ, ಗೌರೀ ಶಂಕರರೂ ವಾಸವೆಂದು ನಂಬಿದ್ದಾರೆ. ಅಚಲ, ಪರ್ವತ. ಸ್ಥಿರವಸ್ತು ಗಳಲ್ಲಿ ಸ್ಥಿರ, ಮಹದ್ವಸ್ತುಗಳಲ್ಲಿ ಮಹತ್ತಾದುದು. ಏನಾದರೂ ಕದಲದೆ

ಯಿರುವುದು. ಈ "ಅಚಲ"ವು "ಕೂಟಸ್ಥ"ನ ಒಂದು ಗುಣ. ನಮ್ಮಲ್ಲಿರುವ ಅಚಲ ಪರಮಾತ್ಮ ವಸ್ತುವನ್ನು ಕೂಟಸ್ಥನೆನ್ನುವರು. ಏನೇ ಬಂದರೂ ಅದಕ್ಕೆ ವಿಕಾರವಿಲ್ಲ. ಅಂತೆಯೇ ವಿಕಾರಹೀನವಾದ ಪರ್ವತ ರಾಜ ; ಹಿಮಾಲಯು ಪ್ರತ್ಯಕ್ಷ ಕೂಟಸ್ಥ.

**ಅಶ್ವತ್ಥಃ ಸರ್ವವೃಕ್ಷಾಣಾಂ । ದೇವರ್ಷೀಣಾಂ ಚ ನಾರದಃ ।**
**ಗಂಧರ್ವಾಣಾಂ ಚಿತ್ರರಥಃ । ಸಿದ್ಧಾನಾಂ ಕಪಿಲೋ ಮುನಿಃ ॥೨೬॥**

ಸರ್ವ ವೃಕ್ಷಗಳಲ್ಲಿ ಅಶ್ವತ್ಥವೂ, ದೇವರ್ಷಿಗಳಲ್ಲಿ ನಾರದನೂ, ಗಂಧರ್ವರಲ್ಲಿ ಚಿತ್ರರಥನೂ, ಸಿದ್ಧರಲ್ಲಿ ಕಪಿಲ ಮುನಿಯೂ ನಾನಾಗಿರುವೆನು.

ಪರ್ವತಗಳಲ್ಲಿ ಶಾಶ್ವತವಾದುದು ಹಿಮಾಲಯವೆಂತೊ, ವೃಕ್ಷಗಳಲ್ಲಿ ಅಶ್ವತ್ಥವು ಸನಾತನವೂ, ಶಾಶ್ವತವಾದ ವೃಕ್ಷ. ನರರ ಜೀವ ಪ್ರಮಾಣ ಆಳತೆಯಿಂದ ಅಶ್ವತ್ಥ ವೃಕ್ಷದ ಜೀವ ಪ್ರಮಾಣ ಜಾಸ್ತಿ. ಇದನ್ನು ಬಹಳ ಪವಿತ್ರವಾದ ವೃಕ್ಷವೆಂದೂ, ದೇವರೆಂದೂ ಪೂಜಿಸುವರು. ಅಶ್ವತ್ಥವು ಸೃಷ್ಟಿ, ಜೀವಗಳಿಗೆ ಹೋಲಿಸಿ ಎಷ್ಟೋ ಪುರಾಣ, ಶಾಸ್ತ್ರಗಳಲ್ಲಿ ಚಿತ್ರಗಳಿರುವುವು. ಇದರ ಸಣ್ಣ ಶಾಖೆಗಳನ್ನು ಸಮಿತ್ತಿಗಾಗಿ ಉಪಯೋಗಿಸುವವರು. ಅನೇಕ ಫಲವ್ರತಗಳಿಗಾಗಿ ಅಶ್ವತ್ಥ ಪ್ರದಕ್ಷಿಣೆ, ಪೂಜೆಗಳನ್ನಾಚರಿಸುವರು. ಸಂತಾನಕ್ಕಾಗಿ ಕುಲಸ್ತ್ರೀಯರು ಅಶ್ವತ್ಥ ಪ್ರದಕ್ಷಿಣೆ ಮಾಡುವರು. ಇದರಡಿ, ರುಂಡದ ಪಕ್ಕದಲ್ಲಿ ನಾಗರ ಪ್ರತಿಷ್ಠೆಯನ್ನು ಮಾಡುವರು. ಇಂಥಾ ಪವಿತ್ರ ವೃಕ್ಷ ನಾನು.

ದೇವರ್ಷಿಗಳಲ್ಲಿ ನಾರದನು ನಾನು. ದೇವಲೋಕದಲ್ಲಿ ದೇವತೆಗಳ ಹಿತ ಬಯಸುವ ಋಷಿ ತಪಸ್ವಿಗಳಲ್ಲಿ ನಾರದರು ಶ್ರೇಷ್ಠರು. ನಾಟಕ, ಹರಿಕಥೆಗಳಲ್ಲಿ ಚಿತ್ರಿಸುವಂತೆ ನಾರದರು ಕಲಹಪ್ರಿಯರಲ್ಲಾ. ಯಾವದೊಂದು ಪಿತೂರಿ ನಡೆಯಬೇಕಾದರೂ ಸೂತ್ರಧಾರಿಗಳಲ್ಲಾ ಮತ್ತೂ ಇಲ್ಲದ ಸಲ್ಲದ ಕುಚೋದ್ಯಮಾಡಿಕೊಂಡು, ಪೈಶುನ್ಯಕ್ಕೆ ಕಾರಣಗಾರರೂ ಅಲ್ಲಾ. ನಾರದರು ಶ್ರೇಷ್ಠ ಭಗವದ್ಭಕ್ತರು. ಸದಾ ಭಗವನ್ನಾಮ ಸಂಕೀರ್ತನದಲ್ಲಿ ನಿರತರು. ಯಾವಾಗಲೂ ಭಗವದ್ ಲೀಲೆಗಳಲ್ಲಿ ವ್ಯವಹರಿಸತಕ್ಕವರು. ಅಸಿತ, ನಾರದರೇ ಮೊದಲಾದವರು ನಿನ್ನ

ಮಹಿಮೆಯನ್ನು (ಅ ೧೦, ಶ್ಲೋ ೧೩) ಹೊಗಳಿರುವರು ಎಂದು ಹಿಂದೆ ಇದೇ ಅಧ್ಯಾಯದಲ್ಲಿ ಅರ್ಜುನನೇ ಹೇಳಿಲ್ಲವೇ? ಸದಾ ಭಗವನ್ನಾಮ ಗಾನಮಾಡುತ್ತಾ, ದೇವಲೋಕ ಭೂಲೋಕಗಳಲ್ಲಿ ಭಗವದ್ಭಕ್ತಿ ಬಿತ್ತುತ್ತಾ ತಿರುಗುತ್ತಿರುವರು. ಸಂಗೀತದಲ್ಲಿ ನಿಪುಣರು, ಶಾಸ್ತ್ರದಲ್ಲಿ ವಿದ್ವಾಂಸರು, ವಿದುಷಿಗಳಲ್ಲಿ ಶ್ರೇಷ್ಠರು. ತತ್ವವನ್ನೂ, ಸತ್ಯವನ್ನು ಹುಡುಕಿ, ಹುಡುಕಿ ತಿರುಗುವರು. ನಾರದ ಸನತ್ಕುಮಾರ ಸಂಭಾಷಣೆಯು ಛಾಂದೋಗ್ಯೋಪನಿಷತ್ತಿನ ಭಾಗ ದಿವ್ಯವಾಗಿದೆ. ಅಷ್ಟು ವಿದ್ಯಾವಂತರಾದರೂ, ವಿನಯ ಸಂಪನ್ನರು. ವಿನಯದಿಂದ, "ಎಷ್ಟು ಓದಿ ಸಕಲಪಾರಂಗತರಾದರೂ, ಇನ್ನು ತಮಗೆ, ಮನಃ ಕಷಾಯ ಹೋಗಿಲ್ಲವೆಂದೂ, ಅದು ಹೋಗಿ ಶಾಂತಿ ಪಡೆಯುವ ಬಗೆ ಹೇಗೆ" ಎಂದು ಸನತ್ಕುಮಾರರಲ್ಲಿ ವಿಜ್ಞಾಪಿಸಿಕೊಂಡು, "ಭೂಮಾತ್ಸುಖಂ ನಾ ಅಲ್ಪೇಸುಖಂ" ಮಹತ್ತಿನಲ್ಲಿ ಸುಖವುಂಟು, ಅಲ್ಪದರಲ್ಲಿಲ್ಲಾ ಎಂದೂ "ಆಹಾರ ಶುದ್ಧೌ ಸತ್ತ್ವಶುದ್ಧಿಃ"— ಶುದ್ಧಾಹಾರ ನಿಯಮದಿಂದ ಸತ್ವಶುದ್ಧಿಯಾಗುವುದೆಂದೂ ಮಹಾತತ್ವಗಳನ್ನು ನಮಗೆಲ್ಲಾ ಸಂಪಾದಿಸಿ ಕೊಟ್ಟಿರುವ ಮಹನೀಯರು. ಇವರನ್ನು ಕಂಡರೆ ಶ್ರೀಕೃಷ್ಣನಿಗೆ ಪ್ರಾಣ. ಶ್ರೀಕೃಷ್ಣನ ಲೀಲೆಗಳಲ್ಲೂ, ಭಾಮೆ, ರಾಧಾ ಪ್ರಣಯಗಳಲ್ಲೂ ಈತನ ಪಾತ್ರ ಇಲ್ಲದೆಯೇ ಇಲ್ಲ. ಇವರೊಡನೆ ಕುಚೋದ್ಯ ನಡೆಸುವನು, ಇವರು ಏನು ಕುಚೋದ್ಯಮಾಡಿದರೂ ಆನಂದ. ಇಂತಹ ಸರಳ ಸ್ನೇಹವನ್ನು ಭಗವಂತನಲ್ಲಿ ಗಳಿಸಬೇಕಾದರೇ ಅವರು ಎಷ್ಟು ಸಂಪನ್ನರೆನ್ನುವುದು ವೇದ್ಯವಾಗುತ್ತದೆ. ಆದರೂ ಅಷ್ಟು ಸಲಿಗೆಯಿಂದ ಭಗವಂತನಲ್ಲಿ ವರ್ತಿಸಿದರೂ, ಅವರ ಅಚಲ ಭಕ್ತಿಗೆ ಎಳ್ಳಿನಷ್ಟೂ ಚ್ಯುತಿಯಿಲ್ಲಾ. ಶ್ರೀಕೃಷ್ಣನಲ್ಲಿನ ಗೌರವಕ್ಕೆ ಕೊಂಚವೂ ಕಮ್ಮಿಯಿಲ್ಲಾ. ಇವರು ಭಗವಂತನ ಅವತಾರಕ್ಕೆ ಕಾರಣರೂ ಹೌದು. ಅದರಿಂದಲೇ ಭಗವಂತನು ನಾರದರು ತಾನೇ ಎನ್ನುವನು.

ಗಂಧರ್ವರಲ್ಲಿ ಚಿತ್ರರಥನು ಬಹಳ ಪ್ರಸಿದ್ಧನು. ಸ್ವಾಮಿ ಬೇರೆ ಹೇಳಬೇಕೆ. ಪಾರ್ಥನ ರಥದಲ್ಲಿ ಸಾರಥಿಯಾಗಿ ಚಾತುರ್ಯದಿಂದ ರಥ ನಡೆಸಿದ ಮೇಲೆ ಸ್ವಾಮಿಯೇ ಚಿತ್ರರಥನೆಂದು ತಿಳಿಯುವುದಿಲ್ಲವೇ. ಅತಿರಥ, ಮಹಾರಥರೆಲ್ಲರೂ ಇವನೆದುರಲ್ಲಿ!

ಮುನಿಗಳಲ್ಲಿ ಸಾಧುಗಳೂ, ಸಿದ್ಧರೂ ಉಂಟು. ಸಾಧನೆಯನ್ನು ಮಾಡುತ್ತಾ ಮೌನದಿಂದಿರುವ ತಪಸ್ವಿಗಳಿರುವರು, ತಪವೆಲ್ಲಾ ಸಿದ್ಧಿಸಿರುವ ಮುನಿಗಳಲ್ಲಿ ಕಪಿಲರು ಬಹು ತೇಜಸ್ವಿಗಳು. ಅವರೇ ತಾನೆಂದನು ಮಹಾತ್ಮ. ಮಹಾತ್ಮರುಗಳೆಲ್ಲಾ ಮಹಾತ್ಮನಲ್ಲವೇ, ಭಗವಾನ್.

**ಉಚ್ಚೈಃಶ್ರವಸಮಶ್ವಾನಾಂ । ವಿದ್ಧಿ ಮಾಮಮೃತೋದ್ಭವಮ್ ।**
**ಐರಾವತಂ ಗಜೇಂದ್ರಾಣಾಂ । ನರಾಣಾಂ ಚ ನರಾಧಿಪಮ್ ॥೨೭॥**

ಅಶ್ವಗಳಲ್ಲಿ, ಉಚ್ಚೈಃ ಶ್ರವ ನಾನು. ಗಜೇಂದ್ರರಲ್ಲಿ ಐರಾವತವು ನರರಲ್ಲಿ ನರಾಧಿಪ (ರಾಜ) ನಾನು.

ಪರಮಾತ್ಮ ಹೀಗೆ ಸೃಷ್ಟಿಯನ್ನೆಲ್ಲಾ ಸಿಂಹಾವಲೋಕನ ಮಾಡುತ್ತಾನೆ. ದೇವತೆಗಳು, ಗಂಧರ್ವರು, ಸಿದ್ಧರು, ಋಷಿಗಳೂ ಹೇಳುತ್ತಾ ಬಿಡದೆ ಸ್ಥಾವರ ಜಂಗಮ ಸೃಷ್ಟಿಯನ್ನೆಲ್ಲಾ ಪ್ರಸ್ತಾಪಿಸಿದ್ದಾನೆ. ಪರ್ವತ, ವೃಕ್ಷ, ಜೀವ ಜಂತುಗಳ ಪ್ರತಿನಿಧಿಗಳನ್ನೆಲ್ಲಾ ತಂದಿದ್ದಾನೆ. ಅಲ್ಲದೇ ವಿದ್ಯೆಗಳನ್ನೂ ಅಕ್ಷರಗಳನ್ನೂ, ನಾಗ ಜಲಜಂತುಗಳು, ಮೃಗ ಪಕ್ಷಿಗಳೂ ಎಲ್ಲವನ್ನೂ ಮುಂದೆ ತರುತ್ತಾನೆ. ಸೃಷ್ಟಿ ನಡೆಸುವ ವ್ಯವಸಾಯ, ದ್ಯೂತ, ದಂಡ, ನೀತಿ, ಎಲ್ಲವನ್ನೂ ತರುವನು. ಸಕಲ ಚರಾಚರ ವಸ್ತುಗಳಲ್ಲೂ, ಸಕಲ ವಿದ್ಯೆಗಳಲ್ಲೂ, ಸಕಲ ವ್ಯಾಪಾರಗಳಲ್ಲೂ ಸರ್ವಶ್ರೇಷ್ಟನಾಗಿ ತಾನಿರುವೆನೆಂದು ಪರಮಾತ್ಮ ಘೋಷಿಸಿದ್ದಾನೆ.

ಮಾನವನಿಗೆ ಉಪಯುಕ್ತವಾಗಿ, ಸೃಷ್ಟಿಯ ಆದಿಯಿಂದಲೂ ಮನುಷ್ಯನ ವಾಹನವಾಗಿ ಪರಿಗ್ರಹಿಸಲ್ಪಟ್ಟಿರುವ ಪ್ರಾಣಿ ಅಶ್ವ. ವಾಹನವೆಂದರೆ, ರಥಚಲನವೆಂದರೆ ಅಶ್ವವೇ. ಯುದ್ಧ, ಶಾಂತಿ ಸಮಯಗಳಲ್ಲಿ ಮಾನವನ ಗೆಳೆಯ. ಒಳ್ಳೇ ಸುಂದರ ಗಾಂಭೀರ್ಯದ ಪ್ರಾಣಿ. ಕ್ಷೀರ ಸಮುದ್ರ ಮಥನ ಕಾಲದಲ್ಲಿ, ಅಮೃತದೊಂದಿಗೆ ಈ ಉಚ್ಚೈಃ ಶ್ರವ ಉದಿಯಿಸಿತೆಂದು ನಮ್ಮ ಕಲ್ಪನೆ. ಪಟ್ಟದ ಕುದುರೆಯಂತೆ ಅಚ್ಚ ಬಿಳುಪಾದ ಸರ್ವಲಕ್ಷಣ, ಸಂಪತ್ತುಗಳಿಂದ ಕೂಡಿದ ದಿವ್ಯಾಶ್ವ. ಸಮುದ್ರ ಮಥನ ಕಾಲದಲ್ಲಿ "ಕಾಲಕೋಟಿ ವಿಷ"ವೂ ಹುಟ್ಟಿದರೂ, ಹೆಚ್ಚಿನ ಮಹಿಮೆಯ, ಸಂಪದ್ಯುಕ್ತವಾದ "ಶ್ರೀ"ಯೇ ಮೊದಲಾಗಿ ಇನ್ನೂ

ಅನೇಕ ದಿವ್ಯವಸ್ತುಗಳೂ ಹುಟ್ಟಿದವು. ಎಲ್ಲವೂ ಮಹಾ ಮಹಿಮನ ಅಂಶವೇ.

ಗಜೇಂದ್ರರಲ್ಲಿ ಐರಾವತವು ನಾನೇ. ಗಂಡಾನೆಗಳ ಪೈಕಿ ಒಳ್ಳೇ ಬೆಳೆದ ದಂತವುಳ್ಳ (ಕೊಂಬು) ಸಲಗವನ್ನು ನೋಡಬೇಕು, ಅದರಲ್ಲೂ ಅವು ಮಂದೆಯ ಮಧ್ಯೆ ಕಾಡಿನಲ್ಲಿ ರಾಜಿಸುವುದನ್ನು. ಅವರಲ್ಲೂ ಇಂದ್ರನ ಹತ್ತಿರವಿರುವ ಈ "ಐರಾವತ"ವನ್ನು ಕೇಳಬೇಕೇ.

ನರರಲ್ಲಿ ನರಾಧಿಪನು ನಾನು. ಅಧಿಪ ಅಂದರೆ ಒಡೆಯ. ಒಡೆತನ ಪಡೆದು ಅಧಿಪನಾಗಬೇಕಾದರೆ ಶಕ್ತಿ ಸಾಧನಗಳು ಬೇಕು. ಆನೆಯ ಹಿಂಡಿಗೆ ಸಲಗನೆಂತೋ ಅಂತು ನರರನ್ನು ರಕ್ಷಿಸುವವಗೆ, ಮುಖಂಡನಾಗ ಬೇಕಾದರೆ ನರಾಧಿಪನಿಗೂ ಭಗವದಂಶಬೇಕು. "ನಾವಿಷ್ಣುಃ ಪೃಥಿವೀ ಪತಿಃ" ಎಂಬ ನುಡಿಯಂತೆ, ವಿಷ್ಣುವಿನಂಶವಿಲ್ಲದೆ ನರಾಧಿಪನಾಗುವುದಿಲ್ಲ. ಇಲ್ಲಿ ರಾಜನೆಂದು ಹೇಳಿಲ್ಲಾ. ಭಗವಂತನ ಯುಕ್ತಿಯನ್ನಾದರೂ ನೋಡಿ. "ನರಾಧಿಪಂ" ಎಂದ. ರಾಜನಾದರೂ ಆಗಬಹುದು, ಅಧ್ಯಕ್ಷನಾದರೂ ಆಗಬಹುದು, ಅಮಾತ್ಯನಾದರೂ ಆಗಬಹುದು "ನರಾಧಿಪ"ನೇ. ನರರಮೇಲೆ ಆಧಿಪತ್ಯವನ್ನು ಸ್ಥಾಪಿಸಬೇಕಾದರೆ ದೈವಾಂಶಬೇಕು. ಇಲ್ಲವಾದರೆ ಜನ ಸಾಮಾನ್ಯವು ಅವರಿಗೆ ಅಗ್ರಸ್ಥಾನ ಕೊಡುವುದಿಲ್ಲಾ. ಪೂರ್ವಕಾಲದಲ್ಲಂತೂ ರಾಜರೆಂದರೆ ಗೌರವ ಮರ್ಯಾದೆ ಗಳಿದ್ದವು. ಈ ನಮ್ಮ ಭರತಖಂಡದಲ್ಲೂ, ಈಗಿನ ಕಾಲದಲ್ಲಿ ರಾಜ ರೆಂದರೆ ಗೌರವವಿಲ್ಲವಾಗಿದೆ. ರಾಜತ್ವವನ್ನು ವಂಶಪರಂಪರೆ ಒಪ್ಪುವು ದಿಲ್ಲಾ. ರಾಜತ್ವವನ್ನು ವ್ಯಕ್ತಿತಃ ಸಂಪಾದಿಸಬೇಕಾಗಿದೆ. ಆದರೂ ರಾಜ ರನ್ನು ಇನ್ನೂ ಪೂರ್ತಿ ಪರಿತ್ಯಜಿಸಿಲ್ಲಾ. ಪೂರ್ವಕಾಲದಲ್ಲಿ ವಿಷ್ಣುವಿ ನಂಶವನ್ನು ಕಾಪಾಡಿಕೊಂಡುಬರಲು ರಾಜರು ಪ್ರಯತ್ನಿಸುತ್ತಿದ್ದರು. ಈಗಲೂ ಕೆಲವರು ಆದರ್ಶಪ್ರಾಯರಾಗಿದ್ದರೂ, ಹೆಚ್ಚುಮಂದಿ ರಾಜರು, ರಾಜ್ಯದ, ಪ್ರಜೆಗಳ ಪರಿಪಾಲನಾಕಾಂಕ್ಷೆಯನ್ನು ಬಿಟ್ಟು, ಕೇವಲ ಸುಖಲೋಲಪ್ತರಾಗಿ ವಿದೇಶಗಳಲ್ಲಿ ಕ್ರೀಡೆ, ರತಿಗಳಲ್ಲಿ ಆಸಕ್ತರಾಗಿ ಕಾಲಹಾಕುವಾಗ ವಿಷ್ಣುವಿನಂಶ ಹೇಗೆ ಉಳಿದೀತು. ಯೋಗ್ಯತೆ ಹೆಚ್ಚು

ಪಡೆದಿದ್ದಷ್ಟು ಉಳಿಸಿಕೊಳ್ಳಲು ಹೆಚ್ಚು ಶ್ರಮ ಅದನ್ನು ಗಮನಿಸಿಯೇ ನಡೆಯಬೇಕು.

**ಆಯುಧಾನಾಮಹಂ ವಜ್ರಂ । ಧೇನೂನಾಮಸ್ಮಿ ಕಾಮಧುಕ್ ।**
**ಪ್ರಜನಶ್ಚಾಸ್ಮಿ ಕಂದರ್ಪಃ । ಸರ್ಪಾಣಾಮಸ್ಮಿ ವಾಸುಕಿಃ ॥೨೮॥**

ಆಯುಧಗಳಲ್ಲಿ ವಜ್ರಾಯುಧವೂ, ಗೋವುಗಳಲ್ಲಿ ಕಾಮಧೇನುವೂ, ಪ್ರಜೋತ್ಪತ್ತಿಗೆ ಕಾರಣನಾದ ಕಾಮದೇವನೂ, ಸರ್ಪಗಳಲ್ಲಿ, ವಾಸುಕಿಯೂ ನಾನು.

ಇಂದ್ರನಲ್ಲಿರುವ ಆಯುಧಕ್ಕೆ ವಜ್ರಾಯುಧವೆಂದು ಹೆಸರು. ಯಾವುದು ಶ್ರೇಷ್ಠವಾಗಿಯೂ, ಗುರುತರವಾಗಿಯೂ, ಬೇಧಿಸಲಬೇಧ್ಯವಾಗಿಯೂ ಇರುವುದೋ ಅದೇ ವಜ್ರಾಯುಧ-ಅಂತಿರುವ ಕವಚವನ್ನು ವಜ್ರಕವಚ ವೆನ್ನುವಂತೆ. ಭೀಮನಿಗೆ ಗದೆಯೂ, ಅರ್ಜುನನಿಗೆ ಧನುಸ್ಸೂ ಇರುವಂತೆ ಇಂದ್ರನಿಗೆ ವಜ್ರಾಯುಧ. ಪೂರ್ವದಲ್ಲಿ ಆಯುಧವೂ ಧರ್ಮಸಂಸ್ಥೆಗೆ ಸೇರಿತ್ತು. ಅದನ್ನು ದುಷ್ಟನಿಗ್ರಹಕ್ಕೂ, ಆಶ್ರಿತರ ರಕ್ಷಣೆಗೆ ಮಾತ್ರ ಉಪಯೋಗಿಸುತ್ತಿದ್ದರು. ಆಯುಧಗಳನ್ನು ವಿನೋದಕ್ಕೂ, ಪ್ರಾಣಿ ಹಿಂಸೆಗಳಿಗೂ ಉಪಯೋಗಿಸುತ್ತಿರಲಿಲ್ಲ. ರಾಜಧರ್ಮವಾದ ಬೇಟೆ, ದುಷ್ಟಪ್ರಾಣಿಗಳ ಶಿಕಾರಿಯಲ್ಲಿ ಕೂಡಾ ಒಂದು ನೀತಿಯಿತ್ತು. ವಿವೇಚನೆ ಯಿಲ್ಲದೆ ಎಲ್ಲಾ ಪ್ರಾಣಿಗಳನ್ನೂ ಸಾಧುಪ್ರಾಣಿಗಳನ್ನೂ ಶಿಕಾರಿ ಮಾಡುತ್ತಿರಲಿಲ್ಲ. ವ್ಯಾಧರು ಕೂಡಾ ಕೇವಲ ಅವರ ಪ್ರಾಣಧಾರಣಾಧಾರಕ್ಕೆ ಮಾತ್ರ ಆಯುಧಗಳನ್ನುಪಯೋಗಿಸಿ ಪ್ರಾಣಿಗಳನ್ನು ಕೊಲ್ಲುತ್ತಿದ್ದರು.

"Never to hurt for pleasure or sport the meanest, thing that feels" ಎಂದು Wordsworth ಕವಿಯು Harts leap well ನಲ್ಲಿ ಹೇಳಿರುವಂತೆ, ವಿಲಾಸಕ್ಕಾಗಲೀ, ಬೇಟೆಯಾಟಕ್ಕಾಗಲೀ, ಯಾತನೆಪಡುವ ಅಲ್ಪಪ್ರಾಣಿಯನ್ನು ಕೂಡಾ ಘಾಸಿಮಾಡಬಾರದು. ಇತ್ತೀಚಿನ Atom ಮತ್ತು Hydrogen ಬಾಂಬುಗಳ ಕಾಲದಲ್ಲಿ ಊರು ಊರೇ ನಾಶಮಾಡಬಲ್ಲ ಕಾಲದಲ್ಲಿ, ಒಂದು ಬಾಂಬಿನ ಪ್ರಯೋಗದಿಂದ ಜನ ಸಮೂಹಗಳೇ ನಾಶವಾಗಬಲ್ಲ ಕಾಲದಲ್ಲಿ, ನಾರಿ

ಯರು, ಮಕ್ಕಳು, ಕಾಪಾಡಿಕೊಳ್ಳಲು ಶಕ್ತಿ ಆಸರೆ ಇಲ್ಲದ ಸಹಸ್ರಾರು ಜನರನ್ನು ಏಕಕಾಲದಲ್ಲಿ ಧ್ವಂಸಮಾಡಬಲ್ಲ ಈ ಕಾಲದಲ್ಲಿ ಈ ಆಯುಧದ ಧರ್ಮ ಮರ್ಮಗಳ ತಿಳುವಳಿಕೆ ಬಹಳ ಅಧಿಕ, ಅತ್ಯಗತ್ಯ. ಯಾವ ಪ್ರಾಣಿಗೂ ಹಿಂಸೆ ಕೂಡಾ ಮಾಡಬಾರದೆಂಬ ತತ್ವಾಚರಣೆಯಿರಲಿ, ನಿಸ್ಸಹಾಯರನ್ನು ಧ್ವಂಸ ಮಾಡಬಾರದೆಂಬ ತತ್ವಜ್ಞಾನವಾದರೂ ಬೇಕು, ಶಸ್ತ್ರಅಸ್ತ್ರಗಳ ಉಪಯೋಗದಲ್ಲಿ.

ಗೋವೆಂದರೆ ದೇವರ ಸಮಾನ. ಹಿಂದೂಗಳು ಗೋವನ್ನು ಗೋ ಮಾತೆಯೆಂದು ಪೂಜಿಸುವರು. ಅಶಕ್ತರಿಗೂ ರೋಗಿಗಳಿಗೂ, ಶಿಶು ಗಳಿಗೂ ಅಮೃತಪ್ರಾಯವಾದ ಪ್ರಾಣಾಧಾರವಾದ ಹಾಲನ್ನು ದಿನವೂ ಆಹಾರಕ್ಕಾಗಿ ಸುಲಭ ಜೀರ್ಣಕಾರಿಯಾದ ಉತ್ತಮಾಹಾರವಾಗಿ, ಒದಗಿಸಬಲ್ಲ ಹಸುವು ಮಾತೆಯಲ್ಲವೇ ಏನು? ದೇವರೆಂದು ಪೂಜಿಸುವು ದಿರಲಿ, ಅವುಗಳ ಸರಿಯಾದ ರಕ್ಷಣೆಯನ್ನೇ ಮರೆತುಬಿಟ್ಟಿದೆ ಹಿಂದೂ ಸಮಾಜ. ಗೋರಕ್ಷಣೆಯನ್ನು ಸಮಾಜ ಕರ್ತವ್ಯವೆಂದೂ, ಗೋ ಸೇವೆಯನ್ನು ದೇವರ ಪೂಜೆಯೆಂದೂ ನಂಬಿದ್ದ ದಿನಗಳೆಲ್ಲಿ. ಅವುಗಳ ಸಗಣಿಗಿಂತ ಅಮೂಲ್ಯವಾದ ಗೊಬ್ಬರವಿಲ್ಲಾ. ಅದನ್ನು ಹಸಿರೆಲೆಗಳೊಡನೆ ಗಂಜಲದೊಡನೆ ಶೇಖರಿಸಿ ಕೊಳಸಿ, ಅಡಕೆ ಬಾಳೆ ತೋಟಗಳಲ್ಲಿ ಅತ್ಯು ತ್ತಮ ಗೊಬ್ಬರವಾಗಿ ಮಲನಾಡಿನಲ್ಲಿ ಉಪಯೋಗಿಸುವರು. ನಾವು ವೃಥಾ ಒಣಗಿಸಿ ಸುಡುವೆವು. ಅವುಗಳಲ್ಲಿರುವ ಸಾರವೆಲ್ಲಾ ಸೂರ್ಯ ಅಗ್ನಿ, ವಾಯುಗಳಲ್ಲಿ ಶೋಣಿಸುವುವು. ಆಹಾರ ಅಭಾವ ಕಾಲದಲ್ಲಿ ಕೂಡಾ, ಆಹಾರ ಬೆಳೆಯಲನುಕೂಲವಾದ ಉತ್ತಮ ಗೊಬ್ಬರವಾದ ಸಗಣಿ ಗಂಜಲ ಗಳನ್ನು ನೆಲದ ಗುಣಿಗಳಲ್ಲಿ ಮಣ್ಣು ಮುಚ್ಚಿ ಶೇಖರಿಸಿ ಹದಮಾಡಿ ಗೊಬ್ಬರವಾಗುಪಯೋಗಿಸದೆ, ಅದನ್ನು ಬೆರಣಿಯಾಗಿ ಉಪಯೋಗಿಸು ವುದೂ, ಕಸವೆಂದು ಬಿಸುಡುವುದೂ ನ್ಯಾಯವೇ? "ನೀನ್ಯಾರಿಗಾದೆಯೋ ಎಲೆ ಮಾನವಾ"— ಎನ್ನುವ ಗೋವಿನ ಹಾಡಿನಲ್ಲಿ ಗೋವಿನ ಉಪ ಯೋಗಗಳ ವರ್ಣನೆಯಿದೆ. ಹಾಲು, ಮೊಸರು ಬೆಣ್ಣೆ ಎಲ್ಲಾ ಗೋವಿನಿಂದ ಪಡೆಯುವೆವು. ಎಷ್ಟು ಚೆನ್ನಾಗಿ ಸಾಕಿದರೆ ಅಷ್ಟು ಪುಷ್ಟಿಯಾದ ಆಹಾರ ಒದಗಿಸುವುದು— ಹಾಲಿನ ರೂಪದಲ್ಲಿ. ಕಸದಿಂದ ರಸಮಾಡ

ಬಲ್ಲ ಪ್ರಾಣಿ ಹೊತ್ತಿಗೆ ಹಾಲು ಕರೆದುಕೊಂಡು ಹೊರಕ್ಕಟ್ಟುವರು ಜನ. ಬೀದಿ ಮೇಡುಗಳಲ್ಲಿ ಸಿಕ್ಕಿದುದು ಮೇದು ಹಾಲು ಕೊಡುವ ಹೊತ್ತಿಗೆ ಕರುವನ್ನು ಹುಡುಕಿಕೊಂಡು ಬಂದು, ಹಾಲೆರೆಯುವುದು ಹಸುಳೆಗಳಿಗೆ, ರೋಗಿಗಳಿಗೆ ಉತ್ತಮವಾದುದು ಹಸುವಿನ ಹಸನಾದ ಹಾಲು. ಹೊಸದಾಗಿ ಹಸನಾಗಿ ನೊರೆಹಾಲು ಕರೆದು ಹಸುಳೆಗಳಿಗೆ ಕೊಡುವುದರ ಬದಲು, ಹಸುವನ್ನು ಸಾಕಲಾರದ ಸೋಮಾರಿಗಳು ನಾವು. ಪರದೇಶದ ಡಬ್ಬದ ಹಾಲಿನ ಪುಡಿ ಕದರಿ, ಮಕ್ಕಳಿಗೆ ಹಾಕು ವೆವು, ಹೆಚ್ಚು ಹಣ ತೆತ್ತು. ಅಲ್ಪ ಹಣ ಗೋರಕ್ಷಣೆಗುಪಯೋಗಿಸಿ ದ್ದರೆ ಉತ್ತಮವಾದ ಆಗ ಕರೆದ ಹಾಲಿನಾಹಾರ ಒದಗಿಸಬಹುದಾದ ತಿಳುವಳಿಕೆ ನಮ್ಮ ಜನಕ್ಕಿಲ್ಲಾ. ಅದಕ್ಕಾಗಿಯೇ ಪ್ರತಿ ಸಂಸಾರದವರೂ ಗೋವನ್ನು ದೇವರೆಂದೂ, ಗೋಮಾತೆಯೆಂದೂ ಮನೆಯಲ್ಲಿ ಕಟ್ಟಿ ಕೊಂಡು, ಅದನ್ನು ಸಾಕಿ ಪರವನ್ನೂ, ಅದರ ಕ್ಷೀರಪಾನದಿಂದ ಇಹ ವನ್ನೂ ಸಾಧಿಸಲೆಂದು ಹಿಂದಿನವರು ಗೋವನ್ನು ಆ ರೀತಿ ಆರಾಧಿಸಿದರು. "ಪ್ರತಿ ಭಾರತ ಸಂಸಾರ ಕುಟುಂಬಕ್ಕೂ ಒಂದು ಹಸು, ಒಂದು ಜೊತೆ ಎತ್ತು ಒದಗಿಸಿಬಿಟ್ಟರೆ ಹಳ್ಳಿಗರ ಇಹಕಷ್ಟವೆಲ್ಲಾ ನೀಗಿದಂತೆ" ಎಂದು ಮಹಾತ್ಮ ಗಾಂಧೀಯವರು ಒಂದು ಧ್ಯೇಯವನ್ನು ಒತ್ತಿ ಹೇಳುತ್ತಿ ದ್ದರು.

ಇಂಥಾ ಗೋವುಗಳಲ್ಲಿ ಕಾಮಧೇನು—ಎಂದರೆ ಸರ್ವವನ್ನೂ ಕೊಡ ಬಲ್ಲ ಇಷ್ಟಾರ್ಥ ಪ್ರಾಪ್ತಿಸಬಲ್ಲ ಧೇನು ತಾನೆಂದು ಸ್ವಾಮಿ ಹೇಳಿದ್ದಾನೆ. ಇದರಿಂದಲಾದರೂ ನಾವು ಗೋವಿನ ಪವಿತ್ರತೆಯನ್ನರಿತು, ಮುಂದೆ ಯಾದರೂ ಗೋಸೇವೆ, ಪೂಜೆಗಳನ್ನು ಮಾಡಿ, ಗೋವನ್ನು ನಮ್ಮ ದೇಶದಲ್ಲಿ ದೇವರಂತೆ ಕಂಡು ಅವುಗಳಿಂದ ಪ್ರತಿಫಲವನ್ನು ಪಡೆಯುವ ತಿಳುವಳಿಕೆ ಪಡೆಯಬೇಕು.

ಪ್ರಜೋತ್ಪತ್ತಿಗೆ ಕಾರಣನಾದ ಕಾಮನು ನಾನು. ಇಹದಲ್ಲಿ ಸರ್ವ ಕಾಮಗಳಿಗಿಂತ ಬಲವಾದುದು ಪುತ್ರಕಾಮ. ಲೋಕೇಷಣ, ವಿತ್ತೇಷಣ, ಪುತ್ರೇಷಣ ಎಂದು ಈಷಣತ್ರಯಗಳೆಂದು ಉಪನಿಷತ್ತುಗಳಲ್ಲಿ ಕೂಡಾ ಸಾರಿದೆ. ಇದರಲ್ಲಿ ಜನರಂಜಕನಾಗಿ, ಪ್ರಸಿದ್ಧ ಪುರುಷನಾಗಬೇಕೆಂಬ

ಆಸೆಯೋ ಲೋಕೇಷಣ–ಅಧಿಕಾರಲಾಲಸೆ, ಪ್ರಬಲನಾಗಿ ಪ್ರಜಾನಾಯಕ ನಾಗಿ ಮೆರೆದು. ಜನಗಳ ಕೈಲಿ ಚಪ್ಪಾಳೆ ತಟ್ಟಿಸಿಕೊಳ್ಳಬೇಕೆಂಬ ಚಪಲವೇ–ಲೋಕೇಷಣ. ಇದು ವಿತ್ತೇಷಣಕ್ಕಿಂತಲೂ ಕೆಲವರಲ್ಲಿ ಜಾಸ್ತಿಯಾಗಿರುತ್ತೆ. ಕಮ್ಮಿ ಸಂಬಳ ತಗೆದುಕೊಂಡು ಪ್ರಜಾನಾಯ ಕತ್ವವಹಿಸಿ ಮಂತ್ರಿಯಾದರೂ ಆದಾನೇ ಹೊರತು, ಹೆಚ್ಚು ಸಂಬಳದ ಮೇಲೆ ಕಡಮೆ ದರ್ಜೆ ಅಧಿಕಾರಬಯಸ, ಕೆಲಸಗಾರನಾಗಲಾರ, ಪ್ರಜಾ ಮುಖಂಡ. ಎಷ್ಟು ಹೆಚ್ಚು ಅಧಿಕಾರವಿದ್ದರೆ ಅಷ್ಟು ಮುದ. ಅಧಿಕಾರ ನಡೆಸಿ, ಅಧಿಕಾರಿಗಳನ್ನು ನೇಮಿಸಬಲ್ಲ ಪ್ರಬಲವಿರುವಾಗ, ಹೆಚ್ಚಿನ ಸಂಬಳದ ಅಧಿಕಾರಿಗಳು ಹಬಹಬ ಎಂದು ತನ್ನ ಮನಸಂತೆ ಅಧಿಕಾರ ನಡೆಸಲು ಆಜ್ಞೆ ಈಯಬಲ್ಲ ದರ್ಜೆ ಬರುವ ಪ್ರತಿಭೆಯ ಸ್ಥಾನದಲ್ಲಿ ಕಮ್ಮಿ ಸಂಬಳವಾದರೇನು. ಹೋದ ಕಡೆ ಮೇಳ, ಹಾರ, ಜನಸಂದಣಿ, ಚಪ್ಪಾಳೆ, ಆತಿಥ್ಯ, ಮೆರವಣಿಗೆ ಎಲ್ಲಾ ಬಿಟ್ಟಿ ನಡೆಯುಹೋಗುವಾಗ, ಇನ್ನು ಹಣವೇತಕ್ಕೆ, ವಿತ್ತೇಷಣಕ್ಕಿಂತ ಲೋಕೇಷಣವೇ ಹೆಚ್ಚಾಗುತ್ತೆ. ಹಣ ವಂತರೇ ಸೇವೆಗೆ ಸಿದ್ಧರಾಗಿರುವಾಗ ಸ್ವಂತ ಹಣವೇಕೆ. ಇದೇ ನಮ್ಮ ರಾಜಕೀಯ ನಾಯಕರ ಗುಟ್ಟು, ವ್ಯವಹಾರದ ರಟ್ಟು. ತಮ್ಮ ಕೈಲಿ ಪ್ರಭುತ್ವವೇ ಇರುವಾಗ ಇನ್ನು ಹಣವೇತಕ್ಕೆ. (Power) ನಡೆಸಬಲ್ಲ ಶಕ್ತಿ, ದರ್ಜೆ ಎಲ್ಲಕ್ಕೂ ಹೆಚ್ಚು ಆಕರ್ಷಣೀಯ. ಜನರನ್ನು ಮೆಚ್ಚಿಸಿ ಮೇಲೇರಿದಂತೆಲ್ಲಾ ಆಮಲೇರುತ್ತದೆ. ಇದಕ್ಕಿಂತ ಹೆಚ್ಚಿನದು ಪುತ್ರೇಷಣ. ದುಡ್ಡಿದ್ದರೆ ಏನು ಬೇಕಾದರೂ ಮಾಡಬಹುದು, ಮಾಡಿಸಬಹುದು. ಆದರೆ ಆ ಆಸ್ತಿಯನ್ನೆಲ್ಲಾ ಬಿಡಲು, ಅದಕ್ಕೆ ಉತ್ತರಾಧಿಕಾರಿಯಾಗಲು ಒಬ್ಬ ಮಗ ಬೇಕೆಂಬ ಆಸೆ ಇದ್ದೇ ಇರುತ್ತದೆ. ಈ ಪುತ್ರನನ್ನು ಬಯಸುವ "ಧರ್ಮಾವಿರುದ್ಧೋ ಕಾಮ"—ಧರ್ಮಕ್ಕೆ ವಿರೋಧವಲ್ಲದ ಕಾಮಕ್ಕೆ ಕಾಮದೇವನು ಭಗವಂತ ಸ್ವೇಚ್ಛಾಪ್ರವರ್ತಿಯ ಪಶುವೃತ್ತಿಯ, ಭೋಗ ಲಾಲಸೆಯ, ಇಂದ್ರಿಯ ಹಿಡಿತವಿಲ್ಲದ, ಉಚ್ಛಸಂಗ ಸಹವಾಸದ ಅತಿ ಪಾಸಕವಲ್ಲಾ ದೇವನು ಕಾಮದೇವ. ಈಚಿನ ನೂತನ ಪ್ರಪಂಚದಲ್ಲಿ ಕುಡಿತ, ಕಡಿತ, ನಾಟ್ಯ, ಸಂಗೀತ, ಚಲನ ಚಿತ್ರದಲ್ಲಿ ಮುಳುಗಿರುವ ಅಧುನಿಕ ಯುವಕರ ಸ್ವೇಚ್ಛಾವರ್ತನೆಯನ್ನೇ ಪ್ರೇಮವೆಂಬ ಪವಿತ್ರನಾಮ

ದಿಂದಣಗಿಸುತ್ತ ಕೆಳದರ್ಜೆ ಪಶುವೃತ್ತಿಯಲ್ಲಿ ಲೋಲರಾಗಿರುವುದು ಅತಿ ಕಾಮ. ಅದು ಮಿತಿ ಇಲ್ಲದ್ದು, ಪವಿತ್ರವಲ್ಲದ್ದು. ಧರ್ಮವಿರುದ್ಧ. ನರಕಹೇತು. ಕ್ಷಣಿಕವಾಗಿದ್ದು ನಂತರ ರೋಗ ರುಜನಗಳಲ್ಲೂ, ಮೃತ್ಯುವಿನಲ್ಲೂ, ಬಲಹೀನತೆ ಮುಪ್ಪುಗಳಲ್ಲೂ ಪರ್ಯಾವಸನಗೊಳ್ಳುವ ಅತಿ ಕ್ರೀಡೆ. ಅದು ಪವಿತ್ರ ಪುತ್ರೇಷಣದ ಕಾಮದಲ್ಲಿ ಸೇರುವುದಿಲ್ಲ. ಈಗಿನ ನವದಂಪತಿಗಳಿಗೆ ಕೂಡಾ ಕ್ರೀಡೆಬೇಕೇ ಹೊರತು "ಪ್ರಜೆ"— ಮಕ್ಕಳು, ಸಂತತಿಬೇಡಾ. ಕಾಮದ ಸುಖಬೇಕೇ ಹೊರತು, ಕಾಮದ ಪವಿತ್ರಫಲ ಬೇಡಾ. ನಿರಂತರ ತಡ ತೊಡಕುಗಳಿಲ್ಲದೆ ಕಾಮೋಪ ಭೋಗ ಬೇಕು. ಅದರ ಫಲಬೇಡಾ. ಫಲವಾಗದಂತೆ, ತಂತ್ರಗಳು ಪಯೋಗ ಯಥೇಚ್ಛೆಯಾಗಿ ಮಾಡುವರು. ಪಶುಗಳು ಕೂಡಾ ಕಾಮೋಪ ಭೋಗಕ್ಕೆ ಕಾಲವರಿತು ವರ್ತಿಸುವುವು. ಫಲಬೀಳುವ ಕಾಲದಲ್ಲಿ ಮಾತ್ರ ಪ್ರಾಣಿಗಳು ಸಂಭೋಗಿಸುವವು. ಸಂತಾನ ಕಾಲದಲ್ಲಿ ಮಾತ್ರ ಗಂಡು ಹೆಣ್ಣು ರಮಿಸುವವು. ವರ್ಷವೆಲ್ಲಾ ದಿನಂಪ್ರತಿ, (ಹಗಲೂ ಸೇರಿತು ದಿನದಲ್ಲಿ ಅಸ್ಕ್ರ) ರಮಿಸಬೇಕು, ಕಾಮೋಪಭೋಗ ಪಡಬೇಕೆಂದು ವಿವೇಚನೆಯಿಲ್ಲದೆ ಯಾಚಿಸಿ ಆಶಿಸುವಪ್ರಾಣಿ ಮನುಷ್ಯನೊಂದೇ. ಆದುದರಿಂದ ಇವರ ವರ್ತನೆಯು ಪಶುವರ್ತನೆಯೆಂದರೆ ಅವಕ್ಕವಮಾನ ವಾಗುತ್ತೆ. ಸಂತತಿಗಾದರೂ ಸಂಭೋಗ ಮಿತವಿರಬೇಕು. ಸಂತಾನ ವಿರೋಧ ಕ್ರಮಗಳಿಂದ ಸಂಭೋಗ ಅತಿಯಾಗಿರಬಾರದು. ವೀರ್ಯ ಸಂಗ್ರಹಣದಿಂದ ದೇಹಶಕ್ತಿ ಬುದ್ಧಿಶಕ್ತಿ, ತೇಜಸ್ಸು ಎಲ್ಲಾ ಹೆಚ್ಚಿ ಆಯುಪ್ರಮಾಣದಲ್ಲಿ ದೃಢಕಾಯರಾಗಿರಲವಕಾಶವಾಗುತ್ತೆ.

ಸರ್ಪಗಳಲ್ಲಿ ವಾಸುಕಿಯು ನಾನು. ಭೂಮಿಯಲ್ಲಿ ಉಷ್ಣವಲಯವಾದ ನಮ್ಮ ದೇಶದಲ್ಲಿ ಹಾವು ಹರಿದಾಡಿಗಳು ಜಾಸ್ತಿ ಇದ್ದು ಪೂರ್ವ ಕಾಲ ದಿಂದಲೂ, ಅವು ವಿಷಜಂತುಗಳಾಗಿದ್ದು, ಕಚ್ಚಿದವರು ಸಾಯುತ್ತಿರು ವುದರಿಂದ ಅವುಗಳಿಗೆ ಚಿಕಿತ್ಸೆಯೇ ಕಾಣದೆ, ಅವುಗಳ ಭೀತಿಯಿಂದ ತಪ್ಪಿಸಿಕೊಳ್ಳಲು ಅವನ್ನು ಪೂಜ್ಯಭಾವದಿಂದ ಕಂಡುಕೊಳ್ಳುತ್ತಿದ್ದರು.

**ಅನಂತಶ್ಚಾಸ್ಮಿ ನಾಗಾನಾಂ । ವರುಣೋ ಯಾದಸಾಮಹಮ್ ।**
**ಪಿತೃಣಾಮರ್ಯಮಾ ಚಾಸ್ಮಿ । ಯಮಃ ಸಂಯಮತಾಮಹಮ್ ॥೨೯॥**

ನಾಗಗಳಲ್ಲಿ ಅನಂತನೂ, ಜಲಜಂತುಗಳಲ್ಲಿ ವರುಣನೂ, ಪಿತೃಗಳಲ್ಲಿ ಆರ್ಯಮಾನೂ, ಸಂಯಮಗಳಲ್ಲಿ, ಯಮವೂ ನಾನಾಗಿರುವೆನು.

**ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ । ಕಾಲಃ ಕಲಯತಾಮಹಮ್ ।**
**ಮೃಗಾಣಾಂ ಚ ಮೃಗೇಂದ್ರೋsಹಂ । ವೈನತೇಯಶ್ಚ ಪಕ್ಷಿಣಾಮ್ ॥೩೦॥**

ದೈತ್ಯರಲ್ಲಿ ನಾನು ಪ್ರಹ್ಲಾದನೂ, ಗಣನೆಮಾಡಿಕೊಳ್ಳುವವರಲ್ಲಿ ಕಾಲನೂ, ಮೃಗಗಳಲ್ಲಿ ಸಿಂಹವೂ, ಪಕ್ಷಿಗಳಲ್ಲಿ ಗರುಡನೂ ನಾನು.

ಇತರ ಲೋಕಗಳನ್ನೂ ಪ್ರಸ್ತಾಪಿಸುತ್ತಾನೆ ಸ್ವಾಮಿ. ನಾಗಲೋಕ, ವರುಣಲೋಕ, ಪಿತೃಲೋಕ, ದೈತ್ಯಲೋಕ ಇವುಗಳೆಲ್ಲೆಲ್ಲಾ ಶ್ರೇಷ್ಠನಾದ ಆ ಆ ಲೋಕಗಳ ರಾಜ ತಾನೇ. ನಿರೋಧ ಕ್ರಮಗಳಲ್ಲಿ 'ಯಮ' ನಿಯಾಮಾದಿ ಅಷ್ಟಾಂಗ ಯೋಗಧ್ಯಾನದಲ್ಲಿ, ಪ್ರಥಮವಾದ 'ಯಮ' ಎಂದರೆ ತ್ರಿಶಿಖಿಬ್ರಾಹ್ಮಣೋಪನಿಷತ್ತಿನಲ್ಲಿ ವರ್ಣಿಸಿರುವಂತೆ "ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾರ್ಜವಂ । ಕ್ಷಮಾಧೃತಿರ್ಮಿತಾಹಾರಶ್ಶೌಚಂಚೇತಿಯಮಾದಶ ॥" ಯಮದ ಹತ್ತು ಲಕ್ಷಣಗಳನ್ನು ಹೇಳಿದ್ದಾರೆ. ತಪಸ್ಸು, ಜಪ ಎಲ್ಲಕ್ಕೂ ಮುಂಚೆ ಈ ಹತ್ತು ಲಕ್ಷಣಗಳನ್ನು ಸಾಧಿಸಿ ಅವುಗಳನ್ನಭ್ಯಸಿಸಿ, ನಂತರ ಯೋಗಾಭ್ಯಾಸಕ್ಕೆ ಆಸನ, ಪ್ರಾಣಾಯಾಮಾದಿಗಳನ್ನಭ್ಯಸಿಸಬೇಕೆಂಬ ನಿಯಮವಿದೆ. ತಪಸ್ಸಿಗೆ–ಬ್ರಹ್ಮಸಾಕ್ಷಾತ್ಕಾರಕ್ಕೆ ಉಗ್ರವಾಗಿ ಪ್ರಯತ್ನಿಸುವುದು–ಮೊದಲು ದೇಹವನ್ನು ಸಿದ್ಧಪಡಿಸಿಕೊಳ್ಳಲು, ಶುಚಿಮಾಡಿಕೊಳ್ಳಲು, ಆ ಕಷ್ಟ ಆಚರಣೆಯನ್ನು ಸಹಿಸಲು ಅಳವಡಿಸಿಕೊಳ್ಳಲೋಸುಗ ಅಹಿಂಸೆ, ಸತ್ಯ, ಕದಿಯದಿರುವಿಕೆ, ಬ್ರಹ್ಮಚರ್ಯ, ದಯ, ಆರ್ಜವ, ಕ್ಷಮಾ, ಧೃತಿ, ಮಿತಾಹಾರ, ಶೌಚ ಎನ್ನುವ ಹತ್ತು ಸದ್ಗುಣಗಳನ್ನು ದೃಢವಾಗಿ ಅಭ್ಯಾಸ ಮಾಡಬೇಕು. ಮಾನವನ ದಿನಚರಿಯಲ್ಲಿ, ವ್ಯವಹಾರಗಳಲ್ಲಿ ಇವು ಪ್ರತಿಯೊಂದೂ ಎಷ್ಟು ಮುಖ್ಯವಾದುವುವೆಂಬುದು ತಿಳಿಯುತ್ತೆ. ಒಂದೊಂದೇ ಒಂದೊಂದು ವ್ರತವಾಗಿ ಪರಿಣಮಿಸುತ್ತೆ. ಒಂದೊಂದೇ ಗುಣದ ಮೇಲೆ ಒಂದೊಂದು ಮತವೇ ಕಟ್ಟಿದ್ದಾರೆ. ಅಹಿಂಸಾ ತತ್ತ್ವವನ್ನು ಸಾರದ ಮತಪ್ರಚಾರಕರಿಲ್ಲಾ. ಬುದ್ಧ ಗಾಂಧಿಯವರಂತೂ ಅದನ್ನೇ ಪರಮ ತತ್ತ್ವವಾಗಿ, ಸರ್ವ

ಸದ್ಗುಣಸಾರವಾಗಿ ಭಾವಿಸಿದ್ದರು, ಅಭ್ಯಸಿಸಿದ್ದರು. ಅದರಿಂದಲೇ ಅದು ಎಲ್ಲಕ್ಕೂ ಪ್ರಥಮ ಬಂದಿದೆ. 'ಪಾಪಾಯ ಪರಪೀಡನಂ' ಎಂದು ಸರ್ವತತ್ವಸಾರವನ್ನು ವ್ಯಾಸರು ಹೇಳಿದುದೂ ಇದೇ. ಅದರಿಂದ 'ಪರೋಪಕಾರಾಯ ಪುಣ್ಯಾಯ' ಹಿಂಬಾಲಿಸುವುದು. ಇದು ತನ್ನಂತೆ ಪರರನು ಬಗೆಯಲು ಮುಖ್ಯ ಸಾಧನ. ಎಲ್ಲರಲ್ಲೂ ಪರಮಾತ್ಮ ಕಾಣುತ್ತಾನೆ. ಸತ್ಯದ ಮೇಲೇ ಉಪನಿಷತ್‌ಗಳೆಲ್ಲಾ ಕಟ್ಟಲ್ಪಟ್ಟಿದೆ. "ತತ್ ಸತ್" ಎಂದು ದೇವರೇ ಸತ್ಯ, ಸತ್ಯವೇ ದೇವನೆಂದು ಸಾರಿದ್ದಾರೆ. "Truth is Beauty" ಸತ್ಯವೇ ಸೌಂದರ್ಯ ಎಂದು ಆಂಗ್ಲ ಕವಿ ಸಾರಿದ್ದಾನೆ. ಎಲ್ಲಾ ಕಾಲದಲ್ಲಿಯೂ ಸತ್ಯಕ್ಕೇ ಜಯ. "ಸತ್ಯಮೇವ ಜಯತೇ" ಎಂದು ಘೋಷಿಸಿದ್ದಾರೆ. ಸತ್ಯವೇ ಪರಮ ಧರ್ಮ. ಧರ್ಮರಾಯನು ಎಂದೂ ಅಸತ್ಯವನ್ನೇ ಆಡುತ್ತಿರಲಿಲ್ಲಾ.

ಅಸ್ತೇಯವೊಂದು ಬಹಳ ದೊಡ್ಡ ಗುಣ. ಕದಿಯುವುದಿರಲಿ, ತನಗೆ ಅಗತ್ಯವಾಗಿ ಬೇಕಾಗದಿರುವ ವಸ್ತುವನ್ನು ಮನದಲ್ಲಾಗಲೀ ಬೇಕೆಂದು ಆಶಿಸುವುದು ಕೂಡಾ ಕಳ್ಳತನವಂತೆ. "ಮಾಗೃಧಂ ಕಸ್ಯಸ್ವಿ ಧನಂ" ಎಂದು ಈಶೋಪನಿಷತ್ತಿನಲ್ಲಿ ಸಾರಿದ್ದಾರೆ. ಕದಿಯಬೇಡ ಎಂದು ಎಲ್ಲ ಧರ್ಮದಲ್ಲೂ ಆಜ್ಞೆ ಇದೆ. ಬ್ರಹ್ಮಚರ್ಯದ ವಿಷಯ ಎಷ್ಟು ಬರೆದರೂ ಸ್ವಲ್ಪವೇ. ಕಾಮ ಚಪಲತೆ ಇಲ್ಲದೇ ಇಂದ್ರಿಯನಿಗ್ರಹ ಮಾಡಿ ಕೊಂಡಿರುವುದೇ ಬ್ರಹ್ಮನಿಷ್ಠರುವಿಕೆ ಎಂದು ಆ ಇಂದ್ರಿಯನಿಗ್ರಹಕ್ಕೆ ಬ್ರಹ್ಮನಲ್ಲಿ ಚರಿಸುವುದೆಂಬರ್ಥವುಳ್ಳ "ಬ್ರಹ್ಮಚರ್ಯ"ವೆನ್ನುವ ಹೆಸರು ಕೊಟ್ಟಿದ್ದಾರೆ. ಇದರಿಂದ ಇಂದ್ರಿಯಗಳ ಶಕ್ತಿ ಹೇಗೆ ಸಂಗ್ರಹವಾಗಿ ದಿವ್ಯ ತೇಜಸ್ಸುಬಂದು ಶಕ್ತಿಯುತನನ್ನಾಗಿಮಾಡಿ, ಯಾವ ಕೆಲಸ ಬೇಕಾದರೂ ಸಾಧ್ಯವಾಗುತ್ತೆ. ಇಂದ್ರಿಯ ಶಕ್ತಿಗಳನ್ನು ಪೋಲುಮಾಡಿ ದರೆ ಆ ಇಂದ್ರಿಯನಿಗ್ರಹ ಶಕ್ತಿ ಎಲ್ಲಿ ಬಂತು. ವ್ಯಾಸಂಗ, ಅಭ್ಯಾಸ ಕಾಲಗಳಲ್ಲಂತೂ ಈ ಬ್ರಹ್ಮಚರ್ಯ ಬಹುಮುಖ್ಯ. ಬೆಳೆಯುವ ೮ ರಿಂದ ೨೪ ವರ್ಷಗಳವರೆಗೆ, ದೇಹ, ಬುದ್ಧಿ, ಇಂದ್ರಿಯಗಳು ಮನಸ್ಸೂ ಎಲ್ಲಾ ಸರಿಯಾಗಿ ಬೆಳೆಯಬೇಕಾಗಿರುವ ಈ ಅಂತರದಲ್ಲಿ ದೇಹಶಕ್ತಿ ಕಾಪಾಡಿ ಕೊಳ್ಳುವುದು ಬಹುಮುಖ್ಯ. ಬ್ರಹ್ಮಚರ್ಯದಿಂದ ಈ ದೇಹ ವಜ್ರಕಾಯ

ವಾಗಿ ರೂಪಿಸುತ್ತದೆ. ಮನೋ, ವಾಕ್ಕಾಯ ಕರ್ಮಗಳೆಲ್ಲೂ ಈ ಬ್ರಹ್ಮಚರ್ಯವನ್ನಾಚರಿಸಬೇಕು. ಸ್ವೇಚ್ಛೆಯಾಗಿ, ಕಾಮುಕ ಚಲನಚಿತ್ರಗಳನ್ನು ನೋಡುವವನೂ, ಕಾಮುಕಾಮಿನೀ ಕಥೆಗಳನ್ನೋದುವವನೂ, ಬ್ರಹ್ಮಚಾರಿಯಲ್ಲ. ಕಾಮುಕನ ನೋಟದಲ್ಲೇ ಎಲ್ಲಾ ಸ್ತ್ರೀಯರನ್ನು ನೋಡುವನು.

“ದಯ ಇಲ್ಲದ ಧರ್ಮವ್ಯಾವುದಯ್ಯಾ?” ಎಂದು ಬಸವಣ್ಣನವರು ಘೋಷಿಸಿರುವರು. ದಯೆಯು ಸಂಪನ್ನರ ಗುಣ. ಸರ್ವಭೂತ ದಯೆಯೊಂದಿದ್ದರೆ ಎಲ್ಲಾ ಧರ್ಮಪರಿಪಾಲನೆ ಮಾಡಿದಂತೆ. ತನ್ನಂತರಂಗದಲ್ಲಿ ಬೆಣ್ಣೆಯಂತಹ ಮೃದು, ತಣುವಿಲ್ಲದಿದ್ದರೆ, ಇತರರಿಗಾಗಿ, ಇತರರ ಕಷ್ಟಕ್ಕಾಗಿ, ಇತರರನ್ನು ನೋಡಿ ಕನಿಕರ ಬರುವುದಿಲ್ಲಾ; ಕಷ್ಟದಲ್ಲಿರುವವರ ಆಸರೆಗೆ ಕೈನೀಡುವುದಿಲ್ಲಾ. ಪರರಲ್ಲಿ ದಯೆ ತೋರುವುದರಿಂದ ತನ್ನಂತರಂಗವೇ ಮಾರ್ಪಡುತ್ತದೆ.

ಆರ್ಜವ – ಸರಳತೆ. ದಂಭ ದರ್ಪಗಳಿಲ್ಲದೆ ದುರಭಿಮಾನವಿಲ್ಲದಿರುವಿಕೆ. ಅಹಂ, ಮಮ, ನಾನು, ನನ್ನದು ಎನ್ನುವುದು ಕಮ್ಮಿಯಾದ ಹೊರತು ಸರಳತೆ ಹೊರಬೀಳುವುದಿಲ್ಲಾ. ಕ್ಷಮಾ – ಇದು ಬಲಿಷ್ಟರಲ್ಲಿ ಬಹಳ ದೊಡ್ಡ ಗುಣ. ಇದನ್ನುಳ್ಳವರನ್ನು “ಕ್ಷಮಾನಿಧಿ” ದೊಡ್ಡ ಸಂಪತ್ತುಳ್ಳವರೆಂದು ಭಾವಿಸಬೇಕು. ಧೃತಿ – ಕಾಮ ಕ್ರೋಧ ಲೋಭಗಳ ಆತಂಕ ಬುದ್ಧಿ ಬಲ. ಮನುಷ್ಯನಲ್ಲಿ ಅತಿಗೋಪ್ಯವಾಗಿಯಲ್ಲಿ ಏಳುತ್ತಿರುವ ಕಾಮಕ್ರೋಧಮೋಹಾದಿಗಳು, ಮನಸ್ಸನ್ನು ಅಲ್ಲೋಲಕಲ್ಲೋಲ ಮಾಡುವಾಗ ಅವನ್ನೆದುರಿಸಿ ನಿಲ್ಲಬಲ್ಲ ಬುದ್ಧಿಬಲವೇ ಧೃತಿ. ಇದನ್ನು “ಪ್ರಜ್ಞಾನ”ದಲ್ಲಿ ಸೇರಿಸಿರುವರು – ಐತರೇಯದಲ್ಲಿ. ಮಿತಾಹಾರದ ವಿಷಯ ಎಷ್ಟು ಹೇಳಿದರೂ ಅಲ್ಪವೇ. “ಯುಕ್ತಾಹಾರ ವಿಹಾರಸ್ಯ” ಎಂದು ಸ್ವಾಮಿಯೇ ಗೀತೆಯಲ್ಲಿ ಹೇಳಿರುವನು. “ಒಂದು ಹೊತ್ತು ಉಂಡವನು ಯೋಗಿ” ಎಂಬ ಗಾದೆಯೇ ಇದೆ. “ಆಹಾರ ಶುದ್ಧೌ ಸತ್ವ ಶುದ್ಧಿಃ” ಎಂಬ ಛಾಂದೋಗ್ಯೋಪನಿಷತ್ತತ್ವಾರ್ಥವಿದೆ. ಹಾಳು ಜಿಹ್ವಾ ಚಾಪಲ್ಯ. ಯೌವನ ಬರಲು ಹೋಗಲು ಮುಪ್ಪಾಗುತ್ತಾ, ಕಾಮ ಚಪಲವಿರುವುದಿಲ್ಲಾ. ಹುಟ್ಟಿದಾಗಿನಿಂದ ಸಾಯುವವರೆಗೂ ಈ ಜಿಹ್ವಾ

ಚಾಪಲ್ಯ ತಪ್ಪುವುದಿಲ್ಲಾ. ವಯಸ್ಸಾಗುತ್ತಾ ವೃದ್ಧಿಯಾಗುತ್ತದೆ. ಏನು ತಿಂದರೂ ಸಾಲದು, ಎಷ್ಟು ತಿಂದರೂ ಸಾಲದು.

ಹೆಚ್ಚು ತಿಂದಷ್ಟೂ ಮಾದಕ ದ್ರವ್ಯಗಳು ಜಠರದಲ್ಲುತ್ಪತ್ತಿಯಾಗಿ ಜಡತ್ವ ಹೆಚ್ಚುತ್ತದೆ. ಚೆನ್ನಾಗಿ ಕವಳ ಕತ್ತರಿಸಿ ತೇಗುತ, ಏದುತ ಓದುವುದಕ್ಕೆ ಶಾಲೆಗೆ ಹೋಗಿ ತೂಕಡಿಸುವವರನ್ನು ನೋಡಿದ್ದೀರಿ. ಹೊಟ್ಟೆ ಭರ್ತಿಯಾದರೆ ನಿದ್ರೆ, ಆಕಳಿಕೆ. ರಕ್ತ ಚಲನೆಯೆಲ್ಲಾ ಜಠರ ಭಾಗಕ್ಕೇ ಹೋಗಿ ಪಚನದಲ್ಲಾಸಕ್ತಿಯಾಗಿ ಮಿಕ್ಕೇಂದ್ರಿಯಗಳ ವ್ಯಾಪಾರಕ್ಕೆ ರಕ್ತ ಚಲನೆಯೇ ಸಾಕಾದಷ್ಟಿರುವುದಿಲ್ಲಾ. ಇದಕ್ಕೇ ಮಿತಾಹಾರ ಸಾಧಕನಿಗೆ ಬಹು ಮುಖ್ಯ. ಹೆಚ್ಚು ತಿಂದರೆ ಅಜೀರ್ಣ, ಪಿತ್ತ, ಭೇದಿ ಮೊದಲಾದ ರೋಗಗಳಂಕುರಿಸುವುದಕ್ಕೂ ಮಾರ್ಗವಾಗುತ್ತದೆ. ಮಿತಾಹಾರಿಯು ಲವಲವಿಕೆಯಿಂದ ಯಾವ ಕೆಲಸವನ್ನಾದರೂ ಚಟುವಟಿಕೆಯಿಂದ ಮಾಡುತ್ತಾನೆ. ಬುದ್ಧಿ ಸೂಕ್ಷ್ಮವಾಗಿರುತ್ತೆ. ಶೌಚದಲ್ಲಿ, ಬಾಹ್ಯಶುಚಿ, ಅಂತಃಶುಚಿ ಎರಡೂ ಬೇಕು. "Cleanliness is next to Godliness" ಎನ್ನುವಂತೆ, ದೇವತ್ವಕ್ಕೆ ಶುಚಿತ್ವ ಮೆಟ್ಟಿಲು. ಕೊಳೆಯನ್ನೆಲ್ಲಾ ತೊಳೆದು ಹೊರಗಡೆ ಶುಚಿಯಾಗಲು ಸ್ನಾನಾದಿಗಳು ಮುಖ್ಯ. ಅಂತೆಯೇ ಮನಸ್ಸನ್ನೂ ಅಂತರಂಗವನ್ನೂ ಕೆಟ್ಟ ಯೋಚನೆಗಳಿಂದ ತೊಳೆದು ಶುಚಿಯಾಗಿಟ್ಟುಕೊಂಡರೆ, ದೇವರು ಬಂದು ನೆಲಸಲು ಅನುವಾಗಿರುತ್ತೆ. "Inner Cleanliness comes first" ಅಂತರಂಗ ಶುಚಿಯು ಮೊದಲನೇ ಸ್ಥಾನವಡೆಯಬೇಕು. ಹೊರಗಿನ ಹೊಲಸಾದರೂ ಇತರರಿಗೆ ಕಾಣುತ್ತದೆಂದು ಚೊಕ್ಕಟಮಾಡುತ್ತೇವೆ. ಮನದ ಹೊಲಸು ತನಗಲ್ಲದೆ ಇತರರಿಗೆ ಗೋಚರವಾಗದು. ಅದರಿಂದ ಹೆಚ್ಚು ನಿಗವಿಟ್ಟು ಮನಸ್ಸಿನ ಹೊಲಸನ್ನೆಲ್ಲಾ ನಿರ್ಮೂಲ ಮಾಡಬೇಕಾದುದಗತ್ಯ.

ಈ ಹತ್ತು ಲಕ್ಷಣಗಳನ್ನೇ ಮುಂದೆ (೧೩ನೇ ಅಧ್ಯಾಯ ಶ್ಲೋ ೭-೧೧ ರಲ್ಲಿ) ಜ್ಞಾನದ ಲಕ್ಷಣದಲ್ಲಿ ಸ್ವಾಮಿ ಸೇರಿಸಿದ್ದಾನೆ. ಇವೆಲ್ಲಾ 'ಯಮ'ದಲ್ಲಿ ಪ್ರತಿಸಾಧಕನ, ಯೋಗಿಯ ನಿತ್ಯ ಜೀವನದಲ್ಲನುಷ್ಠಾನವಾಗಬೇಕು. ಅದಕ್ಕೇ ಸ್ವಾಮಿಯು ಸಂಯಮಗಳಲ್ಲಿ ಯಮನು ನಾನು ಎನ್ನುತ್ತಾನೆ. ಇದನ್ನೆಲ್ಲಾ ತನ್ನದೇ ಮಾಡಿಕೊಂಡ ಮಹಾತ್ಮನಲ್ಲಿ

ಸ್ವಾಮಿ ನೆಲಸುತ್ತಾನೆ. ಆ ಮಹಾತ್ಮನೆ ದೇವ-ದೇವತ್ವಕ್ಕೇರಿ ದೇವನಾಗುತ್ತಾನೆ.

ದೈತ್ಯರಲ್ಲಿ ಪ್ರಹ್ಲಾದನು ನಾನು. ದೈತ್ಯರೆಂದು, ದೈತ್ಯರನ್ನು ಬಿಟ್ಟಿಲ್ಲಾ ಸ್ವಾಮಿ. ಎಂತಹ ಭಕ್ತಶಿರೋಮಣಿ ಪ್ರಹ್ಲಾದ. ರಾಕ್ಷಸರಲ್ಲಿಯೂ ಶಿವಭಕ್ತರು ಹೆಚ್ಚಾಗಿದ್ದಾರೆ. ರಾವಣನೇನು ಕಮ್ಮಿ ಭಕ್ತನೇ. ಪರಮೇಶ್ವರನನ್ನು ತಪೋಬಲದಿಂದ ಒಲಿಸಿಕೊಂಡು, ಅವನ ವರಪ್ರಸಾದದಿಂದ ಅಮೋಘವಾದ ಭುಜಬಲವನ್ನು ಐಶ್ವರ್ಯವನ್ನು ಪಡೆದಿದ್ದನು, ಆದರೆ ಅದೇ ಅವನಿಗೆ ಪತನಕ್ಕೆ ಕಾರಣವಾಯಿತು. ಆ ದುರಹಂಕಾರ ದರ್ಪಗಳಲ್ಲಿ, ಆ ಸುಖಲೋಲುಪ್ತಿಯಲ್ಲಿ ಕಾಮವು ಅತಿ ಹೆಚ್ಚಾಗಿ ಬೆಳೆಯಿತು. ಆ ಕಾಮಕಿಲುಬೊಂದಿಲ್ಲದಿದ್ದರೆ ರಾವಣಾಸುರನನ್ನು ಮೀರಿಸಬಲ್ಲವರ್ಯಾರು? ಎಂಥಾ ರುಚಿಯಾದ ಅಡಿಗೆಯಾದರೇನು, ಕೆನೆಮೊಸರಾದರೇನು; ಕಿಲುಬಿದರೆ ವಾಂತಿವಾಕರಿಕೆ ಹತ್ತುವುದು, ಪ್ರಾಣಾಪಾಯವಾಗುವುದು. ಅಂತೆಯೇ ಎಂಥಾ ಅಪ್ರತಿಮ ವೀರನಾದರೂ, ಎಂತಹ ಅಚಲಭಕ್ತನಾದರೂ, ಆ ಒಂದು ಕಾಮದ ಕಪ್ಪು ಸುಂದರ ಚಿತ್ರವನ್ನೆಲ್ಲಾ ಕೆಡಿಸಿತು. ಆದುದರಿಂದ ದುರ್ಗುಣವು ಒಂದೇ ಆದರೂ, ಪತನಕ್ಕೆ ಕಾರಣವಾದುದರಿಂದ ದುರ್ಗುಣಕ್ಕೆಡೆಯನ್ನೇ ಕೊಡಬಾರದು. ಸಾವಿರ ಚಿತ್ತಾರವನ್ನು ಒಂದು ಮಸಿ ಕೆಡಿಸಿದಂತೆ. ಮಿಕ್ಕೆಲ್ಲ ಸುಗುಣಗಳ ಸೌಂದರ್ಯವನ್ನು ಹಾಳುಮಾಡುವುದು.

ಆದರೂ ಹಿರಣ್ಯಕಶಿಪುವಿನ ಎಲ್ಲಾ ಪ್ರೂಬಾನಲವಾಗಿಯೋ ಎಂಬಂತೆ, ಆ ರಾಕ್ಷಸಕುಲ ಸುಕೃತವೆಲ್ಲಾ ಘನೀಭೂತವಾದಂತೆ, ಪ್ರಹ್ಲಾದನೆಂಬ ಕುಮಾರ ಆ ಅಸುರಯೋನಿಯಲ್ಲಿ ಜನಿಸಿದ. ಜನನವೆಲ್ಲಾದರೇನು ಭಗವದ್ಭಕ್ತರಿಗೆ. ವಜ್ರಸೂಚಿಕೋಪನಿಷತ್ತಿನಲ್ಲಿ ಹೇಳಿರುವಂತೆ "ಋಷ್ಯಶೃಂಗೋ ಮೃಗ್ಯಾಃ । ಕೌಶಿಕಃ ಕುಶಾತ್ । ಜಾಂಬೂಕೋ ಜಂಬುಕಾತ್ । ವಾಲ್ಮೀಕೋ ವಲ್ಮೀಕಾತ್ । ವ್ಯಾಸಃ ಕೈವರ್ತಕನ್ಯಾಯಾಂ । ಶಶಪೃಷ್ಠಾದ್ಗೌತಮಃ। ವಸಿಷ್ಠ ಊರ್ವಶ್ಯಾಂ। ಅಗಸ್ತ್ಯಃ ಕಲಶೇ ಜಾತ ಇತಿಶ್ರುತತ್ವಾತ್॥" ಯಾವ ಯಾವ ರೀತಿ ಜನ್ಮತಾಳಿ ಭಗವಧ್ಯಾನ ನಿರತರಾಗಿ ಅತಿ ಪಾವನ ಋಷಿಗಳಾಗಿ ಪ್ರಕಾಶಿಸಿದ್ದಾರೆ. ಉತ್ತಮ ಕುಲೋತ್ಪನ್ನನಾಗಿ ಭಗವ

ದ್ಭಕ್ತಿ ವಾತಾವರಣದಲ್ಲೇ ಬೆಳೆದು ಭಗವದ್ಭಕ್ತರಾದವರಿದ್ದಾರೆ. ಆದರೆ ಪ್ರತೀಕೂಲ ವಾತಾವರಣದಲ್ಲಿ ಬೆಳೆಯುತ್ತಾ, ಎಷ್ಟು ಪೀಡಿಸಿದರೂ, ಹಿಂಸೆ ತಡೆದುಕೊಂಡು ಭಗವಧ್ಯಾನದಲ್ಲೇ ನಿರತನಾದವ ಪ್ರಹ್ಲಾದ. ತಂದೆಗೆ ಭಗವಂತನ ಕೈನಲ್ಲೇ ಮುಕ್ತಿ ದೊರಕಿಸಿದನಲ್ಲವೇ, ಆ ಅಂಧಕಾರ ಅಸುರತ್ವದಿಂದ. ಸಕಲ ಜನಕ್ಕೆ ಪತಿತ ಮೂಢರಿಗೆ ಪಾರಾಗಲು ಪರಮಾತ್ಮನ ಕೃಪೆಯನ್ನು ಕೋರಿದನು. ತನಗೊಬ್ಬನಿಗೇ ಅಲ್ಲ, ಸರ್ವ ಜನರಿಗಾಗಿ. ಎಷ್ಟು ಸೊಗಸಾಗಿದೆ ಆ ಪ್ರಾರ್ಥನೆ. "ಏವಂ ಸ್ವಕರ್ಮ ಪತಿತಂ ಭವವೈತರಣ್ಯಾಂ । ಅನ್ಯೋನ್ಯ ಜನ್ಮಮರಣಾಶನ ಭೀತಭೀತಂ । ಪಶ್ಯನ್ ಜನಂ ಸ್ವಪರವಿಗ್ರಹ ವೈರಮೈತ್ರಂ । ಹಂತೇತಿ ಪಾರಚರ ಪೀಪೃಹಿ ಮೂಢಮದ್ಯ ॥ ಪ್ರಾಯೇಣದೇವ ಮುನಯಃ ಸ್ವವಿಮುಕ್ತಿಕಾಮಾ । ಮೌನಂ ಚರಂತಿ ವಿಜನೇ **ನ ಪರಾರ್ಥನಿಷ್ಠಾಃ ।** ನೈತಾನ್ವಿಹಾಯ ಕೃಪಣಾನ್ವಿ ಮುಮುಕ್ಷ ಏಕೋ । ನಾನ್ಯಂ ತ್ವದಸ್ಯ ಶರಣಂ ಭ್ರಮತೋ ನುಪಶ್ಯೇ ॥" ಎಂದು ತನಗೊಬ್ಬನಿಗೇ ಮೋಕ್ಷಕ್ಕಾಗಿ ಪ್ರಾರ್ಥಿಸದೆ, ಪ್ರಾಯಶಃ ತಮ್ಮೊಬ್ಬರ ಮೋಕ್ಷಕ್ಕಾಗಿಯೇ ತಪಿಸುವ ಮುನಿಗಳನ್ನು ಕೂಡಾ ಉದಾಸೀನ ಮಾಡಿ, "ಪರಾರ್ಥನಿಷ್ಠೆ"ಯೇ ತದೇಕ ಧ್ಯಾನವಾಗಿ ವಿಮುಕ್ತರಾಗಲಾದ ಕೃಪಣರಿಗೆ "ನಾನ್ಯಂ ತ್ವದೇವ ಶರಣಂ" ಎಂದು ಪ್ರಾರ್ಥಿಸಿದ್ದಾರೆ. ಕಾಮೋದ್ರೇಕಗಳಿಗೆ ತೌರುಮನೆಯಾದ ರಾಕ್ಷಸ ಸಾಮ್ರಾಟನ ಮನೆಯಲ್ಲಿ ಏಕೈಕ ರಾಜಪುತ್ರ ಸಾಮ್ರಾಟಾಧಿಕಾರಿಯಾಗಿ ಜನಿಸಿ, "ಯದಿರಾಸೀಶಮೇಕಾಮಾನ್ ವರಾಂಸ್ತ್ವಂ ವರದರ್ಷಭ । ಕಾಮಾನಾಂ ಹೃದ್ಯಸಂರೋಹಂ ಭವತಸ್ತುವೃಣೇವರಂ ॥" ಎಂದು, ವರ ಕೊಡುವುದರಲ್ಲಿ ತ್ಯಕ್ತಮಹಾಹಸ್ತವುಳ್ಳ ವರಪ್ರದನನ್ನು, ಕಾಮಿತ ವರವನ್ನು ಪ್ರದಾನವೇ ಮಾಡುವಂತಿದ್ದರೆ, ತನ್ನ ಹೃದಯ ಸರೋವರದಲ್ಲಿ ಕಾಮವಾಸನೆಯೇ ಹುಟ್ಟದಂತೆ ವರಪ್ರಧಾನ ಮಾಡು" ಎಂದು ದಿವ್ಯವಾಗಿ, ಪ್ರತ್ಯಕ್ಷನಾದ ನೃಸಿಂಹನನ್ನು ಸ್ತುತಿಸಿದ್ದಾನೆ ಪ್ರಹ್ಲಾದ. ಭಗವತ್ ಶ್ರೇಷ್ಠಾಂಶವಲ್ಲದೇ ಏನು. ಚಿರಂಜೀವಿಗಳಲ್ಲಿ ಒಬ್ಬನಾಗಿ ಭಕ್ತಾಗ್ರೇಸರನಾಗಿ, ಭಕ್ತರಿಗೆ ಮೇಲ್ಪಂಕ್ತಿಯಾಗಿ ಸದಾ ಪ್ರಕಾಶಿಸುತ್ತಿದ್ದಾನೆ.

ಸ್ವಾಮಿಯು ಕಾಲಸ್ವರೂಪನು. ದೊಡ್ಡ ಕೃಷಿಗಾರನಂತೆ ಮುದಿಯಾಗಿ ಒಣಗುವ ಪೈರುಗಳನ್ನು ಕಿತ್ತೊಗೆವನು. ರೋಗಿಷ್ಟವಾದ ಕೆಟ್ಟವುಗಳನ್ನು ತೆಗೆವನು, ಕಳೆಕೀಳುವನು. ಈ ತನ್ನ ಮನೋಹರ ವನವು ಸದಾ ಸೊಗಸಾಗಿರಲೆಂದು ಅಪ್ರಯೋಜಕವಾದುದೆಲ್ಲಾ ನಾಶ ಮಾಡುವವನು. ಯಮಧರ್ಮನೇ ಅವನು. ಅದೂ ಧರ್ಮವೇ— ವಿಧಾಯಕದಂತೆ ವಿನಾಶವೂ ಒಂದು ನಡೆಯಬೇಕಾದ ಧರ್ಮ, ಅದು ಮಾಡುವ ಯಮರಾಜನಿಗೂ ಯಮಧರ್ಮರಾಜನೆಂದು ಹೆಸರು. ಎಲ್ಲವೂ ಕಾಲಾಧೀನವಾದುವು. ಕಾಲವು ಕಳೆದಂತೆಲ್ಲಾ ಕಾಣೆಸವು

ಇಹ, ಪರ, ದೇವದಾನವರ ವಿಷಯ ಹೇಳಿಬಿಡಲಿಲ್ಲಾ. ಮೃಗ ಪಕ್ಷಿಗಳಲ್ಲೂ ತಾನಿದ್ದಾನೆ. ಮೃಗಗಳಲ್ಲಿ ಸಿಂಹರಾಜನೂ, ಪಕ್ಷಿಗಳಲ್ಲಿ ಗರುಡನೂ ಅವನೇ. ಎಲ್ಲಾ ಸೃಷ್ಟಿಯನ್ನೂ ತುಂಬಿದ್ದಾನೆ; ಗಾಂಭೀರ್ಯದಿಂದ, ಅಮಿತಶಕ್ತಿಯಿಂದ, ಪ್ರಭಾವದಿಂದ ಪ್ರಜ್ವಲಿಸುತ್ತಿದ್ದಾನೆ - ಪ್ರಕೃತಿ ಸೃಷ್ಟಿಯಲ್ಲಿ.

**ಪವನಃ ಪವತಾಮಸ್ಮಿ । ರಾಮಃ ಶಸ್ತ್ರಭೃತಾಮಹಮ್ ।**
**ಝಷಾಣಾಂ ಮಕರಶ್ಚಾಸ್ಮಿ । ಸ್ರೋತಸಾಮಸ್ಮಿ ಜಾಹ್ನವೀ ॥೩೧॥**

ಪಾವನ ಮಾಡುವ ವಸ್ತುಗಳಲ್ಲಿ ವಾಯುವೂ, ಶಸ್ತ್ರಧಾರಿಗಳಲ್ಲಿ ಶ್ರೀರಾಮನೂ, ಮತ್ಸ್ಯಗಳಲ್ಲಿ ಮಕರವೂ, ನದಿಗಳಲ್ಲಿ ಗಂಗಾನದಿಯೂ ನಾನಾಗಿದ್ದೇನೆ.

ವಾಯುವು ಎಲ್ಲಾ ದುರ್ಗಂಧಗಳನ್ನೂ ನಿವಾರಿಸುವುದು. ವಾಯುವಿನಲ್ಲಿರುವ ಆಮ್ಲಜನಕವು ಯಾವ ಕೊಳೆಪ, ದುರ್ಗಂಧದ, ವಿಷಕ್ರಿಮಿಯ ಪದಾರ್ಥವನ್ನಾಗಲೀ, ಪಚನಮಾಡಿ ಶುಚಿ ಮಾಡುವುದು. ವಾಯುವಿನ ಚಲನಶಕ್ತಿಯೊಂದು ಮಹತ್ತಾದ ಶಕ್ತಿ. ವಾಯುವಿಲ್ಲದಿದ್ದ ಡೆಯಿಲ್ಲ. ವಾಯುವಿಲ್ಲದೆ ಜೀವಧಾರಣೆಯು ಕೂಡಾ ಅಸಾಧ್ಯ. ವಾಯುವಿಗಾಗಿ ಹೇಗೆ ಜೀವಿಗಳು ಹಾತೊರೆಯುವುವು. ಅದರಲ್ಲೂ ದುಡಿವಪ್ರಾಣಿ, ಆಯಾಸದಿಂದಿರುವ ಪ್ರಾಣಿ, ಶೆಕೆಯಲ್ಲಿರುವ ಪ್ರಾಣಿ ವಾಯುಗಾಗಿ ಒದ್ದಾಡುವುವು. ಅದರ ಚಲನ ಶಕ್ತಿಯಿಂದ ತಂಪನ್ನುಂಟುಮಾಡು

ವುದು. ಗಾಳಿ ಬೀಸಿದರೆ ಆಯಾಸ ಪರಿಹಾರವಾಗುವುದು. ಚಾಮರ ಸೇವೆ, ಚಾಮರದಿಂದ ಗಾಳಿಯಾಡಿಸುವುದು ದೇವರ ಪೂಜೆಯಲ್ಲೊಂದು ಉಪಚಾರ ವಿಧಿಯಿದೆ. ವಾಯುವು ಚಲನಶಕ್ತಿ ವಿಶೇಷದಿಂದ ಉಸಿರಾಡುವ ಎಲ್ಲಾ ಪ್ರಾಣಿಗಳಂತರದಲ್ಲೂ ಹೊಕ್ಕು ಶ್ವಾಸೋಚ್ಛ್ವಾಸ ಮೂಲಕ ರಕ್ತಶುದ್ಧಿಯನ್ನು ಪ್ರತಿಕ್ಷಣವು ಮಾಡುತ್ತಿರುತ್ತದೆ. ಇದೇ ಪ್ರಾಣ ವಾಯುವು. ಇದಿಲ್ಲದಿದ್ದರೆ, ಇದು ನಿಂತರೆ ಪ್ರಾಣ ಹಾರಿ ಹೋದಂತೆ. ಇದರ ನಿರೋಧದಿಂದಲೇ, ಇದರ ಕ್ರಮದಿಂದಲೇ ಯೋಗಿಗಳು ಪ್ರಾಣಾಯಾಮ ಯೋಗವನ್ನು ಸಾಧಿಸುವರು. ಅಂತಃಶುದ್ಧಿಯನ್ನೂ, ಅಂತಃಕರಣ ಶುದ್ಧಿಯನ್ನೂ ಮಾಡುವರು. ಈ ಯೋಗಾಭ್ಯಾಸವೇ ಜ್ಞಾನಕ್ಕೆ ಮೆಟ್ಟಿಲು, ಪರಮಾತ್ಮನೊಡನೈಕ್ಯವಾಗಲು ಸಾಧನೆ. ವ್ಯೋಮೋಕಾರದಿಂದ ಶುದ್ಧ ಚೈತನ್ಯ ವಸ್ತುವು "ಆಕಾಶಾತ್ ವಾಯುವು" ಎಂಬ ತೈತ್ತರೀಯ ನುಡಿಯಂತೆ, ವಾಯುವಾಗಿ ಪರಿಣಮಿಸಿತು. "ವಾಯೋರಗ್ನಿಃ" ಎಂದು ಮುಂದೆ ಸೃಷ್ಟಿಕ್ರಮವನ್ನು ವಿವರಿಸುತ್ತಾ ಅದೇ ವಾಯುವಿನಿಂದಲೇ ಅಗ್ನಿಯೂ, ಇತರ ಪಂಚಭೂತಗಳೂ ಉತ್ಪನ್ನವಾದುವು. ಪವಮಾನಸುತರೆಂದು, ಶ್ರೀ ಆಂಜನೇಯನೂ, ಭೀಮನೂ ಅವತರಿಸಿ ಅಮಿತ ಶಕ್ತಿಯಿಂದ ರಾರಾಜಿಸಿದರು.

ಶಸ್ತ್ರಧಾರಣೆ ಮಾಡುವುದು ದುಷ್ಟನಿಗ್ರಹಕ್ಕಾಗಿ ಶಿಷ್ಟಪರಿಪಾಲನೆಗಾಗಿ. ಹಾಗೆ ಸ್ವಾಮಿ ಶಸ್ತ್ರಧಾರಣೆ ಮಾಡಿದುವರಲ್ಲಿ ಶ್ರೀರಾಮನಾಗಿ ಅವತರಿಸಿದುದು ಬಹಳ ಶ್ರೇಷ್ಠ. ರಾಮಾವತಾರದಲ್ಲಿ ಸ್ವಾಮಿಯು ಮಾನವನಾಗಿ ಜನಿಸಿ, ಹೇಗೆ ಮಾನವ ಧರ್ಮದಿಂದಲೇ ಏನನ್ನಾದರೂ ಸಾಧಿಸಿ ಧರ್ಮ ಕಾಪಾಡಬಹುದೆಂದು ತೋರಿದನು. ಅಮಾನುಷ ನಡತೆ, ನಡವಳಿಕೆಗಳು ರಾಮ ಚರಿತೆಯಲ್ಲಿ ಕಾಣೆವು. ಶಸ್ತ್ರಧಾರಣೆಯೂ, ಅದರಿಂದ ಉತ್ಪನ್ನವಾಗುವ ಅಮಿತ ಶಕ್ತಿಯೂ ಹೇಗೆ ಪವಿತ್ರವೆಂದೂ, ಅದರ ಉಪಯೋಗವು ಯುಕ್ತಾಚರಣೆಯನ್ನನುಸರಿಸಬೇಕೆಂದೂ, ಶ್ರೀ ರಾಮರು ತೋರಿ ಕೊಟ್ಟರು. ಅವನ ಕೈಯಲ್ಲಿನ ಕೋದಂಡವು ಕೇವಲ ದಂಡವಾಗಿ ಮಾತ್ರ ಉಪಯೋಗವಾಗಿ "ದುಷ್ಟ ನಿಗ್ರಹಕ್ಕೆ" ಮೀಸಲಾಗಿತ್ತು. ಈಗಿನಂತೆ ಶಸ್ತ್ರಾಸ್ತ್ರಗಳನ್ನು ಸಾರ್ವಜನರ ಧ್ವಂಸಕ್ಕೆ

ಅವಿವೇಕದಿಂದ ಉಪಯೋಗಿಸುತ್ತಿರಲಿಲ್ಲಾ. ಅವುಗಳ ಉಪಯೋಗದಲ್ಲೂ ಯುದ್ಧದಲ್ಲೂ ರೀತಿ ನೀತಿಯುಂಟು, ಧರ್ಮ ಉಂಟು.

ಹೆಚ್ಚು ಶಕ್ತಿಯುತವಾದ ಶಸ್ತ್ರ ಕೈನಲ್ಲಿದ್ದಷ್ಟೂ ಹೆಚ್ಚು ದಯಾಧರ್ಮವು ಉಚಿತ, ವಿವೇಚನೆಯಿಂದ ಉಪಯೋಗಿಸಬೇಕಾದುದು ಅಗತ್ಯ. ಆ ಶಕ್ತಿ ಹೊಂದಿದವನಲ್ಲಿ ಎಲ್ಲರ ಭೀತಿ ಹುಟ್ಟುವುದು; ಆದರೆ ಅದನ್ನು ಧರ್ಮದಿಂದ ಉಚಿತ ರೀತಿಯಲ್ಲುಪಯೋಗಿಸುವನಲ್ಲಿ ಗೌರವವು ಹುಟ್ಟುವುದು. ಆ ರೀತಿ ಶಸ್ತ್ರಶಕ್ತಿ ಉಪಯೋಗಿಸುವನೂ, ಅಹಿಂಸಕನೇ. ಶ್ರೀರಾಮರು ಎಂಥಹ ಶಕ್ತಿ ಶಸ್ತ್ರಧಾರಿಗಳಾದರೂ, ತಮಗೆ ಬಂದ ಕಷ್ಟಗಳನ್ನು ಸಹನೆಯಿಂದ ಸೈರಿಸಿ, ಧರ್ಮಮಾರ್ಗದಿಂದ ಎದುರಿಸಲು ಪ್ರಯತ್ನಿಸುತ್ತಿದ್ದರೇ ಹೊರತು, ಮಾರ್ಗ ಬಿಟ್ಟಾಗಲೀ ದುಡುಕಿಯಾಗಲೀ ಅವನ್ನುಪಯೋಗಿಸುತ್ತಿರಲಿಲ್ಲಾ. ಕ್ಷಮಾನಿಧಿ ಶ್ರೀರಾಮ; ಶರಣಾಗತ ವತ್ಸಲ ಶ್ರೀರಾಮ. ಎಂಥಹ ತಪ್ಪಿತಸ್ಥನಾದರೂ ಕ್ಷಮಿಸಿಬಿಡುವರು. ಶರಣುಹೊಕ್ಕವರು, ಶತೃಪಕ್ಷದವರಾದರೂ ರಕ್ಷಿಸುವರು. ಅವರ ಶಸ್ತ್ರಕ್ಕೆ ಕೆಲಸವೇ ಇರಲಿಲ್ಲಾ ಕೊನೆಯವರಿಗೂ; ದುಷ್ಟ ರಾವಣನನ್ನು ವಧಿಸಬೇಕಾದ ಪ್ರಮೇಯ ಬರುವವರೆಗೂ.

ಪ್ರಪಂಚದಲ್ಲಿ ಭೂಭಾಗ ಆಕಾಶಗಳಲ್ಲಿ ಜೀವಿಸುವ ಪ್ರಾಣಿಗಳಿಗಿಂತಲೂ ಜಲವಾಸಿಗಳು ಅಧಿಕ ಮತ್ತು ಅದ್ಭುತವಾಗಿವೆ. ಅದರಲ್ಲಿ ಮತ್ಸ್ಯಗಳೇ ಜಾಸ್ತಿ ಸಂಖ್ಯೆಯವು. ಮತ್ಸ್ಯಗಳು ಮಾನವನ ಜೀವನ ಸಂಪರ್ಕ ಜಾಸ್ತಿ ಹೊಂದಿವೆ. ಅವುಗಳಲ್ಲಿ ಉತ್ತಮವಾದ ಮಕರಸ್ವಾಮಿ. ಅವತಾರಗಳೊಂದಾದ ಮತ್ತು ವೇದಗಳನ್ನು ರಕ್ಷಿಸಿ ತಂದ ಮತ್ಸ್ಯಾವತಾರವೇ ಸ್ವಾಮಿಯ ಪ್ರಥಮಾವತಾರ. ಜೀವೋತ್ಪತ್ತಿ ಪ್ರಗತಿಯಲ್ಲಿಯೂ ಮತ್ಸ್ಯವು ಮುಖ್ಯಸ್ಥಾನ ಹೊಂದಿದೆ.

ವಾಯುವೆಂತು ಪಾವನವನ್ನುವೋ ಅಂತೆ ಜಲವೂ. ಹರಿಯುವ ನೀರು, ನದಿ ಯಾವಾಗಲೂ ಸ್ವಚ್ಛ, ಶುದ್ಧಿಕರ. ಜೀವಿಗಳಿಗೆ ಅವಶ್ಯಕವಾಗಿ ಬೇಕಾದುದು, ಆಹಾರಕ್ಕಿಂತ ಹೆಚ್ಚಿನ ಅವಶ್ಯಕತೆಯದು, ನೀರು. ಆ ನೀರು ಧಾರಾಪೂರಕವಾಗಿ ಭೂಮಿಯಲ್ಲಿ ಬಿದ್ದು ನದೀ ರೂಪದಲ್ಲಿ

ಸತತವೂ ಪ್ರವಹಿಸಿ ಮಾನವನಿಗೆ, ಜೀವಜಂತುಗಳಿಗೆ ಸರ್ವತೋಮುಖ ಉಪಕಾರಿಯಾಗಿದೆ. ಅದರಲ್ಲೂ ಮಹತ್ತಾದ ಗಂಗೆಯು ವಿಷಯ ವಂತೂ ಹೇಳಬೇಕಾದುದೇ ಇಲ್ಲಾ. ಹಿಮವತ್ ಪುತ್ರಿಯಾಗಿ ಜನಿಸಿ, ಜೀವನದಿಗಳಲ್ಲೆಲ್ಲಾ ಅತಿ ಉದ್ದ ಮತ್ತು ವಿಶಾಲವಾದ ಈ ಗಂಗಾಮಾತೆಯು ಭಾರತ ಮಾತೃಭೂಮಿಯನ್ನು ಕೈಯಿಂದ ಬಾಚಿ ತಬ್ಬಿದಂತೆ ಭಾಸ ವಾಗುತ್ತದೆ. ಭಾರತದ ಉತ್ಕೃಷ್ಟ ಫಲಭರಿತವಾದ ದೇಶಗಳೂ, ರಮ್ಯ ವಾದ ಪಟ್ಟಣಗಳೂ, ತೀರ್ಥಯಾತ್ರಾ ಸ್ಥಳಗಳೂ, ಅದರ ಇಬ್ಬದಿಯೂ ತುಂಬಿದೆ. ಉತ್ತರ ಭಾರತಕ್ಕೆ ಉತ್ತಮ ಸ್ಥಾನವಿರುವುದು ಗಂಗೆ ಯಿಂದಲೆ. ಕಾಶೀಕ್ಷೇತ್ರವಿರುವುದು ಗಂಗಾದಡದಲ್ಲಿಯೇ. ಕಾಶೀವಾಸ ಗಂಗಾಪಾನ ಜೀವನಕ್ಕತಿಶ್ರೇಷ್ಠವೆಂದು ಭಾರತೀಯರೆಲ್ಲರೂ ನಂಬಿರು ವರು.

**ಸರ್ಗಾಣಾಮಾದಿರಂತಶ್ಚ । ಮಧ್ಯಂ ಚೈವಾಹಮರ್ಜುನ ।**
**ಅಧ್ಯಾತ್ಮವಿದ್ಯಾ ವಿದ್ಯಾನಾಂ । ವಾದಃ ಪ್ರವದತಾಮಹಮ್ ॥೩೨॥**

ಸೃಷ್ಟಿಯ ಆದ್ಯಂತ ಮಧ್ಯಮವವೂ, ವಿದ್ಯೆಗಳಲ್ಲಿ ಅಧ್ಯಾತ್ಮಿಕ ವಿದ್ಯೆಯೂ, ವಾದಜಲ್ಪವಿತಂಡಗಳಲ್ಲಿ, ಗುರುಶಿಷ್ಯ ಸಂವಾದ ರೂಪವಾದ ಅರ್ಥನಿರ್ಣಯ ಮಾಡುವ ಏಕಾರ್ಥವಾದವೂ (ಪ್ರವದತ್) ನಾನಾಗಿರು ವೆನು.

ಸೃಷ್ಟಿಯಲ್ಲಿ ಆಕಾಶಾದಿ ಪಂಚಭೂತಗಳನ್ನೂ, ಜೀವಾಧಿಷ್ಠವಾದ ಸೃಷ್ಟಿಯನ್ನೂ (ಚರಾಚರ), ಪ್ರಕೃತಿ, ಜೀವ ಎಲ್ಲದರ ಉತ್ಪತ್ತಿ ಸ್ಥಿತಿ ಲಯ ನಾನಾಗಿರುವೆನು ಎಂದು "ಸರ್ವಸ್ಯೈವ ಸರ್ಗಮಾತ್ರಸ್ಯೇತಿ" ಎಂದು ಶಂಕರರು ಅರ್ಥಮಾಡಿದ್ದಾರೆ. "ಸರ್ಗಶಬ್ದೇನ ಸೃಜ್ಯಂತ ಇತಿ ಸರ್ವಾಣಿ ಕಾರ್ಯಾಣಿ ಗೃಹ್ಯಂತೇ"—ಸಮಸ್ತ ಸೃಷ್ಟಿಕಾರ್ಯವನ್ನೂ ಸೃಜಿ ಸಿರುವ ಎಲ್ಲವನ್ನೂ ಸರ್ಗಶಬ್ದದ ಅರ್ಥವಾಗಿ ಗ್ರಹಿಸಬೇಕೆಂದು ಆನಂದ ಗಿರಿಗಳು ಟೀಕೆಮಾಡಿದ್ದಾರೆ–ಶ್ರೀ ಶಂಕರಭಾಷ್ಯಕ್ಕೆ.

ಪಿಂಡಾಡ ಬ್ರಹ್ಮಾಂಡಗಳನ್ನೆಲ್ಲಾ ಅವನೇ ಒಳಗೊಂಡಿರುವಾಗ, ಎಲ್ಲಾ ಅವನಲ್ಲೇ ವಾಸಿಸುವಾಗ, ಸಮಸ್ತ ಸೃಷ್ಟಿಯೂ ವ್ಯಷ್ಟಿ, ಸಮಷ್ಟಿಯ

ಕೊನೆಮೊದಲು ಅಂತರವೂ ಅವನೇ. ಅಖಂಡದಲ್ಲೆಲ್ಲಾ ಅವನೇ ಅಂತರ್ಯಾಮಿಯಾಗಿರುವಾಗ ಎಲ್ಲಾ ಅವನೇ. ಅವನು ಬಿಟ್ಟು ಯಾವುದೂ ಇಲ್ಲಾ. ಅವುಗಳುತ್ಪತ್ತಿಗೆ ಅವನೇ ಕಾರಣನು (ಆದಿ), ಆದಿ ಅಂಕುರಿಸಿದ ಮೇಲೆ ಅಂತ್ಯ ಸ್ವಯಂಸಿದ್ಧ. ಆದಿ ಅಂತ್ಯಗಳಂತರವೂ ಅವನೇ ವ್ಯಾಪಿಸಿದ್ದಾನೆ. ಸರ್ವವ್ಯಾಪಿ, ಸರ್ವಕಾರಣ, ಸರ್ವರಕ್ಷಕ, ಸರ್ವಲಯ ಸ್ಥಾನ. ಅನಂತನಾಗಿರುವ ಅವನನ್ನು ಬಿಟ್ಟು ಯಾವುದಕ್ಕಾದರೂ ಮತ್ತೆಲ್ಲಿ ಸ್ಥಾನ, ಮಾನ, ಸ್ಥಿತಿಗತಿಗಳುಂಟು. ಮುಂದೆ ವಿಶ್ವರೂಪದರ್ಶನದಲ್ಲಿ ಇದನ್ನೇ ಅರ್ಜುನನಿಗೆ ಕಣ್ಣಿಗೆ ಕಟ್ಟಿದಂತೆ ಪ್ರದರ್ಶನಮಾಡುತ್ತಾನೆ ಸ್ವಾಮಿ. ನಾವೂ ಸರ್ವದಾ ಸರ್ವದರಲ್ಲೂ ವಿಶ್ವರೂಪವನ್ನು ನೋಡುತ್ತಿದ್ದರೂ, ಕಾಣಲಾರದ, ಅರಿಯಲಾರದ ಅಶಕ್ತರು. ಸರ್ವದಾ ಸರ್ವದರಲ್ಲೂ ತೋರುತ್ತಿದ್ದಾನೆ ಪರಮಾತ್ಮ. ಕಾಣದ ಕುರುಡರು, ನೋಡಿ ತಿಳಿಯಲಾರದ ಅವಿವೇಕಿಗಳು – ಇದಕ್ಕೆ ಮಾಯಾ ಮುಸುಕೇ ಕಾರಣ. ಅದನ್ನು ಸ್ವಾಮಿ ಭೇದಿಸಿ, ಅರ್ಜುನನಿಗೆ ವಿಶ್ವರೂಪವನ್ನು ತೋರಿದಂತೆ, ನಮಗೂ ಜ್ಞಾನಕೊಟ್ಟು ಅಂತಚಕ್ಷು ತೆರೆಸಿ ಕರುಣಿಸಬೇಕು. ಸರ್ವದಾ, ಸರ್ವದರಲ್ಲೂ ಅವನನ್ನೇ ನಾವು ಕಂಡು ಧ್ಯಾನಿಸಬೇಕು.

ವಿದ್ಯೆಗಳಲ್ಲಿ ಅಧ್ಯಾತ್ಮ ವಿದ್ಯೆಯೇ ವಿದ್ಯೆ. ಮಿಕ್ಕ ವಿದ್ಯೆಗಳು ವಿದ್ಯೆಗಳೆಂದು ನಾವು ಕರೆದರೂ, ಅಧ್ಯಾತ್ಮ ವಿದ್ಯೆಯ ಅಳತೆಯಿಂದ ಅವಿದ್ಯೆಯೇ; ಏನಿದ್ದರೂ ಉದರ ನಿಮಿತ್ತವಾದ ವಿದ್ಯೆ, ನಾವೇನೋ ತಿಳಿದುಕೊಂಡು ಬಿಟ್ಟದ್ದೇವೆಂದು ಮಾಯಾ ಮುಸುಕಿನಲ್ಲಿ ನಮ್ಮನ್ನು ಅಜ್ಞಾನಿ ದಾಂಭಿಕರನ್ನಾಗಿಮಾಡುವ ವಿದ್ಯೆಯಷ್ಟೆ. ಮೋಕ್ಷ ಪ್ರಧಾನವಾದ, ಪರಾವಿದ್ಯೆಯೇ ನಿಜವಾದ ಹೊಂದಿ ಕೃತಾರ್ಥರಾಗಬೇಕಾದ ವಿದ್ಯೆ.

೮ ನೇ ಅಧ್ಯಾಯದ ಆದಿಯಲ್ಲೇ ಅರ್ಜುನನು ಮುಖ್ಯವಾಗಿ ತಿಳಿಯಬೇಕಾದ "ಕಿಂ ತದ್ಬ್ರಹ್ಮ, ಕಿಮಧ್ಯಾತ್ಮಂ" ಎಂದು ಸ್ವಾಮಿಯನ್ನು ಪ್ರಶ್ನಿಸಿ, "ಅಕ್ಷರಂ ಬ್ರಹ್ಮಪರಮಂ, ಸ್ವಭಾವೋ, ಧ್ಯಾತ್ಮಮುಚ್ಯತೇ" ಎಂದು ನಿಶ್ಚಿತವಾದ ಉತ್ತರವನ್ನು ಪಡೆದಿದ್ದಾನೆ. ನಾಶರಹಿತವಾದ ಪರಬ್ರಹ್ಮನ ಸ್ವಂತಭಾವವಾದ ಶರೀರ ಭೋಕ್ತೃವಾದ ಜೀವನೇ

ಅಧ್ಯಾತ್ಮವು. ಅದರ ತಿಳುವೇ ಅಧ್ಯಾತ್ಮ ವಿದ್ಯೆ. ಯಾಜೂಷಿಕಠೋಪ ನಿಷನಿತ್ತಿನಲ್ಲಿ (ಯಜುರ್ವೇದೀಯ ಕಠೋ ಪ ನಿ ಷ ತ್ – ನಾಚಿಕೇತ ಯುಮರು ಬಂದಿರುವ ಕಾಠಕೋಪನಿಷತ್ತೆಂದೂ ಕರೆಯಲ್ಪಡುವುದಲ್ಲ.) ಮುಕ್ತಿಕೋಪನಿಷತ್ತಿನ ಪಟ್ಟಿಯ ಪ್ರಕಾರ ೮೩ ನೇದು–"ಶುದ್ಧ ಮೀಶ್ವರ ಚೈತನ್ಯಂ ಜೀವ ಚೈತನ್ಯ ಮೇವ ಚ" ಎಂದು ಬಂದಿದೆ. "ಜ್ಞಾತ್ವಾ ಬ್ರಹ್ಮಾಹ ಮಸ್ಮೀತಿ ಬ್ರಹ್ಮೈವ ಭವತಿ ಸ್ವಯಂ" ಎಂದೂ ಬೋಧಿಸಿದೆ. ಇದೇ ಅಧ್ಯಾತ್ಮ ವಿದ್ಯೆ. ಶುದ್ಧವಾದ ಈಶ್ವರ ಚೈತನ್ಯವೇ, ಸರ್ವಗತವಾದ ಸರ್ವವ್ಯಾಪ್ತವಾದ ಜೀವ ಚೈತನ್ಯವೆಂದೂ, ಆ ಬ್ರಹ್ಮ ಚೈತನ್ಯ ನಾನೆಂದು ತಿಳಿದರೆ ಬ್ರಹ್ಮವೇ ತಾನಾಗುತ್ತಾನೆಂದೂ ತಿಳಿವುದೇ ಅಜ್ಞಾನದಿಂದ ಬಿಡುಗಡೆ ಮಾಡುವ ಕೈವಲ್ಯ ವಿದ್ಯೆ – ಅಧ್ಯಾತ್ಮ – ಅದೇ ಪರಮಾತ್ಮ. ಪ್ರಜಾಪತಿಯಿಂದಲೇ ಬ್ರಹ್ಮವಿದ್ಯೆ (ಅಧ್ಯಾತ್ಮ) ವೇನೆಂಬುದು ವಿವರಿ ಸಿರುವ ಈ ಕಠೋಪನಿಷತ್ತಿನಲ್ಲೇ "ಸರ್ವಾಂತರೇಣ ಪೂರ್ಣಶ್ಚ ಬ್ರಹ್ಮ ಸಾನ್ಯೋ ನ ಕೇನಚಿತ್" ಎಂದೂ ಎಲ್ಲಾ ಅಂತಃಪೂರ್ಣವಾಗಿ ಬ್ರಹ್ಮವೇ ಅಲ್ಲದೆ ಮತ್ತಾವುದೂ ಅಲ್ಲವೆಂದೂ ನಿರ್ಧರವಾಗಿ ಸಾರಿದೆ. ಮಹೋಪ ನಿಷತ್ತಿನಲ್ಲಿಯೂ ವರಾಹೋಪನಿಷತ್ತಿನಲ್ಲಿಯೂ ಬಂದಿರುವಂತೆ "ದುರ್ಲಭೋ ವಿಶಯತ್ಯಾಗೋ, ದುರ್ಲಭಂತತ್ವ ದರ್ಶನಃ। ದುರ್ಲಭಾ ಸಹಜಾವಸ್ಥಾ ಸದ್ಗುರೋಃ ಕರುಣಾಂ ವಿನ ॥" ಎಂಬಂತೆ ಈ "ಸ್ವಭಾವ (ಅಧ್ಯಾತ್ಮ)" "ಸಹಜಾವಸ್ಥೆ – ಸಹಜವಾಗಿರುವ ಸ್ಥಿತಿ" ಸದ್ಗುರುವಿನ ಕರುಣೆಯಿಲ್ಲದೆ, ವಿಷಯ ತ್ಯಾಗಮಾಡಿ, ತತ್ವದರ್ಶನ ಮಾಡಿದ ಹೊರತು ಸಿಗುವುದಿಲ್ಲಾ. ಅವಕ್ಕೆ ಇವು ಮೂರನ್ನೂ ಸದ್ಗುರು ಕರುಣ ಪಾತ್ರ ಮಾಡಿದ್ದಾರೆ. ಆ ಸದ್ಗುರು ಉಪದೇಶಿಸಿರುವ ಪರಮ ವಿದ್ಯವಾದ ಈ ಅಧ್ಯಾತ್ಮವೇ ವಿದ್ಯೆಗಳಲ್ಲಿ ವಿದ್ಯೆ – ನೈಜಕವಾಗಿ ಸ್ವಾಭಾವಿಕವಾಗಿರುವ ವಿದ್ಯೆ. ಹೊಸದಾಗಿ ಏನನ್ನೂ ಕಲಿಸದೆ, ಇರುವ ಅಜ್ಞಾನವನ್ನೆಲ್ಲಾ ನಾಶಮಾಡಿ, ಅಜ್ಞಾನದಿಂದ ನಾನು ನನ್ನದೆಂದೂ, ಅನಿತ್ಯವನ್ನು ನಿತ್ಯ ವೆಂದೂ ತಿಳಿದಿರುವ ಆ ಅಜ್ಞಾನದಿಂದ ಆಚ್ಛಾದಿತವಾದ ನಿಜತತ್ವವಾದ "ಸಹಜಾವಸ್ಥಾ" "ಸ್ವಭಾವ"ವನ್ನು ಪ್ರಕಾಶಿಸುವಂತೆ ಮಾಡುವುದೇ ಅಧ್ಯಾತ್ಮ ವಿದ್ಯೆ.

ಎಲ್ಲಾ ವಾದವೂ ನ್ಯಾಯವಲ್ಲಾ. ಪ್ರತಿವಾದಿಯೊಡನೆ ವಾದಿಸುವಾಗ "ಶುಶ್ರೂಭಿಕ್ಷಾ ಪ್ರತಿಕ್ಷೇಪ ನ್ಯಾಯ"—"ಅಲಂಕೃತ್ಯ ಶಿರಶ್ಛೇದಃ"—"ಸ್ಥೂಣಾ ನಿಖನನ ನ್ಯಾಯ" ಮತ್ತು "ಮಲ್ಲಪ್ರತಿ ಮಲ್ಲನ್ಯಾಯ" ಎಂದರೆ (೧) ಸೊಸೆಗೇನು ಭಿಕ್ಷ ಹಾಕುವುದಿಲ್ಲವೆಂದು ಹೇಳಿ ವಾಪಸು ಕಳುಹಲಧಿಕಾರವಿದೆ ಎಂದು ಮನೆಗೆ ಬರುತ್ತಿದ್ದ ಅತ್ತೆ ಹೇಳಿ, ಭಿಕ್ಷುವನ್ನು ತನ್ನೊಡನೆ ಪುನಃ ಮನೆಯೊಳಕ್ಕೆ ಕರೆದುಕೊಂಡುಹೋಗಿ – ಹೋಗು ನಾನು ಈಗ ಹೇಳುತ್ತೇನೆ ಯಜಮಾನಿಯಾಗಿ ಭಿಕ್ಷ ಹಾಕುವುದಿಲ್ಲವೆಂದು ಎಂದು ಕಳುಹಿಬಿಡುವುದು (೨) ಶಿರಚ್ಛೇದನ ಮಾಡುವುದಕ್ಕೆ ಮುಂಚೆ ಶೃಂಗರಿಸಿ ಶಿರಚ್ಛೇದನ ಮಾಡುವಂತೆ, ಏನೋ ಭರವಸೆಕೊಟ್ಟು ಇಲ್ಲದಂತೆ ಮಾಡುವುದು. (೩) ಒಂದು ಕಂಬವನ್ನು ಅದರ ಗುಣಿಯಲ್ಲೇ ಅಲ್ಲಾಡಿಸಿ ಅಲ್ಲಾಡಿಸಿ ಇನ್ನೂ ಭದ್ರವಾಗಿ ಹೂಣುವುದು – ಪ್ರತಿಕಕ್ಷಿಯನ್ನು ಅವನ ವಾದದಲ್ಲೇ ಹಿಡಿದು ಸೋಲಿಸುವುದು. (೪) ಸಮವಾದ ಎದುರಾಳಿಗಳೊಡನೆ ಮಲ್ಲ ಪ್ರತಿಮಲ್ಲನ್ಯಾಯದಂತೆ ಹೋರಾಡುವುದೇ ಮೊದಲಾದ ವಾದ ವಿತರಣಗಳಲ್ಲಿ ಶ್ರೀಶಂಕರರು ಅವರ ಎದುರು ವಾದಿಗಳನ್ನು ಸೋಲಿಸುತ್ತಿದ್ದರು. ಆದರೆ ಅದೇ ಅವರ ಪ್ರಿಯಶಿಷ್ಯರೊಡನೆ ವಾದಿಸುವಾಗ ಅರ್ಥನಿರ್ಣಯಮಾಡುವ ಏಕಾರ್ಥವಾದ (ಪ್ರವದತಾಂ) ವನ್ನು ಮಾಡಿ ಅವರಿಗೆ ಉಪದೇಶಿಸುತ್ತಿದ್ದರು; ಅವರ ಮನದಟ್ಟುವಂತೆ ಮಾಡುತ್ತಿದ್ದರು. ಇದು ಉತ್ಕೃಷ್ಟವಾದ.

**ಅಕ್ಷರಾಣಾಮಕಾರೋಽಸ್ಮಿ । ದ್ವಂದ್ವಃ ಸಾಮಾಸಿಕಸ್ಯ ಚ ।**
**ಅಹಮೇವಾಕ್ಷಯಃ ಕಾಲೋ । ಧಾತಾಹಂ ವಿಶ್ವತೋಮುಖಃ ॥೩೩॥**

ಅಕ್ಷರಮಾಲೆಯಲ್ಲಿ ಆದ್ಯಕ್ಷರವಾದ 'ಅ'ಕಾರವೂ, ಸಮಾಸಗಳಲ್ಲಿ ದ್ವಂದ್ವಸಮಾಸವೂ, ಅಕ್ಷಯವಾದ ಕಾಲವೂ ವಿಧಿಸುವುದರಲ್ಲಿ ವಿಶ್ವತೋಮುಖ (ಬ್ರಹ್ಮ) ನಾನಾಗಿರುವೆನು.

ಎಲ್ಲಕ್ಕೂ ಆದಿಯಾಗಿರುವಂತೆ ಅಕ್ಷರಮಾಲೆಗೂ ಆದಿಯಾದ 'ಅ'ಕಾರ, 'ಓಂ'ಕಾರದಲ್ಲಿರುವ ತ್ರಿಮಾತ್ರೆಗಳಾದ 'ಅ', 'ಉ', 'ಂ'ಗಳಲ್ಲೂ ಮೊದಲನೆಯದು. ಶಬ್ದಬ್ರಹ್ಮದ ವಿವರಣೆಗೆ ತಳಹದಿಯಾದ ಅಕ್ಷರಗಳಿಂದಲೇ

ಸರ್ವವೂ ವಿವರಿಸಲ್ಪಟ್ಟಿದೆ. ಎಲ್ಲ ಮಹತ್‌ಕಾವ್ಯಗಳೂ ವೇದವೇದಾಂತ ಗಳೂ ಈ ಅಕ್ಷರಗಳಿಂದಲೇ ಪ್ರತಿಪಾದಿಸಲ್ಪಟ್ಟಿವೆ. ಇವುಗಳಲ್ಲಿ ಆದಿ' ಇವಕ್ಕೆಲ್ಲಾ ಆದಿ ಭಗವಂತನೇ. ವ್ಯಾಕರಣ ಶಾಸ್ತ್ರದಲ್ಲಿ ಸಮಾಸಗಳ ಪ್ರಕರಣವು ಮುಖ್ಯ. ಅವುಗಳಲ್ಲಿ ದ್ವಂದ್ವಸಮಾಸವು ತಾನೆಂದಿದ್ದಾನೆ ಪರಮಾತ್ಮ. ಕಾಲವು ಅಕ್ಷಯವು. ಅಕ್ಷಯ ಎಂದರೆ ನಾಶವಿಲ್ಲದುದು. ಯಾವಾಗ ಶುರುವಾಯಿತೋ ಯಾವಾಗ ಕೊನೆಯಾಗುವುದೋ ಯಾರೂ ತಿಳಿಯರು. ಆದಿಕ್ಷೀಣವಿಲ್ಲವೆಂಬೇ ಭಾವನೆ. ಆ ರೀತಿ ನಾಶವೇ ಇಲ್ಲದ ಅನಂತವೆಂದೇ ಬ್ರಹ್ಮಭಾವಗಳಲ್ಲೊಂದಾದುದು ಕಾಲ. ಅದೇ ಪರಮಾತ್ಮನು. ಕಾಲವು ಯಾವುದನ್ನಾದರೂ ಮರೆಯುವಂತೆ ಮಾಡು ತ್ತದೆ. ಎಂಥಾ ಚಿಂತೆಯಾಗಲೀ ಕಾಲವು ಕಮ್ಮಿಮಾಡುತ್ತದೆ.

ಎಲ್ಲಾ ಕಾಲದಲ್ಲಿ ಕ್ಷಯವಾಗ (ಕ್ಷೀಣಿಸ)ಬೇಕೇ ಹೊರತು ಕಾಲ ಅಕ್ಷಯ. "ಕಾಲೋ ಜತದ್ಭಕ್ಷಕಃ" ಎನ್ನುವ ವಾಕ್ಯದಂತೆ ಎಲ್ಲಾ ಕಾಲದಲ್ಲಿ ಕ್ಷಯವಾಗಿ ಸವೆಯುತ್ತಾ ಇಲ್ಲವಾಗುತ್ತದೆ, ಆದರೆ ಕಾಲವು ಯಾವಾಗಲೂ ಒಂದೇ ರೀತಿಯಿರುತ್ತದೆ. ಕಾಲ ಕಳೆಯುತ್ತಾ ಬಂದರೂ ಸವೆಯುವುದಿಲ್ಲಾ. ಯಾವಾಗ್ಯೂ ಮಾರ್ಪಟ್ಟಿಲ್ಲದಿರುತ್ತೆ. ಎಲ್ಲಾ ಅದ ರಲ್ಲೇ ಮಾರ್ಪಾಟಾಗುತ್ತದೆ. ನಿರ್ಣಯ ವಸ್ತುಗಳಲ್ಲಿ (Eternal Dimensions) ನಿತ್ಯ ವಸ್ತುವು ಕಾಲ. ಈ ಶ್ಲೋಕದಲ್ಲಿ ಎಂತು, ಅಕ್ಷರ, ದ್ವಂದ್ವ, ಅಕ್ಷಯ, ಧಾತಾವಿಧಾತಾ (ವಿಶ್ವತೋಮುಖಃ) ಎಂದು ದಿವ್ಯವಾಗಿ ಬಂದಿವೆ. ಎಲ್ಲಾ ಪರಮಾತ್ಮನ ಗುಣಗಳೇ. ಅಕ್ಷರಗಳ ಲ್ಲಾದಿ, ದ್ವಂದ್ವಾತೀತನು, ಅಕ್ಷಯಗಳಲ್ಲಿ ಕಾಲ, ಧಾತರಲ್ಲಿ ವಿಧಾತ ವಿಶ್ವತೋಮುಖಃ. ನಿರ್ಗುಣ ಸಗುಣಬ್ರಹ್ಮ ತತ್ವಗಳೇ ಇವು.

**ಮೃತ್ಯುಃ ಸರ್ವಹರಶ್ಚಾಹ-ಮುದ್ಭವಶ್ಚ ಭವಿಷ್ಯತಾಮ್ ।**
**ಕೀರ್ತಿಃ ಶ್ರೀರ್ವಾಕ್ಚ ನಾರೀಣಾಂ। ಸ್ಮೃತಿರ್ಮೇಧಾ ಧೃತಿಃ ಕ್ಷಮಾ ॥೩೪॥**

ಮೃತ್ಯುವು ನಾನು ಸಂಹಾರಕರಲ್ಲಿ ಎಂದಿಲ್ಲಾ, ಸರ್ವಹರರಲ್ಲಿ ಎಂದಿದೆ. ಕೊಟ್ಟವನೂ ಅವನೇ, ಸರ್ವಸ್ವವನ್ನೂ ಸರ್ವವನ್ನೂ ಅವ ಹರಿಸುವವನೂ ಅವನೇ. ಭವಿಷ್ಯಗಳಲ್ಲಿ ಉದ್ಭವಿಸುವನೂ ನಾನೇ.

ಸ್ತ್ರೀಯರಲ್ಲಿ ಕೀರ್ತಿ, ಸಂಪತ್ತು (ಶ್ರೀಃ) ವಾಕ್, ಸ್ಮೃತಿ, ಮೇಧಾ, ಧೃತಿ, ಕ್ಷಮಾ ಎಲ್ಲವೂ ನಾನೇ ಆಗಿರುವೆನು. "ಯಾರನ್ನು ಉದ್ಧಾರ ಮಾಡಬೇಕೆಂದಿರುವನೋ ಅವರಿಂದ 'ಸರ್ವಹರಣ್ಯಾಹ್ಯವಂ'" ಎಂದು ಭಗವಂತನು ಹೇಳಿದ್ದಾನೆ. ಅದರಿಂದ ಆತ್ಮನನ್ನು ಪರಮಾತ್ಮನಲ್ಲಿಗೆ ಸೇರಿಸಿಕೊಳ್ಳಬೇಕಾದರೆ ಈ ಉಪಾಧಿ ದೇಹವನ್ನು ಹರಣ ಮಾಡಬೇಕು. ದೇಹಿಯು ಬಂದು ನಿಲ್ಲಲು ಈ ದೇಹವನ್ನು ನಿರ್ಮಿಸಿರುವನು. ಅವನು ಸರ್ವ ದೇಹಿಯಾದ ಮಹಾದಾತ್ಮನಲ್ಲಿ ಸೇರಬೇಕಾದರೆ ಈ ದೇಹ ಬೀಳ ಬೇಕು. ಈ ಉಪಾಧಿಯಿಂದ ಬಿಡುಗಡೆಯಾಗಬೇಕು.

ನಾವು ಸುಮ್ಮನೆ ನಮ್ಮದು, ನಮ್ಮದೆಂದು ಹೊಡೆದುಕೊಳ್ಳುವ ದೇಹವು, ನಮ್ಮದಲ್ಲ. ಮಾತಾಪಿತೃ ನಿರ್ಮಿತವು. ಪಿತೃ ಕಟ್ಟಡ ನಿರ್ಮಾಣಕ್ಕೆ ವಾರಸ್ತುದಾರ, ಮಾತೃ ಕಟ್ಟಡದ ಶಿಲ್ಪಿ (ಕಂಟ್ರಾಕ್ಟರು.) ಪಿತೃ ಕೊಟ್ಟ ನಿಧಿಯನ್ನೇ ತನ್ನಲ್ಲಿ ವೃದ್ಧಿ ಮಾಡುವಳು. ಕಟ್ಟಡ ನಿರ್ಜೀವ ವಾಗಿ ಶುರುವಾಗಿ, ನಿರ್ಜೀವವಾಗಿಯೇ ಕೊನೆಗಾಣುವುದು. ದೇಹಿ ಬಂದು ನೆಲಸಲು ಮಾತೃ ದೇಹದಲ್ಲಿ ತಯಾರಾಗುತ್ತಿರುವ ದೇಹವು ಅಣಿ ಯಾದೊಡನೆಯೇ, ಆ ಗರ್ಭದಲ್ಲಿನ ದೇಹ ಆತ್ಮವಂತನಾಗುವನು. ಪರಮಾತ್ಮ ವಸ್ತುವು ಬಂದು ನೆಲಸುವುದು. ಇದರ ಚಿನ್ಹೆಗಾಗಿಯೇ ಗರ್ಭಿಣಿಗೆ "ಸೀಮಂತ" ಮಹೋತ್ಸವ ಮಾಡುವರು, ೭ ನೇ ತಿಂಗಳಲ್ಲಿ. ಪ್ರಸುವುಶಾಸ್ತ್ರ ಪ್ರಕಾರವೂ ೬ ರಿಂದ ೭ ನೇ ತಿಂಗಳೊಳಗೆ ಗರ್ಭದೊಳಗಿನ ಶಿಶುವಿನ ನಾಡಿ ಗೋಚರವಾಗುವುದು. "ಸೀಮಂತ"ವೆಂದರೆ "ಬೈತಲೆ" ಪರಮಾತ್ಮವಸ್ತುವು, ಜೀವಾತ್ಮನಾಗಿ ಆ ಗರ್ಭದೊಳಗೆ ನೆಲೆಸಲು ಆ ಬೈತಲೆಯ ಮೂಲಕ ಹೊಕ್ಕು, ಅಂತರಾತ್ಮನಾಗಿ ಶಿಶುವಿನಲ್ಲಿ ಜೀವಿಸುವ ನೆಂದು ನಂಬಿದ್ದಾರೆ. ಆ ಜಿವಾತ್ಮ ಪ್ರವೇಶ ಮಹೋತ್ಸವವೇ "ಸೀಮಂತ" ಶಾಂತಿ, ತಾಯಿಯು ದೇವರ ಪ್ರತಿಷ್ಟಿತವಾದ ಗರ್ಭಗುಡಿಯನ್ನು ಧರಿಸಿ ರುವ ದೇವಸ್ಥಾನ ದೋಪಾದಿಪವಿತ್ರಳು. ನಂತರ ಸಕಾಲದಲ್ಲಿ ಪ್ರಪಂಚ ದಲ್ಲಿ ಆ ಜೀವಾತ್ಮ ಬಿಂದುವಿನ ದೇಹ ಜನನ. ದೇಹವು ಬೀಳುವವೊದಲೇ ಇದೇ ಜೀವಾತ್ಮನು ಆ ದೇಹವನ್ನು ಬಿಟ್ಟುಹೋಗಿಬಿಡುವನು. ಎಲ್ಲಿಗೆ, ಹೇಗೆ, ಏಕೆ ಎಲ್ಲಾ ಅವನ ಕರ್ಮ ಗತಿಯನ್ನನುಸರಿಸುವುದು.

ಈ ಉಪಾಧಿ ದೇಹ ಬಿಡುಗಡೆಯಾಗಬೇಕಾದರೆ ಮೃತ್ಯುವಿನ ಸಹಾಯ ಅಗತ್ಯ. ಮೃತ್ಯುವಿನಿಂದ ಈ ದೇಹ ಪತನವಾಗದಿದ್ದರೆ, ಜೀರ್ಣವಾದ, ರೋಗಗ್ರಸ್ಥ ವೃದ್ಧ ದೇಹಗಳಿಂದಲೇ ಜಗತ್ತು ತುಂಬಿ ಬಿಟ್ಟು, ಪುನಃ ನವಚೈತನ್ಯೋತ್ಪತ್ತಿ ಜೀವಿಗಳಿಗೆ ಜಾಗವೇ ಇರುತ್ತಿರಲಿಲ್ಲಾ. ಈ ಅನುಪಯೋಗವಾದ ದೇಹಾದಿಗಳನ್ನು ಹರಣಮಾಡಿ, ನವ ಜೀವಿಗಳಿಗೆ ಸ್ಥಳ ಮಾಡುವುದು ಸೃಷ್ಟಿಕರ್ತನ ಕರ್ತವ್ಯವಾದುದರಿಂದ "ಸರ್ವಹರಣ" ಕಾರ್ಯವನ್ನೂ ಅವನೇ ವಹಿಸಿರುವನು. ಇದು ದಯಾಮಯನು ತನ್ನ ಕರುಣೆಯಲ್ಲಿ, ವೃದ್ಧಾಪ್ಯ, ರೋಗ, ರುಜಿನಗಳ ಬೇನೆಯನ್ನು ತಪ್ಪಿಸಲು ಮಾಡಿರುವ ಉಪಾಯ. ಪರರ ನೆರವಿಗೇ ಕಾಯಬೇಕಾಗಿ ಬಂದ ಈ ಅಶಕ್ತರನ್ನು 'ಹರಣ' ಮಾಡಿ ಶಕ್ತರಾಗಿರುವ ಯುವಕರ ಮೇಲಿನ ಹೊರೆಯನ್ನು ಕಡಮೆಮಾಡುತ್ತಾನೆ. ಆಗ ಅವರು ಹಿಂದಿನ ಈ ಪಿತೃಸೇವೆ ಮರೆತು ಮುಂದಿನ ಪೀಳಿಗೆಯ ಸಂತಾನದ ಮಕ್ಕಳ ಸೇವೆಯಲ್ಲಿ ನಿರತರಾಗಲವಕಾಶವಾಗುತ್ತೆ. ಶ್ರೀಶಂಕರರು ಭಾಷ್ಯದಲ್ಲಿ "ಧನಾದಿಹರ, ಪ್ರಾಣಹರಶ್ಚ, ಸರ್ವಹರ ಉಚ್ಯತೇ" ಎಂದೂ, "ಪ್ರಳಯದಲ್ಲಿ ಸರ್ವಹರಣ ಮಾಡುವ ಪರ ಈಶ್ವರ" ತಾನೇ ಎಂದೂ ಅಪ್ಪಣೆ ಕೊಡಿಸಿದ್ದಾರೆ.

ಎಲ್ಲಾ ಹರಣವಾದರೆ, ಭವಿಷ್ಯವೆಂತು. ಅದಕ್ಕಾಗಿಯೇ "ಉದ್ಭವ, ಉತ್ಕರ್ಷೋ, ಅಭ್ಯುದಯ, ಸ್ತತ್ಪ್ರಾಪ್ತಿಹೇತುಶ್ಚಾಪಂ" ಎಂದೂ ಮುಂದೆ ಉತ್ಪತ್ತಿ, ಉತ್ಕೃಷ್ಟವಾದ, ಅಭ್ಯುದಯದ, ಸತ್‌ಪ್ರಾಪ್ತಿಗೆ ಕಾರಣವೂ ದೇವದೇವನೇ ಪರ ಈಶ್ವರನಾಗಿ ಪ್ರಳಯದಲ್ಲಿ ಸರ್ವನಾಶ ಮಾಡಿದ ತಾನೇ ಭವಿಷ್ಯದಲ್ಲಿ ಕಲ್ಪಕಲ್ಪಗಳಲ್ಲೂ ಉದ್ಭವಕ್ಕೆ ಕಾರಣನಾಗಿ ಈತನೇ ಇರುವನು. ಉತ್ಪತ್ತಿ ನಾಶಚಕ್ರಕ್ಕೆ ಕಾರಣನಾದ ಚಕ್ರಧಾರಿ. ಈ ಮಧ್ಯೆ ಕಾಪಾಡಲು ಶಕ್ತಿರೂಪಿಣಿಯಾದ "ನಾರಿಣಾಂ" ಮಾತೆಯರಲ್ಲಿ ಕೀರ್ತಿ, ಶ್ರೀ, ವಾಕ್, ಸ್ಮೃತಿ, ಮೇಧಾ, ಧೃತಿ, ಕ್ಷಮಾ ಎಲ್ಲವೂ ಅವನೇ. ಅವ ಶಕ್ತ. ನಾರಿ ಶಕ್ತಿ. ಶಕ್ತಿಯನ್ನು ಶಕ್ತನಿಂದ ಬೇರೆ ಮಾಡಲು ಸಾಧ್ಯವೇ ಇಲ್ಲಾ.

"ಶಕ್ತಿಃ ಶಕ್ತಾತ್ ಪೃಥಕ್‌ನಾಸ್ತಿ"—ಶಕ್ತನನ್ನು ಬಿಟ್ಟು ಶಕ್ತಿಗೆ ಬೇರೆ ಇರುವೇ ಇಲ್ಲಾ. ಶ್ರೀ ಸೀತಾಮ್ಮನವರು ಹೇಳುವಂತೆ "ಸೂರ್ಯನನ್ನು ಬಿಟ್ಟು ಕಿರಣಗಳಿಲ್ಲವೋ ಅಂತೇ ಶ್ರೀರಾಮರನ್ನು ಬಿಟ್ಟು ತಾನಿಲ್ಲ"ವೆಂದು. ಶ್ರೀರಾಮರ ಶಕ್ತಿರೂಪಿಣಿ, ಶಕ್ತಿದೇವಿ ಶ್ರೀ, ಸೀತಾಮಾತೆ. "ರಾಮಾಯಣ"ವು ನ್ಯಾಯವಾಗಿ "ಸೀತಾಯಣ"ವೆಂದು ನಾಮಾಂಕಿತವಾಗಿರ ಬೇಕಾಗಿತ್ತು. ಏನು ಮಾಡುವುದು. ಬರೆದ ಮಹರ್ಷಿ ವಾಲ್ಮೀಕಿ ಪುರುಷನಾದುದರಿಂದ, ತನ್ನ ಪುರುಷತ್ವದ ವ್ಯಾಮೋಹದಿಂದಲೇನೋ, ಮುಖ್ಯ ಪಾತ್ರ, ಸೀತಾದೇವಿಯನ್ನು ಬಿಟ್ಟು-ಶ್ರೀರಾಮರ ಹೆಸರನ್ನೇ ಗ್ರಂಥಕ್ಕಿಟ್ಟುಬಿಟ್ಟರು. "ಅನನ್ಯಾ ರಾಘವೇಣಾಹಂ, ಭಾಸ್ಕರೇಣ ಪ್ರಭಾಯಥಾ" ಎಂದು ರಾವಣನಿಗೆ ಹೇಳಿದ ಸೀತಮ್ಮನವರಲ್ಲಿ, ನಾವು ಇಲ್ಲಿ ವಿವರಿಸುವ ಉತ್ತಮ ಗುಣಗಳನ್ನೆಲ್ಲಾ ಮೂರ್ತಿವತ್ತಾಗಿ ಕಾಣ ಬಹುದು. ಅಂತೇ ಸಾವಿತ್ರಿ ಮುಂತಾದ ಪತಿವ್ರತಾಶಿರೋಮಣಿಗಳಲ್ಲೂ, ಎಲೆಮರೆಯ ಕಾಯಂತೆ ಗೋಪ್ಯವಾಗಿ ಮನೆಯೊಳಗೆ, ತರೆಮರೆಯಲ್ಲಿದ್ದರೂ ಈ ಪತಿವ್ರತಾಶಿರೋಮಣಿಗಳ ಕೀರ್ತಿ ಪುಷ್ಪದ ಸುವಾಸನೋಪಾದಿಯಲ್ಲಿ ಎಲ್ಲಾ ಕಡೆ ಹರಡುವುದು. "ಮಹಾತಾಯಿ"ಯಪ್ಪಾ ಎಂದು ಎಷ್ಟೋ ಜನ ನೆನೆವರು. "ಸ್ತ್ರೀ"ಯೇ "ಶ್ರೀ." ಗೃಹಸ್ಥೆಯಾಗಿ ಎಂದರೆ ಗೃಹಲಕ್ಷ್ಮಿಯಾಗಿ ಅತಿಬಡವನ ಮನೆಯಲ್ಲಿಯೂ ಶೋಭಿಸುವಳು. ದರಿದ್ರವೇನಿದ್ದರೂ ಸಂಪಾದಿಸುವ ಗಂಡಸರಿಗರೀ. ನಾರೀಯರನ್ನು ನೋಡಿ. ಎಂಥಾ ಗುಮಾಸ್ತನ ಹೆಂಡತಿಯಾದರೂ ಮಾಮಲೇದಾರನ ಹೆಂಡತಿಯಂತೆಯೇ ಪಟ್ಟೇ ಸೀರೆಯನ್ನೇ ಉಡುವಳು, ಹೇರಾಯಿಲ್ ಸ್ನೋ, ಪೌಡರ್‌ಗಳಿಲ್ಲದ ಹೆಂಗಸುಂಟೇ. ನಾರಿಯರು ಅರಿಸಿನ ಕುಂಕುಮ, ಆರತಕ್ಷತೆಗಳಿಗೆ ಹೋದರೆ ಅವರ ಸಿರಿತನದ ಪ್ರಕಾರ ಭೇದ ಮಾಡಿದರೆ ಉಳಿಬಾಳುಂಟೇ ಮಾಡಿದವರಿಗೆ. ಗಂಡ ಗುಮಾಸ್ತೆಯಾಗಿ ಮಾಮಲೇದಾರನ ಗುಲಾಮನಾದರೆ ಹೆಂಡತಿ ಮಾಮಲೇದಾರನ ಹೆಂಡತೀಗೆ ಸೋತಾಳಾ—ಉಪ್ಪು ಹಾಕಾಳೆ.

ಗೃಹಣೀ ಗೃಹಮುಚ್ಯತೇ ಎಂಬಂತೆ ಬರುವ ಸಂಪಾದನೆಯಲ್ಲಿ ಒಪ್ಪವಾರಣವಾಗಿ ಅಚ್ಚುಕಟ್ಟಾಗಿ ಸಂಸಾರಮಾಡಿ ಆಕೆ ತನ್ನ ಗೃಹದಲ್ಲಿ

ತಾನೇ ರಾಣಿಯಾಗಿರುವಳು. ಅದೂ ದೇವಕೃಪೆಯೇ. ಇದೆಲ್ಲಾ ಸದಾಚಾರವನ್ನು ನಂಬಿ ಪಾತಿವ್ರತೆಯರಾದ ಭಾರತೀಯರ ವಿಷಯ ಭಗವಂತ ಹೇಳುವುದು. ಪಾಶ್ಚಾತ್ಯರನ್ನಣಕಿಸುತ, ಅವರಂತೆ ಮೆರೆವ ನಾರಿಯರಿಗೂ ಉಂಟು ಕೀರ್ತಿ – ಆದರೆ ಬೇರೆ ತರಹ; ಉಂಟು ಶ್ರೀ – ಬೇರೆ ತರಹ – ತಾವೇ ಸಂಪಾದಿಸಲು ಹೋಗಿ ಜೀತಮಾಡುವರ ಐಶ್ವರ್ಯ. ಈ ಉತ್ಕೃಷ್ಟ ಸಂಪನ್ನ ಗುಣಗಳನ್ನು ಕಾಪಾಡಿಕೊಂಡುಬರುವ ಭಾರ ದ್ವಿಗುಣವಾಗಿ ಈ ಸ್ವತಂತ್ರ ಬಂದ ಮೇಲೆ ನಮ್ಮ ಹೆಣ್ಣುಮಕ್ಕಳಮೇಲೆ ಬಿದ್ದಿದೆಯೆಂದು ಎಚ್ಚರದಿಂದಿರಬೇಕು.

ವಾಕ್ ಹೆಣ್ಣಿನ ಸ್ವತ್ತು. ವಾಗ್ದೇವಿಯೇ ಹೆಣ್ಣು ರೂಪಿಣಿ ಶ್ರೀಶಾರದೆ ಯಾದಮೇಲೆ ಅಕ್ಕತಂಗಿಯರಿಗೆ ವಾಕ್ ಪ್ರಭೆಗೇನು ಕಮ್ಮಿ. ಮಾತಿನ ಮಲ್ಲಕ್ಕಗಳು. ಆದರೂ, ಪ್ರಿಯ, ಹಿತ, ಮಿತ ಭಾಷಣೆಯು ಸ್ತ್ರೀಭೂಷಣ. ಎಂಥಾ ಹೆಂಗಸಾದರೂ ಅವಳ ಮಾತಿನಲ್ಲೇ ಮರುಳುಗೊಳಿಸುವಳು. ಪ್ರೇಯಸಿಯ ವಾಕ್ಜಾಲಕ್ಕೆ ಬೀಳದ ಮಾನವನ್ಯಾರು. ಆ ಬಲೆಯೊಳಗೆ ಕೆಡವಿಕೊಳ್ಳಲು ಅವರಿಗೆ ಹಾಸಿಗೆಗೆ ಕಟ್ಟಿರುವ ಜಾಲದ ಪರದೆಯೊಳಗೆ ಏಕಾಂತವಾಗಿ ರಾತ್ರಿ ಶುರುಮಾಡುವರು, ವಾಕ್ಚಾತುರ್ಯವನ್ನು. ನಿದ್ರೆಗೂ ಬಿಡರು ಪ್ರಿಯನನ್ನು. ನಿದ್ರೆಯ ಪರವಶವಾಗಿದ್ದರೂ "ಹೂ" ಎಂದು ತೂಕಡಿಸುತ್ತಾ ಅನ್ನುತ್ತಿರಬೇಕು. ಆದರೂ ಮಕ್ಕಳಿಗೆ, ಪ್ರಿಯರಿಗೆ ಹಿತವಚನವನ್ನು ಹೇಳಲು ತಾಯಿಯ ಮಾತಿಗಿಂತ ಹೆಚ್ಚಿನ ರುಚಿಯಿಲ್ಲಾ. ಆ ಮಾತಿಗೇ ಮರುಳಾಗಿ ಪ್ರಹ್ಲಾದ ಪಾಷಾಣವನ್ನು ಕೂಡಾ ಪಾಯಸ ದಂತೆ ಕುಡಿದುಬಿಡಲಿಲ್ಲವೇ. "ಸ್ಮೃತಿ, ಮೇಧಾ, ಧೃತಿ" ಎಲ್ಲಾ ಪ್ರಜ್ಞಾವಿಭಾಗಗಳೆಂದು ಉಪನಿಷತ್‌ಗಳಲ್ಲಿ ಕೂಡಾ ಹೇಳಿದೆ. ಸ್ಮೃತಿ ಎಂದರೆ ಸ್ಮರಣಾ (ಜ್ಞಾಪಕ) ಶಕ್ತಿ, ಮೇಧಾ, ಗ್ರಹಣ ಶಕ್ತಿ, ಧೃತಿ ಎಂದರೆ ಧಾರಣ ಶಕ್ತಿ. ಎಲ್ಲವನ್ನೂ ಗ್ರಹಿಸಿಕೊಂಡು, ಧಾರಣೆಮಾಡಿ, ಜ್ಞಾಪಿಸಿಕೊಳ್ಳಬಲ್ಲಳು ನಾರೀ. ಈ ಶಕ್ತಿಯಿಂದಲೇ ಇತ್ತೀಚೆಗೆ ವಿಶ್ವವಿದ್ಯಾನಿಲಯಗಳಲೆಲ್ಲಾ ಪ್ರಶಸ್ತಿ ಮೊದಲನೇ ಸ್ಥಾನ ಎಲ್ಲಾ ಅವರಿಗೇ ಮೀಸಲಾಗಿದೆ. ಓದದೆ ಓಡಾಡಿಕೊಂಡಿರುವ ಹುಡುಗರಿಗೆ ಸ್ನಾನ,

ಸ್ಥಾನವಿಲ್ಲ. ಕ್ಷಮಾ ಸ್ತ್ರೀಯ ಅತ್ಯುತ್ತಮಗುಣ. ನಮ್ಮ ಭೂತಾಯಿ ಕ್ಷಮಾನಿಧಿಯಲ್ಲವೇ.

ನಾವು ಮಾಡುವ ಅತ್ಯಾಚಾರ ಅನಾಚರಗಳನ್ನೆಲ್ಲಾ ಕ್ಷಮಿಸುವಳು. ಪುರುಷನ ದರ್ಪ, ಅಧಿಕಾರ, ದೌರ್ಜನ್ಯಗಳನ್ನು ಕ್ಷಮಾ ತಾಯಿ ಸಹಿಸ ದಿದ್ದರೆ, ಸ್ತ್ರೀಪುರುಷರು ಸಂಸಾರದಲ್ಲಿರಲೇ ಸಾಧ್ಯವಾಗುತ್ತಿರಲಿಲ್ಲಾ. ವಿವಾಹವಿಚ್ಛೇದನಗಳ ಸುರಿಮಳೆಯಾಗುತ್ತಿತ್ತು. ಸೀತಾದೇವಿಯು ಭೂಸುತೆಯಾದುದರಿಂದ ಪೂರ್ಣ ಕ್ಷಮಾನಿಧಿಯಾಗಿ ರಾವಣಾಸುರನ ದುರುಳುತನಕ್ಕೆಲ್ಲಾ ತಾನೇ ಪ್ರತೀಕಾರ ಮಾಡದೇ ಕ್ಷಮಿಸಿ, ಶ್ರೀರಾಮನೇ ಬಂದು ಶಿಕ್ಷಿಸಿ ಕೀರ್ತಿ ಪಡೆಯಲೆಂದು ಸುಮ್ಮನಿದ್ದಳು.

**ಬೃಹತ್ಸಾಮ ತಥಾ ಸಾಮ್ನಾಂ । ಗಾಯತ್ರೀ ಛಂದಸಾಮಹಮ್ ।**
**ಮಾಸಾನಾಂ ಮಾರ್ಗಶೀರ್ಷೋऽಹ-ಮೃತೂನಾಂ ಕುಸುಮಾಕರಃ ॥**

ಸಾಮವೇದದಲ್ಲಿ ಬೃಹತ್ಸಾಮವೂ, ಛಂದಸ್ಸುಗಳಲ್ಲಿ ಗಾಯತ್ರಿಯೂ, ಮಾಸಗಳಲ್ಲಿ ಮಾರ್ಗಶೀರ್ಷವೂ, ಋತುಗಳಲ್ಲಿ ವಸಂತಋತುವೂ ನಾನಾ ಗಿರುವೆನು.

ವೇದಗಳಲ್ಲಿ ಗಾನಪ್ರಧಾನವಾದುದು ಸಾಮವೇದ ಬೃಹತ್ ಎಂದರೆ ದೊಡ್ಡದಾದುದು; ಮಹಾತ್ತಾದುದು. ಬೃಹದಾಕಾರವಾದುದರಿಂದಲೇ ಬ್ರಹ್ಮನೆಂದು ಪರಮಾತ್ಮನಿಗೆ ಸಂಕೇತವು. ಸಾಮವೇದದಲ್ಲಿನ ಬೃಹತ್ಸಾ ಮವೂ ಪರಮಾತ್ಮನೇ.

ಛಂದಸ್ಸುಗಳಲ್ಲಿ ಗಾಯತ್ರಿಯುವಸು. "ಗಾಯತೀತಿತ್ರಾಯತಿ ಇತಿ ಗಾಯತ್ರೀಃ" ಎಂದು ಯಾರು ಅದನ್ನು ಪುನಃ ಪುನಃ ಉಚ್ಚರಣೆ ಮಾಡಿ, ಮನನ ಮಾಡುವರೋ ಅವರನ್ನು ಕಾಪಾಡಬಲ್ಲ ಮಂತ್ರರಾಜ ಗಾಯತ್ರೀ. ಇದು ಅರ್ಘ್ಯದಲ್ಲೂ ಜಪದಲ್ಲೂ ಉಚ್ಚರಿಸಲ್ಪಡುತ್ತದೆ. ತ್ರಿಕಾಲದಲ್ಲೂ ಧ್ಯಾನ ಮಾಡಲು ಸರ್ವಾಶ್ರಮದವರಿಗೂ ಪವಿತ್ರವಾದ ಮಂತ್ರ. ಇದರ ಲ್ಲಿನ "ಓಂತತ್ ಸವಿತುವರೇಣ್ಯಂ" ಎಂಬ ಪಾದವು ಋಗ್ವೇದದಿಂದಲೂ, "ಭರ್ಗೋದೇವಸ್ಯಧೀಮಹಿ" ಎನ್ನುವ ಪಾದ ಯಜುರ್ವೇದದಿಂದಲೂ, "ಧಿಯೋಯೋ ನ ಪ್ರಚೋದಯಾತ್" ಎನ್ನುವ ಪಾದವು ಸಾಮವೇದ

ದಿಂದಲೂ ಆರಿಸಲ್ಪಟ್ಟಿವೆ. "ಓಂತತ್ ಸತ್" ಎನ್ನುವುದರಲ್ಲಿ "ಓಂ" ಎನ್ನುವುದು ನಿರ್ಗುಣ ಬ್ರಹ್ಮವನ್ನೂ "ತತ್" ಎನ್ನುವುದು ಸಗುಣ ಬ್ರಹ್ಮ ಈಶ್ವರನನ್ನೂ, "ಸತ್" ಎನ್ನುವುದು ಸೃಷ್ಟಿ ಪ್ರಪಂಚವನ್ನೂ ಪ್ರತಿಪಾದಿಸುತ್ತವೆ. "ಸತ್" ಉಚ್ಚಾರಣೆಯಿಂದ "ಅಸತ್" ಎಲ್ಲವೂ "ಸತ್" ಆಗುತ್ತೆ. "ತತ್" ಉಚ್ಚಾರಣೆಯಿಂದ ಧರ್ಮಕರ್ಮವೆಲ್ಲವೂ ನಿಷ್ಕಾಮಕರ್ಮವಾಗುತ್ತೆ. "ಓಂ" ಉಚ್ಚಾರಣೆಯಿಂದ ಇವೆಲ್ಲವೂ ಈಶ್ವರಾರ್ಪಣವಾಗಿ ಅರ್ಘ್ಯ, ಜಪತಪವೆಲ್ಲಾ ಬ್ರಹ್ಮಕರ್ಮವಾಗಿ ಪರಿಣಮಿಸುತ್ತೆ.

ಕವಿರವೀಂದ್ರರು ಅವರ "Religion of man"—ಮಾನವನ ಮತ ಧರ್ಮವೆಂಬ ಪುಸ್ತಕದಲ್ಲಿ ಈ ಗಾಯತ್ರೀ ಮಂತ್ರವನ್ನು ಈ ರೀತಿ ಆಂಗ್ಲ ಸರಳಾನುವಾದ ಮಾಡಿದ್ದಾರೆ.

"Let me Contemplate the adorable Splendour of Him who created the Earth, the air, and the starry spheres and sends the power of Contemplation within our minds." ಭೂ ಭುವ, ಸುವರ್ ಲೋಕ ಸೃಜಿಸಿ, ಅರಿಯುಲು ಅರಿವನ್ನು ನಮ್ಮಂತರಂಗದರಲ್ಲಿ ಉದ್ಭವಿಸುವಂತೆ ಕರುಣಿಸಿರುವ ಆ ಸತ್ ಚಿತಾನಂದನ ದಿವ್ಯಪ್ರಭೆಯನ್ನು ನಾನು ಧ್ಯಾನಿಸುತ್ತೇನೆ—ಎನ್ನುವುದೇ ಈ ನಿಷ್ಕಾಮ ಪ್ರಾರ್ಥನೆ. ಎಷ್ಟೋ ಉಪನಿಷತ್‌ಗಳಲ್ಲಿ ಇದರ ವ್ಯಾಖ್ಯಾನ ಬಂದಿದೆ. ಆದರೆ ಅವೆಲ್ಲಾ ಬಿಟ್ಟು ಈಗಿನ ಕ್ರಾಂತಕಾರಿ ಕವಿಯು ವಿವರಣೆಯನ್ನೇ ಕೊಟ್ಟು ಆ ಗಾಯತ್ರಿಯ ಜೀವಾಳ ತತ್ವವು ಎಷ್ಟು ದಿವ್ಯವಾಗಿದೆಯೆನ್ನುವುದನ್ನು ಮನನಮಾಡಲು ಪ್ರಾರ್ಥಿಸುತ್ತೇನೆ. ಈ ಪ್ರಾರ್ಥನೆಯಲ್ಲಿ ಕಾಮ್ಯ ಪ್ರತಿಫಲಾಪೇಕ್ಷೆಯಿಲ್ಲಾ; ಹೊರಗಣ ಎಲ್ಲದರಲ್ಲೂ, ತನ್ನಲ್ಲೂ ಪ್ರಕಾಶಿಸುವ ಚೈತನ್ಯದ ಸ್ವರೂಪ ತಿಳುವಳಿಕೆಗಾಗಿ ದೈನ್ಯ ಧನ್ಯವಾದ ಅಂತರಾರ್ಪಣೆಯಷ್ಟೆ. ಇದರ ಪ್ರತಿದಿನ ತ್ರಿಕಾಲಚಿಂತನದಿಂದ, ಬ್ರಹ್ಮಚಾರಿಯು ಪಾವನವಾಗುವುದೇನು ಹೆಚ್ಚು.

ಶ್ರೀತ್ರಿಪುರತಾಪಿನ್ಯುಪನಿಷತ್ತಿನ ಪ್ರಥಮದಲ್ಲಿ, ಮೈತ್ರಾಯಣ್ಯುಪನಿಷತ್ ಕೊನೆಯಲ್ಲಿ, ಬೃಹದಾರಣ್ಯಕೋಪನಿಷತ್ತಿನಲ್ಲಿಯೂ, ಇನ್ನೂ ಇತ

ರಿಡೆಗಳಲ್ಲೂ ಗಾಯತ್ರಿಯ ವ್ಯಾಖ್ಯೆಯಿದೆ. ಗಾಯತ್ರಿ ಮಂತ್ರಕ್ಕೆ ಸೂರ್ಯ ದೇವತಾ. ಸರ್ವದಾ ಪರಿತಪಿಸುತ್ತಿರುವ (ಪರೋಪಕ್ಕಾರಕ್ಕಾಗಿ ತಪ ವನ್ನಾಚರಿಸಿ) ಸೂರ್ಯನು ತಾನಾಗಿಯೇ, ನೀರನ್ನು ಆಕರ್ಷಿಸಿಕೊಳ್ಳು ವನು, ಪುನಃ ಮಳೆ ರೂಪದಲ್ಲಿ ಪೃಥ್ವಿಗೆ ಕೊಡಲು. ಸರ್ವ ರಕ್ಷಕ ನಾದ ಸೂರ್ಯದೇವನಿಗೆ ನಾವು ಕೃತಜ್ಞತೆಯಿಂದ ಏನು ತಾನೇ ಕೊಟ್ಟೇವು. ಆ ಪರಮಾತ್ಮನಿಗೆ ಏನು ತಾನೇ ಬೇಕು? ಆ ಪ್ರತ್ಯಕ್ಷ ಪರಮಾತ್ಮನೇ ತಾನೇ ಬೇಕೆಂದು ಹೀರಿಕೊಳ್ಳುವ ನೀರನ್ನು ಅರ್ಘ್ಯರೂಪದಲ್ಲಿ ತ್ರಿಕಾಲವೂ ಮೂರು ಬೊಗಸೆ ಉಪಕಾರ ಸ್ಮರಣೆಯಿಂದ ಪ್ರಧಾನ ಮಾಡುವೆವು; ಜಪದಲ್ಲಿ ಕೃತಜ್ಞತೆಯಿಂದ ಸ್ಮರಿಸುವೆವು. ಇದರಲ್ಲಿ ಸ್ವಾರ್ಥಕ್ಕಾಗಿ, ಪ್ರತಿಫಲಕ್ಕಾಗಿ ಏನೂ ಇಲ್ಲಾ. ಸಮಸ್ತ ಸೃಷ್ಟಿಗೂ ಸನ್ಮಂಗಳವಾಗ ಲೆಂದು ದೈನ್ಯ ಪ್ರಾರ್ಥನೆಯಷ್ಟೆ.

ಮಾರ್ಗಶೀರ್ಷ ಮಾಸದಲ್ಲೇ ಗೀತೋಪದೇಶವಾದುದು. ಮಳೆ ಗಳೆಲ್ಲಾ ಮುಗಿದು ಬೆಳೆಗಳು ಬೆಳೆಯುತ್ತಾ, ಹಿತಕರವಾದ ಸನ್ನಿವೇಶ ದಲ್ಲಿ ವರ್ಷದ ಹಬ್ಬಹುಣ್ಣಿಮೆಗಳು ನಡೆಯುತ್ತಿರುವ ಆಹ್ಲಾದಕರವಾದ ಮಾಸ. ಅದು ಪರಮಾತ್ಮನೇ.

ವಸಂತವನ್ನು ವರ್ಣಿಸದ ಕವಿಯಿಲ್ಲಾ. ಆನಂದ ಉಲ್ಲಾಸಗಳಿಗೆ ಮುಡುಪಾದ ಋತು. ಪ್ರಕೃತಿಯೇ ವಿಕಸಿತವಾಗಿ ಹೂ ಬಿಟ್ಟು ಆಹ್ಲಾದಕರವಾದ ಮಂದಮಾರುತದಿಂದ ಮಾನವನ ಮೃಗಪಕ್ಷಿಗಳ ಮನಸ್ಸನ್ನೂ ಅರಳಿಸುತ್ತದೆ. ರಸಿಕರಿಗೆ, ಪ್ರೇಯಸಿಗಳಿಗೆ ವಿರಹಿಗಳಿಗೆ ಬಾಧಿಸುವ ಋತು ವಸಂತ. ಕೋಕಿಲಗಾನ, ಬೆಳದಿಂಗಳು ವಿಹಾರ ಗಳಿಗೆ ಯಶಸ್ವಿಯಾದುದು ವಸಂತ.

**ದ್ಯೂತಂ ಛಲಯತಾಮಸ್ಮಿ । ತೇಜಸ್ತೇಜಸ್ವಿನಾಮಹಮ್ ।**
**ಜಯೋಽಸ್ಮಿ ವ್ಯವಸಾಯೋಽಸ್ಮಿ । ಸತ್ತ್ವಂ ಸತ್ತ್ವವತಾಮಹಮ್ ॥೩೬॥**

ಛಲವಿದ್ಯೆಗಳಲ್ಲಿ ದ್ಯೂತವೂ, ತೇಜಸ್ವಿಗಳಲ್ಲಿ ತೇಜಸ್ಸೂ ಜಯವೂ, ಉದ್ಯಮವೂ, ಸಾತ್ವಿಕರಲ್ಲಿ ಸತ್ವ ಗುಣವೂ ನಾನು. ಇದು ಉಜ್ವಲ ಗುಣಗಳ ವರ್ಣನೆ. ಅತಿ ಆಸಕ್ತಿ ತೋರುವ ಗುಣಗಳು.

ಸ್ಪರ್ಧೆಯಿಲ್ಲದೆ ಪ್ರಗತಿಯಿಲ್ಲಾ. ಆ ಸ್ಪರ್ಧೆ ಹುಟ್ಟಬೇಕಾದರೆ ಛಲ ಬೇಕು. ತಾನೇ ಗೆಲ್ಲಬೇಕೆಂಬ ಛಲ ಹುಟ್ಟಿದರೆ ಆಗ ಆಟದಲ್ಲಿ ಆಸಕ್ತಿ, ಅಂತೆಯೇ ಜೀವನದಲ್ಲೂ. ಆ ಛಲ ಹುಟ್ಟಲು ಜೂಜೊಂದು ಆಕರ್ಷಣೆ. ಇದನ್ನು ಮಹಾಭಾರತದಲ್ಲಿ ನೋಡಿದ್ದೇವೆ. ಹೇಗೆ ಕಪಟ ವಿದ್ಯೆಯಲ್ಲಿ ಆಸಕ್ತಿ ಹುಟ್ಟಿಸಿ ಶಕುನಿಯು ಪಾಂಡವರನ್ನು ಸೋಲಿಸಿದನು. ಒಂದು ಗುಂಡು ಮೇಜಿನ ಸುತ್ತಲೂ ದ್ಯೂತಕ್ಕೆ ಕೂತರೆ ಅವರಲ್ಲಿ ಹೆಚ್ಚು ಕಮ್ಮಿ ಎಲ್ಲಿ ಬಂತು. ಮಾನವನ ಪಾರಮಾರ್ಥಿಕ ದ್ಯೂತದಲ್ಲಿಯೂ, ತಾನು ಹೆಚ್ಚು ಯಜ್ಞಮಾಡಿ (Sacrifice) ಮುಂಚೆ ಆತ್ಮದರ್ಶನ ಪಡೆಯುತ್ತೇನೆಂಬ ಛಲ ಬೇಕು, ಆಸಕ್ತಿ ಬೇಕು, ಆಕರ್ಷಣೆ ಬೇಕು. ಅದಿದ್ದರೇ ಶ್ರದ್ಧಾ ಭಕ್ತಿಗಳುತ್ಪನ್ನವಾಗುತ್ತವೆ.

ಅವುಗಳಿಂದ ತೇಜಸ್ಸು. ಒಳಗಿನ ಪ್ರಭೆಯನ್ನು ಹೊರಗೆ ಪ್ರಕಾಶಿಸು ವುದೇ ತೇಜಸ್ಸು. ಹಣ್ಣು ಪಕ್ವವಾಗಿ ಮಧುರವಾದ ರಸಭರಿತವಾಗಿದೆ ಯೆಂದು ತೋರಲು ಅದರ ಹೊರಗೆ ಬರುವ ಹೊಂಬಣ್ಣದ ರಕ್ತಕಾಂತಿ. ಅಂತೆಯೇ ಒಳಗಣ ಸಂಪನ್ನತೆಯನ್ನು ಮುಖದಲ್ಲಿ ತೋರುವ ಕಾಂತಿ ತೇಜಸ್ಸು. ಇದು ಸುಮ್ಮನೆ ಬರುವುದಿಲ್ಲಾ. ಎಷ್ಟೋ ಪರಿಪಕ್ವದಿಂದ ಹೊರ ಬೀಳುವುದು. ತಪವಂತರಾಗಲೀ, ವಿದ್ಯಾವಂತರಾಗಲೀ, ದೀನದಯಾಳು ಗಳಾಗಲೀ ಅವರ ಮುಖದಲ್ಲಿ ಒಂದಲ್ಲ ಒಂದು ತರಹ ವರ್ಚಸ್ಸು ತಾಂಡ ವಾಡುವುದು. ಇಲ್ಲವಾದರೆ ಏನೋ ದ್ರಾಭೆಮುಖ. ಆ ತೇಜಸ್ಸೇ ಇತರರನ್ನೂ ಆಹ್ಲಾದದಿಂದ ಆಕರ್ಷಿಸುವುದು.

ಜಯುವೂ, ವ್ಯವಸಾಯುವೂ ನಾನು ಎಂದಾದರೂ ಹೇಳಬಹುದು ಇಲ್ಲವಾದರೆ ವ್ಯವಸಾಯುದ ಫಲರೂಪವಾದ ಜಯು ಪರಮಾತ್ಮ ಎಂದಾ ದರೂ ಹೇಳಬಹುದು. ಗೀತಾ ಉಪಸಂಹಾರವಾದ ಕೊನೆಯ ಶ್ಲೋಕ ದಲ್ಲಿ ಹೇಳಿರುವಂತೆ ಎಲ್ಲಿ ಯೋಗಿಶ್ವರನಾದ ಕೃಷ್ಣನಿರುವನೋ ಅಲ್ಲಿ ವಿಜಯು. ವಿಜಯುನೆಂಬುದು ಅರ್ಜುನನ ಒಂದು ಹೆಸರೂ ಹೌದು. ಜಯು ಶ್ರೀಕೃಷ್ಣಪರಮಾತ್ಮನೇ.

ಜಯು, ವಿಜಯುರೆನ್ನುವುದೇ ಶ್ರೀಪರಮಾತ್ಮನ ವಾಸಸ್ಥಾನವನ್ನು ಕಾಯುವ ಬಾಗಿಲಿಬ್ಬೆಡೆ ಇರುವ ಸೇವಕರ ಹೆಸರುಗಳು. ಜಯು

ವಿಜಯರ ಪ್ರಸನ್ನತೆಯಿಲ್ಲದೆ ಪರಮಾತ್ಮನಲ್ಲಿಗೆ ಪ್ರವೇಶವಿಲ್ಲಾ, ಅವರ ಅಪ್ಪಣೆಯಿಲ್ಲದೆ ಪರಮಾತ್ಮನ ದರ್ಶನವಿಲ್ಲಾ. ಜಯಕ್ಕೆ ವ್ಯವಸಾಯವೇ ಸಾಧನೆ. ಸುವ್ಯವಸ್ಥೆಯಿಂದ ಬೇಸಾಯ ಮಾಡುವುದೇ ವ್ಯವಸಾಯ. ಹೊರಗಣ ಭೂಮಿಯನ್ನು ಕಾಲಕಾಲಕ್ಕೆ ಸರಿಯಾಗಿ ಉತ್ತಿಬಿತ್ತಿ ಕೃಷಿ ಮಾಡಿ, ಕಳೆಕಿತ್ತು, ಬೆಳೆ ಅಭಿವೃದ್ಧಿ ಮಾಡುವುದು ಹೇಗೆ ವ್ಯವಸಾಯವೋ ಹಾಗೆಯೇ ಒಳಗಣ ಅಂತರಂಗವನ್ನೂ ಸಕಾಲದಲ್ಲಿ ಕೃಷಿ ಮಾಡಿ, ದುರ್ಮಾರ್ಗ, ಕೆಟ್ಟ ಚಿಂತನೆಯ ಕಳೆಗಳನ್ನು ಕಿತ್ತು, ಪರಮಾತ್ಮಭಕ್ತಿ ಬೆಳೆ ಅಭಿವೃದ್ಧಿ ಮಾಡುವುದೂ ವ್ಯವಸಾಯವೇ–ಹೆಚ್ಚಿನ ವ್ಯವಸಾಯ. ಇದಕ್ಕೂ ಗೀತಾ ಕೊನೆಯ ಶ್ಲೋಕದಲ್ಲಿ ಹೇಳಿದಂತೆ ಧ್ರುವಾ, ನೀತಿ, ಮತಿ ಬೇಕು. ಅದೂ ಪರಮಾತ್ಮನೇ ಎಂದೇ ಸಮಾಪ್ತಿ ಮಾಡಿದ್ದಾನೆ ಭಗವಂತ. ಸಕಲ ಸದ್ಗುಣ ನಿಧಿಯಾದ ಪರಮಾತ್ಮನ ಅನಂತ ಅತಿಶಯ ದಿವ್ಯಗುಣಗಳಲ್ಲಿ ಶ್ರೇಷ್ಠವಾದುವು ಧ್ರುವ, ನೀತಿ, ಮತಿ—ಪ್ರಜ್ಞಾನ ಸಂಕೇತಗಳು. ಅದರಿಂದಲೇ ಪಪ್ರಥಮವಾದ "ಪ್ರಜ್ಞಾನಂ ಬ್ರಹ್ಮ" ಎನ್ನುವ ಮಹಾವಾಕ್ಯೋತ್ಪತ್ತಿ.

ವ್ಯವಸಾಯವು ಕರ್ಮಯೋಗ. ಕರ್ಮವಿಲ್ಲದೇ ಯಾವನೂ ಒಂದು ಕ್ಷಣವಾದರೂ ಜೀವಿಸಲಾರನು, ಕರ್ಮವಿಲ್ಲದೇ ಉದರಪೋಷಣ ಕೂಡಾ ಇಲ್ಲಾ ಎಂದು ಭಗವಂತನು ಹೇಳಿರುವುದು ಈ ವ್ಯವಸಾಯದ ಶ್ಲಾಘನೆಯೆ. "ಉದ್ಯೋಗಿನಂ ಪುರುಷ ಲಕ್ಷಣಂ" "ಉದ್ಯೋಗಿನಂ ಪುರುಷ ಮುಪೈತಿ ಲಕ್ಷ್ಮೀ" ಎಂದು ಸಾರಿರುವ ನೀತಿಯ ಮರ್ಮವಾದರೂ ಈ ಕರ್ಮಮರ್ಮವೇ. ವ್ಯವಸಾಯವೇ ಪುರುಷನಿಗೆ ಲಕ್ಷಣ, ಭೂಷಣ. ನಿರುದ್ಯೋಗಿಯನ್ನೆಂತು ಅಲಕ್ಷ್ಯದಿಂದ ಕಾಣುವರು.

'ಕೆಲಸವಿಲ್ಲ ಕಾರ್ಯವಿಲ್ಲಾ' ಸೋಂಭೇರಿ ಎಂದು ಜನ ಅಲಕ್ಷ್ಯದಿಂದ ಕಾಣುವುದೇ ಅಲ್ಲದೇ; ಕೆಲಸವಿಲ್ಲಾ ಸಂಪಾದನೆಯಿಲ್ಲಾ (ಉಪೈತಿ ಲಕ್ಷ್ಮೀಃ) ಎಂದು ಹೆಂಡತಿ ಕೂಡಾ ಮೂದಲಿಸುವಳು. ದುಡಿಯಬೇಕು, ದುಡಿದುದರ ಪ್ರತಿಫಲ ತಂದು, ಆಶ್ರಿತರ ಪೋಷಣೆಗೆಂದು ಸಹಧರ್ಮಿಣಿಯ ಕೈಗೆ ಹಾಕಬೇಕು. ಆಗ ಜಯ, ಶಹಭಾಷ್, ಮಾನ್ಯತೆ.

ಎಲ್ಲರ ಮಧ್ಯೆ, ಎಲ್ಲರ ಸರಿಸಮನಾಗಿ ತಾನೂ ತಲೆಎತ್ತಿ ತಿರುಗಲು ಅರ್ಹತೆ.

ಉದ್ಯೋಗವೆಂತು ಮಾನವನಿಗೆ ಭೂಷಣ. ಅವನಿಗೆ ಒಂದು ಸ್ಥಾನ ಮಾನವನ್ನು ಕೊಡುವುದು ಅವನ ನಿತ್ಯ ವ್ಯವಸಾಯ, ಅವನ ಹಣ ವಲ್ಲಾ, ದೊಡ್ಡಸ್ಥಿಕೆಯಲ್ಲಾ. ಅದನ್ನು ಅವನ ನಿತ್ಯ ದುಡುಮೆಯಿಂದ ಎಷ್ಟು ಹೆಚ್ಚಿನ ಜನಕ್ಕೆ, ಎಷ್ಟು ಹೆಚ್ಚಿನ ಸೇವೆ ಸಲ್ಲಿಸುವುದರಲ್ಲಿ ನಿರತನಾಗಿ ದ್ದಾನೆಂಬುವುದೇ ಮಾನವನ ಜಯದ ಅಳತೆ. ಆ ವ್ಯವಸಾಯದಲ್ಲೇ ಉಲ್ಲಾಸವಾಗಿ ಅವನ ಜೀವನ ಕಳೆಯುವನು. ಏನು ಕಷ್ಟಗಳು ಬರಲೀ, ದುಃಖ ಬರಲೀ ಆ ನಿತ್ಯ ಜನಸೇವೆಯ ದುಡುಮೆಯಲ್ಲಿ ಮರೆವನು. ಏನು ಸುಖ ಬರಲಿ ಸಂಪತ್ತು ಬರಲಿ ಅನುಭವಿಸುವನು. ಈ ಕರ್ತವ್ಯ ನಿಷ್ಠೆಯನ್ನೇ ಈಗ ನಮ್ಮ ನಾಯಕ ನೆಹ್ರೂರವರು ನಮಗೆ ಒತ್ತಿ ಒತ್ತಿ ಹೇಳುವುದು, ಅವರೂ ಅವಿಚ್ಛಿನ್ನವಾಗಿ ಮಾಡುವುದು, ಅದರಲ್ಲೇ ತಮ್ಮ ಜೀವನವನ್ನೆಲ್ಲಾ ತೇಯುವುದು, ಅದರಲ್ಲೇ ಮುಳುಗಿ ತೇಲಿ ಆನಂದಮಯರಾಗಿರುವುದು, ಅದರಿಂದಲೇ ಪೂಜ್ಯಸ್ಥಾನ ಪಡೆದು ಹೋದಲ್ಲೆಲ್ಲಾ ಜೈಘೋಷ ಮಾಡಿಸಿಕೊಳ್ಳುವುದು. ಈ ಪ್ರಕೃತ ಸ್ಥಿತಿಯಲ್ಲಿ, ಈ ಸ್ವಾತಂತ್ರ್ಯ ಲಭಿಸಿರುವ ಶೈಶವಾವಸ್ಥೆಯಲ್ಲಿ ಸರ್ವರೂ ಸರ್ವರ ಸೇವೆಗಾಗಿ ಮಾತೃಭೂಮಿಯ ಅಭಿವೃದ್ಧಿಗಾಗಿ, ಸಹೋದರರ ಮೇಲ್ಮೆಗಾಗಿ, ಜನಾಂಗದ ಉನ್ನತಿಗಾಗಿ ದುಡಿವುದು ಹೆಚ್ಚಿನ ಅಗತ್ಯ, ದುಡಿಯಲೇಬೇಕು, ಶಕ್ತಿಮೀರಿ.

ಈ ದುಡಿಮೆಯೂ ಜಯವೂ ಸಾತ್ವಿಕ ರೂಪದಲ್ಲಿರಬೇಕು. ಲೋಕ ಕಲ್ಯಾಣಭಾಗಿಯಾಗಿ, ಪ್ರಪಂಚವನ್ನೆಲ್ಲಾ ಸೋದರಭಾವನೆಯಿಂದ, ಶಾಂತಿ ಸಮೃದ್ಧಿಗಾಗಿ ದುಡಿವುದು ಸತ್ವಗುಣ. ಅವರೇ ಸಾತ್ವಿಕರು. ಇತರರನ್ನು ನಾಶಮಾಡಿಯಾದರೂ ತಾನು ವಾಸಿಸಬೇಕೆಂಬ ಮನೋ ಭಾವ ರಾಕ್ಷಸೀಯ. ಮುಂದೆ ಭಗವಂತನೇ ದೈವಿಗುಣ, ಸತ್ವಗುಣಗಳ ವಿವರಣೆಗೆ ಅಧ್ಯಾಯಗಳನ್ನೇ ಹೇಳಿದ್ದಾನೆ. ಅಲ್ಲಿ ಇದರ ಮಹತ್ವ ಕಾಣುವ.

**ವೃಷ್ಣೀನಾಂ ವಾಸುದೇವೋಽಸ್ಮಿ । ಪಾಂಡವಾನಾಂ ಧನಂಜಯಃ ।**
**ಮುನೀನಾಮಪ್ಯಹಂ ವ್ಯಾಸಃ । ಕವೀನಾಮುಶನಾ ಕವಿಃ ॥೩೭॥**

ವೃಷ್ಣಿಕುಲದಲ್ಲಿ ವಾಸುದೇವನೂ, ಪಾಂಡವರಲ್ಲಿ ಅರ್ಜುನನೂ, ಮುನಿಗಳಲ್ಲಿ ವ್ಯಾಸನೂ, ಕವಿಗಳಲ್ಲಿ (ಕ್ರಾಂತಿಕಾರರಲ್ಲಿ) ಶುಕ್ರಾಚಾರ್ಯನೂ ನಾನಾಗಿರುವೆನು.

ದ್ವಾಪರಯುಗದಲ್ಲೇ, ನಂದಕುಲದಲ್ಲಿ ವಾಸುದೇವನೂ, ರಾಜರ ಪೈಕಿ ಪಾಂಡವರ ಅರ್ಜುನನೂ ದೇವಾಂಶದವರು. ಒಂದು ಕಾಲದಲ್ಲಿ, ಒಂದು ದೇಶದಲ್ಲಿ, ಅದರ ಪೂಜ್ಯತೆ ಮತ್ತು ಶ್ರೇಷ್ಠತೆ ಅದರ ವೈಭವ ದಲ್ಲಲ್ಲಾ, ಅದರ ವಿದ್ಯಾಸಂಪತ್ತುಗಳಲ್ಲಲ್ಲಾ. ಅಲ್ಲಿ ಆಗ ೧೭ ಅಣೆ ವ್ಯಕ್ತಿಗಳೆಷ್ಟಿದ್ದರೆನ್ನುವುದರ ಮೇಲೆ ಹೋಗುತ್ತದೆ. ಅಂಥಾ ಒಂದು ವ್ಯಕ್ತಿ ಒಂದು ಯುಗವನ್ನೇ, ಇಡೀ ಪ್ರಪಂಚವನ್ನೇ ಉದ್ಧಾರಮಾಡಿ ಬಿಡುವನು. ಅವೇ ಅವತಾರಗಳು. ಒಬ್ಬ ಭಕ್ತ ಪವಿತ್ರ ವ್ಯಕ್ತಿ ಜನಿಸಿ ಕುಲವನ್ನೇ ಪವಿತ್ರಮಾಡುವರು, ಒಂದು ಪತಿವ್ರತಾ ನಾರೀಶಿರೋಮಣಿ, ಹುಟ್ಟಿದ ಕುಲ, ಸೇರಿದ ಕುಲ ಎರಡನ್ನೂ ಪಾವನಮಾಡುವಳು. ಹೀಗೆ ದೇವದೇವನಾದ ಶ್ರೀಮನ್ನಾರಾಯಣನು ವೃಷ್ಣಿಕುಲದಲ್ಲಿ ಲೋಕೋದ್ಧಾರಕ್ಕಾಗಿ ವಾಸುದೇವನಾಗಿ ಅವತರಿಸಿದನು. ಅಂತೆಯೇ ಭಗವಂತನ ಸಂಕಲ್ಪವನ್ನು ನೆರವೇರಿಸುವುದಕ್ಕಾಗಿ, ಧರ್ಮಪರಿಪಾಲನೆ ದುಷ್ಟ ಶಿಕ್ಷಣಕ್ಕಾಗಿ, ಪಾಂಡವರಲ್ಲಿ ಅರ್ಜುನ ದೈವಾಂಶನಾಗಿ ಜನಿಸಿದನು—'ನಿಮಿತ್ತ ಮಾತ್ರ ಭವ ಸವ್ಯಸಾಚಿ' ಎನ್ನುವಂತೆ. ಇಬ್ಬರನ್ನೂ ಒಂದೇ ಶ್ಲೋಕದಲ್ಲಿ, ಒಂದೇ ಪಾದದಲ್ಲಿ ಒಂದೇ ಉಸಿರಿನಲ್ಲಿ ಹೇಳಿಕೊಂಡಿದ್ದಾನೆ ಪರಮಾತ್ಮ. ನರನಾರಾಯಣರಲ್ಲಿ ಭೇದವೇ ಇಲ್ಲ. ಭಗವಾನ್ ಭಕ್ತರಲ್ಲಿ ವ್ಯತ್ಯಾಸವೇ ಇಲ್ಲಾ. ಇಬ್ಬರೂ ಒಂದೇ.

ಮುನಿಗಳಲ್ಲಿ ವ್ಯಾಸರು. ವ್ಯಾಸರವ್ಯಾಸವಾದರೂ ಎಷ್ಟು ಘನ. ಮಹಾಭಾರತ ಒಂದೇ ಸಾಲದೇ ಅವರನ್ನು ಭಗವಾನ್ ವ್ಯಾಸರನ್ನಾಗಿ ಮಾಡಲು, ಶ್ರೀ ಶಂಕರಾಚಾರ್ಯರಂತೂ ಅವರನ್ನು ಬಹು ಪೂಜ್ಯಭಾವ ದಿಂದ ಕಂಡಿದ್ದಾರೆ. ಈಗಲೂ ಆಷಾಢ ಶುದ್ಧ ಪೌರ್ಣಮಿ 'ವ್ಯಾಸ

ಪೌರ್ಣಿಮಾ' ಎಂದು ಗುರುಪೂಜೆ ಮಾಡಲು, ಋಷಿಗಳು, ತಪಸ್ವಿಗಳು, ಆಚಾರ್ಯರು ಕೂಡಾ ತಮ್ಮ ಪರಮಗುರುವನ್ನಾರಾಧಿಸುವ ದಿನವಾಗಿ ಪವಿತ್ರವಾಗಿದೆ. ವ್ಯಾಸರ ಅಗಾಧ ಪಾಂಡಿತ್ಯದ ಜೊತೆಗೆ ತಲತಲಾಂತರ ಶಿಷ್ಯವೃಂದಕ್ಕೆ ಪ್ಯಾಸಂಗಕ್ಕನುಕೂಲವಾಗುವಂತಹ ಗ್ರಂಥ ರಚನೆಯ ಅಮೋಘ ಶಕ್ತಿಯೂ ಸೇರಿತ್ತು. ಅವರು ಮುನಿಗಳು, ಗುರುಗಳು, ಕವಿಗಳು, ಸ್ವಯಂ ದೇವಾಂಶಸಂಭೂತರು. ಆದಿಮುನಿಗಳು, ಆದಿಗುರುಗಳು, ಆದಿಕವಿಗಳೆಂದೇ ಹೇಳಬಹುದು. ಜನಸಾಮಾನ್ಯಕ್ಕೆಲ್ಲಾ ತಮ್ಮ ಗ್ರಂಥರಚನೆಯಿಂದ, ವೇದವೇದಾಂತ ಸಾರವನ್ನೆಲ್ಲಾ ಸಂಗ್ರಹಿಸಿ, ಮಹದುಪಕಾರಮಾಡಿದ್ದಾರೆ.

ಕ್ರಾಂತದಾರ್ಶಿಗನನ್ನು ಕವಿಯೆಂದು ಶಂಕರರು, ಭಾಷ್ಯಮಾಡಿದ್ದಾರೆ. 'ಕವಿಶಬ್ದೋತ್ರ ಯೌಗಿಕೋನ ರೂಢಃ ಪೌನರುಕ್ತ್ಯಾತ್' ಎಂದು ಆನಂದ ಗಿರಿಗಳು ಭಾಷ್ಯಮಾಡಿದ್ದಾರೆ. ಯೋಗಿಯೇ ಕವಿ. ಮುನಿಯೇ ಮೌನದಿಂದ ಧ್ಯಾನ ಮಗ್ನನಾಗಿ ಕಂಡ ವಸ್ತುಗಳನ್ನು ಕ್ರಾಂತದರ್ಶಿಯಾಗಿ ಕಾವ್ಯ ರಚಿಸಿ ಕವಿಯಾಗುತ್ತಾನೆ. ಸುಮ್ಮನೆ ಕಾಮೋದ್ರೇಕ ಗ್ರಂಥಗಳೂ ಲಘುರಚನೆಗಳೂ, ಸಾಮಾನ್ಯ ಜನ ಮನರಂಜನ ಅಸ್ಥಿರ ಅವಿವೇಕ ಶಬ್ದ ರಚನಾತ್ಮಕರೆಲ್ಲಾ ಕವಿಗಳಲ್ಲಾ. ಓದುಗರ ಮನಸ್ಸಿನಲ್ಲಿ ಕ್ರಾಂತಿಮಾಡಿ, ಮಾರ್ಗದರ್ಶಿಯಾಗಬಲ್ಲ ಕಾವ್ಯರಚಿಸಬಲ್ಲವ ಕವಿ. ಶುಕ್ರಾಚಾರ್ಯರು ತಮ್ಮ ಪವಿತ್ರ ಪ್ರಭೆಯಿಂದ ರಾಕ್ಷಸರ ಮನವನ್ನು ಒಲಿದು ಅವರಿಗೂ ಗುರುಗಳಾಗಿದ್ದರು.

**ದಂಡೋ ದಮಯತಾಮಸ್ಮಿ । ನೀತಿರಸ್ಮಿ ಜಿಗೀಷತಾಮ್ ।**
**ಮೌನಂ ಚೈವಾಸ್ಮಿ ಗುಹ್ಯಾನಾಂ । ಜ್ಞಾನಂ ಜ್ಞಾನವತಾಮಹಮ್ ॥**

ದಮಯ ಮಾಡುವವರಲ್ಲಿ ದಂಡವೂ, ಗೆಲ್ಲುವವರಲ್ಲಿ ನೀತಿಯೂ ಗುಹ್ಯದಲ್ಲಿ ಮೌನವೂ, ಜ್ಞಾನಿಗಳ ಜ್ಞಾನವೂ ನಾನಾಗಿದ್ದೇನೆ. "ದಂಡಂ ದಶಗುಣಮ್ ಭವೇತ್" ಎಂದು ಶಿಕ್ಷಣದಿಂದ ಸದ್ಗುಣಗಳುಂಟಾಗುತ್ತವೆ. ನಾವಿರಪೆಟ್ಟು ಬಿದ್ದು ಕಲ್ಲು ಲಿಂಗವಾಗುತ್ತದೆ. ದಂಡಿಸಿದಷ್ಟೂ ದೇಹ ಹತೋಟಿಗೆ ಬರುತ್ತದೆ. ದೇಹದಂಡನೆಯು ಎಷ್ಟೋ ತರಹ

ಯೋಗಕ್ಕೆ ಮಾರ್ಗ. ಹೋದಂತೆ ಬಿಡದೆ, ಅದನ್ನು ಕಟ್ಟಿನಲ್ಲಿ ನಿಯಮದಲ್ಲಿ ಶಿಕ್ಷಣಮಾಡುವುದೇ ದಮ. ನಿಗ್ರಹದಿಂದ ಶಕ್ತಿ ಶೇಖರವಾಗುತ್ತೆ. "ಭಯಾದಸ್ಯಾಗ್ನಿಸ್ತಪತಿ. ಭಯಾತ್ತಪತಿಸೂರ್ಯಃ । ಭಯಾದಿಂದ್ರಶ್ಚ ವಾಯುಶ್ಚ, ಮೃತ್ಯುರ್ಧಾವತಿಪಂಚಮಃ ॥" ಎನ್ನುವ ಕಠೋಪನಿಷತ್ತಿನ ಶ್ಲೋಕದಂತೆ ಅಗ್ನಿ, ಸೂರ್ಯ, ಇಂದ್ರ, ವಾಯು, ಯಮ ಐವರೂ ಆತನ ಭಯದಿಂದಲೇ ತಮ್ಮ ತಮ್ಮ ಕೆಲಸಗಳನ್ನು ಮಾಡುವರು.

ದಂಡವೆಂಬ ಶಬ್ದಕ್ಕೆ ಶಿಕ್ಷೆಯೆಂಬರ್ಥವಲ್ಲದೆ, ತೆರವೆಂಬರ್ಥವೂ ಉಂಟು—ದಂಡ ಕೊಡುವುದು ಎನ್ನುವಂತೆ. ನಮ್ಮ ಸರ್ವಸ್ವವನ್ನು ಅವನಿಗಾಗಿ ತೆರಕೊಟ್ಟುಬಿಟ್ಟರೆ ಸ್ವಾರ್ಥ ನೀಗುವುದು. ತಪ್ಪುಗಳಿಗೆಲ್ಲಾ ದಂಡತೆತ್ತು ನಿರ್ದೋಷಿಗಳಾಗುವೆವು. ದಂಡವೆನ್ನುವುದಕ್ಕೆ ಆಸರೆ ಕೈಕೋಲೆಂದೂ ಅರ್ಥ; ಸನ್ಮಾರ್ಗದಲ್ಲಿ ನಡೆಯಲು ನಿಶ್ಶಕ್ತರಾದವರಿಗೆ ಆಸರೆ ಕೋಲು ಆ ಪರಮಾತ್ಮನೇ. ಎಷ್ಟೋ ದುರಂತ ಮಾರ್ಗಗಳಿಂದ ಹಾಯಿಸಲು ಆಸರೆಗೆ ಪರಮಾತ್ಮನ ಚಿಂತನವೆಂಬ ಕೈಕೋಲಿದ್ದರೆ ದಾಟಲವಕಾಶವಾಗುತ್ತೆ ನಿಶ್ಶಕ್ತರಿಗೆ.

ಗೆಲುವಿನ ರೀತಿಯೇ ನೀತಿ. ಶೀಲತೆಯು ಸತ್ಯಾವಲಂಬನೆಯಿಂದ ಬರುತ್ತದೆ. ಅದರಿಂದ ಧರ್ಮ, ಜಯ. 'ಸತ್ಯಮೇವಜಯತೆ ನಾನೃತಂ' ಎನ್ನುವುದು ಸ್ವತಂತ್ರ ಭಾರತದ ಲಾಂಛನ ಪುಣ್ಯಶ್ಲೋಕವಾಗಿದೆ. ಸತ್ಯವೇ ದೇವರು. ಅವನಿದ್ದಲ್ಲಿಯೇ ಜಯ. ಯಾವ ರೀತಿಯಿಂದಲಾದರೂ ಗೆಲುವುದು ಗೆಲುವಲ್ಲಾ. ನೀತಿಯಿಂದಲೇ ಯಾವುದನ್ನಾದರೂ ಜಯಿಸಬೇಕು. ಧ್ಯೇಯವೂ ಪವಿತ್ರವಾಗಿರಬೇಕು. ಅದನ್ನು ಗೆಲ್ಲುವ ಮಾರ್ಗವೂ ಪವಿತ್ರವಾಗಿ ನೀತಿಯುಕ್ತವಾಗಿರಬೇಕು. 'ಏನಕೇನ ಪ್ರಕಾರೇಣ' ಜಯಸಾಧನೆ ಭಗವಂತನ ಕಟ್ಟಳೆಗೆ ವಿರೋಧ.

"Speech is Silver, Silence is Golden" ಎನ್ನುವಂತೆ ಚಿನ್ನದಂತಹ ಮೌನ. ಎಲ್ಲರೂ ಮೌನವಾಗಿರಲಾರರು ಮೌನ ಸಾಧಿಸಿದವನು ಮುನಿ. ಮೌನವಾಗಿರಬೇಕಾದರೆ ಅಂತಶಕ್ತಿ ಬೇಕು; ನಿಗ್ರಹ ಬೇಕು. ಮಾತನಾಡಬೇಕೆಂಬ, ತಾನೇ ತಿಳಿದವನೆಂದು ಪ್ರಕಟಿಸಿಕೊಳ್ಳ

ಬೇಕೆಂಬ ಆಸೆ ತಲೆಹಾಕುತ್ತಿರುತ್ತದೆ. ಅದನ್ನು ತಡೆಗಟ್ಟಬಲ್ಲವನೇ ಮೌನಿ. ಸುಮ್ಮನೆ ಹರಟೆ ಆಯಾಸ ಮಾಡಿಕೊಳ್ಳುವುದು ತಪ್ಪಿದರೆ, ಮೌನವಾಗಿದ್ದವನಲ್ಲಿ ಆತ್ಮಶಕ್ತಿ ಬಲವಾಗುತ್ತದೆ. ಮೌನದಿಂದಿದ್ದರೆ ಮನಸ್ಸು ಯಾವುದಾದರೂ ಸದ್ವಸ್ತು ಚಿಂತನೆಯಲ್ಲಿರಲವಕಾಶವಾಗುತ್ತದೆ. ಇದು ಗುಪ್ಯವಸ್ತುಗಳಲ್ಲಿ ಶ್ರೇಷ್ಠ. ಮೌನದಿಂದಿದ್ದರೆ ಮಾನ. ಬಾಯಿಬಿಟ್ಟರೆ ಬಣ್ಣಗೇಡು. ಗುಹ್ಯವೆಂದರೆ ಗುಹೆ. ಪೂರ್ವದಲ್ಲಿ ಮುನಿಗಳು ಗುಹೆಯಲ್ಲಿ ತಪವನ್ನಾಚರಿಸುತ್ತಿದ್ದರಂತೆ. ಗುಹೆಯಲ್ಲಿದ್ದರೆ ಕಣ್ಣಿಗೆ ಕಾಣದಂತೆ ಗೌಪ್ಯವಾಗಿರುತ್ತಾರೆ. ಅಲ್ಲಿನ ಅಂಧಕಾರದಲ್ಲಿ, ನಿಶ್ಶಬ್ದದಲ್ಲಿ ಮೌನವಾಗಿರಲು ಸಹಾಯ. ದೇವನನ್ನು ಗುಹೆಯಲ್ಲಿ ಕಾಣುವರು ಈ ಮೌನಾಚರಣೆಯಿಂದ. "ಗುಪ್ತೋಮುಕ್ತಃ" ಮುಕ್ತನು ಮೌನವಾಗಿಯೇ ಇರುವನು. ಅವನು ಆಡಬೇಕಾದುದಾವರೂ ಏನು. 'ಮಾನಸಶ್ಚ ತಥೋಪಾಂಶೋಸ್ಸಹಸ್ರಗುಣಮುಚ್ಯತೆ' ಎಂದು ದರ್ಶನೋಪನಿಷತ್ತಿನಲ್ಲಿ, ಮನಸ್ಸಿನಲ್ಲಿ ಮೌನವಾಗಿ ಮಾಡುವ ಜಪವು ಸಹಸ್ರಗುಣವುಳ್ಳದೆಂದು ಹೇಳಿದೆ.

ಜ್ಞಾನಿಗಳ ಜ್ಞಾನವು ಪರಮಾತ್ಮನೇ. "ಪ್ರಜ್ಞಾನಂ ಬ್ರಹ್ಮ" ಐತರೇಯೋಪನಿಷತ್ತಿನಲ್ಲಿ "ಆಜ್ಞಾನಂ, ವಿಜ್ಞಾನಂ, ಪ್ರಜ್ಞಾನಂ, ಮೇಧಾ, ಧೃತಿ, ಮತಿ, ಮನೀಷಾ, ಜೂತಿ, ಸ್ಮೃತಿ, ಸಂಕಲ್ಪಃ, ಕ್ರತು, ಅಸುಃ, ಕಾಮ, ವಶಾ ಎಲ್ಲವೂ ಪ್ರಜ್ಞಾನದ ನಾಮಧೇಯಗಳು. "ಸರ್ವಂ ತತ್ಪ್ರಜ್ಞಾನೇತ್ರಂ, ಪ್ರಜ್ಞಾನೇ ಪ್ರತಿಷ್ಠಿತಂ, ಪ್ರಜ್ಞಾನೇತ್ರೋಲೋಕಃ ಪ್ರಜ್ಞಾಪ್ರತಿಷ್ಠಾ ಪ್ರಜ್ಞಾನಂ ಬ್ರಹ್ಮ" ಎಂದು ಜ್ಞಾನಿಗಳ ಜ್ಞಾನವು-ಸಪಪಬ್ರಹ್ಮ—ಇತ್ಯಾದಿ ಘೋಷಿಸಿದೆ. ಜ್ಞಾನಿಗಳಿಗೆ ತನುಮನಧನವೆಲ್ಲವೂ ಅವನೇ ಆದಂತೆ ಅವರ ಜ್ಞಾನವೂ ಅವನೇ. 'ಬ್ರಹ್ಮಂವೇದ ಬ್ರಹ್ಮೈವಭವತಿ' ಬ್ರಹ್ಮಜ್ಞಾನವು ಬಂದಾಗಲೇ "ತತ್‌ಬ್ರಹ್ಮ ಸಮಶ್ನುತೆ" ಬ್ರಹ್ಮಸಮಾನನಾಗಿಬಿಟ್ಟ ಜ್ಞಾನಿ.

**ಯಚ್ಚಾಪಿ ಸರ್ವಭೂತಾನಾಂ । ಬೀಜಂ ತದಹಮರ್ಜುನ ।**
**ನ ತದಸ್ತಿ ವಿನಾ ಯತ್ ಸ್ಯಾ-ನ್ಮಯಾ ಭೂತಂ ಚರಾಚರಮ್ ॥೩೯॥**

ಸಮಸ್ತ ಪ್ರಾಣಿಗಳ ಉತ್ಪತ್ತಿ ಕಾರಣ (ಸರ್ವಭೂತಾನಾಂ ಬೀಜಂ) ನಾನು ನನಗಿಂತ ಭಿನ್ನವಾದ ಚರಾಚರ ವಸ್ತು ಯಾವುದೂ ಇರುವುದಿಲ್ಲಾ ಶ್ರೀ ಸದಾಶಿವ ಬ್ರಹ್ಮರ "ಅದ್ವೈತತಾರಾವಳಿ"ಯಲ್ಲಿ "ಬಹುಭಿಃ ಕಿಮೋ ಭಿರುಕ್ತೈರ ಹಮೇ ವೇದಂ ಚರಾಚರಂ ಸರ್ವಂ"–ಹೆಚ್ಚು ಹೇಳಲೇನು? ನಾನೇ ಸರ್ವ ಚರಾಚರವೆಂದು ತಿಳಿ ಎನ್ನುವಂತೆ. ಮುಂದೇ ಭಗವಂತನೇ "ಬಹುನೈತೇನ ಕಿಂಜ್ಞಾತೇ" ಅನೇಕ ಪ್ರಕಾರ ತಿಳಿವುದರಿಂದೇನು? ಹೋಲುತ್ತದೆ. ತಾರಾವಳಿಯ ಅದೇ ಶ್ಲೋಕದ ಉತ್ತರಾರ್ಧದಲ್ಲಿ "ಶೀಕರ ಫೇನ ತರಂಗಾ ಸ್ಸಿಂಧೋರಪರಾಣಿನ ಖಲು ವಸ್ತೂನಿ" ಎಂದು ಸಮುದ್ರದ ಉಪಮಾನ ತೆಗೆದುಕೊಂಡು ನೊರೆ, ತುಂತುರು, ಅಲೆ ಎಲ್ಲಾ ಸಮುದ್ರದ ತೋರಿಕೆಗಳೇ ವಿನಾ, ಇತರ ಬೇರೇ ವಸ್ತುಗಳಲ್ಲಾ ಎಂದಿದ್ದಾರೆ. "ಸಾಮುದ್ರೋಹಿ ತರಂಗಃ" ಎಂದು ಶ್ರೀಶಂಕರಾಚಾರ್ಯರು "ಷಟ್ಪದಿ"ಯಲ್ಲಿ ಹೇಳಿರುವಂತೆ ಎಲ್ಲಕ್ಕೂ ಕಾರಣ ಸ್ವಾಮಿ. ಶಂಕರರ "ದಕ್ಷಿಣಾಮೂರ್ತಿಸ್ತೋತ್ರ"ದಲ್ಲಿ ಹೇಳಿರುವಂತೆ "ಬೀಜಸ್ಯಾಂತರಿ ವಾಂಙ್ಕುರೊ ಜಗದಿದಂ ಪ್ರಾಙ್ನಿರ್ವಿಕಲ್ಪಂ ಪುನಮ್ಮಾಯಾ ಕಲ್ಪಿತ ದೇಶ ಕಾಲ ಕಲನಾ ವೈಚಿತ್ರ್ಯ ಚಿತ್ರೀ ಕೃತಂ"— ಮಾಯಾವಿಯೋ ಮಹಾ ಯೋಗಿಯೋ ಸ್ವೇಚ್ಛೆಯಿಂದ ವಿಜೃಂಭಿಸುವಂತೆ, ಬೀಜದಲ್ಲಿ ಅಡಗಿರುವ ಅಂಕುರದಂತಿರುವ ಈ ಜಗತ್ತನ್ನು ಮಾಯಾ ಕಲ್ಪಿತ ದೇಶ ಕಾಲ ಕಲನಾ ವೈಚಿತ್ರ್ಯ ಚಿತ್ರವಾಗಿ ಮಾಡುವುದಕ್ಕೆ, ಉತ್ಪತ್ತಿ ಕಾರಣ ಸ್ವಾಮಿ. ಮಹಾನಿರ್ವಾಣತಂತ್ರದಲ್ಲಿ "ನಮಸ್ತೇ ಸತೇ ಜಗತ್ಕಾರಣಾಯ | ನಮಸ್ತೇ ಚಿತೇ ಸರ್ವಲೋಕಾಶ್ರಯಾಯ | ನಮೋ ದ್ವೈತ ತತ್ವಾಯ ಮುಕ್ತಿ ಪ್ರದಾಯ | ನಮೋ ಬ್ರಹ್ಮಣೇ ವ್ಯಾಪಿನೇ ಶಾಶ್ವತಾಯ ||" ಎಂದು ಸತ್ ಚಿತ್ ಆನಂದ ಸ್ವರೂಪನಾದ ಶಾಶ್ವತ ಬ್ರಹ್ಮನು ಸತ್ ರೂಪದಿಂದ ಜಗತ್ಕಾರಣನೂ, ಚಿತ್ ಸ್ವರೂಪವಾದ ಸರ್ವಲೋಕಾಶ್ರಯನೂ, ಅನಂತ ಆನಂದ ಅದ್ವೈತ ತತ್ವದಿಂದ ಮುಕ್ತಿಪ್ರದನೂ (ತಾನು ತನ್ನದೆಂಬ ಭೇದ ನಿರ್ವಾಣಮಾಡಿ) ಆಗಿದ್ದಾನೆ, ಆ ಸರ್ವವ್ಯಾಪಿ ಶಾಶ್ವತರೂಪಿಗೆ ನಮಸ್ಕಾರವು ಎಂದಿದೆ.

**ನಾಂತೋಽಸ್ತಿ ಮಮ ದಿವ್ಯಾನಾಂ । ವಿಭೂತೀನಾಂ ಪರಂತಪ ।**
**ಏಷ ತೂದ್ದೇಶತಃ ಪ್ರೋಕ್ತೋ । ವಿಭೂತೇರ್ವಿಸ್ತರೋ ಮಯಾ ॥**

ಶತೃತಾಪಕನೇ, ನನ್ನ ದಿವ್ಯವಾದ ವಿಭೂತಿಗಳಿಗೆ ಕೊನೆಯೇ ಇಲ್ಲಾ. ಇಷ್ಟು ವಿಸ್ತಾರವಾಗಿ ಈಗ ಹೇಳಿದ ವಿಭೂತಿಗಳೂ ಸಂಕ್ಷೇಪವೇ. ಒಂದು ಅಧ್ಯಾಯವೆಲ್ಲಾ ಹೇಳಿ ಇನ್ನೂ ಸಂಕ್ಷೇಪವೇ ಎಂದು ಹೇಳಬೇಕಾದರೆ ಭಗವಂತ ಎಂತಹ ವಿಶ್ವವ್ಯಾಪಿಯಿರಬೇಕು. ಅನಂತನಾದ ಸ್ವಾಮಿಗೆ ಅಂತವೆಲ್ಲಿ. ಶಂಕರರು, ಶಿವಮಹಿಮ್ನ ಸ್ತೋತ್ರದಲ್ಲಿ ಹೇಳಿರುವಂತೆ "ಅಸಿತಗಿರಿಸಮಂ ಸ್ಯಾತ್ ಕಜ್ಜಲಂ ಸಿಂಧುಪಾತ್ರೇ ಸುರತರುವರ ಶಾಖಾ ಲೇಖನೀ ಪತ್ರಮುರ್ವೀ। ಲಿಖಿತಿಯದಿ ಗೃಹೀತ್ವಾ ಶಾರದಾ ಸರ್ವಕಾಲಂ। ತದಪಿತವ ಗುಣಾನಾಮೀಶ ಪಾರಂ ನಯಾತಿ॥" ಸಾಕ್ಷಾತ್ ಸರಸ್ವತಿಯೇ ಕಲ್ಪವೃಕ್ಷದ ಶಾಖೆಯನ್ನು ಲೇಖನಿಯಾಗಿ ಮಾಡಿ ಇಡೀ ಪೃಥ್ವಿಯನ್ನೇ ಪತ್ರವನ್ನಾಗಿರಿಸಿಕೊಂಡು, ನೀಲಪರ್ವತವನ್ನೇ ಕದಡಿ ಸಮುದ್ರ ಮಸಿ ಕುಡಿಕೆಯಲ್ಲದ್ದಿ ಸರ್ವಕಾಲ ಬರೆದರೂ ಆಗಲೂ ಹೇ ಪ್ರಭೋ ನಿನ್ನ ದಿವ್ಯ ಗುಣ ವಿಭೂತಿಯನ್ನು ವರ್ಣಿಸಿ ಪೂರೈಸಲು ಸಾಧ್ಯವಿಲ್ಲಾ. ಅದೂ ಅಲ್ಲದೆ ತಾನೇ ಹೇಳುವಾಗ ಇನ್ನೆಷ್ಟು ಹೇಳಿಕೊಂಡಾನು ಪ್ರಭು.

**ಯದ್ಯದ್ವಿಭೂತಿಮತ್ಸತ್ತ್ವಂ । ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ । ಮಮ ತೇಜೋಽಂಶಸಂಭವಮ್ ॥೪೧॥**

ಯಾವ ಯಾವ ವಿಭೂತಿಗಳು ಸತ್ವಯುಕ್ತವಾಗಿಯೂ, ಐಶ್ವರ್ಯ ಯುಕ್ತವಾಗಿಯೂ, ಊರ್ಜಿತವಾಗಿಯೂ ಪ್ರಕಾಶಿಸುವುವೋ ಅವೆಲ್ಲಾ ನನ್ನ ತೇಜೋಂಶದಿಂದ ಸಂಭವಿಸಿದೆಯೆಂದು ತಿಳಿ.

**ಅಥವಾ ಬಹುನೈ ತೇನ । ಕಿಂ ಜ್ಞಾತೇನ ತವಾರ್ಜುನ ।**
**ವಿಷ್ಟಭ್ಯಾಹಮಿದಂ ಕೃತ್ಸ್ನ-ಮೇಕಾಂಶೇನ ಸ್ಥಿತೋ ಜಗತ್ ॥೪೨॥**

ಇಲ್ಲವೇ ಅನೇಕ ಪ್ರಕಾರ ತಿಳಿವುದರಿಂದೇನು. ಒಂದೇ ಮಾತಿನಲ್ಲಿ ಹೇಳುವುದಾದರೆ ನನ್ನ ಏಕಾಂಶದಿಂದ ಈ ಜಗತ್ತು ಸ್ಥಿರವಾಗಿದೆ.

ಅಷ್ಟೈಕತತಾರಾವಳಿಯಲ್ಲಿ "ಬ್ರಹ್ಮಾಕಾರತಯಾಪಿ ಪ್ರತಿಭಾತೀದಂ ಪರಾತ್ಪರಂ ಸರ್ವಂ" ಎಂದು ಸರ್ವವನ್ನೂ ಬ್ರಹ್ಮಾಕಾರವಾಗಿ ಅಪರ ಪ್ರತಿಬಿಂಬದಂತೆ ವರ್ಣಿಸಿದೆ. ಛಾಂದೋಗ್ಯ (೩, ೧೨, ೬) ದಲ್ಲಿ ಬರುವಂತೆ "ಪಾದೋಸ್ಯ ಸರ್ವಾಭೂತಾನಿ | ತ್ರಿಪಾದಸ್ಯಾಮೃತಂ ದಿವೀತಿ" ಎಂದೂ ಮತ್ತೂ ಪುರುಷ ಸೂಕ್ತದಲ್ಲಿ "ಪಾದೋಸ್ಯ ವಿಶ್ವಾಭೂತಾನಿ | ತ್ರಿಪಾದಸ್ಯಾಮೃತಂದಿವಿ |" ಎಂದು ಒಂದು ಪಾದದಿಂದ ವಿಶ್ವಭೂತಗಳೆಲ್ಲವೂ ಉಂಟಾಗಿವೆ. ಮೂರುಪಾದ (ಮುಕ್ಕಾಲು) ಅಮೃತವಾಗಿಯೇ ಉಳಿದಿದೆ.

ಮಹಾನಾರಾಯಣೋಪನಿಷತ್ತಿನಲ್ಲಿ "ಪಾದಚತುಷ್ಟಯಾತ್ಮಕಂ ಬ್ರಹ್ಮಾ | ಅವಿದ್ಯಾಪಾದ ಸುವಿದ್ಯಾಪಾದಸ್ತ್ವಾನಂದಪಾದಸ್ತುರೀಯ ಪಾದಶ್ಚೇತಿ ||" ಬ್ರಹ್ಮನು ಚತುಷ್ಟಯಾತ್ಮಕ ಪಾದವುಳ್ಳವನು. ಅವಿದ್ಯಾ, ಸುವಿದ್ಯಾ, ಆನಂದ, ತುರಿಯಾ ಇವೇ ನಾಲ್ಕು ಪಾದಗಳು. "ಮೂಲಾವಿದ್ಯಾ ಪ್ರಥಮಪಾದೇ ನಾನ್ಯತ್ರ." ಈ ಮೂಲಾ ವಿದ್ಯದ ಪ್ರಥಮ ಪಾದ ಇದೇ ನಮಗೆ ಗೋಚರವಾಗುವ "ಏಕಾಂಶೇನ ಸ್ಥಿತೋ ಜಗತ್" ಎಲ್ಲಾ ಎಂದು ವಿಶದೀಕರಿಸಿದೆ. "ತತ್ರಾಪ್ರಥಮ್ಸ್ತನ ಮೇಕಂಪಾದಮವಿದ್ಯಾ ಶಬಳಂ ಭವತಿ"—ಇದೇ ಶಬಳಬ್ರಹ್ಮ.

"ಯಚ್ಚಕಿಂಚಿಜ್ಜಗತ್ಸರ್ವಂ, ದೃಶ್ಯತೇ ಶ್ರೂಯತೇಪಿವಾ, ಅಂತರ್ಬಹಿಶ್ಚತತ್ಸರ್ವಂ ವ್ಯಾಪ್ಯನಾರಾಯಣಸ್ಥಿತಃ |" ಎಂದರೆ ತೈತ್ತರೀಯ (೬, ೧೧) ದಲ್ಲಿ ಹೇಳಿರುವಂತೆ ಸರ್ವ ಜಗತ್ತನ್ನೂ, ಜ್ಞಾನೇಂದ್ರಿಯಗಳಿಂದ ತಿಳಿದು ಬರುವುದೆಲ್ಲಾ ಒಳಗೂ ಹೊರಗೂ ಶ್ರೀಮನ್ನಾರಾಯಣನೇ ವ್ಯಾಪಿಸಿ ವಾಸವಾಗಿದ್ದಾನೆ ಎಂದು ವಿವರಿಸಿದೆ. ಇವೆಲ್ಲಾ ಸಗುಣಬ್ರಹ್ಮ ವಿವರಣೆ. ಮೂರ್ತಿವತ್ತಾಗಿ ಪಂಚಜ್ಞಾನೇಂದ್ರಿಯಗಳಿಗೆ ಗೋಚರವಾಗುವುದು. ಬೃಹದಾರಣ್ಯ (೪, ೩, ೧) ದಲ್ಲಿ ಹೇಳಿರುವಂತೆ "ದ್ವೇವಾವ ಬ್ರಹ್ಮಣೋ ರೂಪೆ, ಮೂರ್ತಂಚೈವಾಮೂರ್ತಂಚ, ಮರ್ತ್ಯಂಚಾಮೃತಂಚ ಸ್ಥಿತಂಚ ಯಚ್ಚ ಸಚ್ಚತ್ಯಚ್ಚ |"—ಬ್ರಹ್ಮನ ರೂಪವು ಎರಡು ವಿಭಾಗವಾಗಿದೆ. ಮೂರ್ತ ಅಮೂರ್ತ, ಮೃತಅಮೃತ ಸತ್‌ಚ್ಚ, ತ್ಯಚ್ಚ (ಇಲ್ಲಿಯದು ಅಲ್ಲಿಯದು- actual, yonder) ಎಂದು. ಮೂರ್ತಿವತ್ತಾಗಿ, ಮೃತ್ಯುವಿ

ನಧೀನವಾದ ಇಹವಾಗಿರುವುದು ತ್ರಿಗುಣಾತ್ಮಕವು, ಪಂಚಭೂತ ಪಂಚೀಕರಣ ಕೃತವು, ಪಂಚಜ್ಞಾನೇಂದ್ರಿಯ ಗ್ರಹಣವು–ಇದೇ ಸಗುಣಬ್ರಹ್ಮ. ಅಮೂರ್ತವಾಗಿ, ಅವ್ಯಕ್ತವಾಗಿ ಪರವಾಗಿರುವುದು, ಗುಣಾತೀತವು, ಪಂಚಭೂತಾತೀತವು, ಜ್ಞಾನೇಂದ್ರಿಯ ಮನಗಳಿಗೆ ನಿಲುಕದುದು,–ಇದೇ ನಿರ್ಗುಣ ಬ್ರಹ್ಮವು. ಈ ವ್ಯಕ್ತಬ್ರಹ್ಮವೇ ಮಾಯಾಧೀನವೆಂದೂ, ಶಾಶ್ವತ ವಲ್ಲವೆಂದೂ, ಅವ್ಯಕ್ತಬ್ರಹ್ಮವೇ ಮಾಯಾತೀತವೆಂದೂ, ಶಾಶ್ವತವೆಂದೂ ನಿಗಮಗಳು ನಿಶ್ಚಯಿಸಿರುವುದೇ ಸಮಸ್ಯೆಯಾಗಿದೆ. ನಮ್ಮ ಜ್ಞಾನೇಂದ್ರಿಯ ಗಳಿಗೆ ನಿಲಕದುದರ ಒಂದು ಭಾವವಾದ ರೂಪ ಪಡೆವುದಿನ್ನೆಂತು !

ಶ್ರೀಮದ್ಭಗವದ್ಗೀತೆ ಎನ್ನುವ
ಉಪನಿಷತ್ತಿನ, ಬ್ರಹ್ಮವಿದ್ಯೆಯ, ಯೋಗಶಾಸ್ತ್ರದ
ಶ್ರೀ ಕೃಷ್ಣಾರ್ಜುನ ಸಂವಾದದಲ್ಲಿ ವಿಭೂತಿ ಯೋಗವೆನ್ನುವ
ಪತ್ತನೆಯ ಅಧ್ಯಾಯ ಸಮಾಪ್ತಿ

# ೧೧ ನೇ ಅಧ್ಯಾಯ : ವಿಶ್ವರೂಪದರ್ಶನ ಯೋಗ

## ಭಗವಂತನು ತನ್ನ ಮಾಯಾವಿಜೃಂಭದಿಂದ, ಅಖಿಲಸೃಷ್ಟಿಯ ವಿಶ್ವರೂಪ ಕ್ರಿಯಾಪ್ರಕಾಶದ ನಿರೂಪಣೆ.

ಇದು 'ವಿಶ್ವರೂಪದರ್ಶನ' ಯೋಗ. ಅರ್ಜುನನಿಗೆ ವಿಶ್ವರೂಪ ದರ್ಶನವಾಗುತ್ತದೆ. ಸ್ವಾಮಿ ವಿಶ್ವರೂಪ ತೋರುತ್ತಾನೆ. ನಮಗೂ ವಿಶ್ವರೂಪದರ್ಶನವಾಗಬೇಕು. ಏಕಾಗ್ರತೆಯಿಂದ ನೋಡಬೇಕು. ವಿಶ್ವ ರೂಪದರ್ಶನ ಯೋಗದಲ್ಲಿ ನಮಗೂ ವಿಶ್ವರೂಪದರ್ಶನವಾಗುವ ಯೋಗ ವಿದೆ. ಕಣ್ಮುಚ್ಚಿ, ಎಚ್ಚರದಿಂದಿರಿ.

ಹಿಂದಿನ ಅಧ್ಯಾಯದಲ್ಲಿ "ಏಕಾಂಶೇನ ಸ್ಥಿತೋ ಜಗತ್" ಎಂದು ತನ್ನ ಸಮಸ್ತ ವಿಭೂತಿಯನ್ನೂ ವಿಸ್ತಾರವಾಗಿ ವರ್ಣಿಸಲಾರದೆ, ಸಂಕ್ಷೇಪ ವಾಗಿ ಹೇಳಿ, ಕೊನೆಯ ವಾಕ್ಯವಾಗಿ ಈ ಜಗತ್ತೆಲ್ಲವನ್ನೂ ತನ್ನೊಂದೇ ಅಂಶದಿಂದ ವ್ಯಾಪಿಸಿಕೊಂಡಿದ್ದೇನೆಂದು ಸ್ವಾಮಿ ಹೇಳಿದನು. ಒಂದು ಅಧ್ಯಾಯದ ತುಂಬಾ ತನ್ನ ವಿಭೂತಿಯನ್ನು ವಿವರಿಸಿ ಅದೂ ಸಂಕ್ಷೇಪ ವೆಂದು ಹೇಳಿದುದು ಕೇಳಿ ಅರ್ಜುನನಿಗೆ "ದ್ರಷ್ಟುಮಿಚ್ಛಾಮಿತೇರೂಪಮೈ ಶ್ವರಂ ಪುರುಷೋತ್ತಮ" ಉದ್ಭವಿಸಿತು. ಯಾವದಾದರೂ ಒಂದು ಮಹದ್ವಸ್ತುವಿನ ವಿವರಣೆಯನ್ನು ಕೇಳಿದರೆ ಕಾಶಿ, ಗಂಗೆಯನ್ನು ಯಾರಾದರೂ ವಿವರಿಸಿದರೆ–ಕೇಳಿದವನಿಗೆ ಅದನ್ನು ಸಾಕ್ಷಾತ್ ನೋಡಿ ಆನಂದಿಸಬೇಕೆಂದು ಕಾಂಕ್ಷೆ ಆವರಿಸುತ್ತದೆ. ಕೇಳುವುದರಿಂದಲೇ ಇಷ್ಟು ಆನಂದವಾದರೆ, ಸಾಕ್ಷಾತ್ ನೋಡಿದರೆ ಇನ್ನೆಷ್ಟು ದಿವ್ಯವಾಗಿ ಆನಂದ ಅನುಭವಿಸಬಹುದೆನ್ನುವ ಆಸೆ ಹುಟ್ಟುತ್ತದೆ. ಕೇಳುವುದಕ್ಕಿಂತ ಸ್ವಂತ ನೋಡುವುದರ ಅನುಭವವು ಧೃಢ. 'ಜಗತ್' ಎನ್ನುವುದು ಜ= ಹುಟ್ಟುವುದು+ಗತ್=ಹೋಗುವುದು ಎಂದರೆ ಹುಟ್ಟಿ ಸಾಯುವುದೆಂದು. ಈ ಜಗತ್ ವಿಷಯದಲ್ಲಿ ಸಂನ್ಯಾಸಿಗೆ ಮಾಯಾಮಾತ್ರವಾದರೂ,

ಅದರಲ್ಲಿ ಮುಳುಗಿ ತೇಲಿ ನಿತ್ಯ ಜೀವಿಸುತ್ತಿರುವ ಸಾಮಾನ್ಯರಿಗೆ ಈ ಜಗತ್ತು ವರ್ತಮಾನಕ್ಕೆ ನಿಜವೇ–ನಿರ್ಗುಣಬ್ರಹ್ಮವು ಎಂತು ಯೋಗಿಗೆ ಸಾಕ್ಷಾತ್ಕಾರವಾಗಿದೆಯೋ ಅಂತೇ ಸಗುಣಬ್ರಹ್ಮವು ಸಾಮಾನ್ಯರಿಗೆ ಸದೃಶ ವಾಗಿದೆ. ಅದು ಎಂತಿದೆ ಹೇಗಿದೆ ಎನ್ನುವುದನ್ನು ಕೇಳಿದ ಮೇಲೆ ಅದನ್ನು ಆ ಪರಮಾತ್ಮನ ಮಹಾಮಹಿಮೆಯ ಒಂದಂಶವನ್ನಾದರೂ, ಜ್ಞಾನೇಂದ್ರಿಯಗಳಿಗೆ ನಿಲುಕುವ ಒಂದು ಭಾಗವನ್ನಾದರೂ ಒಂದಾ ವರ್ತಿ ನೋಡಿಯೇ ಆನಂದಿಸಬೇಕೆಂಬ ಮಹತ್ಕಾಂಕ್ಷೆ ಅರ್ಜುನನ್ನು ಆವರಿಸಿದುದು ಆಶ್ಚರ್ಯವೇನಲ್ಲಾ.

ಜಾಗ್ರತಾವಸ್ಥೆಯಲ್ಲಿ ಜ್ಞಾನೇಂದ್ರಿಯಗಳ ಮೂಲಕ ಸಮಸ್ತವನ್ನೂ ತಿಳಿದು ಅನುಭವಿಸುವ ಸರ್ವಾವಸ್ಥೆ ಸಾಕ್ಷಿಗೆ–ವಿಶ್ವವೆಂದು ಸಂಕೇತವುಂಟು. ಎಚ್ಚರದ ಸಮಯದಲ್ಲಿ ವಿಶ್ವನೇ ಎಲ್ಲವನ್ನೂ ನೋಡುವವನು. ಆಗ ಕಾಣುವ ಸಕಲ ವಸ್ತು, ವ್ಯಾಪಾರಗಳೆಲ್ಲಾ ರೂಪಗಳು. ಇವು ಕಾಣುವ ಕಾಲಕ್ಕೆ ಸತ್ಯವೇ, ಮಾರ್ಪಡದವೇ.

ಅವಸ್ಥಾತ್ರಯಗಳಲ್ಲಿ ವಿಶ್ವವು ಎಚ್ಚರದಲ್ಲಿ ಎಲ್ಲವನ್ನೂ ಅನುಭವಿಸು ವಂತೆ, ಕನಸಿನಲ್ಲಿ ಅದೇ ಸಾಕ್ಷಿಯು ಸ್ವಪ್ನಸ್ಥಾನದಲ್ಲಿರುವಾಗ ಅದಕ್ಕೆ ತೈಜಸವೆಂದೂ, ಸುಶುಪ್ತಿಯಲ್ಲಿ ಆನಂದವನ್ನನುಭವಿಸುತ್ತಾ ಏನೂ ತಿಳಿಯದೆ ತಾನೇ ತಾನಾಗಿರುವಾಗ ಪ್ರಾಜ್ಞನೆಂದೂ, ಮಾಂಡೂಕ್ಯೋಪನಿ ಷತ್, ಶ್ರೀಗೌಡಪಾದರಕಾರಿಕಾ ಆಗಮ ಪ್ರಕರಣದಲ್ಲಿ ವಿವರಣೆ ಯುಂಟು. ವಿಶ್ವವು ಸ್ಥೂಲವನ್ನು ಭುಂಜಿಸುವುದು—"ವಿಶ್ವೋಹಿ ಸ್ಥೂಲ ಭುಂಜ್ನಿತ್ಯಂ" ಎಂದು ಸ್ಥೂಲ ಪ್ರಪಂಚವನ್ನೆಲ್ಲಾ ಅನುಭವಿಸುವುದು. ವಿಶ್ವವೆಂದರೆ ಜಗತ್ತೇ ಅಲ್ಲದೆ ಸ್ಥೂಲವಾಗಿ ಕಾಣುವ, ಬ್ರಹ್ಮಾಂಡವೆಲ್ಲಾ. ಸರ್ವ ಸೂರ್ಯಮಂಡಲಗಳೂ, ಈ ಲೋಕವಲ್ಲದೆ ಸಪ್ತಲೋಕಗಳೂ ಸೇರಿ ವಿಶಾಲಾರ್ಥ ಕೊಡುವುದು. ವಿಶಾಲ ಸ್ಥೂಲವೆಲ್ಲಾ ವಿಶ್ವ.

ಸರಸ್ವತಿರಹಸ್ಯೋಪನಿಷತ್ತಿನಲ್ಲಿ "ಅಸ್ತಿಭಾತಿಪ್ರಿಯಂರೂಪಂ ನಾಮ ಚೇತ್ಯಂಶಪಂಚಕಂ । ಆದ್ಯತ್ರಯಂ ಬ್ರಹ್ಮರೂಪಂ ಜಗದ್ರೂಪಂ ತತೋ ದ್ವಯಂ ॥" ಎಂದು—ಇರುವಿಕೆ, ಪ್ರಕಾಶಿಸುವಿಕೆ, ಆನಂದಿಸುವಿಕೆ, ರೂಪನಾಮ ಎಂಬ ಐದು ಪಂಚ ಅಂಶಗಳ ಪೈಕಿ, ಮೊದಲನೆಯ

ಮೂರು "ಅಸ್ತಿಭಾತಿಪ್ರಿಯಂ" ಬ್ರಹ್ಮರೂಪವೆಂದೂ ಉಳಿದೆರಡು "ನಾಮರೂಪ"ವು ಜಗದ್ರೂಪವೆಂದೂ ವಿವರಿಸಿದೆ. ಆ ವಿಶ್ವದ ರೂಪ ವನ್ನು ಸ್ವಾನುಭವ ಮಾಡುವುದು 'ವಿಶ್ವರೂಪದರ್ಶನ.' ಈ ವಿಶ್ವದ ನಿಜ ಸ್ಥಿತಿ, ಇರುವ ಯಥಾರ್ಥರೂಪ ನಿದರ್ಶನವಾದರೇ, ಆತ್ಮಸ್ವರೂಪ ಜ್ಞಾನ ಬರುವುದು.

ವರಾಹೋಪನಿಷತ್ತಿನಲ್ಲಿ "ಅಂಧಂಭುವನಮಂಧಸ್ಯ, ಪ್ರಕಾಶಂತುಸು ಚಕ್ಷುಷಾಂ।" ಎಂದು ಕುರುಡನಿಗೆ ಜಗತ್ತು ಕತ್ತಲು, ಸುನೇತ್ರನಿಗೆ ಪ್ರಕಾಶವು, ಎಂದರೆ ಬರೀ ಹೊರಗಣ ಕಣ್ಣಿನೋಟವಲ್ಲ–ಸುಚಕ್ಷುನಾಂ–ಒಳಗಣ ಸರಿಯಾದ ಕಣ್ಣು ಕಾಣುವವನಿಗೆ ಜಗತ್ತೆಲ್ಲಾ ಪ್ರಕಾಶವು–ವಿಶ್ವರೂಪದಿಂದ ತುಂಬಿದೆ. ಅದನ್ನು ಕಾಣಲಾರದ ಅಜ್ಞಾನಿಯು ಕುರುಡನೇ- ಅವನಿಗೆ ಪ್ರಪಂಚವೆಲ್ಲಾ ಕತ್ತಲೆಯೇ.

ಕಠೋಪನಿಷತ್ತಿನಲ್ಲಿ ಹೇಳಿರುವಂತೆ.'ನೈವವಾಚಾ, ನಮನಸಾಪ್ರಾಪ್ತುಂ ಶಕ್ಯೋ ನ ಚಕ್ಷುಷಾ। ಅಸ್ತೀತಿ ಬ್ರುವತೋ ಽನ್ಯತ್ರಕಥಂತದುಪಲಭ್ಯತೇ॥" ವಾಕ್‌ಮನ ಚಕ್ಷುಗಳಿಗೆ ನಿಲುಕದ ಪ್ರಾಪ್ತವಾಗದ ವಸ್ತುವನ್ನು "ಇದೆ" ಎಂದಾದರೂ ಹೇಳಿದ ಮೇಲೆ ಎಂತು ಗ್ರಹಿಸಲು (ಲಭ್ಯ) ಸಾಧ್ಯವೆಂದೂ, "ಅಸ್ತೀತ್ಯೇವೋಪಲಬ್ಧವ್ಯಸ್ತತ್ವಭಾವೇನಚೋಭಯೋಃ ಅಸ್ತೀತ್ಯೇವೋ ಪಲಬ್ಧಸ್ಯ ತತ್ವಭಾವಃ ಪ್ರಸೀದತಿ ॥" ಎಂದೂ—ಇದೆ ಎಂದು ಗ್ರಹಿಸು ವುದರಿಂದ 'ಉಭಯ ಸತ್ವಭಾವ'—ಗ್ರಹಿಸಬಹುದಾದ ಮತ್ತು ವಾಕ್ ಮನ ಚಕ್ಷುಗಳಾಚೆಯ ಅಗ್ರಾಹ್ಯ–ಲಭ್ಯವಾಗುತ್ತದೆ. ಆ ಮಹತತ್ವ ಭಾವದ ಪ್ರಸಾದದಿಂದ ತಾನೇ ಪ್ರತ್ಯಕ್ಷವಾಗಿ ಇರುವಿಕೆಯನ್ನು ತೋರಲು ಕರುಣಿಸಲು ಆ ಇರುವಿಕೆಯು ಗೋಚರ ಲಭ್ಯವಾಗುತ್ತದೆ ಎಂದು ಹೇಳಿದೆ. ನಮಗೆ ಅಗ್ರಾಹ್ಯವಾದ ನಿರ್ಗುಣಬ್ರಹ್ಮನ ಚಿಂತನೆಯು ಸಾಧ್ಯವಿಲ್ಲದಾಗ, ನಮಗೆ ಗ್ರಹಿಸಬಲ್ಲ ಸದ್ವಸ್ತುವಿನ "ಏಕಾಂಶ"ವಾದ ಈ ಸಗುಣಬ್ರಹ್ಮದ ಕ್ಷಣದರ್ಶನವನ್ನಾದರೂ ಮಾಡುವ ಎಂದು "ಅಸ್ತಿ"ತ್ವ ವನ್ನು ಸ್ವಾಮಿ ವಿವರಿಸಿದ ಮೇಲೆ, ಅರ್ಜುನನಿಗೆ ಅದರ ಇರುವಿಕೆಯ ಎಚ್ಚರವಾಗಿ, ದರ್ಶನದ ಇಚ್ಛೆಯಾಯ್ತು. ಅದೂ ಪರಮಾತ್ಮನ ಅನುಗ್ರಹದಿಂದಲೇ.

**ಮದನುಗ್ರಹಾಯ ಪರಮಂ । ಗುಹ್ಯಮಧ್ಯಾತ್ಮಸಂಜ್ಞಿತಮ್ ।**
**ಯತ್ತ್ವಯೋಕ್ತಂ ವಚಸ್ತೇನ । ಮೋಹೋಽಯಂ ವಿಗತೋ ಮಮ॥೧॥**

ಎಷ್ಟು ವಿನಯದಿಂದ ಸ್ವಾಮಿಯ ಪಾದಾರವಿಂದದಲ್ಲಿ ಅರಿಕೆ ಮಾಡಿಕೊಳ್ಳುತ್ತಾನೆ ಅರ್ಜುನ.—"ನನ್ನ ಅನುಗ್ರಹಕ್ಕಾಗಿ ಅತ್ಯಂತ ರಹಸ್ಯವಾದ ಅಧ್ಯಾತ್ಮವೆಂದು ಸಂಜ್ಞಿತವಾಗಿರುವ ನಿಮ್ಮಿಂದ ಹೇಳಲ್ಪಟ್ಟಿರುವ ವಚನದಿಂದ ನನ್ನ ಮೋಹವು ಓಡಿಹೋಯಿತು" ಎಂದು ಎಚ್ಚತ್ತವನಂತೆ ಹೇಳುತ್ತಾನೆ. ಒಂದೊಂದು ವಿಶೇಷಣವನ್ನೂ ನೋಡಿ, ಅಣಿಮುತ್ತು. ಅನುಗ್ರಹಕ್ಕಾಗಿ–ತನ್ನ ಅನರ್ಹತೆಯು ಮನದಟ್ಟಾಗುವುದು. ಅರ್ಹತೆಯಿಲ್ಲದಿದ್ದರೂ ಕಾರುಣ್ಯದಿಂದ, ಅರ್ಹನನ್ನಾಗಿ ಮಾಡಲು ಸ್ವಾಮಿ ತಾನಾಗಿ ಅನುಗ್ರಹಿಸುವುದು. ತನ್ನ ಚೈತನ್ಯವನ್ನೇ ನೀಡುವುದು. ಭಕ್ತನ ಮೇಲೆ ಈ ಅನುಗ್ರಹವು ಅತಿ ಪವಿತ್ರವು. ಇದನನ್ನನುಸರಿಸಿಯೇ ಶ್ರೀರಾಮಾನುಜಾಚಾರ್ಯ, ಚೈತನ್ಯ ಮೊದಲಾದವರೆಲ್ಲರೂ ತಮ್ಮ ಭಕ್ತಿ ಪಂಥವನ್ನು ಕಟ್ಟಿರುವರು. ಭಗವದನುಗ್ರಹ ಅಪಾರ ಘನ. ಅದರ ಎಲ್ಲೆಗೆ ಪಾರವೇ ಇಲ್ಲ, ಅದರ ಕರುಣೆಗೆ ಮಿತಿಯಿಲ್ಲಾ.

ಇಂತಹ "ಪರಮಂ ಗುಹ್ಯಂ ಅಧ್ಯಾತ್ಮ"ವನ್ನು ಹೇಳಬೇಕಾದರೆ ಎಂಥಹ ಅಪಾರ ಕರುಣಾಸಾಗರನು, ಎಷ್ಟು ಅನುಗ್ರಹಮಾಡಿ ತಿಳಿಯುವಂತೆ ವಿವರಿಸಿರಬೇಕು. ಇದರಲ್ಲಿ ಬರೀ ಗುರು ಕೃಪೆಯಲ್ಲದೆ, ಪಿತೃಮಾತೃ ವಾತ್ಸಲ್ಯವೂ, ಮಿತ್ರ ಪ್ರೀತಿಯೂ ಸೇರಿದೆ. ಪರಮಂ ಗುಹ್ಯಂ ಎನ್ನುವ ವಿಶೇಷಣವನ್ನು ನೋಡಿ, ಗೊಪ್ಯಗಳಲ್ಲತಿಗೋಪ್ಯವಾದುದೆಂದು ಒಟ್ಟಿಗಾದರೂ ತೆಗೆದುಕೊಳ್ಳಬಹುದು. ಇಲ್ಲವಾದರೆ, ಪರಮಂ ಎಂದರೆ ಇಹಾತೀತವಾದುದು, ಹೆಚ್ಚಿನದು ಮತ್ತು ಗುಹ್ಯಂ ಎಂದರೆ ಗುಟ್ಟಾದುದು ಎಂದು ಪವಿತ್ರವಾದ ಮತ್ತು ಗುಟ್ಟಾದ ಅಧ್ಯಾತ್ಮ ತತ್ವವನ್ನು ಹೇಳಿರುವುದು. "ಕಿಮಧ್ಯಾತ್ಮಂ" ಎಂದು ೮ನೇ ಅಧ್ಯಾಯದಲ್ಲೇ ಕೇಳಿದ್ದನು. ಅದಕ್ಕೆ "ಅಕ್ಷರಂ ಬ್ರಹ್ಮ ಪರಮಂ, ಸ್ವಭಾವೋಧ್ಯಾತ್ಮ ಮುಚ್ಯತೇ" ಎಂದು ಬ್ರಹ್ಮಜ್ಞಾನವಾದ ಸ್ವಂತ ಭಾವವೇ (ಆತ್ಮಜ್ಞಾನವೇ) ಅಧ್ಯಾತ್ಮವೆಂದು ಹೇಳಿ ಅದರ ವಿವರಣೆಯೇ ಇಲ್ಲಿಯವರಿವಿಗೆ ನಡೆದಿದೆ.

ಆ ವಿವರಣೆಯುಲ್ಲಾ ಸ್ವಾಮಿಯ ಮುಖದಿಂದಲೇ ಹೊರಟಿದೆ. (From the horse's mouth) ಅನ್ನುತ್ತಾರೆಲ್ಲಾ ಅಂತು ಸ್ವಾಮಿಯೇ ಅನುಗ್ರಹ ಮಾಡಿ ಪರಮ ಗುಹ್ಯವಾದ ಆತ್ಮಜ್ಞಾನವನ್ನು ಸ್ವಭಾವವಾಗಿ ತನ್ನ ವಚನದಿಂದಲೇ ಉಕ್ತವಾಡಿದಮೇಲೆ ಇನ್ನು ಮೋಹವೆಲ್ಲಾ ಬರೀ ಗತವಲ್ಲ "ವಿಗತೋ ಮಮ" ಓಡಿಯೇಹೋಗಿಬಿಟ್ಟಿದೆ.

**ಭವಾಪ್ಯಯೌ ಹಿ ಭೂತಾನಾಂ । ಶ್ರುತೌ ವಿಸ್ತರಶೋ ಮಯಾ ।**
**ತ್ವತ್ತಃ ಕಮಲಪತ್ರಾಕ್ಷ । ಮಾಹಾತ್ಮ್ಯಮಪಿ ಚಾವ್ಯಯಮ್ ॥೨॥**

ಅವಿವೇಕ ನಾಶವಾಯ್ತು, ವಿವೇಕೋತ್ಪನ್ನದಿಂದ ಎಲೈ ಕಮಲ ಪತ್ರದಂತೆ ಕಣ್ಣುಳ್ಳವನೇ! (ವಿಶಾಲನೇತ್ರ–ಹುಮ್ಮನಲ್ಲಿ ಇನ್ನೂ ಕಣ್ಣು ಬಿಚ್ಚಿದ ಕಣ್ಣಿಂದ ಎಲ್ಲಾ ನೋಡಿ ತಿಳಿದು ಹೇಳಿರುವವನು. ಹೇಳಿದ ಹುಮ್ಮನಲ್ಲಿ ಇನ್ನೂ ಕಣ್ಣು ವಿಶಾಲವಾಗಿದೆ–ಕಮಲಪತ್ರದಂತೆ) ಭೂತಗಳ ಉತ್ಪತ್ತಿ ಲಯವೂ, ಹೆಚ್ಚಿನದಾಗಿ ಅವ್ಯಯವಾದ ನಿನ್ನ ಮಹಾತ್ಮ್ಯವೂ ವಿಶದವಾಗಿ ನನ್ನಿಂದ ಕೇಳಲ್ಪಟ್ಟಿತು. ಇದೇ "ಶೃತಶಾಸ್ತ್ರ" ಸುಮ್ಮನೇ ಕಿವಿಗೆ ಬಿದ್ದುದಲ್ಲ – ಮನಸ್ಸಿಗೆ ನಾಟಿತು.

**ಏವಮೇತದ್ಯಥಾತ್ಥ ತ್ವ-ಮಾತ್ಮಾನಂ ಪರಮೇಶ್ವರ ।**
**ದ್ರಷ್ಟುಮಿಚ್ಛಾಮಿ ತೇ ರೂಪ-ಮೈಶ್ವರಂ ಪುರುಷೋತ್ತಮ ॥೩॥**

ಯಾವ ರೀತಿಯಾಗಿ ನಿನ್ನ ಆತ್ಮವಾದ ಪರಮೇಶ್ವರ ಸ್ವರೂಪವನ್ನು ವಿವರಿಸಿದೆಯೋ, ಆ ಪರಮ ಐಶ್ವರ್ಯ ಸ್ವರೂಪವನ್ನು ನೋಡಲು, ಅಪೇಕ್ಷಿಸುತ್ತೇನೆ, ಪುರುಷೋತ್ತಮನೇ. ರೂಪಮೈಶ್ವರಂ, ಎನ್ನುವಲ್ಲಿ ಪ್ರಕೃತಿಯುಲ್ಲಾ ಬಂತು. ಯಾರದು? ನಿನ್ನದು. ನೀನು ಯಾರು? ಆ ಪ್ರಕೃತಿಯ ಉತ್ತಮ ಪುರುಷ. ಒಂದೇ ಏಟಿನಲ್ಲಿ ಪುರುಷ ಪ್ರಕೃತಿ ಸ್ವರೂಪವನ್ನು ನೋಡಲು ಇಚ್ಛಿಸಿದ. ಎಲ್ಲವನ್ನೂ ಕೇಳಿ ಇವನಿಗೆ ಪವಿತ್ರಕಾಂಕ್ಷೆ (ಕಾಮ) ಉದ್ಭವವಾಗಿದೆ. ಭಗವಂತ ಸ್ವರೂಪವನ್ನು ಯಥಾರ್ಥವಾಗಿ ಕಾಣಬೇಕೆಂದು. ಇದೇ ಚತುರ್ವಿಧ ಪುರುಷಾರ್ಥಗಳಲ್ಲಿ ಮೂರನೆಯದಾದ ಕಾಮ – ಪವಿತ್ರಕಾಮ. ಈ ಮೂರನೇ ಪಂಚಾಧ್ಯಾಯ ವಿಭಾಗದ ಮೊದಲಾದ ೧೧ನೇ ಅಧ್ಯಾಯದಲ್ಲಿ ಕಂಡಿದೆ ಎಂದು ಹಿಂದೆ

ಹೇಳಿರುವುದು. ಈ ಪವಿತ್ರ ಪ್ರೇಮವೇ ಪರಮಾತ್ಮನ ಭಕ್ತಿಯಾಗಿ ೧೨ನೇ ಅಧ್ಯಾಯದಲ್ಲಿ ಅರಳಿದೆ. ಮುಂದೆ ೧೩ನೇ ಅಧ್ಯಾಯದಲ್ಲಿ ಸರ್ವ ಕ್ಷೇತ್ರಗಳಲ್ಲೂ ಏಕೈಕ ಕ್ಷೇತ್ರಜ್ಞನನ್ನು ಕಂಡಿದೆ.

**ಮನ್ಯಸೇ ಯದಿ ತಚ್ಛಕ್ಯಂ । ಮಯಾ ದ್ರಷ್ಟುಮಿತಿ ಪ್ರಭೋ ।**
**ಯೋಗೇಶ್ವರ ತತೋ ಮೇ ತ್ವಂ । ದರ್ಶಯಾತ್ಮಾನಮವ್ಯಯಮ್ ॥೪॥**

ಪ್ರಭೋ, ನನ್ನಿಂದ ನೋಡಲು ಶಕ್ಯವೆಂದು ನಿನ್ನ ಮನ ಒಪ್ಪಿದರೆ ನಿನ್ನ ಅವ್ಯಯವಾದ ಆತ್ಮಸ್ವರೂಪವನ್ನು ನನಗೆ ದರ್ಶನ ಮಾಡಿಸು, ಯೋಗೇಶ್ವರ! ಅಲ್ಲಿ ಪರಮೇಶ್ವರ ಇಲ್ಲಿ ಯೋಗೇಶ್ವರ. ಅಲ್ಲಿ ಪುರುಷೋತ್ತಮ ಇಲ್ಲಿ ಪ್ರಭೋ. ಎಷ್ಟು ವಿನಯಭಕ್ತಿಯಿಂದ ಕೇಳಿಕೊಳ್ಳುತ್ತಾನೆ. ತನಗೇ ಸ್ವರೂಪದರ್ಶನಮಾಡಲು ಶಕ್ತಿಯಿದೆಯೋ ಇಲ್ಲವೋ ಎನ್ನುವಷ್ಟರಮಟ್ಟಿಗೆ ಅಹಂ ತ್ಯಜಿಸಿದ್ದಾನೆ. ನಿನ್ನ ಮನ ಒಪ್ಪಿದರೆ ಎಂದು ಭಗವಂತನ ಮನೋಸಂಕಲ್ಪಕ್ಕೆ ತಲೆಬಾಗುವಂತೆ ಮಮತ್ವ ತ್ಯಜಿಸಿದ್ದಾನೆ. ಯೋಗೇಶ್ವರನೆಂಬ ಸಂಭೋದೆ. ಆ ಯೋಗೇಶ್ವರ ತಪೋಬಲದಿಂದ ಕರುಣಿಸಿ ದರ್ಶನಮಾಡಿಸಿದರೇ ತಾನು ನೋಡಲು ಶಕ್ತನಾಗುವನೆಂಬ ಅನನ್ಯ ದೈನ್ಯಭಾವನೆಯಿಂದ ಪ್ರಭು, ಸ್ವಾಮಿತ್ವವುಳ್ಳ ಪ್ರಭುವನ್ನು ಯಾಚಿಸಿದ್ದಾನೆ. ಈ ಪರಮ ಭಕ್ತಿಭಾವವೇ ಭಗವಂತನನ್ನು ಕರಗಿಸಿರಬೇಕು.

ಶ್ರೀರಾಮಕೃಷ್ಣರು ಹೇಳಿರುವಂತೆ, ದೈನ್ಯದಿಂದ ಅತ್ತಮಗುವಿನ ಹತ್ತಿರಕ್ಕೆ ಕಾರುಣ್ಯಮಯಿ ತಾಯಿ ಎಲ್ಲಾ ಬಿಟ್ಟು ಓಡಿಬರುತ್ತಾಳೆ. ಆದುದರಿಂದ ನಾವೂ ಭಗವಂತ ಬಂದು ನಮಗೆ ದರ್ಶನಕೊಡಬೇಕಾದರೆ ಅದೇ ದೈನ್ಯದಿಂದ ಅವನಿಗಾಗಿಯೇ ಅಳಬೇಕು. ಆಗ ಆತನೂ ಆರ್ತ ಭಕ್ತನಿಗೆ ಕಾಣಿಸುತ್ತಾನೆ. ಇದನ್ನೇ ಉತ್ಪಲದೇವ ಎಂಬ ಕಾಶ್ಮೀರದ ಶಿವಭಕ್ತರು ತಮ್ಮ ಶಿವಸ್ತೋತ್ರಾವಳಿಯಲ್ಲಿ–"ನಾಥ ಕದಾಸ ತಥಾ ವಿಧ ಆಕ್ರಂದೋ ಮಮ ಸಮುಚ್ಚರೇದ್ವಾಚಿ । ಯತ್ಸಮನನ್ತರಮೇವ ಸ್ಫುರತಿ ಪುರಸ್ತಾವಕೀ ಮೂರ್ತಿಃ।" ತಕ್ಷಣ ನನ್ನಲ್ಲಿಗೆ ಪ್ರತ್ಯಕ್ಷನಾಗುವಂತೆ ಯಾವಾಗ ನಾಥ. ನನ್ನ ಬಾಯಿಂದ ಉದ್ಗಾರ (ಆಕ್ರಂದ) ಹೊರಡುವುದೋ ಎಂದು ಪ್ರಾರ್ಥಿಸಿದ್ದಾರೆ.

**ಪಶ್ಯ ಮೇ ಪಾರ್ಥ ರೂಪಾಣಿ । ಶತಶೋಽಥ ಸಹಸ್ರಶಃ ।**
**ನಾನಾವಿಧಾನಿ ದಿವ್ಯಾನಿ । ನಾನಾವರ್ಣಾಕೃತೀನಿ ಚ ॥೫॥**

ಭಗವಂತನು ತಕ್ಷಣವೇ "ಪಶ್ಯಮೇ" ನೋಡು ನೋಡಬೇಕೆಂದಿದ್ದೆ ಯಲ್ಲಾ ಎಂದೇ ಉತ್ತರ ಶುರು ಮಾಡಿದನು. ನೂರಾರು, ಸಾವಿರಾರು, ರೂಪ, ನಾನಾ ವಿಧ, ದಿವ್ಯ, ನಾನಾ ವರ್ಣವಾದ ನನ್ನ ರೂಪವನ್ನು ನೋಡು.

**ಪಶ್ಯಾದಿತ್ಯಾನ್ವಸೂನ್‌ರುದ್ರಾ-ನಶ್ವಿನೌ ಮರುತಸ್ತಥಾ ।**
**ಬಹೂನ್ಯದೃಷ್ಟಪೂರ್ವಾಣಿ । ಪಶ್ಯಾಶ್ಚರ್ಯಾಣಿ ಭಾರತ ॥೬॥**

ನೋಡು. ದ್ವಾದಶಾದಿತ್ಯರು, ಅಷ್ಟವಸುಗಳು, ಏಕಾದಶರುದ್ರರು, ಅಶ್ವಿನೀ ಕುಮಾರರು, ಮರುದ್ಗಣಗಳೂ ಪೂರ್ವದಲ್ಲಿ ಯಾವಾಗಲೂ ನೋಡದಿರುವ, ಬಹಳವಾದ ಆಶ್ಚರ್ಯಯುಕ್ತವಾದ ರೂಪವನ್ನು ನೋಡು, ಭಾರತ.

**ಇಹೈಕಸ್ಥಂ ಜಗತ್ ಕೃತ್ಸ್ನಂ । ಪಶ್ಯಾದ್ಯ ಸಚರಾಚರಮ್ ।**
**ಮಮ ದೇಹೇ ಗುಡಾಕೇಶ । ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ॥೭॥**

ಜಿತನಿದ್ರನೇ ಎಂದು ಸಂಭೋದನೆ. ಎಲ್ಲಾದರೂ ಎಣ್ಣೆ ಬಂದಾಗ ಕಣ್ಣು ಮುಚ್ಚಿಯಾನೆಂದು. ಎಚ್ಚತ್ತು ನೋಡೆಂದು. ಸಂಪೂರ್ಣ ಚರಾಚರಯುಕ್ತವಾದ ಜಗತ್ತೆಲ್ಲವನ್ನೂ ಈಗಲೇ ಇಲ್ಲೇ ನೋಡು. ನೀನು ನೋಡಬೇಕೆಂದು ಇಚ್ಛಿಸುವದನ್ನೆಲ್ಲಾ ನೋಡು.

**ನ ತು ಮಾಂ ಶಕ್ಯಸೇ ದ್ರಷ್ಟು-ಮನೇನೈವ ಸ್ವಚಕ್ಷುಷಾ ।**
**ದಿವ್ಯಂ ದದಾಮಿ ತೇ ಚಕ್ಷುಃ । ಪಶ್ಯ ಮೇ ಯೋಗಮೈಶ್ವರಮ್ ॥೮॥**

ನಿನ್ನ ಸ್ವಚಕ್ಷುಸ್ಸಿನಿಂದ (ಈ ಚರ್ಮದ ಹೊರಕಣ್ಣಿನಿಂದ) ನನ್ನನ್ನು ನೋಡಲು ಶಕ್ತನಲ್ಲ. ದಿವ್ಯ ಚಕ್ಷುಸ್ಸನ್ನು ನಾನು ನಿನಗೆ ಕೊಡುವೆನು. ಆದರಿಂದ ಯೋಗ ಐಶ್ವರ್ಯಯುಕ್ತವಾದ ನನ್ನ ಮಹಿಮೆಯನ್ನು ನೋಡು. ತೇಜೋಬಿಂದುಪನಿಷತ್ತಿನಲ್ಲಿ "ದೃಷ್ಟಿಂ ಜ್ಞಾನಮಯೀಂ ಕೃತ್ವಾ ಪಶ್ಯೇ

ದ್ಬ್ರಹ್ಮ ಮಯಂ ಜಗತ್" ಎಂದಿದೆ. ಬ್ರಹ್ಮಮಯವಾದ ಜಗತ್ತನ್ನು ಈ ಸಾಧಾರಣ ಕಣ್ಣುಗಳಿಂದ ನೋಡಲು ಸಾಧ್ಯವಿಲ್ಲಾ. ದೃಷ್ಟಿಯನ್ನೇ ಜ್ಞಾನಮಯವನ್ನಾಗಿಮಾಡಿ ನೋಡಬೇಕು. ದೃಷ್ಟಿ ಎನ್ನುವುದು ಈ ಕಣ್ಣಿಗೆ ಕಾಣುವ ಹೊರನೋಟವಲ್ಲಾ. ಇದು ಅಂತರ್‌ದೃಷ್ಟಿ. ಆಂಗ್ಲ ಭಾಷೆಯಲ್ಲಿ ಹೇಳುತ್ತಾರೆಲ್ಲಾ "Point of view or view point" ದೃಷ್ಟಿಕೋಣವು ಜ್ಞಾನಮಯವಾಗಿರಬೇಕು. ಸುಜ್ಞಾನ ದೃಷ್ಟಿಗೆ ನೈಜವಾದ ಸ್ಥಿತಿ – ಜಗತ್ತೆಲ್ಲವೂ ಬ್ರಹ್ಮಮಯವಾಗಿರುವಂತೆ ಕಾಣುತ್ತದೆ. ಆ ದೃಷ್ಟಿಕೋಣವನ್ನು ಭಗವಂತನು ಅರ್ಜುನನಿಗೆ (ಜ್ಞಾನದೃಷ್ಟಿ) ದಯಪಾಲಿಸಿದನು.

ತಂದೆಯು ಮಗನು ೮ ವರ್ಷವಾಗುತ್ತಲೇ ಈ ದೃಷ್ಟಿಕೋಣವನ್ನು ಕೊಟ್ಟು ವಿದ್ಯಾಭ್ಯಾಸಕ್ಕೆ ಅರ್ಹನನ್ನಾಗಿ ಮಾಡಿ ಬ್ರಹ್ಮಚಾರಿಯನ್ನಾಗಿ ಮಾಡಲು "ಉಪನಯನ" ಮಾಡುತ್ತಾರೆ. ಉಪನಯನವೆಂದರೆ ಉಪ – ಸಹಾಯಕ, ನಯನ – ಕಣ್ಣುಗಳು. ಜ್ಞಾನಾರ್ಜನಗೆ ಈ ಹೊರ ಚರ್ಮ ಚಕ್ಷುವಲ್ಲದೇ ಬೇರೆ ಸಹಾಯಕ ಅಂತರ್‌ದೃಷ್ಟಿ ಬೇಕು. ಅದನ್ನೇ ಉಪದೇಶ ಸಂಕೇತವಾಗಿ ಉಪನಯನವೆಂದು ಕರೆಯುತ್ತಾರೆ. ಆ ಉಪನಯನಗಳಿಂದ ವಟುವು ಗುರು ಉಪದೇಶ ಮಾಡುವುದೆಲ್ಲಾ ಗ್ರಹಿಸಲನುಕೂಲವಾಗುತ್ತೆ. ಉಪನಯನವಿಲ್ಲದೇ, ಪಿತೃವಿಂದ ಗುಪ್ತವಾಗಿ ಕಿವಿಯಲ್ಲಿ ಮಂತ್ರೋಪಚರಣೆ ಕೇಳದೇ ಬ್ರಹ್ಮವಿದ್ಯಕ್ಕೆ ಬಾಲಕನಿಗೆ ಅಧಿಕಾರವೇ ಇರಲಿಲ್ಲಾ. ಇದು ವಿಧಿತ ಕರ್ಮಗಳಲ್ಲಿ ಮುಖ್ಯವೆಂದು ಭಾವಿಸಿದ್ದಾರೆ. ಆಗಲೇ ಬಾಲಕ ಬ್ರಹ್ಮಾನ್ವೇಷಣಕ್ಕೆ ಅರ್ಹನಾಗಿ ಪುನರ್ಜನ್ಮದಿಂದ ಬ್ರಾಹ್ಮಣನಾಗುವುದೆಂದು ಶಾಸ್ತ್ರ.

೪ ಶ್ಲೋಕ ಅವನು ಕೇಳುವಿಕೆ, ೪ ಶ್ಲೋಕ ಇವನು ತೋರಲೊಪ್ಪುವಿಕೆ.

**ಏವಮುಕ್ತ್ವಾ ತತೋ ರಾಜನ್ । ಮಹಾಯೋಗೇಶ್ವರೋ ಹರಿಃ ।**
**ದರ್ಶಯಾಮಾಸ ಪಾರ್ಥಾಯ । ಪರಮಂ ರೂಪಮೈಶ್ವರಮ್ ॥೯॥**

ಸಂಜಯನು ಧೃತರಾಷ್ಟ್ರನಿಗೆ ಹೇಳಿದನು—ಮಹಾಯೋಗೀಶ್ವರನಾದ ಹರಿಯು ಈ ರೀತಿಯಾಗಿ ನುಡಿದು, ಪರಮೈಶ್ವರ್ಯಯುಕ್ತವಾದ ತನ್ನ

ರೂಪವನ್ನು ಪಾರ್ಥನಿಗೆ ತೋರಿದನು. ನೋಡುವ ಕಣ್ಣು ಕೊಟ್ಟ ವನೂ ಅವನೇ, ನೋಟವೂ ಅವನೇ, ನೋಡುವ ವಸ್ತು ಅವನೇ.

ಸಂಜಯನಿಗೇ ತನ್ನ ದಿವ್ಯಚಕ್ಷುವಿನಿಂದ ವಿಶ್ವರೂಪದರ್ಶನವಾಗಿದೆ. ಅವನೇ ಅರ್ಜುನನಿಗೆ ತೋರಿದ ವಿಶ್ವರೂಪವನ್ನು ಮುಂದಿನ ೫ ಶ್ಲೋಕ ಗಳಲ್ಲಿ ವರ್ಣಿಸಿದ್ದಾನೆ.

ನಾವು ಏನನ್ನು ಅನುಭವಿಸಿದರೂ ಪರಮೇಶ್ವರ ಕೊಟ್ಟ ಶಕ್ತಿ ಯಿಂದಲೇ. ನಾವು ಏನು ಸಂತೋಷಿಸಿದರೂ ಅವನ ಕೃಪೆಯಿಂದ ಒದಗಿದ ಸುಖದಿಂದಲೇ. ನಮ್ಮಲ್ಲಿರುವುದು ಅವನ ಅಪಾರವಾದ ಶಕ್ತಿಯ ಅಂಶ. ಅದನ್ನು ಅವನು ಕರುಣೆಯಿಂದ ಎಷ್ಟು ಹೆಚ್ಚಾದರೂ ದಯಪಾಲಿಸಬಹುದು. ಈ ವಿಶ್ವರೂಪದರ್ಶನವನ್ನು ಈ ಚರ್ಮದ ಚಕ್ಷುವಿನಿಂದ ನೋಡಲು ಸಾಧ್ಯವಿಲ್ಲ-ತಾನು ದಿವ್ಯಚಕ್ಷುಸ್ಸು ದಯ ಪಾಲಿಸುವುದಾಗಿ ಹೇಳಿರುವುದು ಸ್ವಾಮಿಯದಕ್ಕೇ. ಈ ಚರ್ಮದ ಕಣ್ಣುಗಳು ಏನಿದ್ದರೂ ಈ ಹೊರನೋಟಕ್ಕೆ. ಅದನ್ನೂ ಅವು ಸರಿಯಾಗಿ ನೋಡಲಾರವು. ನಾವು ಎಷ್ಟೋ ವಸ್ತುಗಳನ್ನು ನೋಡಿಯೂ, ನೋಡದೆಯೂ ಎಷ್ಟೋ ವಿಷಯಗಳನ್ನು ಕೇಳಿದರೂ ಕೇಳದೆಯೂ ಇದ್ದೇವೆ. ಕಣ್ಣು ನೋಡಿದುದು ನೋಡಲೂ, ಕಿವಿ ಕೇಳಿದುದನ್ನು ಕೇಳಲೂ ಮನಸ್ಸು ಆ ನೋಟವನ್ನು, ಸಮಾಚಾರ ವನ್ನು ಗ್ರಹಿಸುವ ಸ್ಥಿತಿಯಲ್ಲಿರಬೇಕು, ಈ ಹೊರನೋಟಕ್ಕೆ ಕೂಡಾ. ಹೊರನೋಟವನ್ನು ಗ್ರಹಿಸುವುದಕ್ಕೇ ಮನದಗತ್ಯವಿರುವಾಗ ಈ ಕಣ್ಣು ನೋಡಲಾರದ ನೋಟಕ್ಕೆ ಮನಸ್ಸು ಅತಿ ಅಗತ್ಯ. ಏಕಾಗ್ರತೆ ಬೇಕು. ಅದನ್ನು ನೋಡಲು ಪರಮಾತ್ಮ ದಿವ್ಯಚಕ್ಷುಸ್ಸು ಕೊಡುವುದಾಗಿ ಹೇಳಿ ದುದು. ಅದರಲ್ಲೂ ಈ ಸಚ್ಚಿದಾನಂದ ಸ್ವರೂಪ ನೋಡಬೇಕಾದರೆ, ವರಾಹೋಪನಿಷತ್ತಿನಲ್ಲಿ ಹೇಳಿರುವಂತೆ "ಸರ್ವಗಗ್ ಸಚ್ಚಿದಾನಂದಂಜ್ಞಾನ ಚಕ್ಷುರ್ನಿರೀಕ್ಷ್ಯತೇ" ಎಂದು ಸಚ್ಚಿದಾನಂದ ಸ್ವರೂಪನಾದ ಪರಮಾತ್ಮನ ದಿವ್ಯ ವಿಶ್ವರೂಪವನ್ನು ನೋಡಬೇಕಾದರೆ "ಜ್ಞಾನಚಕ್ಷು-ದಿವ್ಯಚಕ್ಷು" ಬೇಕು. "ಅಜ್ಞಾನ ಚಕ್ಷುರ್ನೇಕ್ಷ್ಯೇತ, ಭಾಸ್ವಂತಂಭಾನು ಮಂಥ

ವತ್ "—ಅಜ್ಞಾನ ಕಣ್ಣುಗಳಲ್ಲಿ ಕುರುಡನು ಸೂರ್ಯನನ್ನು ನೋಡಿದಂತೆ ನೋಡುತ್ತಾನೆ-ಏನೂ ಕಾಣುವುದಿಲ್ಲವೆಂದು ಉತ್ತರಾರ್ಧದ ಅದೇ ಶ್ಲೋಕದಲ್ಲಿ ಹೇಳಿದೆ. ಕೆಲವು ಶ್ಲೋಕಗಳಾನಂತರವೇ "ಅಂಧಂಭುವನ ಮಂಧಸ್ಯ, ಪ್ರಕಾಶಂತು, ಸುಚಕ್ಷುನಾಂ"—ಕುರುಡನಿಗೆ ಭುವನವೆಲ್ಲಾ (ಪ್ರಪಂಚ) ಕತ್ತಲು, ಸುಚಕ್ಷುಸ್ಸಿರುವವನಿಗೆ, ಸರಿಯಾದ ಕಣ್ಣಿನವನಿಗೆ ಪ್ರಕಾಶವು. "ಸು" ಎನ್ನುವ ವಿಶೇಷಣವನ್ನು ಗಮನಿಸಿ. ಬರೀ ಕಣ್ಣಲ್ಲಾ. 'ಸು' ಎಂದರೆ ದಿವ್ಯಜ್ಞಾನ ಚಕ್ಷುಸ್ಸು. ಅವನಿಗೆ ಎಲ್ಲವೂ ಪ್ರಕಾಶ. ಲೋಕ ನೋಡುತ್ತಾ ಅದರಲ್ಲಿ ಸರ್ವಾಂತರ್ಯಾಮಿಯಾದ ಪರಮಾತ್ಮನನ್ನೇ ಕಾಣುತ್ತಾನೆ. ಅವನಿಗೆ X Ray-ಕಿರಣಗಳಂತೆ ಒಳಪ್ರವೇಶ ಮಾಡಿ ಎಲ್ಲಾ ವಸ್ತುಗಳ ಒಳತತ್ವವನ್ನೂ ನೋಡುವ ಶಕ್ತಿ ಯುಂಟು. ಆ ಶಕ್ತಿಯಿದ್ದರೇ ನೀನು ತೋರಲು ಸಮ್ಮತಿಸಿದರೇ-ಎಂದು ಅದಕ್ಕೇ ಅರ್ಜುನ ಪ್ರಾರ್ಥಿಸಿದನೇ ಹೊರತು, ತೋರೆಂದು ಕೇಳಲಿಲ್ಲಾ. ನಾವು ಬಾಹಿರ್ ನೋಡುವ ಸೂರ್ಯಪ್ರಕಾಶ ಕಿರುಣಗಳಲ್ಲೂ ಏಳು ಬಣ್ಣದ ಕಿರುಣಗಳಲ್ಲದೆ, Ultra Violet and Infra Red—ಮುಕಮುಲ್ ವಯೋಲೆಟ್ ಬಣ್ಣಾಂತರದ, ಕೆಂಪಿನ ಕೆಳದರ್ಜೆಯ ಕಿರುಣಗಳು ನಮ್ಮ ಕಣ್ಣಿಗೆ ಕಾಣುವುದಿಲ್ಲಾ. ಆ ಕಿರುಣಗಳ ಪ್ರಕಾಶವೂ ನಮಗೆ ಕತ್ತಲೆಯೇ. ಹೀಗಿರುವಾಗ ದಿವ್ಯಜ್ಞಾನ ಪ್ರಕಾಶಕ್ಕೆ ದಿವ್ಯ ಅಂತಚಕ್ಷುವೇ ಬೇಕು. ಅದನ್ನು ಭಗವಂತ ನಮಗೆ ದಯಪಾಲಿಸಬೇಕು, ಅದರಿಂದ ಇತರರಿಗೆ ಕಾಣದ ವಿಶ್ವರೂಪವನ್ನು ಅವುಗಳೊಳಹೊಕ್ಕು ಎಲ್ಲೆಡೆಯೂ, ಎಲ್ಲಾ ಕಾಲದಲ್ಲೂ ದರ್ಶನ ಮಾಡಬಲ್ಲೆನು.

ಆಗ ವರಾಹೋಪನಿಷತ್ತಿನಲ್ಲಿಯೇ ಇನ್ನು ಕೆಲವು ಶ್ಲೋಕಗಳ ನಂತರ ಹೇಳಿರುವಂತೆ "ಸ್ವಾತ್ಮನೋನ್ಯತಯಾಭಾತಂ ಚರಾಚರಮಿದಂ ಜಗತ್" ಚರಾಚರ ಜಗತ್ತೆಲ್ಲವೂ ಸ್ವಾತ್ಮನೋಭಾವಕ್ಕೆ ಅನ್ಯವಿಲ್ಲದಂತೇ ಭಾಸ ವಾಗುತ್ತದೆ. ಸ್ವಾಮಿ ೭ ನೇ ಶ್ಲೋಕದಲ್ಲಿ ಹೇಳಿರುವಂತೆ "ಇಹೈಕಸ್ಥಂ ಜಗತ್‌ಕೃತ್ಸ್ನಂ ಪಶ್ಯಾದ್ಯ ಸ ಚರಾಚರಮ್"—ಸಂಪೂರ್ಣವಾದ ಚರಾ ಚರ ಜಗತ್ತೆಲ್ಲವನ್ನೂ ಇಲ್ಲೇ ಈಗಲೇ ನೋಡುವನಾಗು ಎಂದು ಹೇಳಿರು ವುದಕ್ಕೆಂತು ಹೊಂದುತ್ತದೆ. ಈ "ಯೋಗಮೈಶ್ವರಮ್" ನೋಡ

ಬೇಕಾದರೆ-ಇದು ಯೋಗಮಹಿಮೆಯ ಐಶ್ವರ್ಯದ ದೃಶ್ಯ—"ದದಾಮಿತೇ ದಿವ್ಯಚಕ್ಷುಃ" ಎಂದು ಸ್ವಾಮಿ ಹೇಳುತ್ತಾನೆ. ಇದೇ ಛಾಂದೋಗ್ಯದ (೮, ೧೨, ೫ ನೇ ಶ್ಲೋಕ)ಲ್ಲಿ ಹೇಳಿರುವಂತೆ "ಮನೌಸ್ಯದೈವಂಚಕ್ಷುಃ, ಸ ವಾಏಷಏತೇನದೈವೇನಚಕ್ಷುಷಾ ಮನಸೈತಾನ್ಕಾಮಾನ್ಪಶ್ಯನ್‌ರಮತೇಯ ಏತೇಬ್ರಹ್ಮಲೋಕೇ।"—ಬ್ರಹ್ಮಸಾಕ್ಷಾತ್ಕಾರಕ್ಕೆ ದಿವ್ಯಜ್ಞಾನ ಚಕ್ಷುಸ್ಸು ಬೇಕು. ಆ ಜ್ಞಾನಿಯು ತನ್ನದೇ ಆದ ಆ ಬ್ರಹ್ಮಲೋಕದಲ್ಲೇ ಸದಾ ರಮಿಸುತ್ತಿರುತ್ತಾನೆ. ಅವನಿಗೆ ವಿಶ್ವರೂಪದರ್ಶನ.

**ಅನೇಕವಕ್ತ್ರನಯನ-ಮನೇಕಾದ್ಭುತದರ್ಶನಮ್ ।**
**ಅನೇಕದಿವ್ಯಾಭರಣಂ । ದಿವ್ಯಾನೇಕೋದ್ಯತಾಯುಧಮ್ ॥೧೦॥**

**ದಿವ್ಯಮಾಲ್ಯಾಂಬರಧರಂ । ದಿವ್ಯಗಂಧಾನುಲೇಪನಮ್ ।**
**ಸರ್ವಾಶ್ಚರ್ಯಮಯಂ ದೇವ-ಮನಂತಂ ವಿಶ್ವತೋಮುಖಮ್ ॥೧೧॥**

ಅನೇಕ ಅದ್ಭುತ ದೃಶ್ಯವಾದ ಮುಖಗಳೂ, ಕಣ್ಣುಗಳೂ ದಿವ್ಯಾಭರಣಗಳೂ ದಿವ್ಯಾಯುಧಗಳು ಎತ್ತಿ ಹಿಡಿದಿರುವುದನ್ನೂ, ದಿವ್ಯಮಾಲೆಗಳಿಂದಲೂ, ವಸ್ತ್ರಗಳಿಂದಲೂ, ಸುಗಂಧದಿಂದ ಲೇಪಿತವಾಗಿ ಪರಿಮಳಯುಕ್ತವಾಗಿರುವ ಸರ್ವ ಆಶ್ಚರ್ಯಯುತವಾದ ದೇವನ ಅನಂತ ವಿಶ್ವಮುಖವನ್ನು (ಸರ್ವತ್ರಮುಖ) ತೋರಿದನು

ಈ ಶ್ಲೋಕವು ಶ್ವೇತಾಶ್ವತರೋಪನಿಷತ್ತಿನ (೪, ೩ ಶ್ಲೋಕ) "ತ್ವಗ್‌ಸ್ತ್ರೀ ತ್ವಂ ಪುಮಾನಸಿ ತ್ವಂ ಕುಮಾರ ಉತವಾ ಕುಮಾರಿ । ತ್ವಂ ಜೀರ್ಣೋದಂಡೇನವಂಚಸಿ, ತ್ವಂ ಜಾತೋಭವಸಿ ಸರ್ವಮುಖಃ ॥" "ಸಹಸ್ರಶೀರ್ಷಾ ಪುರುಷಸ್ಸಹಸ್ರಾಕ್ಷಸ್ಸಹಸ್ರಪಾತ್ ।" (೩, ೧೪) "ಸರ್ವತಃ ಪಾಣಿಪಾದಂ ತತ್ಸರ್ವತೋಕ್ಷಿಶಿರೋಮುಖಂ." (೩, ೧೬) ಎನ್ನುವುದನ್ನು ಜ್ಞಾಪಕಕ್ಕೆ ತರುತ್ತದೆ. ಲಿಂಗ, ಆಶ್ರಮ, ವಯೋ ಭೇದವಿಲ್ಲದೆ ದರ್ಶನ ಕೊಡುವ ಎಲ್ಲಾ ವ್ಯಕ್ತಿಗಳೂ (ಸರ್ವತೋಮುಖಃ) ಅವನೇ-ಇದು ಚರಾಚರಗಳಲ್ಲಿ. "ಚರ"ವಸ್ತುಗಳ ಪೈಕಿ ಮಾನವನಲ್ಲಿರುವ "ಸರ್ವತೋಮುಖಃ."

ಮನುಷ್ಯನು ದೇವಕಲ್ಪನೆಯನ್ನು ತನ್ನಂತೆಯೇ ಮಾಡಿದ್ದಾನೆ. ತನ್ನಂತೆಯೇ ಮುಖ, ರೂಪು, ಕಣ್ಣು ಆಕಾರವಿರುವಂತೆ ಭಾವಿಸಿದ್ದಾನೆ. ಆದರೆ ಮನುಷ್ಯ ಕೇವಲ ಕಿಂಚಿತ್ ಅಲ್ಪದೇವಾಂಶನಾದುದರಿಂದ, ದೇವ ನನ್ನು ಅನೇಕ ಮುಖ ಕಣ್ಣು ಕೈಗಳಾಗಿ ಕಂಡಿದ್ದಾನೆ. ಎಲ್ಲರಲ್ಲಿಯೂ ಅಂತರ್ಭೂತನಾಗಿ ಸ್ವಾಮಿಯಿರುವುದರಿಂದ ಎಲ್ಲಾ ಮುಖ, ಕಣ್ಣು ಗಳೂ ಅವನವೇ. ಆ ದಿವ್ಯ ಅನೇಕ ದೇವಮುಖದರ್ಶನವಾದಾಗಿನ ಆ ಮುಖ ಕಾಂತಿಪ್ರಭೆಯನ್ನು ಸಂಜಯ ಕವಿಭಾಷೆಯಲ್ಲಿ ವಿವರಿಸುತ್ತಾನೆ.

**ದಿವಿ ಸೂರ್ಯಸಹಸ್ರಸ್ಯ । ಭವೇದ್ಯುಗಪದುತ್ಥಿತಾ ।**
**ಯದಿ ಭಾಃ ಸದೃಶೀ ಸಾ ಸ್ಯಾ-ದ್ಭಾ ಸಸ್ತಸ್ಯ ಮಹಾತ್ಮನಃ** ॥೧೨॥

ಭವದಲ್ಲಿ ಏಕಕಾಲದಲ್ಲಿ ಸಹಸ್ರ ಸೂರ್ಯರು ಉದಯವೇನಾದರೂ ಆದರೆ ಆ ಮಹಾತ್ಮನ ಪ್ರಭೆಗೆ ಏನಾದರೂ ಸದೃಶವಾದೀತು. ಅಂಥಾ ತೇಜೋರೂಪ. ಒಂದು ಸೂರ್ಯನನ್ನೇ ನಾವು ದೃಷ್ಟಿಸಿ ನೋಡಲಾರೆವು, ಅಂಥಾ ಪ್ರಭೆ ಸೂರ್ಯಪರಮಾತ್ಮನದು. ಅಂತಹುದರಲ್ಲಿ ಸಾವಿರ ಸೂರ್ಯ ಪ್ರಭೆಯಾದರೆ ಅದನ್ನು ನೋಡಲೇ ಆರೆವು, ಆ ಪ್ರಭೆ ಊಹಿಸಬೇಕಷ್ಟೆ ಮನಸ್ಸಿನಲ್ಲಿ. ಸೂರ್ಯನೂ ಅವನೇ. ಸೂರ್ಯಚಂದ್ರನನ್ನು ಪರಮಾತ್ಮನ ಕಣ್ಣುಗಳೆಂದು ವರ್ಣಿಸಿದ್ದಾರೆ.

**ತತ್ರೈಕಸ್ಥಂ ಜಗತ್ ಕೃತ್ಸ್ನಂ । ಪ್ರವಿಭಕ್ತಮನೇಕಧಾ ।**
**ಅಪಶ್ಯದ್ದೇವದೇವಸ್ಯ । ಶರೀರೇ ಪಾಂಡವಸ್ತದಾ** ॥೧೩॥

"ಇಹೈಕಸ್ಥಂ ಜಗತ್‌ಕೃತ್ಸ್ನಂಪಶ್ಯಾತ್" ಎಂದು ಪರಮಾತ್ಮನ ಅಪ್ಪಣೆಯಾಯಿತಲ್ಲಾ-ಅದನ್ನೆ ನೋಟದ ರೂಪವನ್ನು—"ತತ್ರೈಕಸ್ಥಂ ಜಗತ್‌ಕೃತ್ಸ್ನಂ ಪ್ರವಿಭಕ್ತಮನೇಕದ್ಧಾ ಅಪಶ್ಯದ್ದೇವದೇವಸ್ಯ ಶರೀರೆ"- ಅನೇಕ ವಿಭಾಗಗಳನ್ನೊಳಗೊಂಡ ಸಮಸ್ತ ಜಗತ್ತನ್ನೂ ದೇವದೇವನ ಶರೀರದಲ್ಲಿ ಆಲ್ಲೇ ಅರ್ಜುನನು ನೋಡಿದನು. ದೇವನ ವಿಭೂತಿ ವರ್ಣನೆ ಯನ್ನು ಕೇಳಿ ನೋಡಬೇಕೆಂದು ಕೆರಳಿದ ಕುತೋಹಲವುಳ್ಳ ಅರ್ಜುನನು ಅವನ ಜಗತ್ತಿನ ಸಮಸ್ತ ಚರಾಚರ ವಿಭೂತಿಯನ್ನೂ ದಿವ್ಯಚಕ್ಷುಸ್ಸಿನಲ್ಲಿ

ಒಂದೇ ಕಡೆ ಒಂದೇ ಜಾಗದಲ್ಲಿ ಬ್ರಹ್ಮಾಂಡನಾಯಕನಾದ ಕಾಲಾತೀತನಾದ ಪರಮಾತ್ಮನ ವಿಶ್ವರೂಪದಲ್ಲಿ ಅರ್ಜುನನು ನೋಡಿದನು.

**ತತಃ ಸ ವಿಸ್ಮಯಾವಿಷ್ಟೋ । ಹೃಷ್ಟರೋಮಾ ಧನಂಜಯಃ ।**
**ಪ್ರಣಮ್ಯ ಶಿರಸಾ ದೇವಂ । ಕೃತಾಂಜಲಿರಭಾಷತ ॥೧೪॥**

ಅರ್ಜುನನು ದಿವ್ಯಚಕ್ಷು ಪಡೆದು, ಶಕ್ತಿವಂತನಾಗಿ ಪರಮಾತ್ಮನ ಸಮ್ಮತಿಯ ಮೇಲೆ ಈ ವಿಶ್ವರೂಪದರ್ಶನವನ್ನು ಮಾಡಿದರೂ, ತಾನು ಭಾವಿಸಿದುದನ್ನತಿಕ್ರಮಿಸಿ ಅತಿಶಯವಾಗಿದ್ದ ಈ ದಿವ್ಯ ದೃಶ್ಯವನ್ನು ಕಂಡು ಅರ್ಜುನನಿಗೆ ಆಶ್ಚರ್ಯ, ವಿಸ್ಮಯದಿಂದ ರೋಮಾಂಚವಾಯಿತು. ಅಂಜಲಿಬದ್ಧನಾಗಿ ಶಿರಸಾ ದೇವನನ್ನು ನಮಸ್ಕರಿಸಿದನು. (ಇಂತೆಂದನು) ನಿರತಿಶಯ ದಿವ್ಯರೂಪವನ್ನು ನೋಡಲನುವಾದ ಈ ಅಪ್ರತಿಮ ವೀರ, ಮಿತ್ರನಿಗೇ ಈ ಅವಸ್ಥೆಯಾಗಿರಬೇಕಾದರೆ ಆ ದೃಶ್ಯದ ಯೋಗೈಶ್ವರ್ಯವಾದರೂ ಏನಿರಬೇಕು. ಹೆಚ್ಚು ಆಶ್ಚರ್ಯವಾದರೆ ರೋಮಾಂಚವಾಗುತ್ತೆ. ಮಾನವನ ದೇಹವೆಲ್ಲಾ ವ್ಯಾಪಿಸಿರುವ ರೋಮಗಳು ಎದ್ದು ನಿಲ್ಲಬೇಕಾದರೆ ಆಶ್ಚರ್ಯ, ಆನಂದ, ಭಯವು ದೇಹವನ್ನೆಲ್ಲಾ ವಿದ್ಯುಚ್ಛಕ್ತಿಯಂತೆ ವ್ಯಾಪಿಸಬೇಕು. ಈ ದಿವ್ಯದರ್ಶನವು ಮಿಂಚಿನಂತೆ ಭಕ್ತಾಗ್ರೇಸರ ಅರ್ಜುನನು ಏಕಮನಸ್ಕನಾಗಿ, ತನುಮನಗಳಿಂದ ಸ್ವಾಮಿಯ ದರ್ಶನಾಕಾಂಕ್ಷೆಯಾಗಿ ನೋಡಿದಾಗ ಆ ದರ್ಶನ ಮೈಯನ್ನೆಲ್ಲಾ ವ್ಯಾಪಿಸಿರಬೇಕು. ಕಣ್ಣಿನಿಂದಲ್ಲಾ, ಮನದಿಂದಲ್ಲಾ, ಅರ್ಜುನ ಶ್ರೀಕೃಷ್ಣನನ್ನು ದೇಹದಿಂದ ರೋಮರೋಮದಿಂದಲೂ ದರ್ಶನಮಾಡಿರಬೇಕು. ಆಶ್ಚರ್ಯದ ರೋಮಾಂಚದಲ್ಲಿ ತಾನೇ ತಾನಾಗಿ ಆನಂದ ಬಾಷ್ಪಗಳಿಂದ ಮೈಜುಂ ಎಂದು ನಡುಗುತ್ತಿರುವಾಗ, ಕೈಮುಗಿದು ತಲೆಬಾಗಿ ನಮಸ್ಕರಿಸಿದನು. ಎಂತಹ ಪವಿತ್ರ ಭಕ್ತಿ. ಕಮ್ಮಿ ದರ್ಜೆಯವರಾಗಿದ್ದರೆ ಆ ದರ್ಶನದಿಂದ ಮೂರ್ಛಿತರಾಗಿಬಿಡುತ್ತಿದ್ದರೇನೊ. ಅರ್ಜುನನಿಗೂ ದೇವನು ಶಕ್ತಿ ತುಂಬಿ ದಿವ್ಯಚಕ್ಷು ಕರುಣಿಸದಿದ್ದರೆ ಅವನ ಗತಿಯೇನಾಗುತ್ತಿತ್ತೋ.

ಪರಮ ಪವಿತ್ರ ಸ್ವಾಮಿಯ ಸರ್ವತೋಮುಖವಾದ ಸೃಷ್ಟಿಯನ್ನೇ ಮನದಲ್ಲಿ ಧ್ಯಾನಿಸಿ, ಕಣ್ಮುಚ್ಚಿ ಪರವಶರಾದಾಗ ಯಃ ಕಿಂಚಿತ್ ಪಾಮರ

ರಾದ ನಮಗೇ ರೋಮಾಂಚವಾಗಿ, ಕಣ್ಣುಗಳಲ್ಲಿ ನೀರು ತುಂಬಿ, ತಲೆಬಾಗಿ ಕೈಮುಗಿದು ನಮಸ್ಕರಿಸುವಂತಾಗುವಾಗ, ಕಣ್ಣಿಗೆ ಕಟ್ಟಿದಂತೆ ನಿಜ ಸ್ವರೂಪ ದರ್ಶನವಾದಾಗ ಪರಮ ಭಕ್ತ ಅರ್ಜುನನು ಎಂತು ದೈನ್ಯದಿಂದ ನಮಿಸಿರಬೇಕು. ಎಂತು ಆ ದೃಶ್ಯದಲ್ಲೈಕ್ಯನಾಗಿ ಆನಂದಿಸಿರಬೇಕು, ಈ ಚಿತ್ರದಿಂದಲೇ ನರ ನಾರಾಯಣ, ಭಕ್ತ ಭಗವಾನ್, ಪಾರ್ಥ. ಸಾರಥಿಯರ ದಿವ್ಯ ದೃಶ್ಯವು ಮನನಾಟುತ್ತದೆ. ಸಂಜಯ ಸೊಗಸಾಗಿ ತನಗೆ ಕಂಡ ದೃಶ್ಯ ವರ್ಣಿಸಿದ್ದಾನೆ.

**ಪಶ್ಯಾಮಿ ದೇವಾಂಸ್ತವ ದೇವ ದೇಹೇ**
**ಸರ್ವಾಂಸ್ತಥಾ ಭೂತವಿಶೇಷಸಂಘಾನ್ ।**
**ಬ್ರಹ್ಮಾಣಮೀಶಂ ಕಮಲಾಸನಸ್ಥ-**
**ಮೃಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್** ॥೧೫॥

ಇದನ್ನು ಅರ್ಜುನನ ಮಾತೆನ್ನೋಣವೋ, ಪ್ರಾರ್ಥನೆಯೆನ್ನೋಣವೋ ಹೃದಯದಿಂದ ಧಾರಾಪೂರ್ವಕವಾಗಿ ಹರಿಯುವ ಭಕ್ತಿಧಾರೆಯೆನ್ನೋಣವೋ – ಪರಮಾತ್ಮನ ಪಾದಾರವಿಂದದಲ್ಲಿ ಅರ್ಪಿಸುವ ಈ ವಾಕ್‌ಸುಧೆಯನ್ನು. ಮುಂದಿನ ಶ್ಲೋಕಗಳೆಲ್ಲಾ ಅರ್ಜುನನು ಭಕ್ತಿಪರವಶನಾಗಿ ಆ ದಿವ್ಯ ದರ್ಶನದಲ್ಲಿ ಐಕ್ಯನಾಗಿ, ತದೇಕಧ್ಯಾನದಿಂದ ಹೇಳುವ ಸ್ತುತಿಗಳು. ನೋಟಕ, ನೋಟ, ದೃಷ್ಟಿ ಎಲ್ಲಾ ಮಿಲನವಾಗಿಬಿಟ್ಟಿದೆ. ಅರ್ಜುನ ಕಾಣದ ವಸ್ತುವ್ಯಾವುದು ಇಹ, ಪರಗಳಲ್ಲಿ. ಎಲ್ಲವನ್ನೂ ನೋಡುತ್ತಿದ್ದಾನೆ. ದೇವಾ ಎಂದು ಸಂಭೋದನೆಯಷ್ಟೆ. ಏನೆಂದು ಕರೆಯಲು ಕೂಡ ತಿಳಿಯದಾಗಿದೆ. ಸಂಭೋದನೆ ಸಾಲದಾಗಿ "ದೇವ ದೇಹೇ" ದೇಹಿ ದೇವಾ. ಕಾಣುವುದು ದೇವನ ದೇವ ದೇಹ. ದೇಹವೆಂದರೆ ಒಪ್ಪದು – ವಿಶ್ವರೂಪ. "ಸರ್ವಾಂ"–'ವಿಶೇಷಸಂಘಾನ್' 'ಬ್ರಹ್ಮಾಣಿ' 'ಈಶಂ' 'ಕಮಲಾಸನ' 'ಋಷೀಂಶ' "ಸರ್ವಸುರಗ" ಎಲ್ಲಾ ಅದೂ "ದಿವ್ಯಾನ್" ಏನೂ ಬಿಟ್ಟಿಲ್ಲಾ. ಬ್ರಹ್ಮಾಂಡವನ್ನೂ ನೋಡಿಬಿಟ್ಟನು ಪರಾ, ಪರಾತ್ಪರವೆಲ್ಲಾ ನೋಡಿದನು.

ಸೃಷ್ಟಿಕರ್ತ, ಪಾಲಕ, ನಾಶಕರನ್ನೆಲ್ಲಾ ನೋಡಿಬಿಟ್ಟನು. ಇನ್ನು ಅವರಧೀನರಾದ "ಭೂತವಿಶೇಷಸಂಘಾನ್" ಮಾತೇನು. ಎಲ್ಲಾ ಒಡಗೊಂಡವನೇ ಪರಮಾತ್ಮ. ಆ ಬ್ರಹ್ಮಾಂಡವೇ ಅವನ ದೇಹ. ಒಂದು ಭಾಗ ಮಾತ್ರ "ಏಕಾಂಶ" ಇವನೋಡುತ್ತಿರುವುದೆನ್ನುವುದನ್ನು ಮರೆಯಲಾಗದು. ಕಾಣದ ಅವ್ಯಕ್ತಾಂಶ ಬಹಳವಿದೆ. ಕಾಣುವ ಏಕಾಂಶವೇ ಇಷ್ಟು ಅದ್ಭುತ, ಇಷ್ಟು ವಿಸ್ಮಯಗೊಳಿಸಿ, ರೋಮಾಂಚಕಾರಿಯಾಗಿದೆ.

**ಅನೇಕಬಾಹೂದರವಕ್ತ್ರನೇತ್ರಂ**
**ಪಶ್ಯಾಮಿ ತ್ವಾಂ ಸರ್ವತೋಽನಂತರೂಪಮ್ ।**
**ನಾಂತಂ ನ ಮಧ್ಯಂ ನ ಪುನಸ್ತವಾದಿಂ**
**ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ॥೧೬॥**

ಅನೇಕ ಬಾಹುಗಳು, ಉದರಗಳು, ಮುಖಗಳು, ಕಣ್ಣುಗಳು ಸರ್ವತ್ರವಾಗಿರುವ ಅನಂತವಾಗಿರುವ ಅನಂತ ರೂಪಗಳನ್ನೂ ನೋಡುತ್ತೇನೆ. ಆದಿಯಾಗಲೀ, ಮಧ್ಯವಾಗಲೀ, ಅಂತವಾಗಲೀ ಕಾಣೆ. ವಿಶ್ವೇಶ್ವರ, ವಿಶ್ವರೂಪ ! ಈ ಉತ್ತರಾರ್ಧ, "ನಾಂತಂ ನಮಧ್ಯಂ ನಪುನಸ್ತವಾದಿಂ, ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ" ಎನ್ನುವುದು ವಿಶ್ವರೂಪದರ್ಶದ ಸಾರಾಂಶ. ಭಗವಂತನಿಗೆ ಆದಿ, ಮಧ್ಯ ಅಂತಗಳಿಲ್ಲಿ. ಬರೀ ವಿಶ್ವರೂಪನಲ್ಲಾ, ವಿಶ್ವೇಶ್ವರ. ಎಲ್ಲಕ್ಕೂ ಒಡೆಯನು. ದೇಶ, ಕಾಲಾತೀತ. ಮೂರ್ತಿವತ್ತಾಗಿರುವುದು ಕೇವಲ ಆಭಾಸ ಮಾತ್ರ. ಎಲ್ಲಾ ಓದಿದ ಮೇಲೆ, ಓದಿದೆವೆಂದು ತಿಳಿದ ಮೇಲೆ, ತಿಳಿದೆವೆಂದು ಭಾವಿಸಿದ ಮೇಲೆ ಆ ಭಾವನೆಯು, ಏನೂ ತಿಳಿಯದೆಂದೂ, ನಾವಜ್ಞರೆಂದೂ ತಿಳಿವಂತೆ; ವಿಶ್ವರೂಪವೆಲ್ಲಾ ನೋಡುತ್ತಾ ನೋಡುತ್ತಾ ದಿಗ್ಭ್ರಮೆಯಿಂದ, ಮೊದಲು ಕೊನೆಮಧ್ಯೆ ಕಾಣೆನೆಲ್ಲೋ, ವಿಶ್ವರೂಪ–ಎಲ್ಲಾ ರೂಪವಾಗಿರುವನೇ, ವಿಶ್ವೇಶ್ವರಾ—ಎಲ್ಲಕ್ಕೂ ಒಡೆಯನಾಗಿರುವವನೇ ಎನ್ನುತ್ತಾನೆ ಅರ್ಜುನ. "ಎಲ್ಲಾ ರೂಪವು ತಾನಂತೆ, ಶಿವ ಎಲ್ಲೆಲ್ಲಿಯೂ ತಾನಿಹನಂತೆ. ಅಲ್ಲಿಲ್ಲಿ

ಹುಡುಕುತ ಗುಡಿಗಳ ತಿರುಗುವ ಕಳ್ಳರ ಕಣ್ಣಿಗೆ ಕಲ್ಲಂತೇ, ಶಿವ ತಾ ಕಲ್ಲಂತೆ" ಎನ್ನುವ ದಿವ್ಯವಾಗಿರುವ ಕನ್ನಡ ಗೀತೆಯಂತೆ.

ಆದಿಮಧ್ಯಾಂತ ರಹಿತನಾದ ವಿಶ್ವರೂಪ ವಿಶ್ವೇಶ್ವರನನ್ನು ಕಾಣ ಬೇಕೆಂದು ಹಂಬಲಿಸಿದ ಅರ್ಜುನ ತಾನೇ ಇನ್ನೇನು ಹೇಳಿಯಾನು. ತನ್ನಲ್ಲಿ, ಸುತ್ತಲೂ, ಒಳಹೊರಗೂ ತಾನೇ ತಾನಾಗಿ ಎಲ್ಲ ರೂಪವೂ ತಾನಾಗಿ ಎಲ್ಲೆಲ್ಲಿಯೂ ತಾನೇ ಇರುವ ಅಂತರಾತ್ಮನನ್ನು ಕಾಣಲು ಗುಡಿಗಳಲ್ಲಿ ಕಾಣಲು ತಿರುಗುವ ತಿರುಕರಂತೆ, (ತಮ್ಮಲ್ಲಿನ ನಿಧಿಯನ್ನೇ ಕಾಣದೆ ಭಿಕ್ಷಕ್ಕೆ ಹೋಗುವರಂತೆ) ಕಲ್ಲೇ ಕಾಣುವುದಲ್ಲದೆ ಶಿವ (ಸಚ್ಚಿದಾ ನಂದ ಸ್ವರೂಪ ವಿಶ್ವೇಶ್ವರ, ವಿಶ್ವರೂಪ) ಎಲ್ಲಿಂದ ತಾನೇ ಬಂದೀತು. ಕೊನೆ ಮೊದಲು ಅಂತರವಿಲ್ಲದ ಪರಮಾತ್ಮ ದರ್ಶನವಾಗುತ್ತಿರುವಾಗ "ನಾಂತಂ, ನಮಧ್ಯಂ ನಪುನಸ್ತವಾದಿಂ ಪಶ್ಯಾಮಿ" ಎಂದಲ್ಲದೆ ವಿಶ್ವೇ ಶ್ವರ, ವಿಶ್ವರೂಪನನ್ನು ಮೊರೆಹೊಕ್ಕಾನು, ಸ್ತುತಿಸಾನು, ವಿವರಿಸಿಯಾನು. ಈ ಜ್ಞಾನವೇ ವಿಶ್ವರೂಪದರ್ಶನ. ವಿಶ್ವರೂಪದರ್ಶನದಲ್ಲಿ ವಿಶ್ವೇಶ್ವರನನ್ನು ನೋಡಿದ ಅರ್ಜುನನೇ ಧನ್ಯನು. ದೇಹದಲ್ಲಿನ ದೇಹಿಯನ್ನು ಗುಡಿ ಯಲ್ಲಿರುವ ದೇವನನ್ನು ಸರ್ವದೃಶ್ಯದಲ್ಲಿನ, ಅದಕ್ಕತೀತನಾದ, ಹೆಚ್ಚಿನ ಒಡೆಯ ವಿಶ್ವೇಶ್ವರನನ್ನು ಕಂಡ ಅರ್ಜುನನೇ ನಿಜ ಭಕ್ತ. ಕಾಶಿಯಲ್ಲಿನ ವಿಶ್ವೇಶ್ವರನ ತತ್ವವಿದೇ – "ಸರ್ವತೋ ಅನಂತ ರೂಪಂ." ಇದೇ ದಿವ್ಯ ಜ್ಞಾನ; ಕಂಡುದುದರತೀತವಾದ ತತ್ವಗ್ರಹಣ. ಈ ತತ್ವಾರ್ಥವನ್ನು ಶ್ವೇತಾಶ್ವತರೊಪನಿಷತ್ತಿನ (೩,೧೧) "ಸರ್ವಾನನ ಶಿರೋಗ್ರೀವ ಸರ್ವಭೂತ ಗುಹಾಶಯಃ । ಸರ್ವವ್ಯಾಪೀಸಭಗವಾಂಸ್ತಸ್ಮಾತ್ಸರ್ವಗತ ಶಿವಃ ।" ಶ್ಲೋಕವು ಸಾರುವುದು.

ಬಸವಣ್ಣನವರು "ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ, ವಿಶ್ವತೋ ಬಾಹು ನೀನೇ ದೇವಾ, ವಿಶ್ವತೋ ಚಕ್ಷು ನೀನೇ ದೇವಾ, ವಿಶ್ವತೋ ಮುಖ ನೀನೇ ದೇವಾ, ವಿಶ್ವತೋ ಪಾದ ನೀನೇ ದೇವಾ, ಕೂಡಲ ಸಂಗಮದೇವಾ" ಎಂದು ಪರಮಾತ್ಮನ ಸರ್ವವ್ಯಾಪನೆ, ವಿಶ್ವ ರೂಪವನ್ನು ಸ್ತುತಿಸಿರುವರು.

**ಕಿರೀಟಿನಂ ಗದಿನಂ ಚಕ್ರಿಣಂ ಚ**
**ತೇಜೋರಾಶಿಂ ಸರ್ವತೋ ದೀಪ್ತಿಮಂತಮ್**
**ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾ-**
**ದ್ದೀಪ್ತಾನಲಾರ್ಕದ್ಯುತಿಮಪ್ರಮೇಯಮ್ ॥೧೭॥**

ಕಿರೀಟಿ, ಗದಾ, ಚಕ್ರಧಾರಿಯಾಗಿ ತೇಜೋರಾಶಿಯಾಗಿ, ಎಲ್ಲ ಕಡೆಯೂ ದೀಪ್ತಿಮಂತನಾಗಿ (ಪ್ರಕಾಶನಾಗಿ) ನೋಡಲಶಕ್ಯವಾದ ಸೂರ್ಯ ಚಂದ್ರಾಗ್ನಿ ಸಮಾನವಾದ ಪ್ರಭೆಯುಳ್ಳವನಾಗಿ ಅಪ್ರಮೇಯು ನಾದ ದಿಗ್ವ್ಯಾಪ್ತನಾಗಿರುವ ನಿನ್ನನ್ನು ನೋಡಿದೆ.

ಕಿರೀಟಿ, ಗದೆ, ಚಕ್ರ ಎಲ್ಲಾ ಸಗುಣಮೂರ್ತಿಯಾದ ದೇವನ ಅಲಂಕಾರವರ್ಣನೆ. ಇದರೊಡನೆ ದಿವ್ಯಮಾಲಾ, ದಿವ್ಯಪೀತಾಂಬರ ಗಂಧಲೇಪ ಎಲ್ಲಾ ದಿವ್ಯಮೂರ್ತಿಯ ಅಲಂಕಾರಗಳೂ ಸೇರಿವೆ. ಇದರೊಡನೆ ಸಹಸ್ರ ಸೂರ್ಯ ಚಂದ್ರ ಅಗ್ನಿ ಪ್ರಭೆಯೂ ಸೇರಿದೆ.

ಅದನ್ನು ನೋಡಲು ಎಷ್ಟು ಅಪರೂಪವೋ (ದುರ್ನಿರೀಕ್ಷ್ಯಂ) ಅಷ್ಟೇ ಅಪ್ರಮೇಯುವು ಅಶಕ್ಯವು. ಇಂಥಾ ರೂಪು ನಾನು ನೋಡುತ್ತಿದ್ದೇ ನೆಂದು ಅರ್ಜುನ ಹೇಳುತ್ತಾನೆ. ಈ ಸಗುಣಮೂರ್ತಿ ವರ್ಣನೆಯೊಡನೆ ಅವನ ನಿರ್ಗುಣ ವರ್ಣನೆಯೂ ಇದೆ.

**ತ್ವಮಕ್ಷರಂ ಪರಮಂ ವೇದಿತವ್ಯಂ**
**ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**
**ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ**
**ಸನಾತನಸ್ತ್ವಂ ಪುರುಷೋ ಮತೋ ಮೇ ॥೧೮॥**

ನೀನು ಅಕ್ಷರನು, ಪರಮಂ ಸರ್ವೋತ್ಕೃಷ್ಟನು, ಇದಕ್ಕಿಂತ ಮೇಲಾದ ವನು (ಪರವಸ್ತುವು) ಜ್ಞಾನದಿಂದ ತಿಳಿಯಲು ಯೋಗ್ಯನಾದವನು ಅಥವಾ ಒಟ್ಟಿಗೆ "ತ್ವಂ, ಅಕ್ಷರಂ ಪರಮಂ (ಓಂಕಾರ) ವೇದಿತವ್ಯಂ" ಎಂದು ತೆಗೆದುಕೊಂಡರೆ–ಪರಮ ಅಕ್ಷರವಾದ ಓಂಕಾರದಿಂದ ನೀನು ತಿಳಿಯ ಲ್ಪಡುವನು ಎಂದು ನಿರ್ಗುಣ ಪರಬ್ರಹ್ಮನ ಪ್ರತೀಕವಾದ "ಓಂ" ಎನ್ನು

ವುದರಿಂದ ಜ್ಞಾನಿಗಳು ತಿಳಿಯುಲು ಧ್ಯಾನಿಸುವ, ವೇದಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವ ಪರಮಾತ್ಮ ಸ್ವರೂಪವನ್ನು ಅರ್ಜುನ ಪ್ರತಿಪಾದಿಸುತ್ತಾನೆ. ಜೊತೆಗೆ ನೀನು ವಿಶ್ವಕ್ಕೆ ಪರಮಾಶ್ರಯನೂ (ನಿಧಾನಂ) ಅವ್ಯಯನೂ, ಶಾಶ್ವತವಾದ ಧರ್ಮರಕ್ಷಕನೂ, ಅನಾದಿಯಾಗಿರುವನೂ ಪುರುಷನೂ ಆಗಿದ್ದೀಯೋ. ಇಲ್ಲವಾದರೆ ಒಟ್ಟಿಗೆ ನೀನೇ ಸನಾತನವಾಗಿರುವ ಶಾಶ್ವತ ಧರ್ಮವನ್ನು ವ್ಯಯುವಾಗದಂತೆ ರಕ್ಷಿಸುವ · ಪರಮಪುರುಷನೆಂದು ನನ್ನ ಅಭಿಪ್ರಾಯುವೆಂದು ಅರ್ಜುನ ಹೇಳಿದನು. ಈ ಶ್ಲೋಕದಲ್ಲಿ ಪೂರ್ವಾರ್ಧದ ಪ್ರಥಮ ಭಾಗವು ಅವ್ಯಕ್ತ ಬ್ರಹ್ಮನ ಮೂರು ಲಕ್ಷಣಗಳಾದ ಅಕ್ಷರಂ ಪರಮಂ, ವೇದಿತ್ಯವ್ಯಂ ಎಂದೂ, ಪರಮ ಅಕ್ಷರ "ಓಂ"ಕಾರದಿಂದ ವೇದಿತ್ರವ್ಯಂ ಎಂದೂ, ಮಿಕ್ಕ ಭಾಗದ ಶ್ಲೋಕ ಮುಕ್ಕಾಲಿನಲ್ಲಿ ವ್ಯಕ್ತ ಬ್ರಹ್ಮನ ಪ್ರಪಂಚದ ಪರಮಾಶ್ರಯನೆಂದೂ, ಹೇಗೆಂದರೆ, ಶಾಶ್ವತ ಸನಾತನ ಧರ್ಮ ವ್ಯಯುವಾಗದಂತೆ ರಕ್ಷಿಸುವುದರಿಂದ ವಿಶ್ವಕ್ಕೇ ಪರಮಾಶ್ರಯುವಾಗಿರುವ ಪುರುಷನೆಂದೂ ನನ್ನ ಮತವೆಂದು ದಿವ್ಯವಾಗಿ ಅರ್ಜುನನು ವಿಶ್ವರೂಪದರ್ಶನವನ್ನು ಒಂದೇ ಶ್ಲೋಕದಲ್ಲಿ ನಿರ್ಗುಣ ಸದ್ಗುಣ ಬ್ರಹ್ಮವನ್ನು ಐಕ್ಯಮಾಡಿ ತನ್ನ ಮತವನ್ನು (ಮತೋಮೇ– ಅಭಿಪ್ರಾಯು) ಸ್ತೋತ್ರರೂಪವಾಗಿ ಹೇಳಿರುವನು.

**ಅನಾದಿಮಧ್ಯಾಂತಮನಂತವೀರ್ಯ-**
**ಮನಂತಬಾಹುಂ ಶಶಿಸೂರ್ಯನೇತ್ರಮ್ ।**
**ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ**
**ಸ್ವತೇಜಸಾ ವಿಶ್ವಮಿದಂ ತಪಂತಮ್** ॥೧೯॥

ಆದಿ, ಮಧ್ಯ, ಅಂತರಹಿತನೂ, ವೀರ್ಯನೂ, ಕೊನೆಮೊದಲಿಲ್ಲದ ಅಪರಿಮಿತವೀರನೂ, ಅನಂತ (ಎಣಿಸಲಾರದಷ್ಟು) ಬಾಹುಗಳುಳ್ಳವನೂ, ಸೂರ್ಯ, ಚಂದ್ರ ನೇತ್ರವುಳ್ಳವನೂ, ಪ್ರದೀಪ್ತವಾದ ಅಗ್ನಿಯಂತೆ ಮುಖವುಳ್ಳವನೂ, (ಜಾಜ್ವಲ್ಯಮಾನವಾದಮುಖ) ತನ್ನ ಸ್ವಂತ ತೇಜಸ್ಸಿನಿಂದಲೇ ಜಗತ್ತೆಲ್ಲವನ್ನೂ ತಪಿಸುವಂತೆ, ಜ್ವಲಿಸುವಂತೆ ಮಾಡುವ ನಿನ್ನನ್ನು ನೋಡುವೆನು. ಪುನಃ ಆದ್ಯನಂತಮಧ್ಯವಿಲ್ಲ

ದವನೆನ್ನುವುದು ಬಂತು. ಅವನೇ ಕೊನೆ ಮಧ್ಯ ಮೊದಲಿಲ್ಲದವನಾದರೂ, ಅವನ ವೀರ್ಯಕ್ಕೆ ಕೊನೆಮೊದಲಿಲ್ಲ. ಅಪರಿಮಿತ, ಅಪ್ರಮೇಯ ವೀರ. ಅನೇಕ ಬಾಹುಗಳ ಬಲವುಳ್ಳವೀರ. ಸೂರ್ಯಚಂದ್ರರೇ ಕಣ್ಣುಳ್ಳ ಎಲ್ಲಾ ಅಲೋಕಿಸಿರುವ, ನಿರ್ಲಿಪ್ತವೀರ. ಅಗ್ನಿಯಂತೆ ತೇಜೋಮುಖವುಳ್ಳ ಜಾಜ್ವಲ್ಯಮಾನವಾದ ವೀರಮುಖವುಳ್ಳ ವೀರ. ತನ್ನ ಸ್ವಂತ ತೇಜಸ್ಸಿನಿಂದಲೇ ವಿಶ್ವವೆಲ್ಲವನ್ನು ತಪಿಸುವಂತೆಮಾಡುವ ವೀರಾಗ್ರೇಸರ ಚಕ್ರವರ್ತಿ. ಪರಮಾತ್ಮನ ವಿಶ್ವಶಕ್ತಿಯನ್ನು ಹೊಗಳುತ್ತಾನೆ ಅರ್ಜುನ, ಅಮಿತಶಕ್ತ– ವೀರ.

**ದ್ಯಾವಾಪೃಥಿವ್ಯೋರಿದಮಂತರಂ ಹಿ**
**ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ।**
**ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ**
**ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥೨೦॥**

ದಿವಿ, ಪೃಥ್ವಿ, ಮಧ್ಯ (ಅಂತರ)ದಲ್ಲಿರುವ ಸರ್ವಪ್ರಪಂಚವೂ, ಸಮಸ್ತ ದಿಕ್ಕುಗಳೂ ನಿನ್ನಿಂದಲೇ ಏಕವಾಗಿ ವ್ಯಾಪ್ತವಾಗಿದೆ. ಅದ್ಭುತವಾಗಿಯೂ, ಉಗ್ರವಾಗಿಯೂ ಇರುವ ನಿನ್ನ ರೂಪವನ್ನು ತಿಳಿದು ಮೂರುಲೋಕಗಳೂ (ತುಂಬಿಹೋಗಿರುವುದೆಂದು ಹೇಳಿದ ಭೂಮ್ಯಾಕಾಶ ದಿವಿ) ಭಯಗೊಂಡಿವೆ, ಮಹಾತ್ಮನೇ. ಶ್ರೀಶಂಕರರು ಭಾಷ್ಯದಲ್ಲಿ "ಮಹಾತ್ಮನ್ನ ಕ್ಷುದ್ರಸ್ವಭಾವ" ಎಂದಿದ್ದಾರೆ. ಚಿಕ್ಕಗುಣಗಳೊಂದೂ ಇಲ್ಲದವ, ಸಣ್ಣಭಾವವಿಲ್ಲದೇ ಕ್ಷುದ್ರ ಸ್ವಭಾವದಿಂದ ದೂರನಾದವನೇ ಮಹಾತ್ಮ. ಎಲ್ಲಾ ಮಹತ್ತಾದ ಗುಣ, ಭಾವಗಳುಳ್ಳ ಶ್ರೀಪರಮಾತ್ಮ. "ಎಲ್ಲೆಲ್ಲಿಯೂ ತಾನಿಹನಂತೆ ಶಿವ" ಎನ್ನುವಂತೆ, ಕಾಲದೇಶವಸ್ತುಗಳಲ್ಲೆಲ್ಲಾ ತಾನೇ ತಾನಾಗಿ ದೇವನು ವ್ಯಾಪಿಸಿರುವನು. ಅದಕ್ಕೇ ಸಂಧ್ಯಾವಂದನೆಗಳಲ್ಲಿ ಒಂದು ಮುಖ್ಯಾಂಗವಾಗಿ ದಶದಿಕ್ಕುಗಳಿಗೂ ನಮಸ್ಕರಿಸುವುದು. ಅವನಿಲ್ಲದ ಜಾಗವೇ ಇಲ್ಲವೆಂದು ಬಾಲಕರಿಗೆ ಕೂಡಾ ತಿಳಿಸಲು ಒಂದು ಕಥೆಯಿದೆ. ಪ್ರಹ್ಲಾದನಿಗೂ ಅವನ ಸಹಪಾಠಿಗಳಿಗೂ ಅವರ ಗುರುಗಳು ಒಂದಾವರ್ತಿ ಒಂದೊಂದು ಬಾಳೇಹಣ್ಣನ್ನು ಕೊಟ್ಟು

"ಯಾರಿಗೂ ಕಾಣದಂತೆ ತಿನ್ನಿ" ಎಂದು ಹೇಳಿದರಂತೆ. ಹುಡುಗರ ಪೈಕಿ, ಒಬ್ಬ ಪೊದೆಯ ಹಿಂದೆ, ಮತ್ತೊಬ್ಬ ಮುಸುಕಿನೊಳಿಗೆ, ಮಗದೊಬ್ಬ ಬಾಗಿಲುಹಾಕಿಕೊಂಡು ಇತ್ಯಾದಿ ಎಲ್ಲರೂ ತಿಂದು ಬಂದರು. ಪ್ರಹ್ಲಾದನು ಕೊಂಚ ಹೊತ್ತಾದ ಮೇಲೆ ಬಂದು ಹಣ್ಣನ್ನು ವಾಪಸುಕೊಟ್ಟು "ಸಾಧ್ಯವಿಲ್ಲ, ಗುರೋ, ಯಾರಿಗೂ ಕಾಣದಂತೆ ತಿನ್ನಲಾರೆ. ನಾನೆಲ್ಲೆಲ್ಲಿ ಒಬ್ಬನೇ ಎಂದು ತಿಳಿದು ತಿನ್ನಲು ಹೋದರೂ, ಅಲ್ಲೆಲ್ಲಾ ಪರಮಾತ್ಮನೇ ಇದ್ದಾನೆ. ಸರ್ವವ್ಯಾಪ್ತಿಯಾದ ಹರಿಗೆ ಕಾಣದೆ ಹೇಗೆ ತಿನಲಿ" ಎಂದನಂತೆ. ನಾವು ಸರ್ವರೂ ಏನು ನಾವು ಮಾಡುತ್ತಿದ್ದರೂ ಸರ್ವವ್ಯಾಪ್ತಿಯಾದ ಪರಮಾತ್ಮ ನೋಡುತ್ತಿದ್ದಾನೆಂದು ತಿಳಿದರೆ, ದುಷ್ಕೃತ್ಯವೆಸಗಲು ತಡೆಯಾಗುತ್ತದೆ. ಅಥರ್ವವೇದ (೪, ೧೬) "....ದ್ವೌ ಸಂನಿಷದ್ಯ ಯನ್ಮನ್ತ್ರ ಯೇತೇ, ರಾಜಾ ತದ್ವೇದ ವರುಣಃ ತೃತೀಯಃ।" ಇಬ್ಬರು ಸೇರಿ ಏನಾದರೂ ಆಲೋಚಿಸುತ್ತಿದ್ದರೂ, (ಅವರೇನೋ ತಾವಿಬ್ಬರೇ ಗುಟ್ಟಾಗಿ ಮಾತಾಡುತ್ತಾ ಪಿತೂರಿ ಮಾಡುತ್ತಿದ್ದೇವೆ, ಮತ್ತೊಬ್ಬರಿಗೆ ಗೊತ್ತಿಲ್ಲದಂತೆಂದು ಭಾವಿಸಿದ್ದರೂ) ಮೂರನೆಯವನಾದ ವರುಣನು (ರಾಜಾ ವರುಣಃ) ಎಲ್ಲೆಡೆಯೂ ಇದ್ದು ಅದನ್ನು ತಿಳಿಯುತ್ತಾನೆಂದಿದೆ. ಇದು ಸ್ವಾಮಿಯ ಸರ್ವವ್ಯಾಪ್ತತ್ವ, ಸರ್ವಜ್ಞತ್ವವನ್ನು ತಿಳಿಸುತ್ತದೆ. ಮುಂದೆಯೇ "ಸರ್ವಂ ತದ್ ರಾಜಾವರುಣೋ ವಿಚಷ್ಟೇ, ಯದಂತರಾರೊದ ಸೀ, ಯತ್ ಪರಸ್ತಾತ್ ।" ಭೂಮ್ಯಾಕಾಶಗಳು, ಅಂತರ ಅತೀತವಾದವುಗಳನ್ನೆಲ್ಲಾ ರಾಜಾವರುಣ ನೋಡಿ, ತಿಳಿಯುತ್ತಿರುತ್ತಾನೆ ಎಂದಿದೆ. ನಾವು ಏನು ಸೇವೆಗೈಯ್ದರೂ ಸರ್ವವ್ಯಾಪಿಯಾದ ಪರಮಾತ್ಮ ಸೇವೆ ಕೈಗೊಳ್ಳುತ್ತಿದ್ದಾನೆಂದು ಅರಿತರೆ ಸೇವೆಯು ಪರಮಾತ್ಮನ ಸೇವೆಯಾಗಿ ಪರಿಣಮಿಸುವುದು. ತಿಳಿದವರು ಏನು ಮಾಡಿದರೆ ಅಪಚಾರವಾಗುತ್ತೆಯೋ, ಏನು ನುಡಿದರೆ ಅಪರಾಧವಾಗುತ್ತೆಯೋ, ಎಂದು ಸರ್ವವ್ಯಾಪ್ತಿಯಾದ ಪರಮಾತ್ಮನ ಸದಾ ಸನ್ನಿಧಿಯಲ್ಲಿರುವಂತೆ ಹೆದರಿ ತಮ್ಮ ದಿನವಹಿ ಸಮಸ್ತ ಕಾರ್ಯ್ಯಗಳನ್ನು ಮಾಡುವರು. ನಾವೂ ಅವನಲ್ಲಿಯೇ ಮುಳಿಗಿದ್ದೇವೆ. ಸಮುದ್ರದಲ್ಲಿ ಮುಳುಗಿಸಿರುವ ಬಿಂದಿಗೆಯಂತೆ, ಒಳಗೂ

ಹೊರಗೂ ಸಮುದ್ರದ ನೀರು ವ್ಯಾಪಿಸಿರುವಂತೆ, ತ್ರಿಲೋಕಗಳಲ್ಲಿ ಸರ್ವಸ್ವವೂ ಪರಮಾತ್ಮನಲ್ಲಿ ಮುಳುಗಿವೆ. ಬೇರೆ ಇರಲಾಗದು. ವರಾಹೋಪನಿಷತ್ತಿನಲ್ಲಿ ಹೇಳಿರುವಂತೆ "ಅಂತಃ ಪೂರ್ಣೋ, ಬಹಿ ಪೂರ್ಣಃ, ಪೂರ್ಣಕುಂಭ ಇವಾರ್ಣವೇ" ಎನ್ನುವಂತೆ. ಉಪನಿಷತ್ತುಗಳಲ್ಲಿ ಅದಕ್ಕೇ "ಏಕಮೇವಾದ್ವಿತೀಯಂ" ಎಂದು ಹೇಳಿರುವುದರರ್ಥವನ್ನು "ತ್ವಯ್ಯೈಕೇನ" ಎಂದಿದ್ದಾನೆ, ಅರ್ಜುನ. ಎರಡನೆಯದು ಬೇರೆ ಇಲ್ಲದೆ, ಒಂದೇ ಒಂದಾದ ಸದ್ವಸ್ತು ಸರ್ವವನ್ನು ವ್ಯಾಪಿಸಿದೆ. ಶಂಕರರು ವಿವೇಕ ಚೂಡಾಮಣಿಯಲ್ಲಿ "ಪರಿಪೂರ್ಣ ಮನಾದ್ಯಂತ ಮಪ್ರಮೇಯ ಮವಿಕ್ರಿಯಂ। ಏಕಮೇವಾದ್ವಯಂ ಬ್ರಹ್ಮನೇಹ ನಾನಾಸ್ತಿ ಕಿಂಚನ ||" (೪೬೫ನೇ ಶ್ಲೋಕ) ಎಂದಿದ್ದಾರೆ.

ಮುಂದೆ ೪೭೧ ನೇ ಶ್ಲೋಕದವರೆವಿಗೂ ಉತ್ತರಾರ್ಧ "ಏಕಮೇವಾದ್ವಯಂ ಬ್ರಹ್ಮನೇಹನಾನಾಸ್ತಿ ಕಿಂಚನ |" ಎಂದು ೭ ಶ್ಲೋಕಗಳಲ್ಲೂ ಅದೇ ಪಲ್ಲವಿ ಬರುತ್ತೆ. ೪೬೭ ರಲ್ಲಿ "ಪತ್ಯಗೇಕರಸಂಪೂರ್ಣಮನನ್ತಂ ಸರ್ವತೋಮುಖಂ" ಎಂದು ಪೂರ್ವಾರ್ಧ ಬರುತ್ತೆ. ಇದೇ ಈ ಅದ್ವಯವಾದ ಏಕಬ್ರಹ್ಮವೇ ಪೂರ್ಣವಾಗಿ, ಅನಂತವಾಗಿ ಸರ್ವತೋಮುಖವಾಗಿ, ಅಪ್ರಮೇಯವಾಗಿ, ಅವಿಕ್ರಿಯವಾಗಿ ಎಲ್ಲಾ ತುಂಬಿದೆ; ಇನ್ಯಾವುದು ಕಿಂಚಿತ್ತೂ ಇಲ್ಲಾ. ಇದೇ ಅಕ್ಷರತಃ ಅಧ್ಯಾತ್ಮೋಪನಿಷತ್ತಿನಲ್ಲಿ (೭ ಶ್ಲೋಕಗಳೂ) ಪುನರುಕ್ತಿಯಿಲ್ಲದೆ ಬರುತ್ತೆ. ಅಧ್ಯಾತ್ಮೋಪನಿಷತ್ತು ಎಷ್ಟು ಅರ್ಥಗರ್ಭಿತವಾಗಿದೆ ಎನ್ನುವುದು, ಶ್ರೀಶಂಕರಾಚಾರ್ಯರು ಅದರಿಂದ ೪೦ಕ್ಕಿಂತ ಹೆಚ್ಚಾಗಿ ಶ್ಲೋಕಗಳನ್ನು ಅಕ್ಷರತಃ "ವಿವೇಕಚೂಡಾಮಣಿ"—ಅವರ ದಿವ್ಯಗ್ರಂಥಕ್ಕೆ ಇಳಿಸಿಬಿಟ್ಟಿರುವುದರಿಂದ ವೇದ್ಯವಾಗುತ್ತದೆ. ಹೆಸರೇ "ಅಧ್ಯಾತ್ಮ"ವಲ್ಲವೇ. ಶ್ವೇತಾಶ್ವತರೋಪನಿಷತ್ (೬ ಅ, ೫ ಮಂ)ನಲ್ಲಿ "ತ್ವಂ ವಿಶ್ವರೂಪಂ ಭವಭೂತಮೀಡ್ಯಂ ದೇವಂ ಸ್ವಚಿತ್ತಸ್ಥಮುಪಾಸ್ಯಪೂರ್ವಂ |"—ವಿಶ್ವರೂಪ, ಭವಭೂತವ್ಯಾಪಿಯಾದ ದೇವನನ್ನು ಸ್ವಚಿತ್ತದಲ್ಲೇ ಇರುವ ದೇವಪೂರ್ವ (ಅಜಸನಾತನ) ನನ್ನು ಉಪಾಸನೆ ಮಾಡೆಂದು ಹೇಳಿದೆ. ಅದರಿಂದಲೇ

ಅಮೀ ಹಿ ತ್ವಾಂ ಸುರಸಂಘಾ ವಿಶಂತಿ
ಕೇಚಿದ್ಭೀತಾಃ ಪ್ರಾಂಜಲಯೋ ಗೃಣಂತಿ ।
ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ
ಸ್ತುವಂತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ॥೨೧॥

ನಿನ್ನ ಈ ಸ್ವರೂಪವನ್ನು ನೋಡಿ (ಸರ್ವವ್ಯಾಪಿ) ದೇವತಾ ಸಮುದಾಯವೇ (ಸುರಸಂಘಾ) ಶರಣುಹೋಗುತ್ತಿದೆ. ಇನ್ನು ಕೆಲವರು ಭೀತಿಯಿಂದ ಅಂಜಲಿಬದ್ಧರಾಗಿ ಪ್ರಾರ್ಥಿಸುತ್ತಿದ್ದಾರೆ. ಮಹರ್ಷಿಗಳು ಸಿದ್ಧರ ತಂಡವು ಸ್ವಸ್ತಿವಚನದಿಂದ ಪ್ರುಷುಲವಾಗಿ ಸ್ತುತಿಸಿದ್ದಾರೆ.

ಎಲ್ಲಾ ದೇವತೆಗಳೂ, ಋಷಿಗಳೂ, ಸಿದ್ಧರೂ ಪರಮಾತ್ಮ ದರ್ಶನಕ್ಕೆ "ದ್ಯಾವ್ಯಾಪೃಥಿವ್ಯೋರಿದಮಂತರಂ" ಎಲ್ಲಿಯಾದರೂ ಕಾದಿರುತ್ತಾರೆ. ಆ ವಿಶ್ವರೂಪ ಪ್ರತ್ಯಕ್ಷದಿಂದ ಯಾವಾಗ ಸರ್ವದಿಕ್ಕುಗಳೂ ಸ್ವತೇಜಸ್ಸಿನಿಂದ ಪ್ರಕಾಶವಾಗುವುದೋ ಆಗ ಅವರುಗಳು ದರ್ಶನದಿಂದ ಸಂತುಷ್ಟರಾಗಿ ದೇವನನ್ನು ಶರಣುಹೊಂದಿ ಜಯುಜಯಾಕಾರದೊಡನೆ, ಸ್ವಸ್ತಿವಚನಗಳೊಡನೆ ಸ್ತುತಿಸುತ್ತಾರೆ. ತಾವೇ ಧನ್ಯರೆಂದು ಅವತಾರಗಳಲ್ಲೂ, ದೇವನು ಪ್ರತ್ಯಕ್ಷಘನಿಭೂತನಾದಾಗ ತಮ್ಮ ತಪೋಶಕ್ತಿಯಿಂದ ಅದನ್ನು ತಿಳಿದು ಋಷಿಗಳೂ ಸಿದ್ಧರೂ ಪುಷ್ಕಲವಾಗಿ ಸ್ತೋತ್ರ ಮಾಡುತ್ತಾರೆ. ಏಸುಜನನವಾದಾಗಲೂ, ಬೌದ್ಧಾವತಾರವಾದಾಗಲೂ, ಇತರ ದೇವಪುರುಷರು ಪ್ರತ್ಯಕ್ಷವಾದಾಗಲ್ಲೆಲ್ಲಾ ಈ ಸತ್ಪುರುಷರುಗಳು ಎಲ್ಲಾ ದೇಶಗಳಲ್ಲೂ, ಎಲ್ಲಾ ಕಾಲದಲ್ಲೂ ಸಂತುಷ್ಟಿಯಿಂದ ಪುಷ್ಕಲವಾಗಿ ಜಯಘೋಷ ಮಾಡಿದ್ದಾರೆ. ಅರ್ಜುನನ ನೆಪದಿಂದ ಸ್ವಾಮಿ, ದೇವತಾಗಣಕ್ಕೂ, ಋಷಿ ಸಿದ್ಧರಿಗೂ ದರ್ಶನ ಕೊಟ್ಟ ಸದವಕಾಶವನ್ನು ಅವರು ಕಳೆದುಕೊಳ್ಳುವರೇ. ಇತರರು ಪಾಪಭೀತರು ಭಯಭೀತಿಯಿಂದ ಭಕ್ತಿ ಉತ್ಪನ್ನವಾಗಿ ಅಂಜಲಿಬದ್ಧರಾಗಿ ತಮ್ಮ ಪಾಪವಿಮೋಚನೆಗೆ ಪ್ರಾರ್ಥಿಸುವರು. ಇದೊಂದು ಪುಣ್ಯ ಸಮಯ, ಒಂದು ಪರ್ವಕಾಲ. ಅವ್ಯಕ್ತ, ಶಕ್ತ ಪರಮಾತ್ಮನು ಘನಿಭೂತವಾಗಿ ಕರುಣೆಯಿಂದ ಯಾರಾದರೂ ಸಾಧಕರಿಗೆ ತಾನಾಗಿ ಪ್ರಸಾದರೂಪವಾಗಿ ತನ್ನ ನಿಜತತ್ವವನ್ನು ದರ್ಶನ ಕೊಡುವುದು

ಅಪೂರ್ವ ಸುಯೋಗ. ಆಗಿನ ಜನರೇ ಧನ್ಯರು. ಅದಕ್ಕಾಗಿ ಧನ್ಯವಾದ ಒಪ್ಪಿಸುತ್ತಾರೆ. ಸದಾ ದೇವಚಿಂತನದಲ್ಲೇ ಇರುವವರು ಅವ ಸನ್ನಿಹಿತ ನಾದರೆ ಎಷ್ಟು ಆನಂದದಿಂದ ಸ್ತುತಿಸಲಾರರು. ಸಪ್ತಲೋಕಗಳಲ್ಲಿನ ಸತ್‌ಜೀವಿಗಳಿಗೆ ಸದವಕಾಶ.

**ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ-**
**ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ ।**
**ಗಂಧರ್ವಯಕ್ಷಾಸುರಸಿದ್ಧಸಂಘಾ-**
**ವೀಕ್ಷಂತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥೨೨॥**

ಏಕಾದಶರುದ್ರರೂ, ದ್ವಾದಶಾದಿತ್ಯರೂ, ಅಷ್ಟವಸುಗಳೂ, ಸಾಧನೆ ಯನ್ನು ಮಾಡುತ್ತಿರುವವರು, ವಿಶ್ವದೇವತೆಗಳೂ, ಅಶ್ವಿನಿಕುಮಾರರೂ, ಮರುದ್ಗಣಗಳೂ, ಪಿತೃವೃಂದವೂ, ಗಂಧರ್ವರೂ, ಯಕ್ಷರೂ, ಅಸು ರರೂ, ಸಿದ್ಧಸಮುದಾಯವೂ ವಿಸ್ಮಿತರಾಗಿ ಸರ್ವರೂ ನನ್ನ ದರ್ಶವನ್ನೆ ಪಡೆಯುತ್ತಿರುವರು.

ಬ್ರಹ್ಮಾಂಡಕ್ಕೆ ಹೋಲಿಸಿದರೆ ನಮ್ಮ ಪೃಥ್ವಿಯು ಒಂದಣು ಮಾತ್ರ ಸೂರ್ಯಮಂಡಲದಲ್ಲೇ ಬೃಹಸ್ಪತಿ ಮೊದಲಾದವನ್ನು ಹೋಲಿಸಿದರೆ ಚಿಕ್ಕ ಗ್ರಹ. ಇಂಥಾ ಸೂರ್ಯಮಂಡಲಗಳನ್ನನೇಕವನ್ನೊಳಗೊಂಡ ಬ್ರಹ್ಮಾಂಡ ದಲ್ಲಿ, ಕೊಟ್ಯಾಂತರ ಯೋಜನ ವಿಸ್ತಾರದಲ್ಲಿ ನಮ್ಮ ಸೂರ್ಯನಿಗಿಂತ ಅಧಿಕ ಪ್ರಕಾಶವುಳ್ಳ ಸೂರ್ಯಗಳೂ, ಅವುಗಳ ಮಂಡಲಗಳೂ ತಾಂಡವಾಡುತ್ತಿವೆ, ಸೃಷ್ಟಿಯಲ್ಲಿ ನಾವು ಬಹಳ ಮುಖ್ಯವೆಂದು ಜಂಭಕೊಚ್ಚಿಕೊಳ್ಳುವ ಮಾನವ ಸಂಘ, ಅದರಲ್ಲೂ ಪ್ರತಿಮಾನವ, ನಮ್ಮ ಈ ಅಣ್ಣಪ್ರಾಯ ಪೃಥ್ವಿಯಲ್ಲೇ ಎಷ್ಟು ಅಲಕ್ಷ್ಯ, ಅಲ್ಪವಸ್ತುಗಳೆನ್ನುವುದು, ನಾವೀಸೃಷ್ಟಿ ಯಲ್ಲಿನ ಅಘಾದ ಬ್ರಹ್ಮಾಂಡಕ್ಕೆ ಹೋಲಿಸಿಕೊಂಡರೆ ಗೊತ್ತಾಗುತ್ತದೆ. ನಮ್ಮ ಗಣನೆಗೇ ಬಾರದ, ನಮ್ಮ ಯೋಚನೆಗೇ ಸಿಲುಕದ, ನಮ್ಮ ಬುದ್ಧಿಗೇ ನಿಲುಕದ ಈ ರುದ್ರ ಆದಿತ್ಯ ವಸು, ಗಂಧರ್ವ, ಪಿತೃ, ಅಸುರ, ಯಕ್ಷಲೋಕಗಳನ್ನೂ, ಅವರ ಸಮುದಾಯವನ್ನೂ ಎಷ್ಟು ಕಮ್ಮಿ

ಚರ್ಚಿಸಿದರೆ ಅಷ್ಟು ಒಳ್ಳೆಯದು. ಜಗದ್ಸೃಷ್ಟಿಯಲ್ಲಿ ಎಲ್ಲವೂ ಪರಮಾತ್ಮನಧೀನವು, ಎಲ್ಲವೂ ಆತನನುಸರಣೆಯಲ್ಲಿ, ಶರಣುಹೊಂದಿವೆ. ಅವನೇ ಅವೆಲ್ಲರ ಜೀವಾಳ. ಆ ಸಂಘಸಮುದಾಯದಲ್ಲಿ ದೇವನು ಮಾನವನ ಶ್ರೇಯಸ್ಸಿಗಾಗಿ ಆಶೀರ್ವದಿಸುತ್ತಿರುವುದು ಅವನ ಪುಣ್ಯವಷ್ಟೇ. ಮೇಲಾಗಿ ಅಷ್ಟು ಅಪಾರ ಕರುಣೆಯಿಂದ ಪ್ರತಿದೀನ ಅಲ್ಪಭಕ್ತನ ಮೇಲೂ ಪ್ರೀತಿ ವಿಶ್ವಾಸವಿಟ್ಟಿರುವುದು ಮಾನವನ ಅಭ್ಯುದಯ. ಸೃಷ್ಟಿ ಸೃಷ್ಟಿಯೇ ಸಕಲ ಚೈತನ್ಯವೇ ಆಶ್ಚರ್ಯದಿಂದ ಅವನನ್ನು ನೋಡುತ್ತಿವೆ. ನಮಗೆ ಪ್ರತ್ಯಕ್ಷ ಪರಮಾತ್ಮನಾದ ಸೂರ್ಯದೇವನ ಪ್ರಭೆ ಉದಯವಾಗಿ ಕಿರಣ ಪಸರಿಸಿದೊಡನೆಯೇ ನಮ್ಮೀಸ್ಥಾನವಾದ ಅಲ್ಪ ಪೃಥ್ವಿಯ ಸಕಲ ಜೀವಸಮುದಾಯವೂ ಚೈತನ್ಯದಿಂದ ಎಚ್ಚತ್ತು ಅವನ ಚೈತನ್ಯದಿಂದ ತಮ್ಮ ಜೀವಿತವನ್ನು ಸಾಗಿಸುತ್ತಾ ಅವನ ಸನ್ನಿಧಿಯಲ್ಲಿ ಜೀವಿಸುವಂತೆ, ಸರ್ವೇಶ್ವರನು ಪ್ರತ್ಯಕ್ಷವಾಗಿ ಪ್ರಕಾಶಿಸಿ ದರ್ಶನವಿತ್ತಾಗ ಆ ಮಹಿಮನ ಸರ್ವಸಾನ್ನಿಧ್ಯದಲ್ಲಿ ಬ್ರಹ್ಮಾಂಡಕೋಟಿಯಲ್ಲಿರುವ ಚರಾಚರವಸ್ತುಗಳೆಲ್ಲವೂ ಆ ಮಹದಾತ್ಮನನ್ನು ಆಶ್ಚರ್ಯದಿಂದ ವೀಕ್ಷಿಸುವುವು. ಅವರುಗಳ ಪಟ್ಟಿಯೇ ನಮಗೆ ಸಾಕು. ಅವರೆಲ್ಲರೂ ಅವರವರ ಲೋಕದಲ್ಲಿ ಜಗತ್ತಿನ ಜೀವಿಗಳ, ಮಾನವರ ಕಲ್ಯಾಣಕ್ಕಾಗಿ, ಶ್ರೇಯಸ್ಸಿಗಾಗಿ ಸಹಾಯಕರಾಗಿರುತ್ತಾರೆಂದು ನಮ್ಮ ಶಾಸ್ತ್ರ ನಂಬಿಕೆ. ಅವರಿಗಾಗಿ ಪೂಜಾ, ಯಜ್ಞ, ತಪ, ತರ್ಪಣಗಳನ್ನು ಮಾಡುವ ಸತ್ಪುರುಷರು ಈಗಲೂ ಉಂಟು. ಪರಸ್ಪರ ಅನ್ಯೋನ್ಯಭಾವದಿಂದ ಒಬ್ಬರಿಗೊಬ್ಬರು ಶ್ರೇಯಸ್ಸನ್ನು ಬಯಸಿ ಒಬ್ಬರ ಹಿತವನ್ನೊಬ್ಬರು ಕೋರುತ್ತಾ ಕಲ್ಯಾಣವೆಸಗುತ್ತಿರುವರು. ಇದನ್ನೇ ಪರಮಾತ್ಮನು ೩ ಅಧ್ಯಾಯ ೧೧ ನೇ ಶ್ಲೋಕದಲ್ಲಿ ಹೇಳಿರುವುದು—"ಪರಸ್ಪರಂಭಾವಯಂತಃ ಶ್ರೇಯಃ ಪರಮವಾಪ್ಸ್ಯಥ।" ಯಾವುದಾದರೂ ಇಹಲೋಕದಲ್ಲಿ ಮಹತ್ಕಾರ್ಯ ನಡೆದರೂ, (ಮಹಾಯಜ್ಞ, ಮಹಾಯುದ್ಧ, ಇತ್ಯಾದಿ,) ದೇವತೆಗಳು, ಗಂಧರ್ವರು ಯಕ್ಷರು ಎಲ್ಲರೂ ಅದನ್ನು ಆಶ್ಚರ್ಯದಿಂದ ನೋಡಲು ಆಗಮಿಸಿರುವರೆಂದು ರಾಮಾಯಣ, ಭಾರತಗಳಲ್ಲಿ ವಿವರಣೆಯಿದೆ. ಅಂತೆಯೇ ಈ ಭಾರತ ಮಹಾ

ಯುದ್ಧವನ್ನು ನೋಡಲು ನಮ್ಮ ಭೂಮಿಗೆ ನೆರಮರೆಯವರಂತಿರುವ ರುದ್ರ, ಆದಿತ್ಯ, ವಿಶ್ವೇದೇವ ಗಂಧರ್ವ, ಯಕ್ಷ, ದೇವತೆಗಳೆಲ್ಲಾ ತಂಡತಂಡವಾಗಿ ಕಾದಿದ್ದಂತಿದೆ. ಅವರು ಆ ಯುದ್ಧಭೂಮಿಯಲ್ಲಿ, ಈ ರಣಉದ್ಯಮದಲ್ಲಿ ಎಲ್ಲರೂ ಮೃತ್ಯುವಿನ ಕೋರದವಡೆಯಲ್ಲಿ ಸಿಲುಕಿರುವಾಗ, ಈ ಅದ್ಭುತ ವಿಶ್ವರೂಪದರ್ಶನವನ್ನು ಅವರೂ ಆಶ್ಚರ್ಯದಿಂದ ವೀಕ್ಷಿಸಿರಬೇಕು. ಧನ್ಯರೆಂದು ಜಯಕಾರ ಮಾಡಿರಬೇಕು.

**ರೂಪಂ ಮಹತ್ತೇ ಬಹುವಕ್ತ್ರನೇತ್ರಂ**
**ಮಹಾಬಾಹೋ ಬಹುಬಾಹೂರುಪಾದಮ್ ।**
**ಬಹೂದರಂ ಬಹುದಂಷ್ಟ್ರಾಕರಾಲಂ**
**ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಹಮ್** ॥೨೩॥

ಮಹತ್ತಾದ ರೂಪ, ಬಹುಮುಖ, ನೇತ್ರ, ನೀಳವಾದ ಮಹಾಬಾಹುಗಳು, ಬಹುಬಾಹು, ತೊಡೆ, ಪಾದ, ಉದರ ಕರಾಳ ದವಡೆಗಳನ್ನೂ ನೋಡಿ ಲೋಕಗಳೆಲ್ಲಾ ಭೀತರಾಗಿರುವಂತೆ ನಾನೂ ಭೀತನಾಗಿರುವೆನು.

"ಯಸ್ಮಿನ್‌ರೂಪೇತದ್ಬಹುಬಾಹೂರುಪಾದಂ" ಎಂದಿದ್ದಾರೆ ಶಂಕರರು. ರೂಪಕ್ಕೆ ತಕ್ಕಂತೆ ಬಾಹು, ತೊಡೆ, ಪಾದಗಳು.

ಕಾಲಕ್ಕೆ ತಕ್ಕಂತೆ ರೂಪ, ರೂಪಕ್ಕೆ ತಕ್ಕಂತೆ ಆಕಾರ, ಆಕಾರಕ್ಕೆ ತಕ್ಕಂತೆ ಅಂಗಾಗಗಳು. ಭಯಂಕರ ರೂಪತಾಳಿರುವ ಪರಮಾತ್ಮ. ಕಾಲನ ಅವತಾರ. ಮುಂದಕ್ಕೆ ಆ ರೂಪಕ್ಕೆ ಆಗುವ ಆಹುತಿಗಳನ್ನೆಲ್ಲಾ ತೋರುತ್ತಾನೆ. ಅದಕ್ಕೆ 'ಪ್ರವ್ಯಥಿತಂ' ಲೋಕಾಃ, ಹಿಂದೆ ೨೦ನೇ ಶ್ಲೋಕದಲ್ಲಿ ಲೋಕತ್ರಯಂ, ಭಯಪ್ರಚೋದಿತರಾಗಿದ್ದಾರೆ, ವ್ಯಥೆಯುಳ್ಳ ಅಂತಃಕರಣವುಳ್ಳವರಾಗಿದ್ದಾರೆ.

**ನಭಃಸ್ಪೃಶಂ ದೀಪ್ತಮನೇಕವರ್ಣಂ**
**ವ್ಯಾತ್ತಾನನಂ ದೀಪ್ತವಿಶಾಲನೇತ್ರಮ್ ।**
**ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾಂತರಾತ್ಮಾ**
**ಧೃತಿಂ ನ ವಿಂದಾಮಿ ಶಮಂ ಚ ವಿಷ್ಣೋ** ॥೨೪॥

ವಿಷ್ಣುವೇ ಎಂದು ಸಂಭೋದನೆ. ಆಕಾಶವನ್ನು ಮುಟ್ಟಿರುವ ಪ್ರದೀಪ್ತವಾದ ಅನೇಕ ವರ್ಣಗಳುಳ್ಳ, ತೆರೆದಿರುವ ಮುಖವುಳ್ಳ (ವಿಸ್ತಾರ ವಾದ ವ್ಯಾಪ್ತಾನನಂ) ಪ್ರಜ್ವಲಿತವಾದ ವಿಶಾಲನೇತ್ರವಿರುವ ನಿನ್ನನ್ನು ನೋಡಿ ನನ್ನ ಅಂತರಾತ್ಮವು ವ್ಯಥೆಯಿಂದಕೂಡಿ, ಧೃತಿಯನ್ನು ಕಾಣೆ. ಶಮವನ್ನೂ ಕಾಣೆ. ರುದ್ರಹೃದಯೋಪನಿಷತ್ತಿನಲ್ಲಿ

"ಪುಲ್ಲಿಂಗಗ್ ಸರ್ವಮೀಶಾನಃ ಸ್ತ್ರೀಲಿಙ್ಗಂ ಭಗವತ್ಯುಮಾ ।
ಉಮಾರುದ್ರಾತ್ಮಿಕಾಸ್ಸರ್ವಾಃ ಪ್ರಜಾಸ್ಥಾವರಜಙ್ಗಮಾಃ ॥
ವ್ಯಕ್ತಗ್ ಸರ್ವಮುಮಾ ರೂಪಮವ್ಯಕ್ತಂತು ಮಹೇಶ್ವರಃ ।
ಉಮಾಶಂಕರಯೊರ್ಯೋಗಸ್ಸ ಯೋಗೋ ವಿಷ್ಣುರುಚ್ಯತೇ ॥"

ಎಂದು ವಿಷ್ಣುವಿನ ಅಂತರಾರ್ಥವನ್ನು ದಿವ್ಯವಾಗಿಕೊಟ್ಟಿದೆ. ಉಮಾ ಶಂಕರರ ಯಾವ ಯೋಗವಿದೆಯೋ; ಆ ಯೋಗವೇ ವಿಷ್ಣು. ಸ್ಥಾವರ ಜಂಗಮವೆಲ್ಲವೂ, ಪ್ರಜೆಗಳೂ ಸರ್ವವೂ ಉಮಾರುದ್ರಾತ್ಮಿಕವು. ಪುಲಿಂಗವೆಲ್ಲಾ ಈಶಾನ ಸ್ತ್ರೀಲಿಂಗವೆಲ್ಲಾ ಭಗವತ್ ಉಮಾ. ವ್ಯಕ್ತವೆಲ್ಲಾ ಉಮಾರೂಪ (ಶಕ್ತಿರೂಪಿಣಿ) ಅವ್ಯಕ್ತವೆಲ್ಲಾ ಮಹೇಶ್ವರ. ಎಷ್ಟು ದಿವ್ಯವಾಗಿ, ಗಂಭೀರವಾಗಿದೆ ಉಮಾಮಹೇಶ್ವರವಿಷ್ಣುವಿನ ಅಂತರಾರ್ಥ. ನಾವು ಬೇರೆಬೇರೆಯೆಂದು ಹೊಡೆದಾಡುವುದಷ್ಟೆ. ಶಕ್ತಾ, ಶಕ್ತಿ, ಶಕ್ತಶಕ್ತಿಯೋಗ ಎಲ್ಲಾ ಪ್ರಕಟಿತವಾಗಿದೆ ಆ ಶ್ಲೋಕಗಳಲ್ಲಿ. ಆ ಅರ್ಥ ದಲ್ಲೇ "ವಿಷ್ಣೋ" ಎಂದು ಅರ್ಜುನ ಸಂಭೊದನೆ. "ನಭಸ್ಪೃಶಂ" ಆಕಾಶವೆಂಬುವೇ ಆಭಾಸ. ಆಕಾಶವೆನ್ನುವುದು ಎಲ್ಲುಂಟು. ನುಮ್ಮನೆ ನಮ್ಮ ಕಲ್ಪನೆ. ಆಕಾಶಕ್ಕೆ ತಗಲುವದೆಂದರೆ ಮೇಲಿನ ಅಂತರವೇ ಇಲ್ಲದ ಅಳತೆಗೆ ಸಿಕ್ಕದ ಆಕಾಶಕ್ಕೆ ಸೇರಿಕೊಂಡಂತಿರುವ ಆಕಾರ.

ತ್ರಿಶಿಖಿಬ್ರಾಹ್ಮಣೋಪನಿಷತ್ತಿನಲ್ಲಿ ವಿಶ್ವರೂಪವರ್ಣನೆ ಈ ರೀತಿ ಇದೆ:

**ಸೂರ್ಯಕೋಟಿದ್ಯುತಿರಥಂ ವಿದ್ಯೋದಿತ ಮಘೋಕ್ಷಜಂ ।**
**ಹೃದಯಾಂಬುರ ಹಾಸೀನಂ ಧ್ಯಾಯೇದ್ವಾ ವಿಶ್ವರೂಪಿಣಂ ।**
**ಅನೇಕಾಕಾರ ಖಚಿತಂ ಅನೇಕ ವದ ನಾನ್ವಿತಂ ।**
**ಅನೇಕ ಭುಜ ಸಂಯುಕ್ತಂ ಅನೇಕಾಯುಧ ಮಂಡಿತಂ ।**

ನಾನಾವರ್ಣ ಧರಂ ದೇವಂ ಶಾಂತಮುಗ್ರಮುದಾಯುಧಂ ।
ಅನೇಕ ನಯನಾಕೀರ್ಣಂ ಸೂರ್ಯಕೋಟಿ ಸಮಪ್ರಭಂ ।
ಆನಂತಮಾನಂದ ಮಯಂ ಚಿನ್ಮಯಂ ಭಾಸ್ಕರಂ ವಿಭುಂ ।
ನಿವಾತ ದೀಪ ಸದೃಶಮ ಕೃತ್ರಿಮಮಣಿ ಪ್ರಭಾ ।
ಧ್ಯಾಯತೋ ಯೋಗಿನ ಸ್ತಸ್ಯ ಮುಕ್ತಿಃ ಕರತಲೇ ಸ್ಥಿತಾ ।
ವಿಶ್ವರೂಪಸ್ಯ ದೇವಸ್ಯ ರೂಪಂ ಯತ್ಕಿಂ ಚಿದೇ ವಹಿ ।
ಸ್ಥವೀಯ ಸೂಕ್ಷ್ಮ ಮನ್ಯದ್ವಾ ಪಶ್ಯನ್ ಹೃದಯ ಪಂಕಜೇ ॥

ಇದರಲ್ಲಿ ಗೀತೆಯಲ್ಲಿ ಬಂದಿರುವಂತೆಯೇ (ಶ್ಲೋ ೧೬, ೧೦, ೫, ೨೪ ಮತ್ತಿತರವು) ವರ್ಣನೆಯಲ್ಲಿ ಅನೇಕ ಮುಖ, ಭುಜ, ಆಯುಧ, ಕಣ್ಣು, ವರ್ಣ ಎಲ್ಲಾ ಬಂದಿವೆ. ಕೋಟಿ ಸೂರ್ಯ ಸಮಪ್ರಭ, ವಿಶ್ವರೂಪಿ, ಅನಂತ ಮಾನಂದ ಮಯಂ ಎಲ್ಲಾ ವಿವರವಾಗಿದೆ. ಇದೇ ರೂಪವನ್ನೆ ಯೋಗಿಗಳು ಹೃದಯ ಪಂಕಜದಲ್ಲಿ ಸೂಕ್ಷ್ಮ ಮನಸ್ಸಿನಿಂದ (ದಿವ್ಯಚಕ್ಷು) ಧ್ಯಾನಿಸಿ ನೋಡುವುದು. ಈ ಧ್ಯಾನದಿಂದ ಮುಕ್ತಿ ಕರತಲ ಸಾಧ್ಯವಾಗಿದೆ ಅವರಿಗೆ. ಶ್ಲೋ ೨೧, ೨೨ರಲ್ಲಿ ಹೇಳಿರುವಂತೆ ಈ ವಿಶ್ವರೂಪವನ್ನು ನೋಡಿ, ಸ್ವಸ್ತಿ ವಚನಗಳಿಂದ ಸುರಸಿದ್ಧಸಂಘರು ಅಂಜಲಿ ಬದ್ಧರಾಗಿ ಸ್ತುತಿಸುತ್ತಿರುವರು.

ಕೊನೆಯೇ ಇಲ್ಲದೆ ಮೇಲೆ ಕಾಣುವ ಅವಕಾಶದ ನೀಲಿವರ್ಣಕ್ಕೆ ನಾವು ಆಕಾಶವೆಂಬ ಸಂಕೇತವನ್ನಿಟ್ಟುಕೊಂಡಿದ್ದೇವಷ್ಟೆ. ಮಕ್ಕಳು ಹೇಳುವಂತೆ "ಆಕಾಶಕ್ಕೆ ಕಾಮನಬಿಲ್ಲು ತಗಲುಕೊಂಡಿದೆ" ಎನ್ನುವಂತೆ ಇರುವಿಕೆಯೇ ಇಲ್ಲದ ಎರಡುವಸ್ತುಗಳ ಮಿಲನ. ಆಕಾಶವೂ ತೋರಿಕೆ, ಕಾಮನಬಿಲ್ಲೂ ತೋರಿಕೆ. ಅಂತೆಯೇ ಸ್ವಾಮಿಯ ಸಗುಣಮೂರ್ತಿ ಭಾವನೆಯು ಎಲ್ಲೆಯಿಲ್ಲದ್ದು–ಆಕಾಶದವರೆಗೂ ಹೋಗಿದೆ ಎಂದು ನಾವು ಎತ್ತರವಳೆಯಲಾರದ ಬಹು ನೀಳವಾದ ವಸ್ತುಗಳಿಗೆ ಹೇಳುವಂತೆ. ಆಕಾಶವನ್ನು ಸ್ಪರ್ಶಿಸುವುದಕ್ಕೆ ಅದೇನು ಮನೆಯ ತಾರಸಿಯೇ? ಅಗೋಚರವಾದ ಉನ್ನತವೇ ಆಕಾಶ ಸಂಕೇತ.

ಅನೇಕ ವರ್ಣದ ಕಾಮನಬಿಲ್ಲನ್ನು ಈಗ ಹೇಳಲಿಲ್ಲವೇ ಅಂತೇ ತೇಜೋಮಯವಾದ ವರ್ಣವುಳ್ಳ ವ್ಯಾಪ್ತವಾದ ವಿಶಾಲ ಮುಖ ತೆರದ

ಹೊಳೆವ ಕಣ್ಣುಗಳೂ ನೋಡಿದರೆ ಯಾರಿಗೇ ತಾನೆ ಅಂತರಾತ್ಮದಲ್ಲಿ ಭಯ ಪ್ರಚೋದಿತವಾಗಿ ಧೃತಿ (ಧೈರ್ಯ) ಶಮ (ಶಾಂತಿ) ಇಲ್ಲವಾಗದು. ಅರ್ಜುನನ ಅವಸ್ಥೆಯೂ ಅಂತೆ.

**ದಂಷ್ಟ್ರಾ ಕರಾಲಾನಿ ಚ ತೇ ಮುಖಾನಿ**
**ದೃಷ್ಟ್ವೈವ ಕಾಲಾನಲಸನ್ನಿಭಾನಿ ।**
**ದಿಶೋ ನ ಜಾನೇ ನ ಲಭೇ ಚ ಶರ್ಮ**
**ಪ್ರಸೀದ ದೇವೇಶ ಜಗನ್ನಿವಾಸ ॥೨೫॥**

ಕೋರೆ ದಾಡೆಗಳಿರುವ ಪ್ರಳಯಕಾಲಾಗ್ನಿಯಂತಿರುವ ನಿನ್ನ ಮುಖವನ್ನು ನೋಡಿ ದಿಗ್ಭ್ರಾಂತನಾಗಿರುವೆನು (ದಿಕ್ಕೆಟ್ಟವನಾಗಿ) ದಿಕ್ಕು ತೋಚದಂತಾಗಿದೆ ಮತ್ತು ಸುಖ ಶಾಂತಿಯು ಲಭಿಸಲಾರದು. ಎಲೈ ದೇವೇಶನೇ, ಜಗನ್ನಿವಾಸನೇ, ಪ್ರಸನ್ನನಾಗು. ಈ "ದಂಷ್ಟ್ರಾಕರಾಲಾನಿ" ಎನ್ನುವುದು ಭಯಂಕರ ರೂಪವನ್ನು ತೋರಲು ಎಷ್ಟುಸಾರಿ ಉಪಯೋಗಿಸಲ್ಪಟ್ಟಿದೆ. ಆಚೆಯ ಶ್ಲೋಕದಲ್ಲೂ ಪುನಃ ಬರುವುದು. ಕೊರದ ವಡೆಯೇ ಮುಖಕ್ಕೆ ಭಯೊತ್ಪನ್ನವನ್ನುಂಟುಮಾಡುವುದು. ಇದು ಶ್ರೀ ನರಸಿಂಹಾವತಾರವನ್ನು ಮನಸ್ಸಿಗೆ ತರುತ್ತದೆ.

ನಾವೆಷ್ಟೋಜನ "ಶರ್ಮ" ಎಂದು ಹೆಸರಿಟ್ಟುಕೊಂಡಿರುವುದೇ ಅಲ್ಲದೆ ಪ್ರವರ ಹೇಳಿದಾಗಲೆಲ್ಲಾ "ಶರ್ಮಾ-ಅಹಂಭೋ ಅಭಿವಾದಯೇ" ಎಂದು ಎಷ್ಟೋಸಾರಿ ಹೇಳುತ್ತೇವೆಲ್ಲಾ, ಆ "ಶರ್ಮ" ಪದದರ್ಥವೇನೆಂದಾದರೂ ಯೋಚಿಸಿದ್ದೆವೆಯೇ, "ಶರ್ಮ"ವೆಂದರೆ "ಸುಖಶಾಂತಿ." "ಶರ್ಮಾ-ಅಹಂ" ಎಂದು ನಾವು ಉಚ್ಚರಿಸುವಾಗಲೆಲ್ಲಾ ನಾನು ಆತ್ಮ ಯಾವಾಗಲೂ ಸಚ್ಚಿದಾನಂದ ಸ್ವರೂಪನು ಎಂದು ಆ ಪ್ರವರ ಜ್ಞಾಪಿಸುತ್ತದೆ, ಭೋ, ಎಂದು ಎಚ್ಚರಿಸುತ್ತದೆ. ನಮಸ್ಕಾರ ಮಾಡುವುದೂ ಪರಮಾತ್ಮನಿಗೆ, ಆತ್ಮಸ್ವರೂಪವಾದ ಸುಖ ಶಾಂತಿ ಸ್ವರೂಪನು. ಈ ದೇಹವು ನಾಮಾಂಕಿತವಾದರೂ, ಶರ್ಮವೆಂಬುದು ಒಳಗಣ ಮರ್ಮಸೂಚಿಸುತ್ತದೆ ಈ ದೇಹ ನಾನಲ್ಲ, ನನಗೆ ದುಃಖವಿಲ್ಲಾ, ನಾನು ಸರ್ವದಾ ಸುಖ ಶಾಂತಿಯುಳ್ಳವನೆಂದು. ನಾನು ದೇಹವೇ ಅಲ್ಲದಮೇಲೆ ನನಗೆ ದುಃಖ

ವೆಲ್ಲಿಯುದು ಎಂದು ಉಪನಿಷತ್ತುಗಳು ಸಾರುತ್ತವೆ. ಆದುದರಿಂದ ನಾವು ಯಾವಾಗಲೂ ಶರ್ಮರು. ನಮ್ಮ ಸುಖಸ್ವರೂಪವನ್ನು ಮರೆಯದೆ ಶಾಂತಿಯಿಂದಿರಬೇಕು. ಈ ರೀತಿ ದಿಕ್ ತೋಚದಿದ್ದಾಗ ಸುಖಶಾಂತಿ ಲಭ್ಯವಿಲ್ಲವಾಗುತ್ತದೆ, ಲಭ್ಯವಾಗುವುದಕ್ಕೆ ಅದೇನು ಹೊಸದಾಗಿ ಹೊರಗಿನಿಂದ ಪಡೆಯಬೇಕಾದುದಿಲ್ಲಾ. ಒಳಗೆ ನಮ್ಮಲ್ಲೇ ಇವೆ. ಆದರೆ ಈ ದಿಕ್ಕೆಟ್ಟವರಾದಾಗ ಶಂಕರರು ಟೀಕೆಯಲ್ಲಿ ಹೇಳಿರುವಂತೆ "ಪೂರ್ವಾಪರ ವಿವೇಕೇನ ನ ಜಾನೇ ದಿಙ್ಮೂಢೋ" ಎಂದರೆ, ದಿಕ್ ತಪ್ಪಿ ಮೂಢಭಾವದಿಂದ ಪೂರ್ವಾಪರ ವಿವೇಕವೇ ತಿಳಿಯದಂತಾಗಿ ಬಿಡುತ್ತದೆ. ಆಗ ನಮ್ಮಲ್ಲಿರುವ ನಮ್ಮದಾದ ಸುಖಶಾಂತಿ "ಶರ್ಮ" ಅಲಭ್ಯವಾಗುತ್ತದೆ, ತಿಳಿಯದಾಗುತ್ತದೆ.

ಸಂಭೋದನೆಯೂ ದಿವ್ಯವಾಗಿವೆ. ದೇವತೆಗಳಿಗೆಲ್ಲಾ ಒಡೆಯ, ಜಗತ್ತಿನಲ್ಲೆಲ್ಲಾ ವಾಸಿಸುವ, ಸರ್ವವ್ಯಾಪಿ – ಸರ್ವೇಶ್ವರ, ಅವನನ್ನಲ್ಲದೆ ಇನ್ನ್ಯಾರನ್ನು ಪ್ರಸನ್ನನಾಗೆಂದು ಮೊರೆಹೋಗಬೇಕು ದಿಕ್ ತೋಚದಿದ್ದಾಗ. ಇದೇ ಸಂಭೋದನೆ ಪುನಃ ಪುನಃ ಪ್ರಾರ್ಥನೆಯಾದಮೇಲೆ ೪೫ನೇ ೩೧ನೇ ಶ್ಲೋಕಗಳಲ್ಲೂ "ಪ್ರಸೀದ ದೇವೇಶ ಜಗನ್ನಿವಾಸ" ಬರುತ್ತೆ.

**ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ**
**ಸರ್ವೇ ಸಹೈವಾವನಿಪಾಲಸಂಘೈಃ ।**
**ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಸೌ**
**ಸಹಾಸ್ಮದೀಯೈರಪಿ ಯೋಧಮುಖ್ಯೈಃ ॥೨೬॥**

**ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ**
**ದಂಷ್ಟ್ರಾಕರಾಲಾನಿ ಭಯಾನಕಾನಿ ।**
**ಕೇಚಿದ್ವಿಲಗ್ನಾ ದಶನಾಂತರೇಷು**
**ಸಂದೃಶ್ಯಂತೇ ಚೂರ್ಣಿತೈರುತ್ತಮಾಂಗೈಃ ॥೨೭॥**

ಅರ್ಜುನ ಭೀತನಾಗಿ ದಿಕ್ಕೆಟ್ಟುದುದಕ್ಕೆ ಕಾರಣ ಹೇಳುತ್ತಾನೆ. ಅವನಿಗೆ ಕಾಣುತ್ತಿರುವ ಭೀಕರ ದೃಶ್ಯ. ತಾನು ತನ್ನವರೆಂದು ಯಾರ

ಮೇಲೆ ವಾತ್ಸಲ್ಯದಿಂದ ತಾನು ಯುದ್ಧಮಾಡಲೊಲ್ಲೆನೆಂದು ಮೊದಲನೇ ಅಧ್ಯಾಯ (ಅರ್ಜುನ ವಿಷಾದ ಯೋಗ) ದಲ್ಲಿ ಬಿಲ್ಲುಬಾಣಗಳನ್ನು ಬಿಸಟು ಕೈಕಟ್ಟಿಕುಳಿತನೋ ಯಾರು ತನ್ನ ಗುರುಗಳು, ತನ್ನ ರಕ್ತ ಬಂಧುಗಳು ಎಂದು ವ್ಯಾಮೋಹಿತನಾಗಿದ್ದನೋ ಎಲ್ಲರೂ, ತನ್ನ ಕಣ್ಣೆದುರಿಗೇ ತನ್ನ ಪ್ರಯತ್ನವಿಲ್ಲದೇ ಆ ಘೋರ ದವಡೆಗೆ ಸಿಕ್ಕಿ ಆ ಭಯಂಕರಮುಖ ಪ್ರವೇಶಿಸಿ ಚೂರುಚೂರಾಗುತ್ತಿರುವ ದೃಶ್ಯ. ಕಂಡದ್ದು ಹೇಳುತ್ತಾನೆ ಇಲ್ಲಿ ಯುದ್ಧರಂಗದಲ್ಲಿ ಸೇರಿರುವ ಧೃತರಾಷ್ಟ್ರನ ಪುತ್ರರೂ, ಸಹಾಯಕ್ಕಾಗಿ ಬಂದಿರುವ ಸರ್ವ ರಾಜತಂಡವೂ, ಭೀಷ್ಮ ದ್ರೋಣ ಕರ್ಣ ಮೊದಲಾದ ಅನೇಕ ವೀರರು, ಭಯಂಕರವಾದ ನಿನ್ನ ಮುಖದಲ್ಲಿ ಪ್ರವೇಶಿಸಿ, ಘೋರ ದವಡೆಗೆ ಸಿಕ್ಕಿ ಕೆಲವರ ಉತ್ತಮಾಂಗಗಳೂ ಚೂರು ಚೂರಾಗಲು ಸಂದಿನಲ್ಲಿ ಒದ್ದಾಡುತ್ತಿರುವ ದೃಶ್ಯ. ಉತ್ತಮಾಂಗವೆಂದರೆ ರುಂಡ, ಮುಂಡ, ಕೈಕಾಲುಗಳಲ್ಲಿ ಉತ್ತಮವಾದ ಶಿರಸ್ಸು. ತಾನೇ ಪ್ರಯತ್ನಿಸದಿದ್ದರೂ ಅವರ ಆಯುಃ ಪ್ರಮಾಣವು ಮುಗಿದು ಮೃತ್ಯು ಮುಖದಲ್ಲಿದ್ದಾರೆಂದು ಅರ್ಜುನ ನೋಡಿದನು.

**ಯಥಾ ನದೀನಾಂ ಬಹವೋಽಂಬುವೇಗಾಃ**
**ಸಮುದ್ರಮೇವಾಭಿಮುಖಾ ದ್ರವಂತಿ ।**
**ತಥಾ ತವಾಮೀ ನರಲೋಕವೀರಾ-**
**ವಿಶಂತಿ ವಕ್ತ್ರಾಣ್ಯಭಿವಿಜ್ವಲಂತಿ ॥೨೮॥**

**ಯಥಾ ಪ್ರದೀಪ್ತಂ ಜ್ವಲನಂ ಪತಂಗಾ-**
**ವಿಶಂತಿ ನಾಶಾಯ ಸಮೃದ್ಧವೇಗಾಃ ।**
**ತಥೈವ ನಾಶಾಯ ವಿಶಂತಿ ಲೋಕಾ-**
**ಸ್ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ॥೨೯॥**

ಈ ಎರಡು ಶ್ಲೋಕಗಳಲ್ಲಿನ ಉಪಮಾನವು ಬಹು ಸೊಗಸಾಗಿದೆ. ಒಂದು ನದಿಯು ಸಮುದ್ರವನ್ನು ಸೇರುವ ಉಪಮಾನ, ಇನ್ನೊಂದು ಪತಂಗದ ಹುಳುಗಳು ಪ್ರಜ್ವಲಿತ ದೀಪಕ್ಕೆ ಬಿದ್ದು ನಾಶವಾಗುವ

ಉಪಮಾನ. ಎರಡಕ್ಕೂ ಈ ಮೃತ್ಯು ಸನ್ನಿಹಿತ ವೀರರು ಕಾಲನ ದವಡೆಗೆಸಿಕ್ಕಿ ಮೃತ್ಯುಮುಖ ಪ್ರವೇಶಮಾಡುತ್ತಿರುವುದಕ್ಕೆ ಹೋಲಿಸಿದೆ. ಇದರಲ್ಲಿ ಅವರು ಎಂತು ತಮ್ಮ ಹತೋಟಿಯೇ ಇಲ್ಲದೆ ತಾವೇ(ತಾವಾಗಿ ತಮ್ಮ ವಿಧಿಯನ್ನನುಸರಿಸುವುದು ಸೂಚಿಸುತ್ತದೆ. ಅವರ ಗಮನ ಅವರಿಗೇ ವೇದ್ಯವಿಲ್ಲ.

ಈ ನದಿಯು ಸಮುದ್ರ ಸೇರುವ ಉಪಮಾನ ಉಪನಿಷತ್‌ಗಳಲ್ಲೂ ಬಹಳ ಕಡೆ ಬಂದಿದೆ. ಪ್ರವಾಹದ ವೇಗದಲ್ಲಿ ಅನೇಕ ನದಿಗಳು ಹೇಗೆ ಸಮುದ್ರ ಕಡೆಯೇ ಮುಖವಾಗಿ ಹರಿಯುತ್ತಿರುವಂತೆ ನರಲೋಕದಲ್ಲಿ ಪ್ರಜರು ನಿನ್ನ ಪ್ರಜ್ವಲಿತವಾದಮುಖ ಪ್ರವೇಶಮಾಡುತ್ತಿರುವರು. ಇದು ಗತಿಗಮನವನ್ನು ಸೂಚಿಸುತ್ತದೆ. "ನದೀನಾಂ ಸಾಗರೋಗತಿಃ" ಎಂಬಂತೆ ನದಿಯ ಪ್ರವಾಹದ ಗುರಿ ಸಮುದ್ರವಲ್ಲದೆ ಬೇರೆಯಿಲ್ಲಾ. ನದಿ ತನ್ನ ಉತ್ಪತ್ತಿ ಸ್ಥಾನಕ್ಕೆ ಧಾವಿಸುತ್ತದೆ. ಸಮುದ್ರದ ನೀರೇ ಆವಿಯಾಗಿ ಮೋಡವಾಗಿ ಮಳೆಬಿದ್ದು ನದೀರೂಪವಾಗುತ್ತದೆ. ಅದಕ್ಕೆ ಉತ್ಪತ್ತಿ ಸ್ಥಾನ ಮಾನ ಸಮುದ್ರವೇ. ಅದರ ಗತಿಯೂ ಸಮುದ್ರವೇ. ಅದಕ್ಕಾಗಿ ಎಲ್ಲಾ ನದಿಗಳೂ ಸಮುದ್ರ ಮುಖವಾಗಿಯೇ ಪ್ರವಹಿಸಿ ಸಮುದ್ರವನ್ನೇ ಸೇರುತ್ತವೆ. ಅಂತೆಯೇ ಮಾನವನ ಉತ್ಪತ್ತಿ ಸ್ಥಾನವೂ ಪರಮಾತ್ಮನೇ ಅವನ ಗತಿಯೂ ಪರಮಾತ್ಮನೇ. ಎಂಥಾ ವೀರನಾದರೂ, ಎಂಥಾ ದೀರ್ಘಾಯುವಾದರೂ ಅವನು ಒಂದಾನೊಂದು ದಿನ ತನ್ನ ಉತ್ಪತ್ತಿ ಸ್ಥಾನವನ್ನು ಸೇರಲೇಬೇಕು. ಕಾಲನ ಮುಖವನ್ನು ಹೊಗಲೇ ಬೇಕು. ತಾವೇ ಕಾಲಸನ್ನಿಹಿತವಾದಾಗ ಅಲ್ಲಿಗೆ ಪ್ರವೇಶಮಾಡುವರು. ಮುಂಡುಕೋಪನಿಷತ್ತಿನಲ್ಲಿ (೩, ೨, ೮ ಶ್ಲೋ) "ಯಥಾನ ದ್ಯಸ್ಸ್ಯಂದ ಮಾನಾಸ್ಸಮುದ್ರೇ। ಅಸ್ತಂಗಚ್ಛಂತಿ ನಾಮರೂಪೇ ವಿಹಾಯ। ತಥಾ ವಿದ್ವಾನ್ನಾಮ ರೂಪಾದ್ವಿಮುಕ್ತಃ ಪರಾತ್ಪರಂ ಪುರುಷ ಮುಪೈತಿ ದಿವ್ಯಮ್ ॥" ಹರಿಯುವ ನದಿಗಳು ತಮ್ಮ ನಾಮರೂಪವನ್ನು ತ್ಯಜಿಸಿ, ಸಮುದ್ರದಲ್ಲಿ ಅಸ್ತ (ಮುಳುಗು) ವಾಗುವಂತೆ ಜ್ಞಾನಿಯೂ ನಾಮರೂಪ ದಿಂದ ಬಿಡುಗಡೆಹೊಂದಿ ಪರಾತ್ಪರನಾದ ದಿವ್ಯ ಪುರುಷನನ್ನು ಹೊಂದು ವನು–ಎಂದಿದೆ. ಹಾಗೆಯೇ ವೀರರೂ ಕೂಡ "ಸತ್ತರೆ ಸ್ವರ್ಗ" ಹೊಂದು

ವರು. ವೀರಸ್ವರ್ಗವೂ ಪರಮಾತ್ಮನ ಸನ್ನಿಧಿಯೇ. ಪ್ರಶ್ನೋಪನಿಷತ್ (೬, ೫ ಶ್ಲೋ) ನಲ್ಲಿ "ಸ ಯಥೇ ಮಾನದ್ಯ ಸ್ಸ್ಯಂದಮಾನಾಃ ಸಮುದ್ರಾ, ಯಣಾ, ಸಮುದ್ರಂ ಪ್ರಾಪ್ಯಾಸ್ತಂ ಗಚ್ಛಂತಿ ಭಿದ್ಯತೇ ತಾ ಸಾಂ ನಾಮ ರೂಪೇ ಸಮುದ್ರ ಇತ್ಯೇವಂ ... ಪುರುಷಂ ಪ್ರಾಪ್ಯಾ ಸ್ತಂ ಗಚ್ಛಂತಿ ಭಿದ್ಯೆತೇ ತಾಸಾಂ ನಾಮರೂಪೇ........||" ಹರಿಯುವ ನದಿಗಳು ಸಮುದ್ರವನ್ನೇ ಕುರಿತು ಹರಿದು ಸಮುದ್ರವನ್ನೇ ಹೊಂದಲು, ತಮ್ಮ ವ್ಯಕ್ತಿತ್ವ (ನಾಮ ರೂಪ) ವನ್ನು ತ್ಯಜಿಸುವಂತೆ–ಶೋಡಷಕಲಾಯುಕ್ತ ಪುರುಷನು ಸಾಕ್ಷಿ (ಪರಿದೃಷ್ಯಂ) ಪರಮಪುರುಷನನ್ನೇ ವ್ಯಕ್ತಿತ್ವ ತ್ಯಜಿಸಿ, ಐಕ್ಯಹೊಂದುವನು ಎಂದಿವೆ ಬಿಲ್ಲಿನಿಂದ ಗುರಿ ಹಿಡಿದುಬಿಟ್ಟ "ಅಂಬು"–ಬಾಣವು, ವೇಗದಿಂದ ಆ ಗುರಿಯನ್ನೇ ಸೇರುವಂತೆ, ನದಿಗಳೂ ತಮ್ಮ ಗುರಿಯಾದ ಸಮುದ್ರ ವನ್ನೇ ಸೇರುವವು; ಆತ್ಮನ ಗುರಿ ಪರಮಾತ್ಮದೊಡನೆ ಮಿಲನವಾಗು ವುದು. ಆ ಗುರಿ ಸೇರುವನು.

ಅಲ್ಲದೆ ನದಿಯ ತತ್ವವೂ, ಸಮುದ್ರದ ತತ್ವವೂ ಜಲವೇ. ಅವುಗಳು ನಾಮರೂಪದಿಂದ ಬೇರೆಯಾಗಿವೆ. ಅಂತೆಯೇ ಮನುಷ್ಯನ (ಆತ್ಮ) ಮತ್ತು ದಿವ್ಯ ಪರಮಪುರುಷ (ಮಹದಾತ್ಮ) ರ ತತ್ವಗಳೂ ಒಂದೇ. ನಾಮರೂಪ ವ್ಯಕ್ತಿತ್ವ ; (ಉಪಾಧಿ) ಕಳೆದ ಮೇಲೆ ಎರಡೂ ಒಂದಾಗಲೇ ಬೇಕು. ಸಣ್ಣ ಜಲಝರಿಯು ಮಹತ್ತಾದ ಸಮುದ್ರದಲ್ಲಿ ಮಿಲನವಾಗಿ (ಅಸ್ತಂ) ತಾನೇ ಇಲ್ಲದಾಗುವಂತೆ, ಈ ಕಿಂಚಿತ್ ಚೈತನ್ಯವು ಮಹತ್ ಚೈತನ್ಯದಲ್ಲಿ ತಾನೇ ಇಲ್ಲದಾಗಿ ಸೇರಿಬಿಡುವುದು.

ಪತಂಗಗಳು ಜ್ವಲಿಸುತ್ತಿರುವ ದೀಪವನ್ನು ಅತಿ ವೇಗವಾಗಿ ಹೊಕ್ಕು ನಾಶಹೊಂದುವಂತೆ ಇವರೆಲ್ಲರೂ ಅತಿ ವೇಗದಿಂದ ತಮ್ಮ ನಾಶಕ್ಕಾಗಿ ತಾವೇ ನಿನ್ನ ಮುಖವನ್ನು ಪ್ರವೇಶಿಸುತ್ತಿರುವರು. ಪತಂಗಕ್ಕೆ ತಾನು ನಾಶವಾಗುತ್ತೇನೆಂಬ ಶಂಕೆಯೂ ಇಲ್ಲದೆ ತಾನೇತಾನಾಗಿ ತನ್ನ ಉತ್ತೇ ಜನದಿಂದ (Inner urge) ಆ ದೀಪದ ಕಡೆಗೆ ನುಗ್ಗುತ್ತದೆ. ತಮ್ಮ ನಾಶದ ಅರಿವೇ ಇಲ್ಲದೇ ಈ ವೀರ ತಂಡವೆಲ್ಲವೂ ತಮಗೆ ಕಾದಿರುವ ನಾಶ ತಿಳಿಯದೇ ಮೃತ್ಯೋನ್ಮುಖರಾಗಿ ಯುದ್ಧಕ್ಕೆ ನುಗ್ಗಿರುವರು. ಮೃತ್ಯು ವಿನ ದವಡೆಗೆ ಉರುಳುವರು.

ಪತಂಗವು ಎಷ್ಟು ದೂರವಿದ್ದರೂ ದೀಪಪ್ರಕಾಶವನ್ನು ಹುಡುಕಿಕೊಂಡು ಅತ್ತಿಡೆಯೇ ವೇಗದಿಂದ ಧಾವಿಸಿ ತಮ್ಮ ನಾಶಕ್ಕೆ ತಾವೇ ನುಗ್ಗುವಂತೆ, ಈ ಯೋಧರೂ ಮೃತ್ಯುಮುಖಸಾಗಿ ಈ ಯುದ್ಧಕ್ಕೆ ಧಾವಿಸಿ, ಮೃತ್ಯುವಿನ ಬಾಯಿಗೆ ಪ್ರವೇಶಿಸುತ್ತಿರುವರು. ತಮ್ಮ ಗತಿ ತಮಗೇ ಅರಿವಿಲ್ಲದೆ, ಆ ಗತಿಯೇ ಅವರನ್ನು ಅತಿವೇಗವಾಗಿ ಕೊಂಡೊಯ್ಯುತ್ತಿದೆ. ಪತಂಗದ ಜೀವನವೂ ಕ್ಷಣಿಕ, ನಾಶವೂ ವೇಗ, ಶೀಘ್ರ.

**ಲೇಲಿಹ್ಯಸೇ ಗ್ರಸಮಾನಃ ಸಮಂತಾ-**
**ಲ್ಲೋಕಾನ್ ಸಮಗ್ರಾನ್ ವದನೈರ್ಜ್ವಲದ್ಭಿಃ ।**
**ತೇಜೋಭಿರಾಪೂರ್ಯ ಜಗತ್ ಸಮಗ್ರಂ**
**ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ ॥೩೦॥**

ಪುನಃ ವಿಷ್ಣು ಎಂದು ಸಂಭೋದನೆ. ನಿನ್ನ ಜ್ವಾಲಾಮಯವಾದ ವದನದಿಂದ, ಸಮಸ್ತ ಲೋಕಗಳನ್ನೂ ಸಮಗ್ರವಾಗಿ ಆಸ್ವಾದನ ಮಾಡುತ್ತಿದ್ದೀಯೆ. ನಿನ್ನ ತೇಜಸ್ಸು ಸಮಗ್ರ ಜಗತ್ತನ್ನೂ ಸಂಪೂರ್ಣವಾಗಿ ಹರಡಿ ಉಗ್ರವಾಗಿ ತಪಿಸುತ್ತಿದೆ.

ಭಗವಂತನ ನಾಲಿಗೆಯನ್ನು ಅಗ್ನಿಯಿಂದ ಆಹುತಿ ತೆಗೆದುಕೊಳ್ಳುವುದಕ್ಕಾಗಿ ಎದ್ದು ಆಡುವ ಜ್ವಾಲೆಗೆ ಹೋಲಿಸಿದೆ. ಮುಂಡಕೋಪನಿಷತ್ತಿನಲ್ಲಿ (೧, ೨, ೪) "ಸ್ಫುಲಿಂಗಿನೀ ವಿಶ್ವರೂಪೀ ಚ ದೇವೀ, ಲೇಲಾಯಮಾನಾ ಇತಿ ಸಪ್ತ ಜಿಹ್ವಾಃ ।" ಸಪ್ತಜಿಹ್ವಗಳೆಂದು, ಅಗ್ನಿಮುಖದಿಂದ ಹೊರಡುವ ಜ್ವಾಲೆಗೆ ಹೋಲಿಸಿದೆ. ಆ ನಾಲಿಗೆಯಲ್ಲಿಯೇ ಹವನ ಮಾಡುವ ವಸ್ತುಗಳನ್ನು ಚಪ್ಪರಿಸಿ ಆಸ್ವಾದನ ಮಾಡುತ್ತವೆಂದು ಭಾವ. "ಯದಾಲೇಲಾಯತೇಹ್ಯಾರ್ಚಿಃ ಸ್ಸಮಿದ್ಧೇಹವ್ಯವಾಹನೇ ॥" (ಮುಂ. ೧, ೨, ೨) ಎಂದು ಹೇಳಿರುವಂತೆ (Flickering tongues of flame) ಸಕಲ ಉತ್ಪತ್ತಿ ಸ್ಥಾನವನ್ನೂ ಅಗ್ನಿಯಿಂದ ಹೊರಡುವ ಕಿಡಿಗಳಿಗೆ ಹೋಲಿಸಿದೆ. ಬೃಹದಾರಣ್ಯದಲ್ಲಿ (೪, ೧, ೨೦) ಯಥಾಗ್ನೇಃ ಕ್ಷುದ್ರಾ ವಿಸ್ಫುಲಿಂಗಾ ವ್ಯುಚ್ಚರನ್ತ್ಯೇವ, ಮೇವಾ ಸ್ಮಾದಾತ್ಮನಃ ಸರ್ವೇ

ಪ್ರಾಣಾ ಸರ್ವೇಲೋಕಾಸ್ಸರ್ವೇ ದೇವಸ್ಸರ್ವಾಣಿ ಭೂತಾನಿವ್ಯುಚ್ಚಾರನ್ತೀ" ಅಗ್ನಿಯಿಂದ ಚಿಕ್ಕ (ಕ್ಷುದ್ರ ಬೆಲೆಯಿಲ್ಲದ ಸಣ್ಣದಾದ) ಕಿಡಿಗಳು ಹೊರಡು ವಂತೆ ಆತ್ಮನಿಂದ ಸರ್ವಪ್ರಾಣಿಗಳೂ, ಸರ್ವಲೋಕಗಳೂ, ಸರ್ವದೇವತೆ ಗಳೂ, ಸರ್ವಭೂತಗಳೂ ಹೊರಟುಬರುವವು ಎಂದಿದೆ.

ಸಮುದ್ರದಿಂದಲೇ ಹುಟ್ಟಿ ಸಮುದ್ರವನ್ನೇ ಸೇರುವ ನದಿಗಳಂತೆ, ಅಗ್ನಿಯಿಂದಲೇ ಹೊರಬಿದ್ದು ಅಗ್ನಿಗೇ ಸೇರುವ ಅಗ್ನಿಬಿಂದುಗಳು. ಸಮಸ್ತವನ್ನೂ ಆಹುತಿ ತೆಗೆದುಕೊಳ್ಳುವ ಅಗ್ನಿತೇಜಸ್ಸಿಗೆ, ತೇಜೋ ಮಯವಾದ ಮುಖದ ಹೋಲಿಕೆ. ಆ ಅಗ್ನಿಯಿಂದ ಹೊರಡುವ ಜ್ವಾಲೆಗೆ ಆಡುವ ನಾಲಿಗೆ ಹೋಲಿಕೆ. ಅಗ್ನಿಯು ಪ್ರಜ್ವಲಿಸುವಾಗ ಶಾಖವು ನಾಲ್ಕು ಕಡೆಗೂ ಪ್ರಸರಿಸಿ ಎಂತು ಉಷ್ಣದಿಂದ ತಾಪವನ್ನುಂಟು ಮಾಡುವುದೊಂದೋ ಅಂತೆಯೇ ಭಗವಂತನ ತೇಜಸ್ಸೂ ಜಗತ್ತನ್ನು ಸಂಪೂರ್ಣವಾಗಿ ಆವರಿಸಿ ತಪಿಸುತ್ತಿದೆ.

**ಆಖ್ಯಾಹಿ ಮೇ ಕೋ ಭವಾನುಗ್ರರೂಪೋ**
**ನಮೋಽಸ್ತು ತೇ ದೇವವರ ಪ್ರಸೀದ ।**
**ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ**
**ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್** ॥೩೧॥

ಹೇ ದೇವಶ್ರೇಷ್ಠನೇ "ಪ್ರಸೀದ ದೇವೇಶ ಜಗನ್ನಿವಾಸ" ಎನ್ನು ವಂತೆಯೇ "ನಮೋಸ್ತುತೇ ದೇವವರ ಪ್ರಸೀದ" ಪ್ರಸನ್ನನಾಗು. ಯಾವ ಪೂಜೆ, ವ್ರತಮಾಡಿದ ನಂತರವೂ ಮೂರಾವರ್ತಿ "ಪ್ರಸೀದ, ಪ್ರಸೀದ, ಪ್ರಸೀದ" ಎಂದು ಪ್ರಾರ್ಥಿಸುವಂತೆ, "ದೇವೇಶ ಜಗನ್ನಿವಾಸ, ದೇವವರ"ನನ್ನು (ಶ್ಲೋಕ ೨೫, ೩೧ ಮತ್ತು ೪೫ ರಲ್ಲಿ) ಅರ್ಜುನನು ಮೂರಾವರ್ತಿ "ಪ್ರಸೀದ"—ಪ್ರಸನ್ನನಾಗೆಂದು ಬೇಡಿಕೊಳ್ಳುತ್ತಾನೆ; ನಮಸ್ಕರಿಸಿ ಪ್ರಾರ್ಥಿಸುತ್ತಾನೆ. ಉಗ್ರರೂಪನಾದ ನೀನು ಯಾರೆಂದು ತಿಳಿಸಲು ಪ್ರಸನ್ನನಾಗೆಂದು. ನಿನ್ನ ಆದಿಯನ್ನೂ ತಿಳಿಯಲು ಇಚ್ಛೆ ಯುಳ್ಳವನಾಗಿದ್ದೇನೆ. ನಿನ್ನ ಪ್ರವರ್ತಿಯು ನನಗೆ ತಿಳಿಯದುದಾಗಿದೆ.

ಭಗವಂತನ "ಆದ್ಯಂ" "ಪ್ರವೃತ್ತಿಂ" ತಿಳಿದವರ್‍ಯಾರು? ತಿಳಿಯುಬಲ್ಲವರ್‍ಯಾರು?

ಈ ಅಧ್ಯಾಯದಲ್ಲಿ ವ್ಯಾಸರು ಸೊಗಸಾಗಿ, 'ಅರ್ಜುನ ಉವಾಚ' 'ಶ್ರೀಭಗವಾನ್ ಉವಾಚ' 'ಸಂಜಯ ಉವಾಚ' ಎಂದು ವಿಶ್ವರೂಪ ದರ್ಶನದ ಚಿತ್ರವನ್ನು ವಾಕ್ಚಿತ್ರ ರೂಪವಾಗಿ ರಚಿಸಿದ್ದಾರೆ. ಅರ್ಜುನನ ಪ್ರಶ್ನೆಗಳೂ, ಪ್ರಾರ್ಥನೆಗಳು, ಭಗವಂತನ ಉತ್ತರ ವಿವರಣೆಗಳೂ, ಸಂಜಯನ ದೃಶ್ಯ ವಿಸ್ತರಣೆ ಎಲ್ಲಾ ಒಂದರ ಮಧ್ಯೆ ಒಂದು ಹೆಣೆದು, ವಿಶ್ವರೂಪವನ್ನು ಓದುಗರ ಕಣ್ಣಿಗೆ ದಿವ್ಯವಾಗಿ ಕಟ್ಟಿದ್ದಾರೆ, ಭಗವಾನ್ ವ್ಯಾಸರು. ಈಗ ಪುನಃ ಭಗವಾನ್ ಪಾರ್ಥಸಾರಥಿಯು, ಅಭಯ ಹಸ್ತವನ್ನಿೀಡಿ, ನಿಮಿತ್ತಮಾತ್ರನಾಗಿರುವಂತೆ ಅರ್ಜುನನಿಗೆ ಹೇಳಿ "ಯುದ್ಧ್ಯಸ್ವ ಜೇತಾಸಿ ರಣೇನಪತ್ನಾನ್" ಯುದ್ಧಮಾಡಿ, ರಣದಲ್ಲಿ ಶತೃಗಳನ್ನು ಜಯಿಸು ಎಂದು ಆಜ್ಞೆಮಾಡಿದ್ದಾನೆ.

**ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ**
**ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ ।**
**ಋತೇಽಪಿ ತ್ವಾಂ ನ ಭವಿಷ್ಯಂತಿ ಸರ್ವೇ**
**ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ** ॥೩೨॥

"ನೀನು ಯಾರು" ಎಂದು ಕೇಳಿದ ಅರ್ಜುನನ ಪ್ರಶ್ನೆಗೆ ಭಗವಂತನ ಉತ್ತರ. ನಾನು ಕಾಲಸ್ವರೂಪನು. ಸಮಸ್ತ ಲೋಕವನ್ನೂ ನಾಶ ಮಾಡಲು ನಾನು ಹೀಗೆ ವೃದ್ಧಿಹೊಂದಿ ಲೋಕಸಂಹಾರದಲ್ಲಿ ಪ್ರವರ್ತ ನಾಗಿದ್ದೇನೆ. — ಎಂದು ತನ್ನ "ಪ್ರವೃತ್ತಿಂ" ತಿಳಿಸುತ್ತಾನೆ. ನೀನು ಪ್ರಯತ್ನಮಾಡದಿದ್ದರೂ, ನಿನ್ನ ಪ್ರತಿಕಕ್ಷಿ ಸೈನ್ಯದಲ್ಲಿ ಯುದ್ಧಮಾಡಲು ನಿಂತಿರುವವರ್‍ಯಾರೂ ಉಳಿಯುವುದಿಲ್ಲಾ.

ವಿಧಾಯಕ ಕಾರ್ಯಕ್ಕೆ ಸಹಾಯಕವಾಗಿ ವಿನಾಶಕಾರ್ಯ ಅಗತ್ಯ. ಬೆಳೆ ಕಾಪಾಡಬೇಕಾದರೆ ಕಳೆಕೀಳಬೇಕು. ಧರ್ಮವನ್ನು ಸ್ಥಾಪನೆ ಮಾಡ ಬೇಕಾದರೆ ಅಧರ್ಮವನ್ನು ನಿರ್ಮೂಲ ಮಾಡಬೇಕು. ಅದಕ್ಕಾಗಿ ಕಾಲಸ್ವರೂಪನಾದ ಪರಮಾತ್ಮನು ಪ್ರವರ್ತನಾಗಿದ್ದಾನೆ. ಆ ಕಾರ್ಯಕ್ಕೆ

ತೊಡಗಲು ತಕ್ಕ ಸ್ವರೂಪವನ್ನು ಸಹ ತೊಟ್ಟಿದ್ದಾನೆ. ಅಧರ್ಮ ಪ್ರವೃತ್ತ ರಾದ ಎದುರುಪಕ್ಷದವರನ್ನು ನಾಶಮಾಡಲು ಕಂಕಣಬದ್ಧನಾಗಿರುವ ಭಗವಂತನಿಂದ, ಅರ್ಜುನನು ತನ್ನ ಕಾರ್ಯ ಪ್ರವೃತ್ತನಾಗಿ ಸಹಾಯ ಮಾಡದಿದ್ದರೂ, ಯಾರೂ ಉಳಿಯುವಹಾಗಿಲ್ಲಾ. ಪರಮಾತ್ಮನ ಸಂಕಲ್ಪದಲ್ಲಿ ಇವರು ಆಗಲೇ ಮೃತರು.

**ತಸ್ಮಾತ್ತ್ವಮುತ್ತಿಷ್ಠ ಯಶೋ ಲಭಸ್ವ**
**ಜಿತ್ವಾ ಶತ್ರೂನ್ ಭುಂಕ್ಷ್ವ ರಾಜ್ಯಂ ಸಮೃದ್ಧಮ್ ।**
**ಮಯೈವೈತೇ ನಿಹತಾಃ ಪೂರ್ವಮೇವ**
**ನಿಮಿತ್ತಮಾತ್ರಂ ಭವ ಸವ್ಯಸಾಚಿನ್** ॥೩೩॥

ಸವ್ಯಸಾಚಿನ್–ಎಡತೋಳಿನಲ್ಲಿ ಧನುರ್ಬಾಣ ತೊಟ್ಟವನೇ, ಆದ್ದರಿಂದ ಉತ್ತಿಷ್ಠ, ಏಳು. ಎರಡು ಪಕ್ಷದವರ್‍ಯಾರೂ ಎಂತೂ ಉಳಿಯುವುದಿಲ್ಲಾ. ನೀನೇ ಕ್ಷಾತ್ರಧರ್ಮವಾದ ಯುದ್ಧದಲ್ಲಿ ಆ ಶತ್ರುಗಳನ್ನು ಗೆದ್ದು ಯಶಸ್ಸನ್ನು ಗಳಿಸು ಸಮೃದ್ಧಿಯಾಗಿ ರಾಜ್ಯವನ್ನನುಭವಿಸು. ನನ್ನಿಂದಲೇ ಇವರೆಲ್ಲರೂ ಆಗಲೇ (ಪೂರ್ವಮೇವ) ಹತರಾಗಿದ್ದಾರೆ. ನೀನು ನಿಮಿತ್ತ ಮಾತ್ರನಾಗಿ ಇದ್ದು ಯುದ್ಧವನ್ನು ಮಾಡು.

ಕ್ಷತ್ರಿಯನಿಗೆ ಸ್ವಾಭಾವಿಕವಾಗಿ ಕೆರಳಿಸುವ ಯುದ್ಧ, ಶತ್ರುಗಳ ಮೇಲೆ ಜಯ, ಯಶಸ್ಸು, ರಾಜ್ಯಾನುಭವ ಮುಂತಾದುವನ್ನೇ ಅರ್ಜುನ ನಿಗೆ ಮುಂದಿಟ್ಟು ಅವನ ಕ್ಷಾತ್ರಧರ್ಮವನ್ನು ಚುಚ್ಚಿ ಎಬ್ಬಿಸುತ್ತಾನೆ ಸ್ವಾಮಿ. "ಗೆದ್ದರೆ ಹಾದಿ"ಯನ್ನು ತೋರುತ್ತಾನೆ. ಯುದ್ಧವೇನು ವೃಥ ವ್ಯರ್ಥವಲ್ಲ. ಬೇಕಾದಷ್ಟು ಫಲದಾಯಿನಿ.

ನಾನು ನನ್ನ ಗುರುಗಳು, ನನ್ನ ರಕ್ತ ಬಂಧುಗಳನ್ನು ಕೊಲ್ಲಲಾರೆ ನೆಂದು ನಿನ್ನ ಶಂಕೆಯುಷ್ಟೆ; ಆಗಲೇ ಪೂರ್ವದಲ್ಲೇ ಇವರೆಲ್ಲರೂ ಹತರಾಗಿ ಬಿಟ್ಟಿದ್ದಾರೆ. ಕೊಲ್ಲೋರು ಯಾರು? ನೀನು ನಿಮಿತ್ತ ಮಾತ್ರ ಇರು. ನಿನ್ನ ಕರ್ತವ್ಯವನ್ನು ನೀನು ಪಾಲಿಸು. ೨ ಅಧ್ಯಾಯದ ೧೯ ನೇ ಶ್ಲೋಕ (ಕಠ ೧, ೨, ೧೮) ರಲ್ಲಿ ಆಗಲೇ ಹೇಳಿರುವಂತೆ "ನಾಯಂಹಂತಿ ನಹ ನ್ಯತೇ" ಕೊಲ್ಲುವನೂ ಇಲ್ಲ, ಕೊಲ್ಲಲ್ಪಡುವನೂ ಇಲ್ಲ–ಇದೇ ಸ್ವರೂ

ಪಾರ್ಥ. ಕರ್ತರಿ, ಕರ್ಮಣಿ, ಹೇತು, (ಪ್ರೇರಕ) ಮೂರೂ ಆತ್ಮಕ್ಕೆ ಅನ್ವಯಿಸುವುದಿಲ್ಲಾ. "ಅಜೋ, ನಿತ್ಯಃ ಶಾಶ್ವತೋಽಯಂ ಪುರಾಣೋ ನಹನ್ಯತೇಹನ್ಯಮಾನೇ ಶರೀರೆ" ಎಂದು ೨೦ ನೇ ಶ್ಲೋಕದಲ್ಲಿ ಸಾರಿರುವಂತೆ, ಶರೀರ ಸತ್ತರೂ ಆತ್ಮ ಸಾಯುವುದಿಲ್ಲಾ. ಆತ್ಮನು ಅಜ, ನಿತ್ಯ, ಶಾಶ್ವತ, ಪುರಾಣ. 'ನೈನಂ ಛಿಂದಂತಿಶಸ್ತ್ರಾಣಿ' 'ಅಚ್ಛೇದ್ಯೋಯಂ' ಮುಂತಾದ ಮುಂದಿನ ಶ್ಲೋಕಗಳಿಂದ ಆತ್ಮನ ಅಮರತ್ವವನ್ನು ಆಗಲೇ ಸ್ವಾಮಿ ವಿವರಿಸಿದ್ದಾನೆ. ಆಗಲೇ ಶ್ಲೋ ೩೭ ರಲ್ಲಿ "ತಸ್ಮಾದುತ್ತಿಷ್ಠ" ಎಂದು ಯುದ್ಧವನ್ನು ನಿಶ್ಚಯಿಸೆಂದು ಬೋಧೆ ಮಾಡುತ್ತಾ "ಹತೋವಾಪ್ರಾಪ್ಸ್ಯಸಿ ಸ್ವರ್ಗಂ, ಜಿತ್ವಾವಾಭೋಕ್ಷ್ಯಸೇ ಮಹೀಂ" ಎಂಬ ಸೂತ್ರವನ್ನು ಮುಂದಿಟ್ಟಿದ್ದಾನೆ. ಆದರೆ ಈಗ "ಹತೋವಾ" ಮಾತೇ ಇಲ್ಲಾ. ಎಲ್ಲಾ ಸ್ವಾಮಿಯ ಕೃತ ಸಂಕಲ್ಪ. ಆಗಲೇ ಶತೃಗಳನ್ನೆಲ್ಲಾ ಸ್ವಾಮಿ ಪೂರ್ವದಲ್ಲೇ ನಾಶಮಾಡಿಬಿಟ್ಟಿದ್ದಾನೆ. ಆದುದರಿಂದಲೇ ಈಗ "ತಸ್ಮಾತ್ತ್ವಮುತ್ತಿಷ್ಠ" ಎಂದು ಎಬ್ಬಿಸುವುದು, ಶತೃಜಯ, ಯಶೋಲಾಭ, ಸಮೃದ್ಧಿ ರಾಜ್ಯಾನುಭವ ಇವೇ ಉಳಿದಿರುವುದು. ಎದುರಾಳಿಗಳ ದುಷ್ಟತನವೇ ಅವರನ್ನು ಆಗಲೇ "ವಿನಾಶಾಯಚದುಷ್ಕೃತಾಂ" ಎನ್ನುವ ಸ್ವಾಮಿಯ ಶಪಥದ ಪ್ರಕಾರ ನಾಶ ಮಾಡಿದೆ. ಈಗ ಅರ್ಜುನನು ನಿಮಿತ್ತ ಮಾತ್ರಾ ಏಳಬೇಕು ಯುದ್ಧ ಮಾಡಬೇಕು, ಶತೃ ಜಯಿಸಬೇಕು, ರಾಜ್ಯವಾಳಬೇಕು. ಸ್ವಾಮಿಯು ನಿಯಮಿಸಿದ ಕಡೆ ಅವಅವನ ಕರ್ತವ್ಯ ಕಮಕ್ಕಿಮಕ್ಕೆನ್ನದೆ ಮಾಡಬೇಕು.

ಮಹದಾತ್ಮನ ಇಹಕಾರ್ಯವು ನಡೆಯುತ್ತಾ ಹೋಗುತ್ತದೆ. ಎಲ್ಲರೂ. ಆ ಮಹಾ ಸಂಕಲ್ಪಕ್ಕೆ ಕಿಂಚಿತ್ಸೇವೆಯೆಸಗುತ್ತಾ ತಾವು ಮಾಡುವುದರ ಫಲಾಫಲಗಳು ಅಲ್ಲಿ ವ್ಯಕ್ತವಾಗುವಂತೆ ನಡೆಯುತ್ತೇವೆ. ಯಾವಯಃ ಕಿಂಚಿತ್ ಒಬ್ಬನು ತಾನು ತನ್ನ ಭಾಗದ ಕಾರ್ಯವನ್ನು ಮಾಡದೆ ತಟಸ್ಥನಾದರೆ, ಉದಾಸೀನನಾದರೆ ಲೋಕವ್ಯಾಪಾರವು ನಿಲ್ಲುವುದಿಲ್ಲ. ನಿಯಮಿತ ಮಾರ್ಗದಲ್ಲೇ ಆ ಮಹಾಯಂತ್ರವು ನಡೆವೇ ನಡೆಯುವುದು.

ಅವನ ಕಾರ್ಯ ನಡೆಸುವುದಕ್ಕೆ ನಾವು ನಿಮಿತ್ತ ಮಾತ್ರ. ಟಪಾಲು ಜವಾನ ಒಬ್ಬನಿಗೆ ಹಣ ತಂದುಕೊಡುತ್ತಾನೆ. ಅವನೇನು ಅವನ ಹಣ ಕೊಡುವುದಿಲ್ಲ. ಅವನಿಗೆ ಸಲ್ಲಬೇಕಾದುದು, ಅವನಿಗೆ ಯಾರೋ ಕಳುಹಿದುದು ತಂದುಕೊಡುತ್ತಾನೆ. ತಂತಿ ಸವಾರ ಒಂದು ದುರ್ಮರಣದ ವಾರ್ತೆ ಒಬ್ಬನಿಗೆ ತಲುಪಿಸುತ್ತಾನೆ. ಅವನ ಸಂಕಟಕ್ಕೆ ಆ ತಂತಿ ತಂದುಕೊಟ್ಟವನು ಕಾರಣನಲ್ಲ. ಅವರವರಿಗೆ ಸಲ್ಲಬೇಕಾದ ಅವರವರು ಅನುಭವಿಸಬೇಕಾದ ಕಷ್ಟಸುಖಗಳಿವೆ. ಇವೆಲ್ಲಾ ಅವರವರ ಕರ್ಮಬಂಧವಾಗಿ ನಿರ್ಧರವಾಗಿದೆ. ಅವು ಸಂಭವಿಸಿಯೇ ಸಂಭವಿಸುತ್ತವೆ. ಅದಕ್ಕೆ ಯಾವನಾದರೂ ನಿಮಿತ್ತ ಮಾತ್ರ. ನಮ್ಮ ಕಷ್ಟ ಸುಖಗಳನ್ನು ಯಾರೋ ನಮಗೆ ಹೊರಿಸಿದರೆಂದೂ, ನಮ್ಮ ಸುಖದುಃಖಗಳಿಗೆ ಇತರರು ಕಾರಣರೆಂದೂ ನಾವು ಭಾವಿಸುವುದು ಸರಿಯಲ್ಲಾ. ಯಾರಿಂದವು ಉಂಟಾಗಿದ್ದರೂ ಅವರು ನಿಮಿತ್ತ ಕಾರಣರಷ್ಟೇ. ನಮ್ಮ ಆಗುಹೋಗುಗಳಿಗೆ ನಾವೇ ಕಾರಣರು. "ಆತ್ಮೈವಹ್ಯಾತ್ಮನೋಬಂಧು, ಆತ್ಮೈವಹ್ಯಾತ್ಮನೋರಿಪುಃ" ಎಂದು ಸ್ವಾಮಿ ಆಗಲೇ ಹೇಳಿದ್ದಾನೆ. ಶತೃ ಹೊರಗಿನವ ಕೊಲ್ಲುವನೂ, ಮಿತ್ರ ರಕ್ಷಿಸುವನೂ ನಿಮಿತ್ತ ಮಾತ್ರಾ. ನಮ್ಮ ಮರಣವನ್ನು ನಮ್ಮ ಜೀವನಮಾರ್ಗದಿಂದ ನಾವೇ ಸಾಧಿಸಿದ್ದೇವೆ. ನಮ್ಮ ಜೀವನದ ಕ್ರಮವನ್ನನುಸರಿಸಿ, ಕೆಲವು ಸಾರಿ ನಮಗೆ ಗೋಚರವಾಗದ ದೂರ ಕಾರಣಗಳಿಂದ ನಾವೇ ಕಲ್ಪಿಸಿಕೊಂಡಂತೆ ಮರಣ ಸಿದ್ಧವಾಗುತ್ತೆ. ಅದಕ್ಕೆ ಯಾರೂ ಕಾರಣರಲ್ಲ. ಯಾರಾದರೂ ಕಾರಣರೆಂದು ಭಾವಿಸಿದರೆ ಅವರು ನಿಮಿತ್ತ ಮಾತ್ರಾ.

ಈ ಸಂದರ್ಭದಲ್ಲೂ ಶಂಕೆಯಿಲ್ಲದೆ ನಿಮಿತ್ತ ಮಾತ್ರನಾಗಿರುವಂತೆ ತನ್ನ ಕರ್ತವ್ಯವನ್ನು ತಾನು ತೆಗಳದೆ ನಿರ್ವಹಿಸುವಂತೆ ಸ್ವಾಮಿ ಅರ್ಜುನನಿಗೆ ಅಪ್ಪಣೆ ಕೊಡಿಸಿದ್ದಾನೆ.

**ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ**
**ಕರ್ಣಂ ತಥಾನ್ಯಾನಪಿ ಯೋಧವೀರಾನ್ ।**

ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ
ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ ॥೩೪॥

ದ್ರೋಣ, ಭೀಷ್ಮ, ಜಯದ್ರಥ, ಕರ್ಣ ಇತರರೆಲ್ಲ ಯುದ್ಧವೀರರನ್ನೂ ನಾನೇ ಹತಮಾಡಿದ್ದೇನೆ. ನಿನ್ನ ವ್ಯಥೆಯನ್ನು ಬಿಡು, ಯುದ್ಧ ಮಾಡು, ರಣದಲ್ಲಿ ಶತೃಗಳನ್ನು ಗೆಲ್ಲುವೆ. ಯಾವ ಯಾವ ವೀರರನ್ನು ಅರ್ಜುನನು ತಾನು ಯುದ್ಧದಲ್ಲಿ ಗೆಲ್ಲುವುದು ಅಶಕ್ಯವೆಂದರಿತಿದ್ದನೋ ಆ ಶತೃಗಳನ್ನು ಸ್ವಾಮಿ ಆಗಲೇ ಹತಮಾಡಿದ್ದಾನೆ. ದ್ರೋಣನಾದರೋ ಧನುರ್ವೇದಾಚಾರ್ಯ, ದಿವ್ಯಾಸ್ತ್ರಸಂಪನ್ನ, ತನಗೆ ಧನುರ್ವಿದ್ಯೆ ಹೇಳಿಕೊಟ್ಟ ವಿಶೇಷ ಗೌರವ ಗುರು. ಭೀಷ್ಮನು ಸ್ವಚ್ಛಂದ ಮೃತ್ಯುದಿವ್ಯಾಸ್ತ್ರ ಸಂಪನ್ನ, ಪರಶುರಾಮನೊಡನೆ ದ್ವಂದ್ವಯುದ್ಧ ಮಾಡಿದವ. ಜಯದ್ರಥನ ತಂದೆ ತಪಶ್ಶಕ್ತಿಯಿಂದ ತನ್ನ ಮಗನ ತಲೆ ಭೂಮಿಯ ಮೇಲೆ ಬೀಳದಂತೆ ವರಪಡೆದಿದ್ದ. ಕರ್ಣನು ವಾಸವದತ್ತಶಕ್ತಿ ಅಮೋಘ ಸಂಪನ್ನ ಸೂರ್ಯಪುತ್ರ. ಇಂತಹ ವೀರಾಗ್ರೇಸರರನ್ನು ಎಂತು ಗೆಲ್ಲಬಹುದೆಂಬ ಶಂಕೆ ಬೇಡಾ. ಇಂಥಾ ವೀರರನ್ನು ಕೊಲ್ಲುವುದೆಂತೆಂಬ ವ್ಯಥೆ ಬೇಡಾ. ಅವರೆಲ್ಲರೂ ಆಗಲೇ ಹತರಾಗಿದ್ದಾರೆ. ಅವರ ಇಹ ಜನ್ಮ ಕಾರ್ಯ ಮುಗಿದಿದೆ. ಅವರನ್ನು ಇಹದಿಂದ ಮುಕ್ತಿ ಮಾಡಲು ಸ್ವಾಮಿಯಾಗಲೇ ನಿರ್ಧರಿಸಿದ್ದಾನೆ. ಸ್ವಾಮಿಯ ಮಹಾಯಂತ್ರದಲ್ಲಿ ತನ್ನ ತನ್ನ ಸ್ಥಾನದಲ್ಲಿ ತನ್ನಲ್ಪ ಕಾರ್ಯವನ್ನು ಮಾಡುವ ಸಣ್ಣ ಚಕ್ರಗಳು ಮಳೆಗಳು ಇತರ ಭಾಗಗಳು ನಾವು. ಆ ಚಕ್ರ ಸವೆದರೆ, ಮಳೆ ಅಳ್ಳಕವಾದರೆ ಸ್ವಾಮಿ, ಅದನ್ನು ತೆಗೆದುಹಾಕಿ, ಅಲ್ಲಿಗೆ ಬೇರೆ ಜೋಡಿಸಿ ಮಹಾಯಂತ್ರ ನಡೆಸುವನು. ಈ ಮಹಾವೀರರ ಇಹ ಕಾರ್ಯ ಮುಗಿದಿದೆ. ಇವರಿರವು ಇನ್ನು ಆ ದುಷ್ಟ ದುರ್ಯೋಧನನಿಗೆ ನೆರವಾಗಿ ಧರ್ಮಕ್ಕಡ್ಡಿಯಾಗಿದೆಯಷ್ಟೆ. ಆದುದರಿಂದ ಇವರನ್ನು ಪರಮಾತ್ಮ ಆಗಲೇ ಧರ್ಮಮಾರ್ಗಕ್ಕೆ ಅಡ್ಡಿ ಬರದಂತೆ ತೊಡೆದುಹಾಕಿದ್ದಾನೆ. ಇವರಾಯುಸ್ಸು ಮುಗಿಯಿತು. ನಿಮಿತ್ತ ಮಾತ್ರ ಅರ್ಜುನ ಯುದ್ಧಮಾಡಿ ಕೊಲ್ಲಬೇಕಷ್ಟೆ.

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ —

**ಏತಚ್ಛ್ರುತ್ವಾ ವಚನಂ ಕೇಶವಸ್ಯ**
**ಕೃತಾಂಜಲಿರ್ವೇಪಮಾನಃ ಕಿರೀಟೀ ।**
**ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ**
**ಸಗದ್ಗದಂ ಭೀತಭೀತಃ ಪ್ರಣಮ್ಯ** ॥೩೫॥

ಕೇಶವನ ಈ ವಚನವನ್ನು ಕೇಳಿ, ಅರ್ಜುನನು (ಕಿರೀಟಿ) ಭಯದಿಂದ ಕೂಡಿ, ಕೈಜೋಡಿಸಿ ನಮಸ್ಕಾರಮಾಡುತ್ತ ಭಕ್ತಿಯಿಂದ ಗದ್ಗದ ಸ್ವರದಿಂದ ಈ ರೀತಿ ನುಡಿದನು.

ಆಶೀರ್ವದಿಸಿ, ಸ್ವಾಮಿ. 'ಯುದ್ಧದಲ್ಲಿ ಶತ್ರುಗಳನ್ನು ಜಯಿಸಿ ಸಮೃದ್ಧಿಯಾದ ರಾಜ್ಯವನ್ನನುಭವಿಸು' ಎಂದು ಅರ್ಜುನನಿಗೆ ಹೇಳುತ್ತಲೇ ಸಂಜಯನು ಅರ್ಜುನನಿಗೆ ಕಿರೀಟಧಾರಣೆಯನ್ನು ಮಾಡಿಬಿಟ್ಟನು; ಕಿರೀಟಿ ಎಂದಿದ್ದಾನೆ. ಆದರೂ ಆ ಮಹತ್ತಾದ ವಿಶ್ವರೂಪದರ್ಶನ ನೋಡಿದ ಮಹಾವೀರ ರಾಜನಾದ ಮಿತ್ರ ಅದರಲ್ಲೇ ತಲ್ಲೀನನಾಗಿ, ಪರವಶನಾಗಿಬಿಟ್ಟಿದ್ದಾನೆ. ಸ್ವಾಮಿಯ ವಚನ ಕೇಳಿ, ಯಥಾರ್ಥವನ್ನು ನೋಡಿ, ಭಕ್ತಿತುಂಬಿದೆ, ಗೌರವ ಹೆಚ್ಚಿದೆ. ತಾನೆಷ್ಟರವನೆಂಬುವ ವಿನಯ ಬಂದಿದೆ. ಅದರ ಪ್ರದರ್ಶನವಾಗಿ ಕೈಜೋಡಿಸಿ ದೇವನಿಗೆ ನಮಸ್ಕಾರಮಾಡಿದ್ದಾನೆ. ತನ್ನಲ್ಲಾಗುತ್ತಿರುವ ಪರಿಪಾಕವನ್ನು ಹೇಳಿಕೊಳ್ಳಲು ಪ್ರಪತ್ತಿಯಿಂದ ಸ್ವರವೇ ಹೊರಡದು. ತಡೆದು ತಡೆದು ಬರುವ ವಿನಯ ಭಯ ಮಾತುಗಳು. ನಿಧಾನವಾದ, ಮೆತ್ತನೆಯ ಸ್ವರ. ಇವು ಅರ್ಜುನನ ಪೂರ್ಣಶರಣಾಗತಿಯನ್ನು ತೋರುತ್ತವೆ. ಮುಂಚಿನಂತೆ ನನ್ನವರು, ನಾನು ಯುದ್ಧಮಾಡುವುದಿಲ್ಲಾ ಎಂಬ ಅಹಂ ಮಮ ಭಾವನೆಗಳು ಅಳಿದು ಕೇವಲ ವಿನಯ ಭಕ್ತಿ ಆಶ್ರಯ ಭಾವ ಆವರಿಸಿ, ಮಹದಾತ್ಮನಲ್ಲಿ ಲೀನವಾಗಿಬಿಟ್ಟಿದ್ದಾನೆ. ಭವಿಷ್ಯವನ್ನೆಲ್ಲಾ, ಯುದ್ಧದ ಪರಿಣಾಮವೆಲ್ಲಾ ಸ್ವಾಮಿ ತೋರಿ, ಜಯದ ಅಭಯವನ್ನು ನೀಡಿ ಕೃತಕೃತ್ಯನನ್ನು ಮಾಡಿರುವ ಸ್ವಾಮಿಗೆ ಕೃತಜ್ಞತೆಯಿಂದ ಅಂಜಲಿಬದ್ಧನಾಗಿ ಪ್ರಣಾಮಮಾಡುತ್ತಾನೆ. ಮೋಹವೆಲ್ಲಾ

ಕಳೆದು ಏನುಹೇಳಿದರೂ ಮಾಡುವೆನೆಂಬ ಶರಣು ಭಾವ. ಈ ಭಕ್ತಿ ಭಾವದಿಂದ ಏನುತಾನೆ ಅಸಾಧ್ಯ. ಏನನ್ನಾದರೂ ಜಯಿಸಬಲ್ಲ, ಯಾವ ಶತ್ರುವನ್ನು ಬೇಕಾದರೂ ಕೊಲ್ಲಬಲ್ಲ, ಯಾವ ನಿಯಮಿಸಿದ ಪರಮಾತ್ಮ ಕಾರ್ಯವನ್ನಾದರೂ ಮಾಡಬಲ್ಲ. "ನಿಮಿತ್ತಮಾತ್ರ ನಾನು. ಎಲ್ಲಾ ಸ್ವಾಮಿಯು ಮಾಡುತ್ತಾನೆ" ಎಂಬ ನಿರ್ಧಾರ ಅಂತರ್ಗತವಾಗಿಬಿಟ್ಟಿದೆ. ಈ ಭಾವವನ್ನು ಸಂಜಯನು ಸೊಗಸಾಗಿ ಚಿತ್ರಿಸಿದ್ದಾನೆ.

**ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ**
**ಜಗತ್ ಪ್ರಹೃಷ್ಯತ್ಯನುರಜ್ಯತೇ ಚ ।**
**ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ**
**ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ ॥೩೬॥**

ಅರ್ಜುನನು ಸ್ವಾಮಿಯ ಪವಿತ್ರ ಸನ್ನಿಧಿಯಲ್ಲಿ ಕೈಜೋಡಿಸಿ ನಮಸ್ಕಾರಮಾಡಿ, ಗದ್ಗದ ಸ್ವರದಿಂದ ಹೇಳುತ್ತಾನೆ. ಈ ಶ್ಲೋಕಗಳಲ್ಲಿ ಉಪಯೋಗಿಸಿರುವ ಪದಗಳು ಸಂಯುಕ್ತಾಕ್ಷರಗಳು ಮಹಾ ಪ್ರಾಣಗಳು ಧಾರಾಳವಾಗಿ ನೀರು ಕುಡಿದಂತೆ ಹೇಳಲಾಗುವುದಿಲ್ಲಾ. "ಸ್ಥಾನೇ.... ಸಂಘ" (ಶುರು ಕೊನೆ ಮಹಾಪ್ರಾಣ) ಎನ್ನುವುದನ್ನು ಭರಭರ ಎಂದು ಜಾಗ್ರತೆಯಾಗಿ ಹೇಳಿ ನೋಡಿ. ನಿಧಾನವಾಗಿ ಬಿಡಿಸಿ ಬಿಡಿಸಿಯೇ ಹೇಳ ಬೇಕು. ಅರ್ಜುನನ ಗದ್ಗದಸ್ವರಕ್ಕನುರೂಪವಾದ ರಚನೆ ಈ ಪ್ರಾರ್ಥನೆ. ಕವಿಸ್ವಾರಸ್ಯ, ಗ್ರಂಥ ರಚನಾ ಚಮತ್ಕಾರ ತೋರುತ್ತಾನೆ. ಭಾವಕ್ಕನು ಗುಣವಾಗಿ ಪದಗಳೂ, ಅಕ್ಷರ, ಅಂತರ್ಗತವಾದರ್ಥವೂ ಇವೆ.

ನಿನ್ನ ಮಹಾತ್ಮ್ಯ ಸಂಕೀರ್ತನದಿಂದ ಹೃದಯದಲ್ಲಿ ಹರ್ಷವಾಗುವ, ಯಾರು ಜಗತ್ತನ್ನು ಪ್ರಹರ್ಷಮಾಡುತ್ತಾನೋ–ಆ ಹೃಷೀಕೇಶ, ಅಲ್ಲದೇ ಆ ಪ್ರಕೀರ್ತನದಿಂದ ಅನುರಾಗ (ಅನುರಜ್ಯತೇ) ಭಕ್ತಿ–ಪರಮಾತ್ಮನಲ್ಲಿ ಅನನ್ಯ ಅಮಿತಭಕ್ತಿ ನಾರದಭಕ್ತಿ ಸೂತ್ರದಲ್ಲಿ ಹೇಳಿರುವಂತೆ ಸ್ವಾಮಿಯ ಲ್ಲೈಕ್ಯ ಪ್ರೇಮ–ಉಂಟಾಗುತ್ತದೆ. ಸರ್ವಾತ್ಮನಾದ ಈಶ್ವರನಲ್ಲಿ, ಸರ್ವ ಭೂತ ಸುಹೃತ್ ಚೇತನವು ಯಾರ ಮಹತ್ತಾದ ಸಂಕೀರ್ತನದಿಂದ

ಅನುರಾಗ ಉತ್ಪನ್ನವಾಗುತ್ತದೆಯೋ ಆ ಹೃಷೀಕೇಶನೆಂದು ಸಂಭೋಧನೆ. ಆ ಮಹಾತ್ಮ್ಯದಿಂದ ಭೀತಿಗೊಂಡು ರಾಕ್ಷಸರು ದಿಕ್ಕಾಪಾಲಾಗಿ ಓಡುತ್ತಿರುವರು, ಸಮಸ್ತರೂ ನಮಸ್ಕರಿಸುತ್ತಿರುವವರು, ಅದರಲ್ಲೂ ಸಿದ್ಧ ಸಮುದಾಯವು (ಕಪಿಲಾದಿಯಾಗಿ) ವಂದಿಸುತ್ತಿರುವುದು. ಇದು ನ್ಯಾಯವಾಗಿಯೇ ಇದೆ. ಈ ಹೃಷೀಕೇಶನ ಸಂದರ್ಶನದಿಂದ ಭೀತರಾದ ರಾಕ್ಷಸರು, ಇವನ ಸಹವಾಸ ನಾಕಪ್ಪಾ, ಇವನಿಗೆ ನಮಸ್ಕಾರ ಎಂದು, ಶಿಕ್ಷಾಭೀತರಾಗಿ ಔಸರದಲ್ಲಿ ದಿಕ್ಕೆಟ್ಟು, ಚದುರಿ ಓಡುತ್ತಿರುವರು. ಅದೇ ಸಂದರ್ಶನದಿಂದ ಹರ್ಷ ಅನುರಾಗಯುಕ್ತರಾದ ದಿವ್ಯಜ್ಞಾನಿಗಳಾದ ಕಪಿಲಾಚಾರ್ಯ ಮುಂತಾದವರು ನಮಸ್ಕಾರಮಾಡುತ್ತಾ ಸಾನ್ನಿಧ್ಯದಲ್ಲೆ, ಪರಮಾತ್ಮನ ಸ್ಥಾನದಲ್ಲೆ ಇರುವರು. ಇದು ಯುಕ್ತವೇ–ಎರಡೂ ಏಕಕಾಲದಲ್ಲಿ ಸಂದರ್ಶನ ಮಾತ್ರದಿಂದ ನಡೆವುದು.

ಇದೇ "ಪರಿತ್ರಾಣಾಯ ಸಾಧೂನಾಂ, ವಿನಾಶಾಯ ಚ ದುಷ್ಕೃತಾಂ" ಅವ, ಸ್ವಾಮಿ ನಿಂತರಾಯಿತು, ಅವನಾಸರೆಯಲ್ಲಿ, ಅವನ ದಿವ್ಯ ಸಾನಿಧ್ಯದಲ್ಲಿ ಪ್ರಣಿತರಾದ ಸಾಧುಗಳು ರಕ್ಷಣೆಯನ್ನು ಪಡೆವರು. ಆ ಸ್ವಾಮಿಯ ಬರುವಿಕೆಯಿಂದಲೇ, ಇರುವಿಕೆಯಿಂದಲೇ ದುಷ್ಟರು ಭೀತಿಯಿಂದ ಆ ಜಾಗದಿಂದ ದಿಕ್ಕೆಟ್ಟು ಪಲಾಯನಮಾಡುವರು. ಇದರಿಂದಲೇ ಧರ್ಮಸ್ಥಾಪನೆ. ಮಹಾತ್ಮನ ಇರುವಿಕೆಯೇ, ಸಾನಿಧ್ಯವೇ ಒಂದು ರಕ್ಷಣೆ ಆ ಸಾನಿಧ್ಯದಲ್ಲಿ ದುಷ್ಟರು ಕೂಡಾ ಹೆದರಿ ಕೆಡಕನ್ನು ಮಾಡಲಾರರು. ಅರಣ್ಯಮಧ್ಯದಲ್ಲಿ ಮಹಾ ಸಾಧು ಸಂತರ ಸಾನಿಧ್ಯದಲ್ಲಿ ಹೇಗೆ ದುಷ್ಟಮೃಗಗಳೂ, ಸಾಧುಪ್ರಾಣಿಗಳೂ, ಅವರಾಶ್ರಮಗಳಲ್ಲಿ ಪರಸ್ಪರ ದೇಹಾಘಾತಗಳಿಲ್ಲದೆ ಶಾಂತಿಯಿಂದ ವಾಸವಾಗಿರುತ್ತವೆಂದು ನಾವು ಕೇಳುತ್ತೇವೆ. ಸಾನಿಧ್ಯದಿಂದುಂಟಾಗುವ ವಾತಾವರಣ. ಅವರ ಶಾಂತಿ ಪ್ರಭೆಯಿಂದ ವಾತಾವರಣವೆಲ್ಲಾ ಶಾಂತಿಯುಕ್ತವಾಗುತ್ತೆ. ಅಶಾಂತಿ ದುಷ್ಟರು ಅಲ್ಲಿರಲೇ ಆರರು. ಆ ತಾಪಕ್ಕೆ (ಶೀತಳ ಶಾಂತಿಯು ಅವರಿಗೆ ತಪಿಸುವುದು) ಆ ಪ್ರದೇಶವೇ ಬಿಟ್ಟು ಓಡುವರು. ಇಲ್ಲವಾದರೆ ಸದಾಶಿವ ಬ್ರಹ್ಮರು ಅದ್ವೈತ ತಾರಾವಳಿಯನ್ನು ಮುಕ್ತಾಯಮಾಡಿರುವಂತೆ "ಕಟಾಕ್ಷಪಾತಾ ಶ್ಶಿಶಿರಾಶ್ಶಮಯಂತು, ಚಿತ್ತಸಂತಾಪಂ"

ಆ ದಿವ್ಯಕಟಾಕ್ಷವು ಬಿದ್ದೊಡನೆಯೇ ಶಿಶಿರವು ಶಮಿಸುವಂತೆ ಚಿತ್ತಸಂತಾಪವು ಶಮನವಾಗಿ, ಪರಮ ಶಾಂತಿಯಾಗುವುವು.

**ಕಸ್ಮಾಚ್ಚ ತೇ ನ ನಮೇರನ್ ಮಹಾತ್ಮನ್**
**ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ ।**
**ಅನಂತ ದೇವೇಶ ಜಗನ್ನಿವಾಸ**
**ತ್ವಮಕ್ಷರಂ ಸದಸತ್ತತ್ಪರಂ ಯತ್ ॥೩೭॥**

"ಸರ್ವೇ ನಮಸ್ಯಂತಿ" ಎಂದು ಹೇಳಿದುದಕ್ಕೆ ಕಾರಣ ಹೇಳುತ್ತಾನೆ ಅರ್ಜುನ ಸಂಬೋಧನೆಯೇ ಉತ್ತರಾರ್ಧ ಶ್ಲೋಕ ಪೂರ್ಣವಾಗಿರುವುದು, ವರ್ಣಿಸಲಶಕ್ಯವಾದ ದೇವನನ್ನು ತೋರಿಸುತ್ತದೆ. ಮಹಾತ್ಮನ್, ಅನಂತ, ದೇವೇಶ ಜಗನ್ನಿವಾಸ, ಸದಸತ್ತತ್ಪರ, ಬ್ರಹ್ಮಣೋಽಪ್ಯಾದಿ ಕರ್ತ್ರೇ, ಎಲ್ಲಾ ಸಂಬೋಧನೆಗಳೂ ಒಂದಕ್ಕಿಂತ ಒಂದು ಭಗವಂತನ ಅವ್ಯಕ್ತ ಸ್ವರೂಪವನ್ನು ಹೊಗಳುತ್ತದೆ, ಹೇಗೆ ವ್ಯಕ್ತವಸ್ತುಗಳಲ್ಲಿ ಮಹದಾತ್ಮನಾಗಿದ್ದಾನೆಂದು ಇಂಥಾ ದೇವೇಶ, ಜಗತ್ತಿನಲ್ಲೆಲ್ಲಾ ತುಂಬಿರುವವನನ್ನು ಎಲ್ಲಿ ನೋಡಿದರೂ ವ್ಯಕ್ತವಾಗಿರುವ ಅವ್ಯಕ್ತ ಸ್ವರೂಪವನ್ನು ಯಾಕೆ ನಮಸ್ಕರಿಸದಿರುವರು. "ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ" ಎಲ್ಲರೂ, ಸಿದ್ಧಸಂಘವೂ ನಮಸ್ಕರಿಸಿಯೇ ನಮಸ್ಕರಿಸುವರು. ಇದೇ ೨೫ ಮತ್ತು ೪೫ ರಲ್ಲಿ ಬರುವ 'ಪ್ರಸೀದ ದೇವೇಶ ಜಗನ್ನಿವಾಸ' ಮತ್ತು ೩೧ ರಲ್ಲಿ ಬರುವ 'ನಮಸ್ತುತೇ ದೇವವರಪ್ರಸೀದ' ಇವುಗಳ ಪ್ರತಿಧ್ವನಿ. ದೇವನ ಕಲ್ಯಾಣಗುಣಗಳು ಅನಂತವಾಗಿವೆಯೆಂದು "ಅನಂತ" ನೆಂದೇ ಶುರು. ಸಮಸ್ತಕ್ಕೂ ಮೂಲಕಾರಣನಾದ ಬ್ರಹ್ಮನಿಗೂ ಗುರುತರವಾದ ಮಹಾತ್ಮ, ಜಗನ್ನಿವಾಸ, ಸರ್ವವ್ಯಾಪಿ. ಗೌಣವಿಲ್ಲದವನು. ಸತ್, ಅಸತ್, ತತ್ ಪರಂ ಸತ್ ಅಸತ್‌ಗಿಂತಲೂ ಹೆಚ್ಚಿನವನಾಗಿ ಭಿನ್ನವಾಗಿರುವವನು. ಅಂಥಹ ದಿವ್ಯ ದೇವ, ದೇವರಿಗೆ ದೇವ ದೇವೇಶನಿಗೆ ನಮಸ್ಕರಿಸದೆ ಯಾರುತಾನೇ ಇದ್ದಾರು. ಎಲ್ಲರೂ ಶರಣುಹೋಗುವರು.

**ತ್ವಮಾದಿದೇವಃ ಪುರುಷಃ ಪುರಾಣ-**
**ಸ್ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**

ವೇತ್ತಾಸಿ ವೇದ್ಯಂ ಚ ಪರಂ ಚ ಧಾಮ
ತ್ವಯಾ ತತಂ ವಿಶ್ವಮನಂತರೂಪ ॥೩೮॥

ಸ್ವಾಮಿಯ ದಿವ್ಯ ಗುಣಗಳನ್ನು ಇನ್ನೂ ಹೊಗಳುತ್ತಾನೆ. ತಾನು ಕಣ್ಣಾರೆ ನೋಡುತ್ತಿರುವ "ವಿಶ್ವ ಮನಂತರೂಪ"ದ ಸ್ತೋತ್ರ. ನೀನೇ ಆದಿದೇವನು, ಪರಮಪುರುಷನು, ಸನಾತನನು ಪುರಾಣನು; ನೀನೇ ಈ ವಿಶ್ವಕ್ಕೆ ದಿವ್ಯವಾದ ಆಶ್ರಯಸ್ಥಾನವು (ನಿಧಾನನಂ ಪರಂ) ಜ್ಞಾನಿಗಳಿಂದ ಜ್ಞಾನಗವ್ಯನು, ಎಲ್ಲವನ್ನೂ ತಿಳಿದವನು ಎಲ್ಲಕ್ಕೂ ಉತ್ಕೃಷ್ಟನು, ಪರದಲ್ಲಿ ಆಶ್ರಯನು, ನೀನೇ ಮೋಕ್ಷರೂಪನು ಆಗಿರುವೆ. ನೀನೇ ಈ ಸಮಸ್ತವಿಶ್ವಗಳನ್ನೂ ಕೊನೆಯಿಲ್ಲದೆ ತೋರ್ಪಡುವೆ.

ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ
ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ।
ನಮೋ ನಮಸ್ತೇಽಸ್ತು ಸಹಸ್ರಕೃತ್ವಃ
ಪುನಶ್ಚ ಭೂಯೋಽಪಿ ನಮೋ ನಮಸ್ತೇ ॥೩೯॥

ವ್ಯಕ್ತರೂಪನಾದ ಸಗುಣಬ್ರಹ್ಮನೂ ನೀನೇ ಎಂದು, ನೀನೇ ವಾಯುವೂ, ಯಮನೂ, ಅಗ್ನಿ, ವರುಣ, ಚಂದ್ರ, ಪ್ರಜಾಪತಿ, ಬ್ರಹ್ಮ (ಪ್ರಪಿತಾಮಹ.) ಉತ್ತರಾರ್ಧವೆಲ್ಲಾ ನಮಸ್ಕಾರವೇ, ಸಹಸ್ರ ನಮಸ್ಕಾರ, ಪುನಃ ಪುನಃ ನಮಸ್ಕಾರ, ನಮೋನಮಃ. ಈ ದಿವ್ಯ ವಿಶ್ವರೂಪವನ್ನು ನೋಡಿ ಉಕ್ಕಿಬರುವ ಶ್ರಧಾ ಭಕ್ತಿಯ ಧಾರೆ, ಈ ನಮಸ್ಕಾರಧಾರೆ. ಶ್ವೇತಾಶ್ವತರೋಪನಿಷತ್ತಿನಲ್ಲಿ (೪, ೨) ಇದರ ಪ್ರತಿಧ್ವನಿಯಂತೆ "ತದೇವಾಗ್ನಿ, ಸ್ತದಾದಿತ್ಯ, ಸ್ತದ್ವಾಯು ಸ್ತದು ಚಂದ್ರಮಾಃ। ತದೇವ ಶುಕ್ರಮಮೃತಂ ತದ್ಬ್ರಹ್ಮತದಾ ಪಸ್ಸಪ್ರಜಾಪತಿಃ॥" ವಿಶ್ವವನ್ನು ಕಾಪಾಡುವ ಅಧಿದೇವತೆಗಳ ಪಟ್ಟಿಯಂತಿದೆ. ಅದರಲ್ಲಿಯೇ (೩, ೧೯ ಉತ್ತರಾರ್ಧ) "ಸವೇತ್ತಿ ವೇದ್ಯಂನ ಚತಸ್ಯಾಸ್ತಿ ವೇತ್ತಾ, ತಮಾಹುರಗ್ರ್ಯಂ ಪುರುಷಂ ಮಹಾನ್ತಂ ॥" ಎಂದಿದೆ.

ನಮಃ ಪುರಸ್ತಾದಥ ಪೃಷ್ಠತಸ್ತೇ
ನಮೋಽಸ್ತು ತೇ ಸರ್ವತ ಏವ ಸರ್ವ।
ಅನಂತವೀರ್ಯಾಮಿತವಿಕ್ರಮಸ್ತ್ವಂ
ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ॥೪೦॥

ಸರ್ವದ ಸರ್ವ ಸತ್ವಸ್ವರೂಪನೇ, ಮುಂದೆ, ಹಿಂದೆ, ಎಲ್ಲಾಕಡೆಯಲ್ಲೂ ನಮಸ್ಕಾರವು, ನೀನು ಅನಂತವೀರ್ಯನೂ, ಅಮಿತ ಪರಾಕ್ರಮವುಳ್ಳವನೂ, ಸತ್ವಸ್ವರೂಪನಾಗಿ ಸರ್ವವನ್ನೂ ವ್ಯಾಪಿಸಿಕೊಂಡಿದ್ದೀಯೆ. ಶ್ರೀ ಶಂಕರಾಚಾರ್ಯರು ಗೀತಾಭಾಷ್ಯದ ಆದಿಸ್ತೋತ್ರದಲ್ಲಿ,

"ನಾರಾಯಣಃ ಪರೋಽವ್ಯಕ್ತಾದಣ್ಡಮ ವ್ಯಕ್ತ ಸಂಭವಂ।
ಅಣ್ಡಸ್ಯಾನ್ತಸ್ತ್ವಮೇಲೋಕಾಃ ಸಪ್ತದ್ವೀಪಾ ಚ ಮೇದಿನೀ ॥"

ನಾರಾಯಣನು ವ್ಯಕ್ತಾವ್ಯಕ್ತ ಪ್ರಪಂಚವನ್ನೂ ಮೀರಿದ್ದಾನೆ. ಸಪ್ತದ್ವೀಪ, ಭೂಲೋಕಗಳೆಲ್ಲಾ ಆ ಅಣ್ಡ ಸ್ವರೂಪಮೊಳಗೆ ಅಡಗಿವೆ ಎಂದು ವಿಶ್ವರೂಪಧರನಾದ ಶ್ರೀ ವಿಷ್ಣುನಾರಾಯಣನನ್ನು ಆದಿಯಲ್ಲಿ ಸ್ತೋತ್ರಮಾಡುತ್ತಾರೆ. ವಿಶ್ವವೆಲ್ಲವೂ ಅವನಲ್ಲದೆ ಸರ್ವಸ್ವರೂಪನು, ಸರ್ವವ್ಯಾಪಿಗೆ ಮೊದಲನೇ ನಮಸ್ಕಾರ. ಎಲ್ಲಿಡೆ ಎಲ್ಲ ನಮಸ್ಕಾರ ಯಾರಿಗೆ ಮಾಡಿದರೂ ಅವನಿಗೇ ತಲುಪುತ್ತೆ ಯಾರು ಯಾವ ಲೋಕದಲ್ಲಿದ್ದರೂ ಶ್ರೀಮನ್ನಾರಾಯಣನ ಗರ್ಭವಾಸದಲ್ಲೇ ಇದ್ದೇವೆ, ಅವನನ್ನವಲಂಬಿಸಿಯೇ ಜೀವಿಸುತ್ತಿದ್ದೇವೆ. ಇದಕ್ಕೆ ಆನಂದಗಿರಿಗಳು "ನರಶಬ್ದೇನ ಚರಾಚರಾತ್ಮಕಂ ಶರೀರಜಾತ ಮುಚ್ಯತೇ, ತತ್ರ ನಿತ್ಯ ಸನ್ನಿಹಿತಾಶ್ಚಿದಾಭಾಸಾ ಜೀವಾನಾರಾ ಇತಿ ನಿರುಚ್ಯನ್ತೇ । ತೇ ಷಾ ಮಯನಮಾಶ್ರಯೋ ನಿಯಾಮಕೋಽನ್ತರ್ಯಾಮೀ ನಾರಾಯಣ ಇತಿ ॥" ಚರಾಚರಾತ್ಮಕ ಶರೀರಜಕ್ಕೆ ನರನೆಂದೂ, ಆ ನಿತ್ಯಸನ್ನಿಹಿತ ಚಿದಾಭಾಸ ಜೀವಕ್ಕೆ ನಾರಾ ಎಂದೂ, ಅದನ್ನಾಶ್ರಯಿಸಿ, ನಿಯಮಿತನಾದ ಅಂತರ್ಯಾಮಿ ನಾರಾಯಣನೆಂದೂ–ಟೀಕೆ ಮಾಡಿದ್ದಾರೆ. ವಿಶ್ವವೇ ಅವನು, ಅಂತರ್ಯಾಮಿಯುವನು, ವಿಶ್ವರೂಪಿಯುವನು.

ನಾವು ಸಂಧ್ಯಾವಂದನೆಯ ಕೊನೆಯಲ್ಲಿ ಪ್ರತಿದಿನವೂ ಹೇಳುವ ಪ್ರಾರ್ಥನೆ "ನಮೋಸ್ತ್ವನಂತಾಯ ಸಹಸ್ರಮೂರ್ತಯೇ, ಸಹಸ್ರ ಪಾದಾಕ್ಷಿ ಶಿರೋರುಬಾಹುವೇ, ಸಹಸ್ರನಾಮ್ನೇ ಪುರುಷಾಯ ಶಾಶ್ವತೇ, ಸಹಸ್ರಕೋಟಿ ಯುಗಧಾರಣೇ ನಮಃ" ಎನ್ನುವುದೂ ಇದರ ಭಾವನೇ. ಎಲ್ಲಾ ದಿಕ್ಕುಗಳಲ್ಲೂ, ಎಲ್ಲಾ ರೂಪದಲ್ಲೂ ಒಳಗೂ ಹೊರಗೂ, ಹಿಂದೂ ಮುಂದೂ ಆವರಿಸಿರುವ "ಸರ್ವತ ಏವಸರ್ವ"ನಿಗೆ ಎಲ್ಲಾ ಕಡೆಯೂ ಅವನನ್ನು ಕಂಡು ಎಲ್ಲಾ ಕಡೆಯು ಸತತ ನಮಸ್ಕಾರ ಮಾಡುತ್ತಾನೆ ಅರ್ಜುನ.

ಅನೇಕ ಉಪನಿಷತ್ತುಗಳಲ್ಲಿ ಬರುವ "......ತಿಷ್ಠತಿ ವಿಶ್ವತೋ ಮುಖಃ। ವಿಶ್ವತಶ್ಚೇಕ್ಷುರುತ ವಿಶ್ವತೋಮುಖೋ ವಿಶ್ವತೋಬಾಹುರುತ ವಿಶ್ವ ತಸ್ಪಾತ್" ಎನ್ನುವುದೂ ಈ ಎಲ್ಲೆಲ್ಲಿಯೂ ತುಂಬಿರುವ ಪರಮಾತ್ಮ ಸ್ವರೂಪವನ್ನು ತೋರಿಸುತ್ತದೆ.

"ಏಕೋದೇವಃ ಸರ್ವಭೂತೇಷುಗೂಢ ಸ್ಸರ್ವವ್ಯಾಪೀ ಸರ್ವಭೂತಾಂತ ರಾತ್ಮಾ" ಎನ್ನುವ ಉಪನಿಷದ್ವಾಕ್ಯದರ್ಥವೂ ಇದೇ. "ಸ ಏವ ಸರ್ವಂ ಯದ್ಭೂತಂ ಯಚ್ಚಭವ್ಯಗ್ ಸನಾತನಂ" "ಯತ್ಪರಂಬ್ರಹ್ಮ ಸರ್ವಾತ್ಮಾ ವಿಶ್ವಸ್ಯಾಯತನಂ ಮಹತ್" ಎನ್ನುವುದರ ತಾತ್ಪರ್ಯವೂ ಈ ಸರ್ವವ್ಯಾಪಿ ಯನ್ನು ತಿಳಿಸುತ್ತದೆ.

ಸರ್ವವ್ಯಾಪಿಯಾದ ಪರಮಾತ್ಮನನ್ನು ಸರ್ವ ಕಡೆಯಲ್ಲಿ ಸರ್ವದಾ ಕಂಡರೆ ಅವನ "ಅನಂತವೀರ್ಯಾ, ಅಮಿತ ವಿಕ್ರಮ" ವ್ಯಕ್ತವಾಗಿ ನಮ್ರತೆಯಿಂದ ನಮಸ್ಕರಿಸಲು ಕಲಿಸುತ್ತದೆ. ಇದೇ ವಿಶ್ವರೂಪದರ್ಶನದ ಫಲ. ಮಹಾತ್ಮನ ಮಹತ್ವ ಸರ್ವವ್ಯಾಪಕತ್ವ ಸಾಕ್ಷಾತ್ತಾಗಿ, ತಾನು ತನ್ನದು ಎನ್ನುವ ಕಿಂಚಿತ್ತೇನಾದರೂ ಅಲ್ಪವಸ್ತುವಿದ್ದರೆ ಅದಳಿದು, ಆ ವಿಶ್ವನಲ್ಲಿ ಲೀನವಾಗುವುದು.

"ನಮಸ್ತುಭ್ಯಂ ಭಗವತೇ ನಿರ್ಗುಣಾಯ ಗುಣಾತ್ಮನೇ.......
ಕೇವಲಾದ್ವಿತೀಯಾಯ ಗುರುವೇ ಬ್ರಹ್ಮರೂಪಿಣೇ।
ಯೋಽಹಂ ಮಮಾಸ್ತಿ ಯತ್ಕಿಂಚಿದಿಹ ಲೋಕೇ ಪರತ್ರಚ
ತತ್ಸರ್ವಂ ಭವತೋ ನಾಥ ಚರಣೇಷು ಸಮರ್ಪಿತಂ ॥"

ಎನ್ನುವಂತೆ ನಿರ್ಗುಣ ಬ್ರಹ್ಮನನ್ನು ಸಗುಣನಾಗಿ ಬ್ರಹ್ಮ ರೂಪದಲ್ಲಿ ಕಾಣುವಾಗ, ತಾನು ತನ್ನದು ಎಂದು ಈ ಲೋಕ ಪರಲೋಕಗಳಲ್ಲುಳಿದಿದ್ದರೆ ಎಲ್ಲವನ್ನೂ ಅವನ ಚರಣದಲ್ಲಿ ಸಮರ್ಪಿಸಿ ನಮಸ್ಕರಿಸಬೇಕು. ಹೀಗೆ ಭಗವಂತ ಭಕ್ತಿ ಭಾವ ಬೇರೆ ಬೇರೆಯಾದಾಗ, ಆ ಭಗವಂತನ ಮಹಾತ್ಮ್ಯವು ವ್ಯಕ್ತವಾಗಿ ಏನಾದರೂ ಅಪಚಾರವಾಗಿದ್ದರೆ ನಾಚಿಕೆಯಾಗಿ ಭಗವಂತನನ್ನು ಅಪರಾಧಕ್ಕಾಗಿ (ಏನಾದರೂ ಭಕ್ತಿ ವಿಶ್ವಾಸದ ಹತ್ತಿರ ಸಂಬಂಧದಲ್ಲಿ ಅಪರಾಧವಾಗಿದೆಯೆಂದು ಭಕ್ತನ ಭಾವನೆಯಷ್ಟೆ- ಭಗವಂತನಿಗೆ ಅವನ ಭಕ್ತನು ಏನುಮಾಡಿದರೂ ಅಪಚಾರವಾಗದು, ಎಲ್ಲಾ ಸಂತೋಷವೇ) ಕ್ಷಮಾಪಣೆಬೇಡುವ ಪ್ರಸಂಗವಿದು. ಭಕ್ತನ ಅಮಿತ ಸರಳತೆಯಲ್ಲಿ ಭಗವಂತನ ಕೃಪಾಕಾರುಣ್ಯದಲ್ಲಿ ಅತಿ ಸಲಿಗೆ ಬಂದಿರಬಹುದು. ಆದರೆ ಅರ್ಜುನ ಕೃಷ್ಣರ ಬಾಲ್ಯಾದಿ ಸಹವಾಸದಲ್ಲಿ ಮಿತ್ರತ್ವದ ಸಲಿಗೆಬೇರೆ ನಿಕಟಸಂಬಂಧವಾಡಿತ್ತು.

**ಸಖೇತಿ ಮತ್ವಾ ಪ್ರಸಭಂ ಯದುಕ್ತಂ**
**ಹೇ ಕೃಷ್ಣ ಹೇ ಯಾದವ ಹೇ ಸಖೇತಿ ।**
**ಅಜಾನತಾ ಮಹಿಮಾನಂ ತವೇದಂ**
**ಮಯಾ ಪ್ರಮಾದಾತ್ ಪ್ರಣಯೇನ ವಾಪಿ ॥೪೧॥**

ನನ್ನ ಸ್ನೇಹಿತನೇ ಎಂದು ಮಾತ್ರಾ ತಿಳಿದು ಅನೇಕಾವರ್ತಿ ರಭಸದಿಂದ ನಿನ್ನ ಈ ಮಹಿಮೆಯ ತಿಳಿವಳಿಕೆ ಇಲ್ಲದೆ ಪ್ರಮಾದದಿಂದಲೋ ಮಿತ್ರ ಪ್ರೀತಿಯಿಂದಲೋ, ಹೇ ಕೃಷ್ಣ, ಹೇ ಮಾಧವ, ಹೇ ಸಖನೇ ಎಂದು ಏಕ ವಚನದಲ್ಲಿ ಸಲಿಗೆಯಿಂದ ಕರೆದುದನ್ನು ಕ್ಷಮಿಸು.

**ಯಚ್ಚಾವಹಾಸಾರ್ಥಮಸತ್ಕೃತೋಽಸಿ**
**ವಿಹಾರಶಯ್ಯಾಸನಭೋಜನೇಷು ।**
**ಏಕೋಽಥವಾಪ್ಯಚ್ಯುತ ತತ್ಸಮಕ್ಷಂ**
**ತತ್ ಕ್ಷಾಮಯೇ ತ್ವಾಮಹಮಪ್ರಮೇಯಮ್ ॥೪೨॥**

ಅಚ್ಯುತನೇ (ಯಾರ ಕರುಣೆಗೆ ಚ್ಯುತಿಯೇ ಇಲ್ಲವೋ ಆ ಅಚ್ಯುತ- ಅಪರಿಮಿತ ಕ್ಷಮಾನಿಧಿ) ಸ್ನೇಹಭಾವದಲ್ಲಿ ವಿಹಾರ, ಮಲಗಿರುವಾಗ,

ಸಲಿಗೆಯಿಂದ ಕೂತಿರುವಾಗ, ಊಟಮಾಡುವಾಗ, ಏಕಾಂತವಾಗಿ ಯಾಗಲೀ ಮಿತ್ರವೃಂದದಲ್ಲಾಗಲೀ, ಲಘುವಾಗಿ, ಹಾಸ್ಯವಾಗಿ, ಗೌರವ ವಿಲ್ಲದಂತೆ ತಿರಸ್ಕೃತವಾಗಿಯಾಗಲೀ ಆಡಿದ ಮಾತುಗಳಿಗೆ ಮಾಡಿರುವ ಕಾರ್ಯಗಳಿಗೆ ಅಪ್ರಮೇಯನಾದ ನಿನ್ನಲ್ಲಿ ಕ್ಷಮಾಭಿಕ್ಷೆಯನ್ನು ಬೇಡುತ್ತೇನೆ.

ಅರ್ಜುನನಿಗೆ ಬಾಲ್ಯದ ವರ್ಷಗಳೆಲ್ಲವೂ ಬಂದಾವರಿಸಿರಬೇಕು. ಆಗಿನ ಆಟ, ಸಲಿಗೆ, ಊಟ, ವಿಹಾರ, ವಿಶ್ರಾಂತಿಗಳಲ್ಲಿ ಎಷ್ಟು ಮಧುರದಿಂದ ಮಿಲನವಾಗಿ ಅಂತಸ್ತಿನ ಅಂತರವೇ ಇಲ್ಲದೆ ವ್ಯವಹರಿಸುತ್ತಿದ್ದರು; ಜವಾಬ್ದಾರಿಯನ್ನೇ ಕಾಣದೆ ಮಾತುಕಥೆಗಳನ್ನಾಡುತ್ತಿದ್ದರು–ಎಲ್ಲಾ ಕಣ್ಮುಂದೆ ಚಿತ್ರಪಟದಂತೆ ಹಾದಿರಬೇಕು. ನಿರ್ಬಂಧನಿಯಮಗಳಿಲ್ಲದೆ ಬಾಲಕ್ರೀಡೆಗಳಲ್ಲಿ ತುಟಿಮೀರಿ ಮಾತುಗಳೂ, ಹತೋಟಿಮೀರಿ ಚೇಷ್ಟೆ ಗಳೂ ಎಷ್ಟೋ ನಡೆದಿರುತ್ತದೆ. ಆಗ ಆ ಬಾಲ್ಯಾವಸ್ಥೆಯಲ್ಲಿ, ಅಜ್ಞಾನಾ ವಸ್ಥೆಯಲ್ಲಿ ಜೊತೆಗಾರನಾದ, ಸಾಮಾನ್ಯ ಇತರ ಬಾಲಕರಂತೇ ಇದ್ದ ಈ ಸಹವಾಸಿಯನ್ನು ಇಷ್ಟು ಅಪಾರಶಕ್ತಿಯುತ ಮಹಿಮನೆಂದು ಅರ್ಜುನ ಹೇಗೆ ತಾನೇ ಕಂಡಾನು. ಆ ಅರಿವು ಬಂದುಬಿಟ್ಟಿದ್ದರೆ ನಿಕಟ ನಿರ್ಮಲ ಸಖ್ಯಕ್ಕೆ ಆಸ್ಪದವೇ ಆಗುತ್ತಿರಲಿಲ್ಲ. ಈಗಾಗಲೇ ಒಂದಾವರ್ತಿ ದಿವ್ಯ ವಿಶ್ವರೂಪದರ್ಶನ ಕೆಲವೇ ಕ್ಷಣಕಂಡ ಮಾತ್ರದಿಂದಲೇ, ಆ ಮಹಾ ತ್ಮನ ಮಹಿಮೆ ವ್ಯಕ್ತವಾಗಿ ಆಗಲೇ ಎಷ್ಟು ಭಕ್ತಿ, ಗೌರವ ಬಂದುಬಿಟ್ಟಿದೆ. ವರ್ಷಾಂತರವಿದ್ದ ಸಲಿಗೆ ಸಡಲಿದೆ. ಆಗಲೇ ಕ್ಷಮಾಪಣೆಗೆ ಸಿದ್ಧನಾಗಿ ದ್ದಾನೆ.— ಅದೂ ಆಗಬೇಕೆಂಬ ಉದ್ದೇಶವೇ ಇಲ್ಲದೆ ಪ್ರಮಾದದಿಂದ ಮಾಡಿರಬಹುದಾದ ಸಲಿಗೆಯ ಅತಿಕ್ರಮ, ಕಲಾಪಗಳಿಗೆ. ಇದು ಅಪರಾಧ ಕ್ಷಮಾಪಣಾ ಸ್ತೋತ್ರದಂತೆ ಸ್ತೋತ್ರಮಾಲೆಯ ಮಧ್ಯೆಬಂದು ಬಿಟ್ಟಿದೆ. ಮಹಾಮಹಿಮನ ದಿವ್ಯ ಮಹಿಮೆಯನ್ನು ಕೊಂಡಾಡುತ್ತಾ, ತನ್ನ ಅಲ್ಪತ್ವದ ಅರಿವು ಉದಯವಾಗುತ್ತಾ, ನಮ್ರತೆಯು ಬಂದು ವಿನಯದಿಂದ ಅಪರಾಧವೇನಾದರೂ ಇದ್ದರೆ ಕ್ಷಮಿಸಬೇಕೆಂದು ಬೇಡು ತ್ತಾನೆ. ಪರಮಕಾರುಣ್ಯನಿಧಿ ಪರಮಾತ್ಮನಿಗೆ ಅದೆಲ್ಲಾ ಅಪರಾಧವೇ. ಕೇವಲ ಮೈತ್ರಿಮಯಿಯಾದ ಭಗವಂತನು ತನ್ನ ಲೀಲೆಗಳಲ್ಲಿ ಇವೆಲ್ಲಾ ಗಮನಿಸಿದ್ದಾನೆಯೇ ಎಲ್ಲಾ ಲೀಲೆಗಳಲ್ಲಿ ತೇಲಿಹೋಗಿವೆ!

ಎಷ್ಟು ಸ್ತೋತ್ರಮಾಡಿದರೂ ಸಾಲದು ಸ್ವಾಮಿಯನ್ನು ಕಾಳಿದಾಸನು ರಘುವಂಶದಲ್ಲಿ ಸ್ವಾಮಿಯ ಸ್ತೋತ್ರಮಾಡಿ ಹೇಳುತ್ತಾನೆ;

"ಮಹಿಮಾನಂ ಯದುತ್ಕೀರ್ತ್ಯ, ತವಸಂಹ್ರಿಯತೇವಚಃ ।
ಶ್ರಮೇಣ ತದಶಕ್ತ್ಯಾವಾ ನ ಗುಣಾನಾಮಿಯತ್ತಯಾ ॥

ನಿನ್ನ ಮಹಿಮಾಗಾನ ಮಾಡಿ, ವಚನವು ಶಾಂತಿಯಾದರೆ, ಅದು ತನ್ನ ಶಕ್ತಿ ಕುಂದಿ ತಣ್ಣಗಾಯಿತೇ ವಿನಃ ನಿನ್ನ ಗುಣಮಹಿಮೆಯನ್ನು ಗಾನಮಾಡಿ ಮುಗಿಸಿತೆಂದಲ್ಲಾ-ಎಂದು ದಿವ್ಯವಾಗಿ ಹೇಳಿದ್ದಾರೆ. ದೇವ ದೇವನ ಅನಂತ ಗುಣಗಳಿಗೆ ಕೊನೆಯೆಲ್ಲಿ, ಮೊದಲೆಲ್ಲಿ. ನಾವು ಎಷ್ಟು ಸಂಕೀರ್ತನಮಾಡಿದರೂ ಇನ್ನೂ ಮುಗಿವುದಿಲ್ಲಾ. ಗುಣಗಾನಮಾಡಿ ದಷ್ಟೂ ಇನ್ನೂ ಭಾವೋದ್ರೇಕವಾಗಿ ಇನ್ನೂ ಹೆಚ್ಚಿನ ಮಹಿಮಾ ದರ್ಶನ ವಾಗುತ್ತಲೇ ಇರುತ್ತೆ. ಗಾನಮಾಡಿ ವಚನವೇ ಶಾಂತಿಯಾಗಬೇಕೇ ವಿನಃ ಗುಣಮಹಿಮೆಗೆ ಕೊನೆಯೇ ಇಲ್ಲಾ. ಮಹಾಭಾರತದ ಉದ್ಯೋಗ ಪರ್ವದಲ್ಲಿ ಧೃತರಾಷ್ಟ್ರ ಪ್ರಾರ್ಥಿಸಿರುವಂತೆ "ಸಹಸ್ರಶೀರ್ಷಂ ಪುರುಷಂ ಪುರಾಣಂ । ಅನಾದಿಮಧ್ಯಾನ್ತಮನಂತ ಕೀರ್ತಿಂ ॥" ಉಳ್ಳವ ಭಗವಂತ, ಕೀರ್ತನಕ್ಕೆ ಅಂತವೇ ಇಲ್ಲಾ.

ಈ ಚರಾಚರ ಜಗತ್ತಿಗೆ ನೀನೇ ತಂದೆ, ನೀನೇ ಪೂಜ್ಯನಾದ ಗುರು, ಮಹತ್ವವುಳ್ಳವನು. ಮೂರು ಲೋಕಗಳಲ್ಲೂ ನಿನಗೆ ಸಮಾನರಾದವರೇ ಇಲ್ಲದಿರುವಾಗ ನಿನಗೆ ಅಧಿಕರು ಎಲ್ಲಿರುವರು? ಅಪ್ರತಿಮ ಪ್ರಭಾವನು. ನೀನು ತಂದೆಯು ಎನ್ನುವುದು ಪೋಷಣ, ರಕ್ಷಣಾ ಭಾವದಿಂದ. ನೀನು ಗುರು ಎನ್ನುವುದು ಬೋಧಕ ಶಿಕ್ಷಣಾ ಭಾವದಿಂದ. ನೀನು ತಂದೆಯಾಗಿ ಅದರ ದೇಹವನ್ನು ಕಾಪಾಡುವೆ. ನೀನು ಗುರುವಾಗಿ ಅದರ ಮನವನ್ನು ಅಭಿವೃದ್ಧಿಮಾಡುವೆ ಮೂರು ಲೋಕಗಳ ಜನಕ ಉತ್ಪತ್ತಿ ಕಾರಣನಾದ ತಂದೆ ನೀನು ಮೂರು ಲೋಕಗಳ ಗುರುಪ್ರಗತಿಗೆ ಉಪದೇಶಕ ನೀನು ಸಾಕಿಸಲಹಿ, ಸುಖಗಳನ್ನೊದಗಿಸುವ ತಂದೆ ನೀನು, ಹೇಳಿಕೊಟ್ಟು, ಕಲಿಸಿ, ಆನಂದ ಉಂಟುಮಾಡುವ ಗುರುವು ನೀನೇ ಗುರು ಎಂದರೆ

ಲಘುವಿಗೆ ವಿರೋಧವಾದ್ದು. ಹಗುರವಾದುದಲ್ಲಾ. ಭಾರವಾದುದು ಅದಕ್ಕೆ "ಗರೀಯಾನ್" ಮಹತ್ತಾದವನು ಎಂದು ಗುರು, ತಂದೆಯಾದರೂ ಅದಕ್ಕೂ ಹಿರಿದಾದವ ಈ ಹೋಲಿಕೆಯಿಂದ ಅವನನ್ನಳತೆಮಾಡಿದಂತಾಗ ಬಾರದು. ಮಹಾ ಮಹಿಮನು. ಅವನ ಸಮಾನರೇ ಯಾರೂ ಇಲ್ಲಾ ಅಧಿಕರಂತೂ ಇಲ್ಲವೇ ಇಲ್ಲಾ ಅಪ್ರತಿಮ ಪ್ರಭಾವಪ್ರಭು ಪುರುಷಸೂಕ್ತದಲ್ಲಿ ಹೊಗಳಿರುವಂತೆ "ಸಹಸ್ರ ಶಿರ್ಷಾಪುರುಷ ಸಹಸ್ರಾಕ್ಷ ಸಹಸ್ರ ಪಾತ್ । ಸ ಭೂಮಿ ವಿಶ್ವತೋ ವೃತ್ವಾ ಅತ್ಯಶಿಷ್ಠದ್ದಶಾಂಗುಲಂ ।" ಎಲ್ಲವನ್ನೂ ಆವರಿಸಿ ಅದಕ್ಕೂ ಹಿರಿಯದು, ಸಹಸ್ರವೆಂದರೆ ಸಾವಿರವೆಂದೇ ಅಂಕೆಯಲ್ಲ, ಲೆಕ್ಕವಿಲ್ಲದಷ್ಟು ಅದರಲ್ಲಿಯೇ ಮುಂದೆ ಹೇಳುವಂತೆ "ಪಾದೋಸ್ಯಾ ವಿಶ್ವಾ ಭೂತಾನಿ । ತ್ರಿಪಾದಸ್ಯಾ ಮೃತಂದಿವಿ ।" ವಿಶ್ವವೆಲ್ಲಾವೂ ಕಾಲುಭಾಗ ದಿಂದ ಮಾತ್ರಾ ವ್ಯಾಪ್ತಿ ಮೂರರಷ್ಟಿನ್ನೂ ಅಮೃತರೂಪ. ನಾವು ಕಾಣುವ ವಿರಾಡ್ ವಿರಜ, ಅಧಿಪುರುಷ ಎಲ್ಲಾ, ನಮ್ಮ ಭಾವನೆಗೊಳಗಾಗ ಬಲ್ಲು ದೆಲ್ಲಾ ಈ ಕೊಂಚಭಾಗಮಾತ್ರ. ಅಧಿಕಭಾಗವೆಲ್ಲಾ ಅವ್ಯಕ್ತ ಮಹಾ ಪ್ರಭಾವ ಹೋಲಿಸಲಸದಳ.

**ತಸ್ಮಾತ್ ಪ್ರಣಮ್ಯ ಪ್ರಣಿಧಾಯ ಕಾಯಂ**
**ಪ್ರಸಾದಯೇ ತ್ವಾಮಹಮೀಶಮೀಡ್ಯಮ್ ।**
**ಪಿತೇವ ಪುತ್ರಸ್ಯ ಸಖೇವ ಸಖ್ಯುಃ**
**ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್** ॥೪೪॥

ತಸ್ಮಾತ್–ಆದಕಾರಣ ನಿನ್ನನ್ನು ದೀರ್ಘದಂಡ ನಮಸ್ಕಾರಮಾಡಿ, ನಿನ್ನ ಪ್ರಸನ್ನತೆಯನ್ನು ಬೇಡುವೆನು. ಬರೀ ಮೂಢಭಕ್ತಿಯಿಂದಲ್ಲಾ. ನಿನ್ನ ಮಹಿಮೆಯು ಚೆನ್ನಾಗಿ ವೇದ್ಯವಾಗಿ ಅದರ ಪರಿಣಾಮವಾಗಿ ಸಾಷ್ಟಾಂಗ ನಮಸ್ಕಾರ. ದೈನ್ಯದಿಂದ ನಾನು ನನ್ನದೆಂಬುವ ಅಹಂಕಾರ ಅಭಿಮಾನವನ್ನು ಬಿಟ್ಟು ಪಾದಕ್ಕೆರಗುವುದು. ನೀನೇ ಈ ನಮಸ್ಕಾರಕ್ಕೆ ಅರ್ಹನು. ನೀನೇ ಒಡೆಯನು, ಸ್ತುತ್ಯರ್ಹನಾದವನು. ನಿನ್ನಬಿಟ್ಟರೆ ಅನ್ಯರ್ಯಾರೂ ಇಲ್ಲಾ. ಯಾವರೀತಿಯಲ್ಲಿ ನಮ್ಮನ್ನು ರಕ್ಷಿಸಲರ್ಹನೆನ್ನು ವುದು ಕೂಡಾ ಅರಿಕೆಮಾಡಿಕೊಳ್ಳುತ್ತಾನೆ. ಮಗನನ್ನು ತಂದೆಯೂ,

ಸಖನನ್ನು ಸಖನೂ, ಪ್ರಿಯಳನ್ನೂ ಪ್ರಿಯನೂ ಅಪರಾಧ ಕ್ಷಮಿಸಿ ಕಾಪಾಡಲರ್ಹನಾಗಿರುತ್ತಿ. ಕ್ಷಮಾನಿಧಿಯ ಮಧುರ ರಕ್ಷಣಾ ಭಾವವೆಲ್ಲಾ ಈ ಉಪಮಾನಗಳಲ್ಲಿ ಬಂದುಹೋಗಿವೆ. ಕಾಲದೇಶ ನೀತಿಗಳು ಮಾರ್ಪಡಿಸಲಾರದ ಉಪಮಾನಗಳು.

ದಕ್ಷನು ಶಿವನನ್ನು ಪ್ರಾರ್ಥಿಸುತ್ತಾ "ತ್ರಾಹಿಮಾಂ ಸತತಂ ರಕ್ಷ ಪಿತಾ ಪುತ್ರ ಮಿವೈರಸಂ । ರಕ್ಷಮಾಂ ರಕ್ಷಣೀ ಯೋಹಂ ತವಾನಘ ನಮೋ ಸ್ತುತೇ ॥" ಎನ್ನುವಂತೆ, ರಕ್ಷಣೆಗೆ ಯೋಗ್ಯನಾದ ಪಾತ್ರ ಪುತ್ರ, ಅವನಿಗೆ ರಕ್ಷಣೆ ಅವಶ್ಯಕತೆಯಿದೆ, ರಕ್ಷಿಸುವದಾತ ಪಿತಾ. ಅದೂ ನಮ್ಮ ಸ್ವಾಮಿ, 'ಪಿತಾಸ್ಯ ಲೋಕಸ್ಯ ಚರಾಚರಸ್ಯ' ಚರಾಚರ ಲೋಕಗಳಿಗೇ ತಂದೆಯು. ಅವನ ಕರ್ತವ್ಯವೇ ಮಕ್ಕಳಾದ ನಮ್ಮ ರಕ್ಷಣೆ. ತಂದೆಯು ರಕ್ಷಣೆಯಲ್ಲಿ ಭದ್ರತೆಯಿದೆ. ಇನ್ಯಾರೂ ತಂದೆಯಂತೆ ಸುರಕ್ಷಿತವಾಗಿ ಕಾಪಾಡಲಾರರು. ತಂದೆಯು ರಕ್ಷಣೆಯಲ್ಲಿ ವಾತ್ಸಲ್ಯವಿದೆ. ಹಂಚಿದ ರಕ್ತ ಉಳ್ಳ ಸ್ವಪುತ್ರನಲ್ಲಿ, ತನ್ನ ಭಾಗವಾಗಿ ತನ್ನಂಗವಾಗಿ ಜನಿಸಿದ ಮಗನಲ್ಲಿ ತನ್ನನ್ನೇ ಕಾಣು ತ್ತಾನೆ ತಂದೆ. ಆ ಪುತ್ರವಾತ್ಸಲ್ಯದಿಂದ ಬರುವ ರಕ್ಷಣೆ ಸರ್ವರಕ್ಷಣೆ. ಮಗನ ಅಬಲತೆಯನ್ನರಿತು ತಂದೆ ಯಾವ ಅಪರಾಧವಿದ್ದರೂ ಮನ್ನಿಸಿ ಸಲಹುವನು. ಪುತ್ರನ ಅಬಲತೆಯೋ, ತಂದೆಯು ಮೇಲೆ ರಕ್ಷಣೆಗಾಗಿ ಅವಲಂಬಿಸಿಕೊಂಡಿರುವಿಕೆಯೋ ತಂದೆಯು ಮೇಲೆ ರಕ್ಷಣಾ ಭಾರಹಾಕಿದೆ, ಅದು ಅವನ ಕರ್ತವ್ಯವಾಗಿದೆ, ನಿಕಟ ಬಾಂಧವ್ಯದಿಂದ.

"ಸಖೇವಸಖ್ಯುಃ" ಎನ್ನುವುದರಲ್ಲಿ ಅಪರಾಧ ಕ್ಷಮಿಸುವುದಕ್ಕೆ ಸಲಿಗೆ ಯಿದೆ. ಸ್ನೇಹಿತನಾದುದರಿಂದಲೇ ಏನಪರಾಧಮಾಡಿದರೂ ಮನ್ನಿಸ ಬೇಕಾಗಿದೆ. "ದೃಷ್ಟಿಂ ಮೈತ್ರೀಮಯೀಂಕೃತ್ವಾ ಪಶ್ಯೇತ್ ಸರ್ವಮಯಂ ಜಗತ್" ಎಂದು ಅದಕ್ಕೇ ಹೇಳುವುದು. ಒಂದು ಸ್ನೇಹದೃಷ್ಟಿಯಿಂದ ಯಾವುದನ್ನು ಪರಿಶೀಲಿಸಿದರೂ ಅದರಲ್ಲಿನಪರಾಧವೇ ಕಣ್ಣಿಗೆ ಬೀಳುವು ದಿಲ್ಲಾ. ಬಿದ್ದರೂ ಅಗಾಧವಾಗಿ ಕಾಣವೇ ಕ್ಷಮಾಪಣಾರ್ಹವಾಗು ವುದು. ಎಲ್ಲಾ ವಸ್ತುಗಳಲ್ಲೂ, ಎಲ್ಲಾ ಸಂದರ್ಭಗಳಲ್ಲೂ ಈ ದೃಷ್ಟಿ ಕೋಣ ಅಭ್ಯಾಸವಾಗಬೇಕು. ಇದೇ ಪರಮಾತ್ಮ ಸ್ವರೂಪ. ಯಾವುದ

ರಲ್ಲೂ ಹಗೆಯಿಲ್ಲ. ಎಲ್ಲಾ ಸ್ನೇಹಮಯ, ಎಲ್ಲಾ ಸ್ನೇಹಪರ. ಯಾವುದಾದರೂ ತಪ್ಪು ಕಂಡರೂ ಕ್ಷಮಿಸಿ, ತಿದ್ದುವ ಮನೋಭಾವ.

ಪ್ರಿಯನು ಪ್ರಿಯೆಯನ್ನು ಎನ್ನುವುದರಲ್ಲಿ ಪ್ರೀತಿಭಾವ ಬರುತ್ತೆ. ಎಲ್ಲಿ ಪ್ರೀತಿಯಿರುತ್ತೆಯೋ ಅಲ್ಲಿ ತಪ್ಪೆಣಿಸುವುದಿಲ್ಲ. ಮಧುರಬಾಂಧವ್ಯದ ಭಾವನೆ. ಪಿತೃ ಪುತ್ರ ಪಾಲನದಲ್ಲಿ ಆಜ್ಞೆಭಾವ ಬಂತು ಸಖಸಖ್ಯರ ಕ್ಷಮಾಪಣೆಯಲ್ಲಿ ಸಮಾನಭಾವ ಬಂತು. ಈ ಪ್ರಿಯಃ ಪ್ರಿಯಾಯಾರ್ಹದಲ್ಲಿ ಪ್ರೇಮಭಾವ ಬಂತು. ಆ ಮಾಧುರ್ಯ ಭಾವದಲ್ಲಿ ಕ್ಷಮಿಸಲು ಪ್ರಿಯನು ಸಿದ್ಧವಾಗಿಯೇ ಇದ್ದಾನೆ. ಈ ಮೂರು ಭಾವದಲ್ಲೂ ಅಪರಾಧ ಕ್ಷಮಿಸಲು, ಅರ್ಹನಾದ ಅರ್ಜುನನನ್ನು ಕಾಪಾಡಲು ಸ್ವಾಮಿಗೆ ಪದವಿಯಿದೆ, ಅಧಿಕಾರವಿದೆ.

**ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ**
**ಭಯೇನ ಚ ಪ್ರವ್ಯಥಿತಂ ಮನೋ ಮೇ ।**
**ತದೇವ ಮೇ ದರ್ಶಯ ದೇವ ರೂಪಂ**
**ಪ್ರಸೀದ ದೇವೇಶ ಜಗನ್ನಿವಾಸ ॥೪೫॥**

ಹಿಂದೆ ಯಾವಾಗಲೂ ನೋಡದಿರುವ ಈ ವಿಶ್ವರೂಪದರ್ಶನವನ್ನು ನೋಡಿ ಸಂತಸಗೊಂಡಿದ್ದಾನೆ. ಆದರೂ ಭಯ ಪ್ರಚೋದನ ದರ್ಶನವನ್ನು ನೋಡಿ ನನ್ನ ಮನಸ್ಸು ಬಹಳ ವ್ಯಥೆಹೊಂದಿದೆ ದೇವೇಶನೇ, ಜಗನ್ನಿವಾಸನೇ, ಪ್ರಸನ್ನನಾಗು, ನಿನ್ನದೇ ಆದ ದೇವರೂಪವನ್ನು ತೋರು.

**ಕಿರೀಟಿನಂ ಗದಿನಂ ಚಕ್ರಹಸ್ತ-**
**ಮಿಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ।**
**ತೇನೈವ ರೂಪೇಣ ಚತುರ್ಭುಜೇನ**
**ಸಹಸ್ರಬಾಹೋ ಭವ ವಿಶ್ವಮೂರ್ತೇ ॥೪೬॥**

ಅದಾವುದೆಂದು ವಿವರಿಸುತ್ತಾನೆ. ಈಗ ಕಾಣುತ್ತಿರುವ ಮಹಾತ್ಮ ರೂಪವನ್ನು ಸಂಬೋಧಿಸುತ್ತಾನೆ. ಸಹಸ್ರ ಬಾಹುವೇ, ಇಹವ್ಯಾಪಿ

ಯಾದ ವಿಶ್ವಮೂರ್ತಿಯೇ ! ಕಿರೀಟಗದ, ಚಕ್ರಹಸ್ತವಾಗಿರುವ ನಿನ್ನ ಚತುರ್ಭುಜ, ದಿವ್ಯವಾದ ನಿನ್ನದೇ ಆದ ರೂಪವನ್ನು ನೋಡಲಿಚ್ಛಿಸುತ್ತೇನೆ. ಆದುದರಿಂದ ಆ ದರ್ಶನಕೊಡು. ಈ ವಿಶ್ವರೂಪದರ್ಶನ ಅಪರೂಪ, ಪೂರ್ವದಲ್ಲಿ ಕಂಡಿರಲಿಲ್ಲಾ ನೋಡಿದಾಗ ಆಶ್ಚರ್ಯ ಚಕಿತನಾದ. ನಂತರ ಮುಂದಿನ ತನ್ನ ಶತೃಗಳ ಸಂಹಾರವನ್ನು ನಾಶವನ್ನೂ ಕಂಡ. ಇವೆಲ್ಲಾ ಸಂತೋಷದಾಯಕವೇ ಆದರೆ ಆ ಭಯಂಕರ ರೂಪವನ್ನು ಅರ್ಜುನನಂತೆ ವೀರನಲ್ಲದವನಿಗೆ ತೋರಿದ್ದರೆ, ಭಯನಡುಕದಿಂದ ನೋಡಲಾರದೇ ಕಣ್ಣುಮುಚ್ಚಿಕೊಂಡು, ಬೇಡಾ, ದೇವ, ಬೇಡ, ನಿನ್ನರೂಪ ನೋಡಲಾರೆ ಎನ್ನುತ್ತಿದ್ದರೇನೋ, ಅರ್ಜುನನಂಥಾ ಅಪ್ರತಿಮವೀರನಿಗೇ ರೋಮಾಂಚವಾಯಿತು. ವಿಸ್ಮಯವಾಯಿತು. ದೀನತೆಯಿಂದ ನಮಸ್ಕರಿಸಿದನು. ಮೊದಲಿನಿಂದಲೂ ಸರಸದಿಂದ ಮಿತ್ರನೇ ಇವನೆಂಬ ಒಂದು ಹಿನ್ನೆಲೆಯಿದ್ದು ಧೈರ್ಯಗೆಡಲಿಲ್ಲಾ.

ಭಾಗವತದಲ್ಲಿ "ಯೋನುಗ್ರಹಾರ್ಥಂ ಭಜತಾಂ, ಪಾದಮೂಲಂ ಅನಾಮರೂಪೋ ಭಗವಾನನಂತಃ । ನಾಮಾನಿ ರೂಪಾಣಿ ಚ ಜನ್ಮ ಕರ್ಮಭಿಃ ಭೇಜೇ ಸಮಹ್ಯಂ ಪರಮಃ ಪ್ರಸೀದತು ॥" ಎನ್ನುವಂತೆ ನಾಮರೂಪ ರಹಿತನಾದ, ಮೂಲ ಬಂಧನವಿಲ್ಲದ ಅನಂತ ಪರಮಾತ್ಮನು, ಭಕ್ತಭಜಕರ ಅನುಗ್ರಹಾರ್ಥವಾಗಿಯೇ ನಾಮವನ್ನೂ, ರೂಪವನ್ನೂ ಜನ್ಮಕರ್ಮಗಳನ್ನೂ ಹೊರುವನು ; ಆ ಪರಮಪಾವನನು ನನಗೆ ಪ್ರಸೀದನಾಗಲೆಂದು ಭಜಿಸುವೆನು. – ಎನ್ನುವಭಾವದಲ್ಲಿ ಸ್ವಾಮಿ ದೇವಕಿಯು ಪ್ರಾರ್ಥಿಸಿರುವಂತೆ – "ರೂಪಂಯತ್ತತ್ಪ್ರಾಹುರವ್ಯಕ್ತ ಮಾದ್ಯಂ । ಬ್ರಹ್ಮಜ್ಯೋತಿ ರ್ನಿರ್ಗುಣಂ ನಿರ್ವಿಕಾರಂ । ಸತ್ತಾಮಾತ್ರಂ ನಿರ್ವಿಶೇಷಂ ನಿರೀಹಂ । ಸತ್ವಂ ಸಾಕ್ಷಾದ್ವಿಷ್ಣುರಧ್ಯಾತ್ಮ ದೀಪಂ ॥" ಯಾವ ರೂಪವನ್ನು ತಿಳಿದವರು ಅವ್ಯಕ್ತವೆಂದೂ, ಆದ್ಯಂ (ಪ್ರಥಮ), ಬ್ರಹ್ಮ, ಜ್ಯೋತಿ, ನಿರ್ಗುಣ, ನಿರ್ವಿಕಾರವೆಂದು, ಆ ಸದ್ವಸ್ತುವಿಗೆ ವಿಶೇಷಣಗಳಿಲ್ಲದಿದ್ದರೂ, ವಿಕಾರ ಕ್ರಿಯೆಗಳಿಲ್ಲದಿದ್ದರೂ, ಎಲ್ಲರ ಅಂತರಂಗದ ಅಧ್ಯಾತ್ಮ ದೀಪವಾಗಿರುವ ಸಾಕ್ಷಾತ್ ವಿಷ್ಣುವೇ ನೀನು–ಎಂದು ಅವ್ಯಕ್ತ ನಿರಾಕಾರ ನಿರ್ಗುಣ ಬ್ರಹ್ಮನಿಗೆ ವ್ಯಕ್ತ ಸಾಕ್ಷಿ, ಸಗುಣತ್ವವನ್ನು ವಿಷ್ಣು ಎಂಬ

ಸಂಕೇತದಲ್ಲಿ ಕೊಟ್ಟಿದ್ದಾಳೆ. ಈ ಅಧ್ಯಾತ್ಮ ದೀಪ ಅಂತರಂಗ ಸಾಕ್ಷಿಯನ್ನು ಗರ್ಭದಲ್ಲಿ ಧರಿಸಿ ಹೊತ್ತು ಹೆತ್ತು ದಿವ್ಯರೂಪ ದರ್ಶನವನ್ನು ಪಡೆದ ಮಹಾತಾಯಿಯು ಆ ರೂಪವನ್ನು ಕಂಡುದು, ಕಿರೀಟ ಗದಾ ಚಕ್ರಧಾರಿಯಾದ ಚತುರ್ಭುಜ ರೂಪದಲ್ಲಿ. ತಾಯಿಯ ವಾತ್ಸಲ್ಯ ದೃಷ್ಟಿಯಲ್ಲಿ ಕಂಡ, ಆ ಆಹ್ಲಾದಕರ ದಿವ್ಯರೂಪದಲ್ಲೇ ಇತರ ಭಕ್ತರಿಗೂ ಶ್ರೀ ಮಹಾವಿಷ್ಣುವು, ಶ್ರೀಕೃಷ್ಣನಾಗಿ ದರ್ಶನಕೊಟ್ಟಿದ್ದಾನೆ. ಅದೇ ಶಾಂತ ಸುಂದರ ರೂಪದಲ್ಲಿ ಅರ್ಜುನನು ಪುನಃ ಸ್ವಾಮಿಯನ್ನು ನೋಡಲಪೇಕ್ಷಿಸುತ್ತಾನೆ. ವಿಷ್ಣುವೆಂದು ಸಂಕೇತನಾಮದಿಂದ ಕರೆಯುವ ದೇವನಿಗೆ ಚತುರ್ಭುಜ, ಕಿರೀಟ ಶಂಖ ಚಕ್ರ ಗದಾ ಮೂರ್ತಿಯ ಕಲ್ಪನೆಯನ್ನೇ ಶಾಸ್ತ್ರಗಳೂ ವ್ಯಕ್ತಪಡಿಸಿವೆ.

ಕೇವಲ ನರರೂಪಧಾರಿಯಾದ ವಿಷ್ಣುವನ್ನು ಧ್ಯಾನಿಸುವಾಗ ಎರಡುಕೈ ನರರೂಪದಿಂದ ಬೇರ್ಪಡಿಸಿ, ಅಧಿಕಕೊಡಲು, ದೇವರೂಪನಿಗೆ ಚತುರ್ಭುಜಗಳ ಕಲ್ಪನೆಯು ಅನಾದಿಯಿಂದ ಬಂದಿದೆ. ಈ ಕೇವಲ ನರರೂಪದಲ್ಲೂ ನಾಲ್ಕುತೋಳು ಬಲವುಳ್ಳವನು. ಚಕ್ರವೂ, ಗದೆಯೂ ಸ್ವಾಮಿಯ ಸರ್ವರಕ್ಷಣೆಯ ಸಂಕೇತ. ಸಂಬೋಧಿಸುವಾಗಲೇ ಸಹಸ್ರಬಾಹು ವಿಶ್ವಮೂರ್ತಿಯೆಂದಿದ್ದರೂ, ನೋಡಬೇಕೆಂದಿಚ್ಛಿಸಿದ ಸೌಮ್ಯ ಸುಂದರ ಮೂರ್ತಿಯ ದರ್ಶನಕೊಡೆಂದು ಸ್ವಾಮಿಯನ್ನು ಪ್ರಾರ್ಥಿಸಿದ್ದಾನೆ.

ನನ್ನ ಹೆಸರು ನನ್ನ ಹಣೆಯಮೇಲೆ ಬರೆದಿಲ್ಲಾ. ಕರೆಯಲು ಸಂಕೇತವಾಗಿ ಮಾತಾ ಪಿತೃಗಳು ಯಾವದೋ ದೇವರ ದಿವ್ಯನಾಮವನ್ನು ನಾಮಕರಣಮಾಡಿರುವಷ್ಟೆ. ನನ್ನ ರೂಪ, ಅಲಂಕಾರಗಳು ಬದಲಾವಣೆಯಾಗುತ್ತಲೇ ಇವೆ. ಆದರೆ ಮನೆಯಲ್ಲಿ ಮಕ್ಕಳು "ಅಪ್ಪ" ಎಂದರೆ, ತಂದೆರೂಪ ಕಂಡರೆ, "ಆ" ಎನ್ನುತ್ತೇನೆ, ಆ ರೂಪವನ್ನೇ ಅವರ ಮನದಲ್ಲಿ ಮೂಡುತ್ತೇನೆ. ವೃತ್ತಿಜೀವನದಲ್ಲಿ "ಡಾಕ್ಟರೇ" ಎಂದರೆ, "ಓ" ಎನ್ನುತ್ತೇನೆ, ರೋಗದಿಂದ ಅಸಹಾಯರಾದವರಿಗಾಶ್ರಯ ಕೊಡುತ್ತ ಅವರ ಮನದಲ್ಲಿನ ರೂಪವನ್ನೇ ತೋರುತ್ತೇನೆ. ಮಿತ್ರವೃಂದವೂ, ಜನಸಾಮಾನ್ಯವೂ 'ನಾರಾಯಣ'ನೆಂದು ಸಂಭೋದಿಸಿದರೆ ತಿರುಗುತ್ತೇನೆ. ಅವರೊಡನೆ ವ್ಯವಹಾರದ ರೂಪ ಹೊಂದುತ್ತೇನೆ.

ಅಧಿಕಾರ ಸ್ಥಾನದಲ್ಲಿ 'ಸಾಹೇಬರು' ಎಂದರೆ ಅದನ್ನೇ ಅನ್ವಯಿಸಿ ಕೊಳ್ಳುತ್ತೇನೆ. ಆಶ್ರಿತ ಕರ್ಮವರ್ಗಕ್ಕೆ ತತ್ಕಾಲಿಕ ಯಜಮಾನ ರೂಪ ವಹಿಸುತ್ತೇನೆ. ಇದ್ಯಾವುವೂ ನನ್ನ ಸ್ವರೂಪ ಲಕ್ಷಣವಲ್ಲಾ, ಇವ್ಯಾವುವೂ ನನ್ನ ಹೆಸರಲ್ಲಾ. ಆದರೂ ಎಲ್ಲವನ್ನೂ ಅನ್ವಯಿಸಿ ವ್ಯವಹರಿಸುತ್ತೇನೆ. ಅಂತೆಯೇ ಸ್ವಾಮಿಯು ಅನಂತನಾಮರೂಪಗಳೂ ಭಕ್ತರ ಭಜಕರೊಡನೆ ಅವರ ಕಲ್ಪನೆಯಂತೆ, ಅವರ ನಾಮಾಂಕಿತದಂತೆ ವ್ಯವಹರಿಸಲೇ ಸ್ವಾಮಿ ಹೊತ್ತಿರುವುದು. ನಿರ್ಗುಣ, ನಿರ್ವಿಕಲ್ಪ ಪರಬ್ರಹ್ಮನಾದರೂ ಭಕ್ತಾನು ಗ್ರಹಾರ್ಥವಾಗಿ ಅನುಕಂಪದಿಂದ ಸ್ವಾಮಿ ಅನೇಕ ನಾಮರೂಪಗಳಲ್ಲಿ ಆ ಆ ಭಕ್ತಜನ ಪ್ರಾರ್ಥನಾ ಕಲ್ಪನೆಯಂತೆ, ಅಧ್ಯಾತ್ಮ ದೀಪನಾಗಿ ಅಂತ ರ್ಗತನಾದ ಸಾಕ್ಷಿಯು, ದೃಶ್ಯನಾಗುತ್ತಾನೆ.

ಅಂತೆಯೇ ಭಗವಂತನು ಇಂತೆಂದನು :—

**ಮಯಾ ಪ್ರಸನ್ನೇನ ತವಾರ್ಜುನೇದಂ**
**ರೂಪಂ ಪರಂ ದರ್ಶಿತಮಾತ್ಮಯೋಗಾತ್ ।**
**ತೇಜೋಮಯಂ ವಿಶ್ವಮನಂತಮಾದ್ಯಂ**
**ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಮ್** ॥೪೭॥

ಎಲೈ ಅರ್ಜುನನೇ ಪ್ರಸನ್ನನಾದ ನನ್ನಿಂದ, ನನ್ನ ಆತ್ಮಯೋಗ ಬಲದಿಂದ, ಈ (ಪರಂ) ದಿವ್ಯರೂಪ, ನಿನಗಾಗಿ ತೋರಿಸಲ್ಪಟ್ಟಿತು. "ಸತ್ಯ ಜ್ಞಾನ ಮನಂತಂ ಬ್ರಹ್ಮ"—ವಿಶ್ವಾಕಾರವಾಗಿಯೂ, ತೇಜೋಮಯ ವಾಗಿಯೂ, ಅನಂತವಾಗಿಯೂ, ಸರ್ವಕ್ಕೂ ಆದಿಯಾಗಿಯೂ ಇರುವ ಈ ಮಹದ್ರೂಪವು ನಿನ್ನಿಂದಲ್ಲದೆ ಪೂರ್ವದಲ್ಲಿ ಅನ್ಯರಾರಿಂದಲೂ ಯಾವಾಗಲೂ ಕಂಡಿಲ್ಲಾ. (ನ ದೃಷ್ಟ ಪೂರ್ವಂ) ಸತ್ ಚಿತ್ ಅನಂತ ಅನಂತವೇ ಆನಂದ, – ಸಚ್ಚಿದಾನಂದವೆಂದು, ಅವ್ಯಕ್ತ, ನಿರಾಕಾರ, ಸದಸತ್‌ಪರನಾದ, ನಿರ್ಗುಣ ಬ್ರಹ್ಮನನ್ನು, ಒಂದು ನೆಲೆಗೆ ನಿಲ್ಲಿಸಿದೆ. ಸತ್ ಎಲ್ಲೆಲ್ಲಿಯೂ ವ್ಯಾಪಿಸಿರುವ ವಿಶ್ವತತ್ವ. ಚಿತ್ ತೇಜೋರೂಪವಾಗಿ ಬೆಳಗುವುದು. ಅನಂತಾನಂದವೇ ಪಸರಿಸಿರುವುದು ಇದೇ ನಮ್ಮ ಬ್ರಹ್ಮ ಭಾವನೆಗೆ, ಸರ್ವದರಲ್ಲಿ ಕಾಣುವುದಕ್ಕೆ ಆದಿ. ಅದನ್ನೇ "ತೇಜೋ

ಮಯಂ ವಿಶ್ವಮನಂತ ಮಾದ್ಯಂ" ಪರಂ ರೂಪಂ, ಪೂರ್ವಂ ಅದೃಷ್ಟಂ ಪ್ರಸನ್ನನಾಗಿ ಸ್ವಾಮಿ ಸಕಾರ, ಸಗುಣ ಬ್ರಹ್ಮ ಸ್ವರೂಪವನ್ನು ತೋರಿದುದು.

ನ ವೇದಯಜ್ಞಾಧ್ಯಯನೈರ್ನ ದಾನೈ-
ರ್ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ ।
ಏವಂ ರೂಪಃ ಶಕ್ಯ ಅಹಂ ನೃಲೋಕೇ
ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ॥೪೮॥

ಕುರುಗಳೋಳ್ ಅತಿವೀರನೇ (ಅರ್ಜುನನೇ) ಪಾಂಡವರೂ, ಕೌರವರೂ ಬಾಲ್ಯದಿಂದಲೂ ಒಟ್ಟಿಗೆ ಗುರುಗಳಾದ ಭೀಷ್ಮ ದ್ರೋಣರಲ್ಲಿ ಶಸ್ತ್ರ ವಿದ್ಯಾಭ್ಯಾಸಮಾಡಿದರು. ಅವರೆಲ್ಲರೂ ವೀರರಾಗಿ ತರಪೇತಾದರೂ, ಅವರಲ್ಲಿ ಅರ್ಜುನನೇ ಅತಿ ವೀರನೆಂದು ಮೊದಲಿನಿಂದಲೂ ಸ್ಥಾಪಿತವಾಗಿತ್ತು. ಮಿಕ್ಕೆಲ್ಲಶತೃಪಕ್ಷದ ವೀರರನ್ನೆಲ್ಲಾ ಗೆಲ್ಲಬಲ್ಲ ಸಾಮಾರ್ಥ್ಯವುಳ್ಳವನೆಂದು ಅರ್ಜುನನಿಗೆ ಮನಸದಟ್ಟುಮಾಡಲೇ "ಕುರುಪ್ರವೀರ" ಎಂದು ಸ್ವಾಮಿಯು ಸಂಭೋದನೆ.

ಬರೀ ಕಾಯಶಕ್ತಿಯೊಂದೇ ಅಲ್ಲಾ. ಮನಶ್ಯಕ್ತಿ, ಬುದ್ಧಿಶಕ್ತಿಗಳಲ್ಲೂ ಎಲ್ಲರಿಗಿಂತಲೂ ವೀರನಾದುದರಿಂದಲೇ, ಅರ್ಜುನನು ಆ ಪಾಂಡವ ಕೌರವ ಸಮೋಹದಲ್ಲಿ, ತಾನೇ ಸ್ವಾಮಿಯ ಮಿತ್ರತ್ವವನ್ನು ಅತಿಯಾಗಿ ಸಂಪಾದಿಸಿ, ವಿಶ್ವರೂಪದರ್ಶನ ಕೂಡಾ ಪಡೆದನು.

ವೇದಗಳಿಂದಲೂ, ಯಜ್ಞ, ಅಧ್ಯಯನಗಳಿಂದಲೂ, ದಾನಸತ್ಕ್ರಿಯೆಗಳಿಂದಲೂ ಉಗ್ರ ತಪಸ್ಸಿನಿಂದ ಕೂಡಾ, ಈ ನರಲೋಕದಲ್ಲಿ ಈ ನನ್ನ ದೀವ್ಯರೂಪವನ್ನು ಇತರರಿಂದ್ಯಾರಿಂದಲೂ ನೋಡಲುಶಕ್ಯವಿಲ್ಲಾ. ಮುಂಡಕೋಪನಿಷತ್ತಿನಲ್ಲಿ (೩, ೨, ೩) "ನಾಯಮಾತ್ಮಾ ಪ್ರವಚನೇನ ಲಭ್ಯೋ ನಮೇಧಯಾ ನಬಹುನಾ ಶ್ರುತೇನ।" ಎಂದೂ, (೩, ೨, ೪) "ನಾಯಮಾತ್ಮಾ ಬಲ ಹೀನೇನ ಲಭ್ಯೋ ನ ಚ ಪ್ರಮದಾತ್ತಪ ಸೊ ವಾಪ್ಯಲಿಂಗಾತ್।" ಎನ್ನುವುದನ್ನು ವೇದಾಧ್ಯಯನಗಳಿಂದಲೂ ಬುದ್ಧಿಮೇಧಾ ಶಕ್ತಿಗಳಿಂದಲೂ ಹೆಚ್ಚು ಶ್ರವಣದಿಂದಲೂ, ತಪಸ್ಸುಗಳಿಂದಲೂ ಆತ್ಮವು

ದೊರಕದು. ಬಲಹೀನನಿಗೂ, ಪ್ರಮಾದವಶನಿಗಂತೂ ಸಾಧ್ಯವೇ ಇಲ್ಲಾ. (೩, ೨, ೩ ಉತ್ತರಾರ್ಧ) "ಯಮೇವೈಷವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವೃಣುತೇ ತನೂಂ ಸ್ವಾಮ್ ।" ತಾನೇ ಪ್ರಸನ್ನನಾಗಿ, ತಾನಾಗಿ ಯಾರಿಗೆ ತನ್ನ ತನುವನ್ನು (ಸ್ವರೂಪವನ್ನು) ವಿವರಿಸಿ ಕಾಣಿಸಿಕೊಳ್ಳು ತ್ತಾನೋ ಅವರಿಗೇ ಈ ಆತ್ಮ(ಬ್ರಹ್ಮ) ರೂಪದರ್ಶನ. ಇದೇ ಭಾವವನ್ನೇ ಭಗವಂತ ಹೇಳುವುದು. ಇದೇ ಭಾವದಿಂದ ಸ್ವಾಮಿ ತಾನೇ ಪ್ರಸನ್ನನಾಗಿ, ತಾನಾಗಿ ಅರ್ಜುನನಿಗೆ ಅನುಗ್ರಹರೂಪದಿಂದ ತನ್ನ ದಿವ್ಯ ಸ್ವರೂಪದ ವಿವರಣೆಯನ್ನು ನೋಡಲು ದಿವ್ಯಚಕ್ಷು, ಬೇಕಾದಶಕ್ತಿ ತಾನೇ ದಯ ಪಾಲಿಸಿ ವಿಶ್ವರೂಪ ದರ್ಶನರೀತ್ಯಾತೋರ್ಪಟ್ಟನು. ಕಠೋಪನಿಷತ್ತಿ ನಲ್ಲೂ (೨, ೨೩) "ನಾಯಮಾತ್ಮಾ.... ಸ್ವಾಮ್ ।" ಎನ್ನುವ ಪೂರ್ತಿ ಶ್ಲೋಕವು ಬರುತ್ತದೆ – ಯಮಧರ್ಮನ ವಚನವಲ್ಲಿ. ಅಷ್ಟೇ ಅಲ್ಲದೆ ಮುಂದಿನ ಶ್ಲೋಕದಲ್ಲೇ (೨, ೨೪) "ನಾವಿರತೋದುಶ್ಚರಿತಾನ್ನಾ ಶಾನ್ತೋನಾಸಮಾಹಿತಃ । ನಾಶಾಂತಮಾನಸೋವಾಪಿ ಪ್ರಜ್ಞಾನೇನೈನ ಮಾಪ್ನುಯಾತ್ ।" ಎಂದಿದೆ.

ಬರೀ ಪ್ರಜ್ಞೆ (ವಿದ್ಯ, ಅಧ್ಯಯನ, ಬುದ್ಧಿ) ಯಿಂದಲೇ ಆತ್ಮವನ್ನು ಪಡೆಯಲಾಗುವುದಿಲ್ಲಾ. ದುಶ್ಚರಿತದಿಂದ ದೂರನಾಗದವನೂ, ಶಾಂತಿ ಸಮಾಹಿತನಲ್ಲದವನೂ, ಮನಸ್ಸಿನಲ್ಲಿ ಶಾಂತಿಯಿಲ್ಲದವನಿಂದಲೂ, ಪ್ರಜ್ಞೆ ಯೊಂದರಿಂದಲೇ ಆತ್ಮ ಪಡೆಯಲು ಸಾಧ್ಯವಿಲ್ಲಾ. ಯಮನಿಯಮ ಮುಖ್ಯ. ದುರಾಚಾರವನ್ನು ಬಿಟ್ಟು ಸದಾಚಾರ ಸಂಪನ್ನನಾಗಿ, ಶಾಂತಿ ಸಮಾಹಿತನಾಗಿ, ಮನಸ್ಸನ್ನು (ಅಂತರಂಗವನ್ನೂ) ಶಾಂತಿಯುತವನ್ನಾಗಿ ಮಾಡಿಕೊಂಡು, ನಂತರ ಪ್ರಜ್ಞೆಪಡೆದರೆ, ಆಗ ಭಗವದನುಗ್ರಹದಿಂದ ತಾನೇ ಅನುಕಂಪದಿಂದ ತೋರಿಕೊಂಡಾಗ (ದರ್ಶನವಿತ್ತಾಗ) ಆತ್ಮ ಲಾಭ.

ಅದಕ್ಕೇ ಸ್ವಾಮಿ ವಿವೇಕಾನಂದರು, ದುರಾಚಾರವನ್ನೆಲ್ಲಾ ಬಿಟ್ಟು, ಕಾಯಬಲ, ಮನೋಬಲವನ್ನೂ ಸಾಧಿಸಿ, ಅಂತರ ಶಾಂತಿ ಸಂಪಾದಿಸಿ ರೆಂದು, ಯುವಕ ತಂಡಕ್ಕೆಲ್ಲಾ "ನಾಯಮಾತ್ಮಾ ಬಲ ಹೀನೇನ ಲಭ್ಯೋ"

ಎನ್ನುವುದನ್ನು ಒತ್ತಿಒತ್ತಿ ಹೇಳುತ್ತಿದ್ದರು. ಬರೀ ಇಹ ಸುಖಕ್ಕೇ ಅಲ್ಲ; ಪರಕೈವಲ್ಯಕ್ಕೂ, ಮನಶ್ಶಾಂತಿಗೂ, ನಮ್ಮ ಅಧ್ಯಾತ್ಮ ವಿದ್ಯ ಸಂಪಾದನೆಗೂ ಬಲವಂತನಾಗಿ, ಕಾಯ ಶಕ್ತಿಯುತನಾಗಿ ಇಹಪರ ವೆರಡೂ ಸಾಧಿಸಬೇಕೆಂದು, ನಿಶ್ಶಕ್ತರಾದ, ಯಾವುದರಲ್ಲೂ ಆಸಕ್ತಿ ಯಿಲ್ಲದ, ಪ್ರಮಾದವಶರಾದ ಆಗಿನ ಪರದಾಸ್ಯದಲ್ಲಿ ನರಳುತ್ತಿದ್ದ ಭಾರತ ಯುವಕ ಯುವತಿ ತಂಡಕ್ಕೆ ಪದೇಪದೇ ಉಪದೇಶಿಸುತ್ತಿದ್ದರು. ಅದರಿಂದಲೇ ಎಚ್ಚತ್ತು ಸ್ವತಂತ್ರ ಸಾಧಿಸಿದೆವೇನೋ.

**ಮಾ ತೇ ವ್ಯಥಾ ಮಾ ಚ ವಿಮೂಢಭಾವೋ**
**ದೃಷ್ಟ್ವಾ ರೂಪಂ ಘೋರಮೀದೃಙ್ಮಮೇದಮ್ ।**
**ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ**
**ತದೇವ ಮೇ ರೂಪಮಿದಂ ಪ್ರಪಶ್ಯ ॥೪೯॥**

ಈ ಘೋರ ರೂಪದರ್ಶನವನ್ನು ನೋಡಿ, ವ್ಯಥೆಯೂ ಮೂಢ ಭಾವವೂ ಹೊಂದಬೇಡ. ವ್ಯಥೆ, ಭೀತಿಯನ್ನು ಬಿಟ್ಟು, ಮನಸ್ಸು ಪ್ರೀತನಾಗಿ ಪುನಃ ನನ್ನ ಪೂರ್ವದ ರೂಪವನ್ನೇ ನೋಡು.

ಮೂಢ ಭಾವದಿಂದಲೇ ವ್ಯಥೆ, ಭೀತಿ. ಸ್ವಾಮಿಯ ಘೋರರೂಪ ದರ್ಶನವನ್ನು ಕಂಡು ಕೂಡಾ ಮೂಢಭಾವಹೊಂದಬಾರದು. ದೇವನ ವಿಧಾಯಕ ಕಾರ್ಯಕ್ಕಣಿಮಾಡುವುದಕ್ಕಾಗಿ ವಿನಾಶಕಾರ್ಯಗಳನ್ನೆಸಗಲು ಘೋರರೂಪ ತಾಳಬಹುದು. ಆಗ ಆ ಭಾವ ಕಂಡು ಮೂಢಭಾವ ಹೊಂದಿದರೆ ಭೀತಿಯೂ ವ್ಯಥೆಯೂ ಉಂಟಾಗುತ್ತೆ. ಭಯವನ್ನು ಬಿಟ್ಟು ಮನಃ ಪ್ರಸನ್ನತೆಯಾದರೆ ಮೂಢತನವೂ, ವ್ಯಥೆಯೂ ಹೋಗುತ್ತೆ. ಮನಸ್ಸೇ ಎಲ್ಲಕ್ಕೂ ಕಾರಣ. ಮೂಢತನದಿಂದ ಬಂಧನ; ಪ್ರಸನ್ನತೆ ಯಿಂದ ಮೋಕ್ಷ. ಮನಸ್ಸು ಯಾವ ವೃತ್ತಿಯಲ್ಲಿ ಯಾವ ದೃಶ್ಯವನ್ನಾದರೂ ನೋಡುತ್ತದೆಯೋ ಅದೇ ಪ್ರಭಾವದಿಂದ ವ್ಯಥೆ ಅಥವಾ ಪ್ರಸನ್ನತೆ ಯುಂಟಾಗುತ್ತೆ. ಮನೋವೃತ್ತಿಯನ್ನೇ ಬದಲಾಯಿಸುವಂತೆ ಭಗವಂತ ಬುದ್ಧಿವಾದ ಹೇಳುತ್ತಾನೆ.

**ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ
ಸ್ವಕಂ ರೂಪಂ ದರ್ಶಯಾಮಾಸ ಭೂಯಃ ।
ಆಶ್ವಾಸಯಾಮಾಸ ಚ ಭೀತಮೇನಂ
ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ॥೫೦॥**

ಸಂಜಯನು ಧೃತರಾಷ್ಟ್ರನನ್ನು ಕುರಿತು ಹೇಳುವ ಶ್ಲೋಕ ಇದು. ಮುಂದಿನದು ಅರ್ಜುನ ಹೇಳುವುದು. ನಂತರ ೪ ದಿವ್ಯ ಶ್ಲೋಕಗಳ 'ಭಗವಾನುವಾಚ'ವಲ್ಲಿ ಅಧ್ಯಾಯ ಸಮಾಪ್ತಿ. ಹೀಗೆ ಈ ಅಧ್ಯಾಯದಲ್ಲಿ ಈ ಮೂವರ ವಚನದಲ್ಲಿ ಒಂದು ದಿವ್ಯ ವಾಕ್ಚಿತ್ರವನ್ನು ಅವರವರ ಭಾವದಲ್ಲಿ ಮೂಡಿದ್ದಾರೆ, ಕವಿ ವ್ಯಾಸಋಷಿಗಳು.

ಈ ರೀತಿಯಾಗಿ ವಾಸುದೇವನು ಅರ್ಜುನನಿಗೆ ಹೇಳಿ ಪುನಃ ತನ್ನ ನಿಜರೂಪವನ್ನು ತೋರಿದನು. ಮಹಾತ್ಮನು ಮರಳಿ ಸೌಮ್ಯಾಕಾರ ತಾಳಿ ಭಯಗೊಂಡಿದ್ದ ಅರ್ಜುನನನ್ನು ಸಮಾಧಾನಿಸಿದನು. ಆ ವಿಶ್ವರೂಪ ದರ್ಶನವನ್ನು ತೋರಿದವನೂ ಆ ಮಹಾತ್ಮನೇ, ಈ ಸಾಮ್ಯರೂಪ ದರ್ಶನವನ್ನು ತೋರುತ್ತಿರುವವನೂ ಆ ಮಹಾತ್ಮನೇ, ದಿವ್ಯ ಚಕ್ಷು ದಯ ಪಾಲಿಸಿ ದಿವ್ಯದರ್ಶನವನ್ನು ತೋರಿದವನೂ ಅವನೇ, ಸಾಧಾರಣ ಚಕ್ಷುಸ್ಸಿನಲ್ಲಿ ನೋಡಬಹುದಾದ ಈ ದರ್ಶನವೂ ಅವನದೇ. ಬಹುರೂಪಿ, ಅನೇಕರೂಪಿ, ಅವರವರ ಚಿತ್ತಕ್ಕನುಗುಣವಾಗಿ ದರ್ಶನಕೊಡುವನು.

**ದೃಷ್ಟ್ವೇದಂ ಮಾನುಷಂ ರೂಪಂ । ತವ ಸೌಮ್ಯಂ ಜನಾರ್ದನ ।
ಇದಾನೀಮಸ್ಮಿ ಸಂವೃತ್ತಃ । ಸಚೇತಾಃ ಪ್ರಕೃತಿಂ ಗತಃ ॥೫೧॥**

ಇದರಿಂದ ಅರ್ಜುನನಲ್ಲಾದ ಶಾಂತತೆ ಅವನೇ ಹೇಳುತ್ತಾನೆ. ಜನಾರ್ಧನನೇ, ಸೌಮ್ಯವಾದ ಈ ನಿನ್ನ ಮಾನುಷರೂಪವನ್ನು ಈಗ ನೋಡಿ ನನ್ನ ವೃತ್ತಿಯು ಸಮಾಧಾನಗೊಂಡು, ನನ್ನ ಪ್ರಕೃತಿಯು ಸಚೇತವಾಗಿ ನಿಜ ಭಾವವನ್ನು ಹೊಂದಿತು. ಭಯ, ಮೂಢಭಾವ ವ್ಯಥೆ ಎಲ್ಲವೂ ಮಾಯವಾದವು. ತನ್ನ ಮುಂಚಿನ ನಿಜಸ್ವಭಾವವಾದ ಶಾಂತವೃತ್ತಿಯು ಮೂಡಿತು. ಮನೋಭೀಷ್ಟವು ಪೂರ್ತಿಯಾಗಿ ಶಾಂತಮನೋಭಾವ

ಹೊಂದಿದನು. ಮನುಷ್ಯರಿಗೆ ಮಾನುಷರೂಪ ತೋರುವ ಜನರ ಜನಾರ್ಧನ. 'ಸೌಮ್ಯಜನಾರ್ಧನ' ಎಷ್ಟು ಉಚಿತವಾಗಿದೆ ಸಂಭೋದನೆ.

ಇದು ಬಹು ಹೆಚ್ಚಿನಲಾಭ. ಅಮೃತತ್ವವು, ಯಥಾರ್ಥಸ್ವರೂಪವು ಕಂಡು, ಸಸುತೂಕ ಮನಸ್ಸಾದಾಗ, ಭಗವದ್ಭಕ್ತನಿಗೆ ಬರುವ ಮನಃ ಶಾಂತಿ ಸುಖವಿದು. ಅದ್ವೈತ ತಾರಾವಶಿಯಲ್ಲಿ, ಶ್ರೀ ಸದಾಶಿವ ಬ್ರಹ್ಮೇಂದ್ರರು ಮುಕ್ತಾಯಗೊಳಿಸುವಂತೆ "ಶ್ರೀ ಗುರುಕಟಾಕ್ಷ ಪಾತ್ರಾ, ಶ್ಶಿಶಿರಶ್ಯಮಯಂತು ಚಿತ್ತಸಂತಾಪ ||"

**ಸುದುರ್ದರ್ಶಮಿದಂ ರೂಪಂ । ದೃಷ್ಟವಾನಸಿ ಯನ್ಮಮ ।**
**ದೇವಾ ಅಪ್ಯಸ್ಯ ರೂಪಸ್ಯ । ನಿತ್ಯಂ ದರ್ಶನಕಾಂಕ್ಷಿಣಃ ||೫೨||**

ಭಗವಂತನು ಸಮಾಪ್ತಿಮಾಡುತ್ತಾನೆ. ಅತ್ಯಂತ ದುರ್ಲಭವಾದ ಈ ನನ್ನ ರೂಪವನ್ನು ನೀನು ನೋಡಿರುವೆ. ದೇವತೆಗಳೂ ಕೂಡ ನಿತ್ಯವೂ (ಯಾವಾಗಲೂ) ಈ ನನ್ನ ಅಪರೂಪ ರೂಪವನ್ನು ದರ್ಶನ ಮಾಡಲು ಆಕಾಂಕ್ಷೆಯುಳ್ಳವರಾಗಿರುವರು.

**ನಾಹಂ ವೇದೈರ್ನ ತಪಸಾ । ನ ದಾನೇನ ನ ಚೇಜ್ಯಯಾ ।**
**ಶಕ್ಯ ಏವಂವಿಧೋ ದ್ರಷ್ಟುಂ । ದೃಷ್ಟವಾನಸಿ ಮಾಂ ಯಥಾ ||೫೩||**

ನೀನು ಯಾವ ವಿಧದಲ್ಲಿ ಈ ನನ್ನ ರೂಪವನ್ನು ನೋಡಿದೆಯೋ, ಆ ರೀತಿ ವೇದಾಧ್ಯಯನದಿಂದಲಾಗಲೀ, ತಪಸ್ಸಿನಿಂದಾಗಲೀ ದಾನ ದಿಂದಾಗಲೀ ಯಜ್ಞಗಳಿಂದಾಗಲೀ ಯಾರೂ ನೋಡಲಶಕ್ಯರು.

ತೈತ್ತರೀಯ ನಾರಾಯಣದಲ್ಲಿ "ನ ಕರ್ಮಣಾ ನ ಪ್ರಜಯಾ ಧನೇನ, ತ್ಯಾಗೇನೈಕೇ ಅಮೃತತ್ವಮಾನಶುಃ" ಎಂದೂ ಕಠೋಪನಿಶತ್ ಯಜುರ್ವೇದದಲ್ಲಿ "ನ ಕರ್ಮಣಾ ನ ಪ್ರಜಯಾ ನ ಚಾನ್ಯೇನಾಪಿ ಕೇನ ಚಿತ್ । ಬ್ರಹ್ಮವೇದನ ಮಾತ್ರೇಣ, ಬ್ರಹ್ಮಾಪ್ನೋತ್ಯೇವ ಮಾನವಃ ||" ಎಂದಿದೆ.

ಈ ಶ್ಲೋಕವು ಭಗವಂತನು ಮುಂಚೆಯೇ ಹೇಳಿದ ೪೮ ನೇ ಶ್ಲೋಕದ ಪ್ರತಿಧ್ವನಿಯಂತಿದೆ. ಭಗವಂತನ ಸಾಕ್ಷಾತ್ಕಾರವು ಎಷ್ಟು ಕಷ್ಟವೆಂದೂ,

ದುರ್ಲಭವೆಂದೂ ತಿಳಿಸಲೇ ಇದನ್ನು ಒತ್ತಿ ಸ್ವಾಮಿ ಹೇಳಿರುವುದು, ಇದು ಸ್ವಪ್ರಯತ್ನದಿಂದೊಂದರಿಂದಲೇ ಸಾಧ್ಯವಿಲ್ಲವೆಂದೂ, ದೇವ ದೇವನೇ ಸ್ವತಃ ಕರುಣಿಸಿ ಯಾರಿಗೆ ತನ್ನ ಸ್ವಂತ ಸ್ವರೂಪವನ್ನು ಬಿಚ್ಚಿ ತೋರಿಸಿ ಕೃಪೆಮಾಡುತ್ತಾನೋ ಅವರಿಗೇ ಸಾಧ್ಯವೆಂದೂ ಹೇಳಿ, ಅದಕ್ಕೆ ಮುಖ್ಯಸಾಧನವಾದ "ಅನನ್ಯ ಭಗವದ್ಭಕ್ತಿ"ಯನ್ನು ಮುಂದಿನ ಶ್ಲೋಕ ದಲ್ಲಿ ತರಲು ಭಗವಂತನು ಇದನ್ನು ಅವತರಣಿಕೆಯಾಗಿ ಮಾಡಿದ್ದಾನೆ. ಸಾಧ್ಯವೇ ಇಲ್ಲದುದನ್ನು ಸಾದಿಸುವುದೆಂತು !

**ಭಕ್ತ್ಯಾ ತ್ವನನ್ಯಯಾ ಶಕ್ಯ । ಅಹಮೇವಂ ವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ । ಪ್ರವೇಷ್ಟುಂ ಚ ಪರಂತಪ ॥೫೪॥**

ಎಲೈ ಅರ್ಜುನನೇ, ನನ್ನನ್ನು ಯಥಾರ್ಥವಾಗಿ ತಿಳಿವುದಕ್ಕೂ ಯಥಾರ್ಥವಾಗಿ ನೋಡಿ, ಸರಿಯಾದ ತತ್ವದೃಷ್ಟಿಯಿಂದ ಸಾಕ್ಷಾತ್ಕರಿಸು ವುದಕ್ಕೂ, ನನ್ನನ್ನೇ ಹೊಂದುವುದಕ್ಕೂ, ಅನನ್ಯ ಭಕ್ತಿಯಿಂದಲೇ ಸಾಧ್ಯ–ಪರಂತಪನೇ.

ಹಿಂದಿನ ಶ್ಲೋಕದಲ್ಲಿ ಮತ್ತು ೪೮ ನೇ ಶ್ಲೋಕದಲ್ಲಿ ವೇದ, ತಪಸ್ಸು ಯಜ್ಞ ದಾನಗಳಿಂದ ಸಾಧ್ಯವಾಗದ ಭಗವಂತನ ದರ್ಶನ ಯಾವುದರಿಂದ ಸಾಧ್ಯ ಎನ್ನುವುದು-ಭಕ್ತಿಯಿಂದಲೇ, ಅದೂ ಭಕ್ತ್ಯಾ ಅನನ್ಯಯಾ, ಅನನ್ಯ ಭಕ್ತಿಯಿಂದಲೇ ಸಾಧ್ಯವೆಂದು ಈ ಶ್ಲೋಕದಲ್ಲಿ ಪರಮಾತ್ಮ ಹೇಳುತ್ತಾನೆ. ಇದೇ ಭಕ್ತಿಯೋಗಕ್ಕೆ ದಿವ್ಯವಾಗಿ ಸಾರಿರುವ ಮುಂದಿನ ೧೨ ನೇ ಅಧ್ಯಾಯದಲ್ಲಿನ ಭಕ್ತನ ಲಕ್ಷಣಗಳಿಗೂ, ಪರಮಾತ್ಮನನ್ನು ಹೊಂದುವ ಭಕ್ತಿ ಮಾರ್ಗಕ್ಕೂ ಪೀಠಿಕೆ.

"ಅನನ್ಯ"ವೆನ್ನುವುದರ ಅರ್ಥ ನಾರದಭಕ್ತಿಸೂತ್ರ (೧, ೧೦) ದಲ್ಲಿ "ಅನ್ಯಾಶ್ರಯಾಣಾಂ ತ್ಯಾಗೋಽನನ್ಯತಾ ।" ಎಂದಿದೆ. ಇತರ ಆಶ್ರಯ ವನ್ನೆಲ್ಲಾ ತ್ಯಜಿಸಿ, ಸ್ವಾಮಿಯೊಬ್ಬನನ್ನೇ ಯಾವಾಗಲೂ ಆಶ್ರಯಿಸು ವುದೇ ಅನನ್ಯ "ಅ+ಅನ್ಯ." ಆಶ್ರಯದಾತನನಿರುವನೇ ಒಬ್ಬನಾದಮೇಲೆ ಅನುಸರಿಸಬೇಕಾದವರು ಅನ್ಯರ್ಯಾರಿದ್ದಾರೆ. ಮುಕುಂದಮಾಲಾದಲ್ಲಿ "ನಾರಾಯಣೋ ತಿಷ್ಟತಿ" ಶ್ರೀಮನ್ನಾರಾಯಣನೇ ಇರುವಾಗ

"ಅಲ್ಪಾರ್ಥದಂ" ಅಲ್ಪ ಅರ್ಥವುಳ್ಳ, ಮಹಾಶಕ್ತ, ಮಹಾಮಹಿಮ, ಮಹದರ್ಥವುಳ್ಳ ಸ್ವಾಮಿಯೇ ಇರುವಾಗ, ಚಿಕ್ಕಪುಟ್ಟ ಇತರರನ್ನು ನಾನು ಏಕೆ ಆಶ್ರಯಿಸಲಿ, ಯಾಚಿಸಲಿಯೆಂದಿದ್ದಾರೆ. ಅದರಲ್ಲೂ ಸ್ವಾಮಿ ಕೊಡುವುದರಲ್ಲಿ ಬಿಚ್ಚಿದಕೈ.

"ನಾಥೇನಃ ಪುರುಷೋತ್ತಮೇ ತ್ರಿಜಗತಾಮೇ ಕಾಧಿಪೇ ಚೇತಸಾ |
ಸೇವ್ಯೇ ಸೇವ್ಯಪದಸ್ಯ ದಾತರಿ ಸುರೇ ನಾರಾಯಣೇ ತಿಷ್ಠತಿ ||
ಯಃ ಕಿಚಿತ್ಪುರುಷಾಧಮಂ ಕತಿಪಯಗ್ರಾಮೇಶಮಲ್ಪಾರ್ಥಧಂ |
ಸೇವಾಯೈಮೃಗಯಾಮಹೇ ನರಮಹೋಮೂಕಾವರಾ ಕಾವಯಂ ||"

ಸ್ವಾಮಿಗೆ ಉಪಯೋಗಿಸಲ್ಪಟ್ಟಿರುವ ವಿಶೇಷಣಗಳಾದರೂ ನೋಡಿ. ನಾಥ, ಪುರುಷೋತ್ತಮ, ತ್ರಿಜಗತಮೇಕಾಧಿಪ, ಸೇವ್ಯೇಸೇವ್ಯಪದ, ದಾತರಿಸುರೇ – ನಮಗೂ ಆಶ್ರಯಿಸಲು ಎಂಥಾ ದಿವ್ಯ ಸಾನ್ನಿಧ್ಯ.

ಮಹಾ ನಾರಾಯಣೋಪನಿಷತ್ತಿನಲ್ಲಿ–ಯಾರ್ಯಾರು ಯ್ಯಾವ್ಯಾವುದಕ್ಕಧಿಕಾರಿ ಎನ್ನುವುದು ಹೇಳಿ–ನಾಲಂಬ ನಿರಾಲಂಬ ಯೋಗ ವಿವರಣೆ, "ಅಮಾನಿತ್ವಾದಿಲಕ್ಷಣೋಪಲಕ್ಷಿತೋಯಃ ಪುರಷಸ್ಸ ಏವ ನಿರಾಲಂಬ ಯೋಗಾಧಿಕಾರೀ" ಎಂದು ನಿರಾಲಂಬ ಯೋಗವು ಕಷ್ಟಸಾಧ್ಯವೆಂದೂ, "ತಸ್ಮಾತ್ಸರ್ವೇಷಾಮಧಿಕಾರಿಣಾ ಮನಧಿಕಾರಿಣಾಂ ಭಕ್ತಿಯೋಗ ಏವ ಪ್ರಶಸ್ಯತೇ"—ಆದ್ದರಿಂದ ಸರ್ವೇಷಾಂ ಅಧಿಕಾರಿಗಳ, ಅನಧಿಕಾರಿಗಳ, ಎಲ್ಲರ ಪರವಾಗಿ ಭಕ್ತಿಯೋಗವೇ ಪ್ರಶಸ್ತ್ಯವಾದ್ದು–ಉತ್ತಮವಾದುದೆಂದು ಸಾರಿ, ಭಕ್ತಿಯೋಗದ ಗುಣಕಥನವಿದೆ. "ಭಕ್ತಿಯೋಗೋ ನಿರುಪದ್ರವಂ" ಸಾಧು ಸಜ್ಜನರು ಸಾಧಿಸುವ ಜ್ಞಾನಯೋಗ, ಯೋಗಿಗಳು ಸಾಧಿಸುವ ಪತಂಜಲಿಯ ಯೋಗ ಕರ್ಮಜರು ಸಾಧಿಸುವ ಕರ್ಮಯೋಗ ಎಲ್ಲಾ ಕಷ್ಟವಾದುವು. ಈ ಎಲ್ಲರಿಗೂ ಮತ್ತು ಇವಕ್ಕಧಿಕಾರಿಗಳಾಗಲು ಸಾಧ್ಯವಿಲ್ಲದ ಪಾಮರರು, ಪಾಪಿಗಳು ಎಲ್ಲಾ ಸಾಮಾನ್ಯ ಜನಕ್ಕೂ ಭಕ್ತಿಯೋಗದ ಹಕ್ಕಿದೆ. ಇದು ನಿರುಪದ್ರವ. ಕಷ್ಟಸಾಧನೆಯಿಂದ ದೇಹವನ್ನೂ ಮನವನ್ನೂ ಉಪದ್ರವಕ್ಕೆ ಸಿಲುಕಿಸಬೇಕಾದುದಿಲ್ಲಾ.

"ಭಕ್ತಿಯೋಗಾನ್ಮುಕ್ತಿಃ" ಜ್ಞಾನಿ, ಯೋಗಿ, ಕರ್ಮಿಷ್ಟರಾಗಲೀ, ಅನಧಿಕಾರಿಗಳಾದ ಸಾಮಾನ್ಯ ಸಂಸಾರಿಗಳೂ, ಏನೂ ತಿಳುವಳಿಕೆಯಿಲ್ಲದವರೂ ಈ ಭಕ್ತಿಯೋಗವನ್ನು ಸುಲಭವಾಗಿ ಸಾಧಿಸಿ ಮುಕ್ತಿ ಸಾಧಿಸಿದ್ದಾರೆ, ಭಕ್ತಿಯೋಗದಿಂದ ಮುಕ್ತಿ ಸ್ವಯಂಸಿದ್ಧ. "ಬುದ್ಧಿಮತಾಮನಾಯಾಸೇನಾ ಚಿರಾದೇವ ತತ್ವಜ್ಞಾನಂ ಭವತಿ। ತತ್ಕಥಮಿತಿ ಭಕ್ತವತ್ಸಲಸ್ವಯಮೇವ ಸರ್ವೇಭ್ಯೋ ಮೋಕ್ಷವಿಘ್ನೇಭ್ಯೋ ಭಕ್ತಿನಿಷ್ಠಾನ್ ಸರ್ವಾನ್ ಪರಿಪಾಲಯತಿ।" ಜ್ಞಾನದಿಂದ ಅನಾಯಾಸವಾಗಿ ಚಿರಕಾಲದಲ್ಲಿ ತತ್ವಜ್ಞಾನಬರುತ್ತೆ. ಆದರೇನು? ಭಕ್ತವತ್ಸಲನಾದ ಸ್ವಾಮಿಯು ತಾನಾಗಿ ಸರ್ವರನ್ನೂ ಭಕ್ತನಿಷ್ಠರಾದ ಸಾಧಾರಣರನ್ನೆಲ್ಲಾ ಮೋಕ್ಷಕ್ಕೆ ವಿಘ್ನಬಾರದಂತೆ ಸರ್ವಾನ್ ಪರಿಪಾಲಿಸುತ್ತಾನೆ. "ಸರ್ವೇಭ್ಯೋ"– "ಸರ್ವಾನ್" "ಸ್ವಯಮೇವ" ಸ್ವಾಮಿಯೇ ಎಲ್ಲ ಭಕ್ತರನ್ನೂ ಮೋಕ್ಷಕ್ಕೆ ವಿಘ್ನಬಾರದಂತೆ ಕಾಪಾಡುತ್ತಾನೆಂದು ಒತ್ತಿಹೇಳಿದ್ದಾರೆ.

"ಸರ್ವಾಭೀಷ್ಟಾನ್ ಪ್ರಯಚ್ಛತಿ" ಮೋಕ್ಷದ ಜೊತೆಗೆ ಸ್ವಾಮಿಯು ಕಾರುಣ್ಯದಿಂದ ಸರ್ವಾಭೀಷ್ಟವನ್ನೂ ಹೊಂದುತ್ತಾರೆ. ಸ್ವಾಮಿ ತಾನೇ ಅವರ ಯೋಗಕ್ಷೇಮವನ್ನೆಲ್ಲಾ ನೋಡಿಕೊಳ್ಳುತ್ತಾನೆ. "ಭಕ್ತ್ಯಾವಿನಾ ಬ್ರಹ್ಮಜ್ಞಾನಂ ಕದಾಪಿನ ಜಾಯತೇ" ಎಂದಿದ್ದಾರೆ. ಭಕ್ತಿವಿನಾ ಬ್ರಹ್ಮಜ್ಞಾನವು ಎಂದೆಂದಿಗೂ ಉಂಟಾಗುವುದಿಲ್ಲಾ. ಜ್ಞಾನಕ್ಕೆ, ಬ್ರಹ್ಮಜ್ಞಾನ, ಆತ್ಮಜ್ಞಾನ, ನಿಜಸ್ವರೂಪ ಜ್ಞಾನಕ್ಕೆ ಭಕ್ತಿಯೇ ಮುಖ್ಯ. ಭಕ್ತಿಯಿದ್ದರೆ, ಜ್ಞಾನವು ಸ್ವಯಂಸಿದ್ಧ.

"ತಸ್ಮಾತ್ತ್ವಮಪಿ ಸರ್ವೋಪಾಯಾನ್ ಪರಿತ್ಯಜ್ಯ ಭಕ್ತಿಮಾಶ್ರಯ"— ಆದ್ದರಿಂದ ನೀನೂ ಸರ್ವೋಪಾಯವನ್ನೂ ಬಿಟ್ಟು ಭಕ್ತಿಯನ್ನಾಶ್ರಯಿಸು. "ಭಕ್ತಿನಿಷ್ಠೋಭವ, ಭಕ್ತಿನಿಷ್ಠೋಭವ" ಎಂದು ಪುನರುಕ್ತಿ ಹೇಳಿ, "ಭಕ್ತಿರಸಾಧ್ಯಂ ನಕಿಂಚಿದಸ್ತಿ" ಭಕ್ತಿನಿಷ್ಟನಾಗು ಭಕ್ತಿಯಿಂದ ಅಸಾಧ್ಯವಾದುದು ಯಾವುದೂ ಇಲ್ಲಾ ಎಂದು ಘಂಟಾಘೋಷವಾಗಿ ಹೇಳಿದ್ದಾರೆ.

ಇದನ್ನು ನಾವು ಸಾಧು ಸಂತರ, ಭಗವದ್ಭಕ್ತರ ಕಥೆಗಳಲ್ಲಿ ಕಾಣುತ್ತೇವೆ. ಅವರಿಗೆ ಅಸಾಧ್ಯವಾದುದು ಯಾವುದೂ ಇಲ್ಲಾ. ಭಗವಂತನೇ

ಭಕ್ತರ ಭಕ್ತನಾಗಿ ಅವರ ಯೋಗಕ್ಷೇಮ ನೋಡಿಕೊಳ್ಳುವುದಕ್ಕೆ ಸೊಂಟ ಕಟ್ಟಿ ಸಿದ್ಧನಾಗಿ ನಿಂತಿದ್ದಾನೆ. ನಾನು ಬೇರೇ ಇಲ್ಲವೇ ಇಲ್ಲಾ. ಭಕ್ತರು ಎಲ್ಲಿ ಗಾನ ಮಾಡುತ್ತಾರೋ ಅಲ್ಲೇ ನಾನಿದ್ದೇನೆ–"ನಾಹಂ ವಸಾಮಿ ವೈಕುಂಠೇ, ಯೋಗಿನಾಂ ಹೃದಯೇ ನ ಚ | ಮದ್ಭಕ್ತಾ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದಾ ||" ಎಂದು ಸ್ವಾಮಿಯೇ ಹೇಳಿದ್ದಾನೆ.

ಇಲ್ಲಿ ಅದೇ ಪರಮಾತ್ಮ ಹೇಳುವುದು. ಅದೂ ಆ ಭಕ್ತಿ ಅನನ್ಯವಾಗಿರಬೇಕು. ಕ್ಷಣಿಕ ಭಕ್ತಿ ಆಗಾಗ್ಯೆ ಬಂದು ಹೋಗುವ ಭಕ್ತಿಯಿಂದ ಸ್ವಾಮಿ ಸಾಕ್ಷಾತ್ಕಾರ ಶಕ್ಯವಿಲ್ಲಾ. ಅನನ್ಯವಾಗಿರಬೇಕು, ಅನ್ಯರನ್ನೆಲ್ಲಾ ಬಿಟ್ಟು ಅವನನ್ನೇ ನಂಬಿ ಅವನನ್ನೇ ಮೊರೆಹೊಕ್ಕಿರಬೇಕು.

**ಮತ್ಕರ್ಮಕೃನ್ಮತ್ಪರಮೋ | ಮದ್ಭಕ್ತಃ ಸಂಗವರ್ಜಿತಃ |**
**ನಿರ್ವೈರಃ ಸರ್ವಭೂತೇಷು | ಯಃ ಸ ಮಾಮೇತಿ ಪಾಂಡವ ||೫೫||**

ಅದು ಹೇಗೆ ಎನ್ನುವುದನ್ನು ಸೊಗಸಾಗಿ ಸ್ವಾಮಿ ಹೇಳುತ್ತಾನೆ. ನನಗೋಸ್ಕರ ಕರ್ಮಮಾಡು, ನಾನೇ ಪರವಸ್ತುವೆಂಬ ಭಾವನೆ ಮೂಡಲಿ, ನನ್ನಲ್ಲಿ ಭಕ್ತಿ (ಅನನ್ಯ ಅಚಲ) ಇರಲಿ, ಸಂಗವರ್ಜಿತನಾಗು. ಸರ್ವಭೂತಗಳಲ್ಲೂ ವೈರವಿಲ್ಲದೆ ಯಾರಿರುತ್ತಾರೋ ಅವರು ನನ್ನನ್ನೇ ಸೇರುವರು, ಸುಮ್ಮನೆ ಸಾಕ್ಷಾತ್ಕಾರ ಮಾಡಿಕೊಳ್ಳುವುದಲ್ಲಾ. ಪರಮಾತ್ಮನಲ್ಲಿಯೇ ಒಂದಾಗುವುದು.

ಒಂದೊಂದು ಪದದಲ್ಲಿ ಒಂದೊಂದು ಯೋಗವನ್ನೇ ತಂದ ಸ್ವಾಮಿ; 'ಮತ್ಕರ್ಮಕೃತ್'ದಲ್ಲಿ ಪೂರ್ಣ ಕರ್ಮಯೋಗದ ಸಾರಂಶವೇ ಬಂದಿತು, 'ಮತ್ಪರಮೋ'ದಲ್ಲಿ ಜ್ಞಾನಯೋಗದ ಸಾರಾಂಶವೇ ಬಂತು, 'ಮದ್ಭಕ್ತ' ದಲ್ಲಿ ಭಕ್ತಿಯೋಗವೆಲ್ಲಾ ಬಂತು, ಸಂಗವರ್ಜಿತದಲ್ಲಿ ಕರ್ಮದ ಫಲಾಪೇಕ್ಷೆ ಬಿಡುವುದು, ಇಹಲೋಕದಲ್ಲಿನ ಸಂಸಾರಸಂಗಬಿಟ್ಟು ಜ್ಞಾನಕ್ಕಾಗಿ ಪ್ರಯತ್ನಿಸುವುದು, ದುಸ್ಸಂಗಬಿಟ್ಟು ಭಕ್ತರ ಸಾಧುಸಜ್ಜನರೊಡನೆಯೇ ಇರುವುದು, ಎಲ್ಲಾ ಸರ್ವಸಂಗ ಪರಿತ್ಯಾಗ ಬಂದಿದೆ.

ನಿರ್ವೈರ ಸರ್ವಭೂತೇಷು"ವಿನಲ್ಲಿ ಬುದ್ಧ ಮತದ ಅಹಿಂಸಾತತ್ವ, ಕ್ರೈಸ್ತಮತ್ತದ ಸರ್ವರ ಪ್ರೇಮ ಎಲ್ಲಾ ಬಂತು. ಎಲ್ಲರಲ್ಲೂ ವೈರ

ವ್ಯಾವಾಗ ಹೋಗುತ್ತೋ, ಪ್ರೇಮಾಂಕುರವಾಗುತ್ತೆ. ಮನಸ್ಸು ನಿರ್ಮಲವಾಗಿ, ಮೃದುವಾಗಿ ಪರಮಾತ್ಮನಲ್ಲೈಕ್ಯವಾಗುತ್ತೆ. ಈ ಶ್ಲೋಕದಲ್ಲಿ ಸ್ವಾಮಿಯ, ಸಾನಿಧ್ಯ, ಸಾಕ್ಷಾತ್ಕಾರವನ್ನು ಹೊಂದುವದಷ್ಟಕ್ಕೇ ಬಿಡದೆ, ವಿಶ್ವರೂಪದರ್ಶನದಾಚೆ ಹೋಗಿ ಸ್ವಾಮಿಯನ್ನೇ ಸೇರಿ ಅವನೊಡನೊಂದಾಗಿಬಿಡುವ ಉಪಾಯ ಹೇಳಿದ್ದಾರೆ ಸ್ವಾಮಿ, ಚಿಟಿಕೆಯಲ್ಲಿ.

ಆದಕ್ಕೆ ಶ್ರೀ ಶಂಕರಾಚಾರ್ಯರು ಅವರ ಭಾಷ್ಯದಲ್ಲಿ—"ಸರ್ವಸ್ಯ ಗೀತಾಶಾಸ್ತ್ರಸ್ಯ, ಸಾರಭೂತೋಽರ್ಥೋ, ನಿಃಶ್ರೇಯಸಾರ್ಥೋಽನುಷ್ಠೇಯತ್ವೇನ ಸಮುಚ್ಚಿತ್ಯೋಚ್ಯತೇ।" ಎಂದು ಈ ಶ್ಲೋಕದ ವಿಷಯದಲ್ಲಿ ಅಭಿಪ್ರಾಯಪಟ್ಟಿದ್ದಾರೆ.

ಸಮಸ್ತ ಗೀತಾಶಾಸ್ತ್ರದ, ಸಾರಭೂತ ಅರ್ಥವೂ, ಶ್ರೇಯಸ್ಸಿಗಾಗಿ ಮಾಡಬೇಕಾದ ಅನುಷ್ಠಾನವೂ, ಒಂದುಗೂಡಿಸಿ ಇಲ್ಲಿ ಹೇಳಿದೆ. ಕರ್ಮದ ಗುರಿ–ಮತ್ಕರ್ಮಕೃತ್–ಪರಮಾತ್ಮನಲ್ಲಿ ಸೇರಿ ಒಂದಾಗುವುದಕ್ಕೇ–ಬೇರೆ ಅದರಿಂದ ಫಲದಾಶೆಯಿಲ್ಲದೆ, ಜ್ಞಾನದ ಗುರಿ–ಮತ್ಪರಮೋ–ಪರಮಾತ್ಮ ವಿನಾ ಬೇರೆಯಿಲ್ಲವೇ ಇಲ್ಲಾ, ಸರ್ವಶ್ರೇಷ್ಠನಾದ ಪರಾತ್ಪರನೆಂಬ ತಿಳುವಳಿಕೆ–ಭಕ್ತಿಯಗುರಿ–ಇನ್ಯಾವಾಶ್ರಯವೂ ಇಲ್ಲದೆ ಸ್ವಾಮಿಯಲ್ಲಿಯೇ ಏಕಾಂತಭಕ್ತಿಯಿಂದ ಅವನನ್ನು ಮೊರೆಹೋಗುವ ಧೈನ್ಯಭಾವ ಮದ್ಭಕ್ತಃ, ಸಂಗವರ್ಜಿತಃ ಈ ಎಲ್ಲಾ ಯೋಗಗಳ ಫಲಾಪೇಕ್ಷೆರಹಿತವಾಗಿ, ಸರ್ವಸಂಗ ಪರಿತ್ಯಾಗಮಾಡಿ, ಸ್ವಾಮಿಯಲ್ಲಿ ಎಲ್ಲವನ್ನೂ ಅರ್ಪಣಮಾಡಿ, ತಾನು, ತನ್ನದೆಂಬ ಭಾವನೆಯೇ ಇಲ್ಲದಿರುವಿಕೆ, ವಾಸುದೇವಂ ಸರ್ವಮಿತಿ ಎಂದು ಪರಮಾತ್ಮನೇ ಸರ್ವವೂ ಎಂದು ಸರ್ವಭೂತಗಳಲ್ಲೂ ನಿರ್ವೈರ, ಶತೃಗಳಲ್ಲಿ ಪಾಪಿಗಳಲ್ಲಿ ಪರದೇಶಿಗಳಲ್ಲೂ ವೈರವಿಲ್ಲದಿರುವಿಕೆ, ಈ ಸಾಧನೆಗಳನ್ನು ಅನನ್ಯವಾಗಿ ಅನುಷ್ಠಾನಮಾಡಿ ಜೀವನ ಅಭ್ಯಾಸವಾಗುವುದೇ ಪರಮಾತ್ಮನಲ್ಲೊಂದಾಗುವ ದಾರಿ.

ಭೃತ್ಯನು ಸ್ವಾಮಿಯ ಗೃಹದಲ್ಲಿ ಸ್ವಾಮಿಯ ಕೆಲಸದಲ್ಲೇ ಸದಾ ನಿರತನಾಗಿ, ತನ್ನ ಸ್ವಂತ ಕೆಲಸವ್ಯಾವುದೂ ಮಾಡದೆ ಶ್ರದ್ಧೆಯಿಂದ ಸ್ವಾಮಿಯ ಸೇವಾರ್ಥವಾಗಿ ಸ್ವಾಮಿಯ ಪ್ರೀತ್ಯರ್ಥವಾಗಿ ಎಲ್ಲಾ ಕೆಲಸವನ್ನೂ ಸದಾ ಮಾಡುವಂತೆ, ತಾನುಮಾಡುವ ಕೆಲಸದ ಫಲವೆಲ್ಲಾ

ಸ್ವಾಮಿಗೆ ಸೇರಿ ಸ್ವಾಮಿಗನುಕೂಲವಾಗುವಂತೆ ಮಾಡುವ ರೀತಿಯಲ್ಲಿ ನಮ್ಮೆಲ್ಲ ಕೆಲಸಗಳನ್ನು ಮಾಡುವುದೇ "ಮತ್ಕರ್ಮಕೃತ್". ಪ್ರಭು ಸೇವೆಯೇ ಜೀವನದ ಕೆಲಸ. ಇದೇ ಕರ್ಮಯೋಗದ ಮರ್ಮ, ಸರ್ವ ಕರ್ಮದ ಗುರಿ.

ಇಹದಲ್ಲೇ ಅಲ್ಲ ಮುಂದಕ್ಕೂ, ಪರಾಂಗತಿ ಸ್ವಾಮಿಯೇ ಎಂದು ದೃಢ ಜ್ಞಾನಬಂದು, ಸ್ವಾಮಿಯನ್ನು ಬಿಟ್ಟು ನನಗೆ ಇಹವಲ್ಲಾಗಲೀ, ಪರವಲ್ಲಾಗಲೀ ಬೇರೆ ಗತಿಯೇ ಇಲ್ಲ, ವ್ಯಕ್ತಿತ್ವವೇ ಇಲ್ಲವೆಂಬ ತಿಳಿವೇ "ಮತ್ಪರಮೋ" ಜೀವನ್ಮುಕ್ತಾವಸ್ಥೆ.

ಸ್ವಾಮಿಯನ್ನೇ ಸರ್ವ ಪ್ರಕಾರದಿಂದ, ಸರ್ವಾತ್ಮನಾ, ಸರ್ವೋತ್ಸಾಹ ದಿಂದ, ಭಜನ, ಧ್ಯಾನ, ಸೇವೆ ಮಾಡುವನೇ "ಮದ್ಭಕ್ತಃ" ಭಕ್ತನಾಗಿ ಬಿಟ್ಟಮೇಲೆ ವ್ಯಕ್ತಿತ್ವವಳಿಯಿತು. ಎಲ್ಲೆಲ್ಲಿಯೂ, ಎಲ್ಲದರಲ್ಲೂ, ಯಾವಾ ಗಲೂ ಸ್ವಾಮಿಯ ಸಾನ್ನಿಧ್ಯವೇ. ರಾಧಾಸ್ಥಿತಿ. ಅಗಲಿರಲೇ ಸಾಧ್ಯವಿಲ್ಲ ನಾರದಭಕ್ತಿ ಸೂತ್ರದಲ್ಲಿ ಹೇಳಿರುವಂತೆ "ಪರಮಪ್ರೇಮ" ಅವಸ್ಥೆ. ತನುಮನ ಇರುವೆಲ್ಲವನ್ನೂ ಪರಮಾತ್ಮನೇ ಆಕ್ರಮಿಸಿಕೊಂಡುಬಿಡು ತ್ತಾನೆ. ಏನು ಕೆಲಸಮಾಡುತ್ತಿರಲಿ, ಏನು ಧ್ಯಾನಮಾಡುತ್ತಿರಲೀ, ಅದರಲ್ಲಿ ಪರಮಾತ್ಮ ಹಾಸುಹೊಕ್ಕಾಗಿ ಮಿಳಿತವಾಗಿ ಬಿಟ್ಟಿರುತ್ತಾನೆ. ಭಕ್ತನ ಹೃದಯಕಮಲದಲ್ಲಿವಾಸ ಸ್ವಾಮಿಯದು. ಭಕ್ತನು ಹೇಗೆ ಸ್ವಾಮಿಯನ್ನು ಅರಗಳಿಗೆ ಮರೆಯಲಾರನೋ, ಅಂತೇ ಸ್ವಾಮಿಯೂ ಭಕ್ತನನ್ನು ಕ್ಷಣ ಅಗಲಿರಲಾರನು.

ಆದಕ್ಕೆ "ಮದ್ಭಕ್ತ" ಎಂದು ಭಕ್ತನನ್ನು ಸ್ವಾಮಿ ತನ್ನವನನ್ನೇ ಮಾಡಿಕೊಂಡು ಬಿಟ್ಟಿದ್ದಾನೆ.

ಈ ಮೂರು ಅಭ್ಯಾಸವಾಗಿ ಬಿಟ್ಟಮೇಲೆ ಸಂಗವು ತಾನಾಗಿ ಕಳಚಿ ಹೋಗುತ್ತದೆ. ಪಕ್ವವಾದ ಹಣ್ಣು ಆಜನ್ಮಸಂಪರ್ಕದಲ್ಲಿದ್ದ ಗಿಡದಿಂದ ತೊಟ್ಟು ಕಳಚಿಕೊಳ್ಳುವಂತೆ, ತಾನಾಗಿ ಧನ ಪುತ್ರ ಮಿತ್ರ ಕಳತ್ರ ಬಂಧು ವರ್ಗದಿಂದ, ಪ್ರೀತಿ ಸ್ನೇಹ ಬಿಟ್ಟುಹೋಗುತ್ತೆ. ಹಣ್ಣು ತೊಟ್ಟುಕಳಚಿ, ಭೂತಾಯಿಯ ಮಡಲಿನಲ್ಲಿ ಬೀಳುವಂತೆ, ಸಂಗವರ್ಜಿತನು ಸ್ವಾಮಿಯ ಪಾದಾರವಿಂದದಲ್ಲಿ ಬೀಳುವನು.

ಅಂತಹವನಿಗೆ ಇನ್ನು ಯಾರಲ್ಲಿತಾನೇ ವೈರ? ತನಗೆ ಅಪಕಾರ ವೆಸಗಲು ಬಂದ ಶತ್ರುವಿನಲ್ಲಿ ಕೂಡಾ ವೈರತ್ವವಿಲ್ಲಾ. ಪರಮಾತ್ಮನಲ್ಲಿ ಜೀವನಕರ್ಮವೆಸಗುತ್ತಾ, ಪರಮಾತ್ಮನಲ್ಲೇ ಪರಾಂಗತಿಯಿಟ್ಟು ಭಕ್ತಿ ಯಾಪರಿಸಿರುವವನಿಗೆ ಯಾವ ಶತ್ರು ಏನುತಾನೇ ಮಾಡಾನು, ನನಗೆ ಸ್ವಾಮಿಯ ರಕ್ಷಾಕವಚವಿದ್ದಾಗ ಎಂಬ ಭಾವನೆಯಿಂದ ಯಾವ ಅಪ ಕಾರಿಯ ಮೇಲೆ ಕೂಡ ವೈರತ್ವವಿಲ್ಲದ ಸ್ಥಿತಿಬರುತ್ತೆ. ಇಂಥಾ ಪರಮ ಭಕ್ತನಾದ ಮಾರ್ಕಂಡೇಯನು, ಮೃತ್ಯುಸನ್ನಿಹಿತನಾಗಿದ್ದಾಗ ಕೂಡಾ, ಭಗವಂತನ ಪಾದವನ್ನೇ ಅಪ್ಪಿ, ಅವನಲ್ಲೇ ಲೀನವಾಗಿ "ಕಿಂಕರೋತಿವೈ ಯಮಃ" ಎಂದು ಮೃತ್ಯುಸ್ವರೂಪನಾದ ಯಮನು ಕೂಡಾ ಸದಾಶಿವ ಸಾನಿಧ್ಯದಲ್ಲಿರುವ, ಶಿವೈಕ್ಯನಾದ ತನ್ನನ್ನು ಏನುಮಾಡಬಲ್ಲನೆಂದು ಪ್ರಾರ್ಥಿಸಿದ್ದಾನೆ. ಯಾವಾಗ ವೈರವಿಲ್ಲವೋ ಆಗ ನಿರ್ಭಯ. ಅದಕ್ಕೆ ಸ್ವಾಮಿಯ ಶರಣುಹೋಗುವುದೇ ಒಂದು ಅಭಯ.

ಅಭಿನವಗುಪ್ತನು ಭೈರವಸ್ತೋತ್ರದಲ್ಲಿ ಹೇಳುತ್ತಾರೆ.

**'ಅಂತಕ, ಮಾಂ, ಪ್ರತಿಮಾ ದೃಶಮೇನಾಂ।**
**ಕ್ರೋಧಕರಾಲ ತನೂಂ ವಿನಿಧೇಹಿ ।**
**ಶಂಕರ ಚಿನ್ತನಸೇವನ ಧೀರೋ ।**
**ಭೀಷಣ ಭೈರವಶಕ್ತಿ ಮಯೋಽಸ್ಮಿ ॥**

ಶಂಕರ, ಶಂ=ಸುಖವನ್ನು, ಕರ=ಉಂಟುಮಾಡುವ ದೇವದೇವನ ಚಿಂತನ (ಧ್ಯಾನಕೀರ್ತನ), ಸೇವೆ (ಪೂಜಾ, ಪರಸೇವಾ)ಯಲ್ಲಿ ಧೀರನಾಗಿ, ಅಧಿಕವಾದ ಅಭೇದ್ಯ ಭೈರವಶಕ್ತಿ ನನ್ನದಾಗಿದೆ. ಎಲೇ ಮೃತ್ಯುವೇ, ನನ್ನಮೇಲೆ ನಿನ್ನ ಕ್ರೋಧಕರ ದೃಷ್ಟಿಯನ್ನು ಬೀರಬೇಡಾ–ಅದೇನೂ ಮಾಡಲಾರದು. ದೇವ ಚಿಂತನ ಸೇವೆಯಿಂದ ಈ ವಜ್ರಕವಚಪ್ರಾಯ ವಾದ ಧೈರ್ಯಭಯ, ಭೈರವಶಕ್ತಿಯಿಂದ ಭಕ್ತನು ಭಯರಹಿತನಾಗು ತ್ತಾನೆ. ಇದೇ 'ಶಿವಕವಚ' ಸ್ತೋತ್ರದ ಮರ್ಮ. ಅಂತರಾರ್ಥ. ಎಲ್ಲಾ ಕಡೆಯಲ್ಲೂ, ಯಾವಾಗಲೂ, ಎಲ್ಲಾ ಅಂಶಗಳನ್ನೂ, ಸದಾಶಿವನು

ರಕ್ಷಿಸುತ್ತಿದ್ದಾನೆಂಬ ದೃಢನಂಬಿಕೆ, ಅವನೆ ಅಂತರಂಗದಲ್ಲಿದ್ದು ದುರ್ಮಾರ್ಗ, ದುಸ್ಸಹವಾಸ, ದುಸ್ಸಹನಗಳಿಂದ ಪಾರುಮಾಡುವನೆಂಬ ಅನನ್ಯಭಕ್ತಿ, ಅದೇ ವಜ್ರಕವಚಪ್ರಾಯವಾಗಿ ರಕ್ಷಿಸುತ್ತದೆ.

ಜೀವನದಲ್ಲೀ ಬೇರೆಗುರಿ, ಬೇರೆಗತಿಯಿಲ್ಲದ ಈ ಅನನ್ಯ ಪರಮಭಕ್ತನಿಗೆ ಇನ್ನು ಪರದಲ್ಲಿ ಪರಮಾತ್ಮನೊಡನೆ ಲೀನವಾಗುವುದಲ್ಲವೆ ಬೇರೆಗತಿ ಏನುಂಟು, "ನಮಾಮೇತಿ" ಆತನವನಲ್ಲೆ ಐಕ್ಯ.

ಈ ಸ್ಥಿತಿಯನ್ನು ಭಕ್ತರ ಬಾಯಿಂದಲೇ, ಅವರ ಶರಣು ಶ್ಲೋಕಗಳಲ್ಲಿ ದಿವ್ಯವಾದ ವಾಣಿಯಲ್ಲಿ ಕೇಳಲು ಸೊಗಸಾಗಿದೆ.

ಜಿತಂತೇ ಸ್ತೋತ್ರದಲ್ಲಿ "ಮತ್ಕರ್ಮಕೃತ್"ನ ಅಂತರಾರ್ಥ.

"ಮನಸಾ ಕರ್ಮಣಾ ವಾಚಾ, ಶಿರಸಾವಾಕಥಂಚನ ।
ತ್ವಾಂ ವಿನಾ ನಾನ್ಯದುದ್ದಿಶ್ಯ ಕರಿಷ್ಯೇ ಕಿಂಚಿದಪ್ಯಹಂ ॥"

ನಾನು ಮನಸಾ, ಕರ್ಮಣಾ, ವಾಚಾ ಶಿರಸಾ ಯಾವುದರಿಂದಲೂ ನಿನ್ನ ವಿನಾ ಇತರ ಉದ್ದೇಶ್ಯದಿಂದ ಕಿಂಚಿತ್ತಾದರೂ ಮಾಡಲೊಲ್ಲೆ. ಕಾಯಾವಾಚಾ ಮನಸಾ ಎಲ್ಲಕಾರ್ಯವೂ ಭಗವಂತನಿಗಾಗಿಯೇ.

ವೇದಾಂತದೇಶಿಕರು (ಪರಮಭಕ್ತರು) ನ್ಯಾಸದಶಕದಲ್ಲಿ

"ಮಾಂ ಮದೀಯಂ ಚ ನಿಖಿಲಂ, ಚೇತನಾ ಚೇತನಾತ್ಮಕಂ ।
ಸ್ವಕೈಂಕರ್ಯೋಪಕರಣಂ, ವರದ ಸ್ವೀಕರು ಪ್ರಭೋ ॥

ಪ್ರಭುವೇ, (ಎಲ್ಲವನ್ನೂ ಹೊಂದಿದಸ್ವಾಮಿ) ಚೇತನಾ ಚೇತನಾತ್ಮಕವಾದ ನಾ, ನನ್ನದೆಂಬುದೆನ್ನುವ ಸರ್ವಸ್ವವನ್ನೂ ನಿನ್ನ ಸೇವಾ ಅಲ್ಪ ಸಾಮಗ್ರಿಯಾಗಿ ಸ್ವೀಕರಿಸು, ವರದಾ, ವರದಾ–ಎಂದರೆ ಎಲ್ಲವೂ ಅವನ ವರಪ್ರಸಾದವೇ. ನಾನೂ ನನ್ನದೆನ್ನುವುದೆಲ್ಲಾ ಪರಮಾತ್ಮನದೇ. 'ಸ್ವಕೈಂಕರ್ಯೋಪಕರಣಂ' 'ಸ್ವೀಕರು' ಎನ್ನುವುದರಲ್ಲಿ ಎಷ್ಟು ದೈನ್ಯ ಪ್ರಪತ್ತಿಯಿದೆ. ಅಲ್ಪಸೇವೆಗೆ ಉಪಕರಣ (ಸಹಾಯ), ಸ್ವಾಮಿ ಕರುಣಿಸಿ ನಮ್ಮ ಕರ್ಮವನ್ನೆಲ್ಲಾ ಸ್ವೀಕರಿಸಿದರೇ ಸಾಕು.

"ನಾನು ನನ್ನದು" ವಿಷಯದಲ್ಲಿ ಭಕ್ತಾಗ್ರೇಸರ ಯಮುನಾಚಾರ್ಯರು.

"ಮಮನಾಥಯದಸ್ತಿ, ಯೋಽಸ್ಮ್ಯಹಂ ಸಕಲಂ ತದ್ಧಿತವೈವ ಮಾಧವ ।
ನಿಯತಸ್ವಮಿತಿ ಪ್ರಬುದ್ಧಧೀರಥವಾಕಿಂನು ಸಮರ್ಪಯಾಮಿತೇ ॥"

ನನ್ನದೂ, ನಾನೂ, ಎಲ್ಲವೂ, ನನ್ನನಾಥ ನಿನ್ನದೇ, ಮಾಧವ. ಇದು ತಿಳಿತಿಳಿದೂ, ನನ್ನದೆಂದೇ ನನ್ನ, ನಿನ್ನದಾಗಿರುವುದನ್ನ ನಿನ್ನ ಪಾದ ಕರ್ಪಿಸಲಿ ಸ್ವೀಕರಿಸೆಂದು ಪ್ರಭೂ–ಇದೇ "ಮತ್ಪರಮೋ" ಎಲ್ಲವನ್ನೂ ಪರಮಾತ್ಮನ ಚರಣ ಸಮರ್ಪಣಮಾಡಿರುವುದು.

"ಯೋ ಹಂ ಮಮಾಸ್ತಿ ಯತ್ಕಿಂಚಿ ದಿಹಲೋಕೀ ಪರತ್ರಚ ।
ತತ್ಸರ್ವಂ ಭವತೋನಾಥ ಚರಣೇಷು ಮಮರ್ಪಿತಂ ॥"

ಇಹಪರಗಳಲ್ಲಿ ಕಿಂಚಿತ್ತಾದರೂ ಯಾವುದು ನಾನು, ನನ್ನದೆಂದು ಉಳಿದಿದಿಯೋ, ಆ ಸರ್ವಸ್ವವೂ ನಿನ್ನ ಚರಣ ಸಮರ್ಪಣವಾಗಲೀ, ನನ್ನ ನಾಥನೇ. ಎಂಥಾ ಭಕ್ತಿ, ಇದೇ ಸಂಗವರ್ಜಿತದ ಒಳಗಣ ಅರ್ಥ.

ಉತ್ಕೃಷ್ಟವಾದ, ಹೆಚ್ಚಿನ ದರ್ಜೆಯ ಜ್ಞಾನವೂ, ಭಕ್ತಿಯೂ, ಕರ್ಮ ಯೋಗವೂ ಅಭೇದವಾಗಿದೆ. ಏನಿದ್ದರೂ ಕೆಳದರ್ಜೆಯ ಸಾಧನ ಸ್ಥಿತಿಯಲ್ಲಿ ಅವುಗಳಲ್ಲಿ ಭೇದವಷ್ಟೇ. ಭಕ್ತಿಯನ್ನು ಜ್ಞಾನಿಯೂ, ಕರ್ಮಿಯೂ ಆಚರಿಸಬಹುದಲ್ಲದೆ, ಅಜ್ಞಾನಿಯೂ ಪಾಪಿಯೂ ಆಶ್ರಯಿಸ ಬಹುದು. ಭಕ್ತನಿಗೆ ಕುಲಗೋತ್ರಗಳಿಲ್ಲಾ, ಲಿಂಗ (ಹೆಣ್ಣುಗಂಡೆಂಬ ಭೇದ) ವಿಲ್ಲಾ, ನಾಧಕ ಜ್ಞಾನಿಯೇ ಆಗಬೇಕೆಂದಿಲ್ಲಾ. ಪಾಪಿಯೂ, ಪಾಮರನೂ, ಅಸ್ಪರ್ಶನೆಂದು ಭಾವಿಸುವನೂ, ಹೆಂಗಸೂ, ಮಕ್ಕಳೂ ಎಲ್ಲರೂ ಆಶ್ರಯಿಸಬಹುದಾದ ಸುಲಭೋಪಾಯ ಭಕ್ತಿಯೋಗ. ಎಲ್ಲರಿಗೂ ಪರಮಾತ್ಮನ ಪ್ರೇಮದಲ್ಲಿ ಪಾಲಿದೆ. ಪಾಪದಲ್ಲಿ ಆಶ್ರಯವಿದೆ. ಅಸಾಧ್ಯವನ್ನೆಲ್ಲಾ ಭಕ್ತಿಯಿಂದ ಸಾಧಿಸಬಹುದು, ಭಕ್ತನಾದವನು ಪವಿತ್ರನಾಗುವನು.

ಗುಣತ್ರಯ ವಿಭಾಗವನ್ನು ಎಷ್ಟೋ ವಿಷಯಗಳಿಗೆ ಮಾಡಿದರೂ ಭಕ್ತಿಗೆ, ಸಾತ್ವಿಕ, ರಾಜಸ, ತಾಮಸವೆಂಬ ಭೇದವೇ ಇಲ್ಲಾ. ಭಕ್ತಿ

ಯಾವಾಗಲೂ ಸಾತ್ವಿಕವೇ. ಭಕ್ತನು ಸಾಧುವೇ. ಭಗವದ್ಭಕ್ತಿ ಹೃದಯ ದಲ್ಲುದಯವಾದೊಡನೆಯೇ ಎಲ್ಲಾ ಗುಣಗಳೂ ನಾಶವಾಗಿ ಭಕ್ತನೆಂಬ ಗುಣವೊಂದೇ ಬರುವುದು. ಅವನನ್ನು ಭಗವಂತನೊಬ್ಬನೇ ಅಂತರಂಗ ಬಹಿರಂಗದಲ್ಲೂ ಆವರಿಸುವನು.

ಶ್ರೀಮದ್ಭಗವದ್ಗೀತೆ ಎನ್ನುವ
ಉಪನಿಷತ್ತಿನ, ಬ್ರಹ್ಮವಿದ್ಯೆಯು, ಯೋಗಶಾಸ್ತ್ರದ
ಶ್ರೀ ಕೃಷ್ಣಾರ್ಜುನ ಸಂವಾದದಲ್ಲಿ
ವಿಶ್ವರೂಪದರ್ಶನ ಯೋಗವೆನ್ನುವ ಹನ್ನೊಂದನೆಯ ಅಧ್ಯಾಯ ಸಮಾಪ್ತಿ

# ೧೨ನೇ ಅಧ್ಯಾಯ : ಭಕ್ತಿಯೋಗ

## ಸಗುಣ ನಿರ್ಗುಣೋಪಾಸಕರ ತಾರತಮ್ಯ ವಿಶೇಷಣ ಅವರವರ ಬೇರೆಬೇರೆ ಸಾಧನಗಳ ನಿರೂಪಣೆ

ಇದು ಭಕ್ತಿಯೋಗ, ಭಕ್ತಿ ಎಂದರೇನೆನ್ನುವುದು ನಿರ್ಧರಿಸಬೇಕು. ಶ್ರೀಶಂಕರಾಚಾರ್ಯರು ವಿವೇಕಚೂಡಾಮಣಿ (೩೨ ಶ್ಲೋಕ) ಯಲ್ಲಿ "ಮೋಕ್ಷ ಕಾರಣ ಸಾಮಗ್ರ್ಯಾಂ, ಭಕ್ತಿರೇವ ಗರೀಯಸೀ" ಎಂದಿದ್ದಾರೆ. ಮೋಕ್ಷಕ್ಕೆ ಕಾರಣವಾಗುವ ಸಲಕರಣೆಗಳಲ್ಲಿ ಭಕ್ತಿಯೇ ಬಹು ದೊಡ್ಡದು, ಹೆಚ್ಚಿನದು ಎಂದಮೇಲೆ ಅದರ ಅಸಾಧಾರಣಶಕ್ತಿ ವೇದ್ಯವಾಗುತ್ತೆ. ಮಹಾನಾರಾಯಣೋಪನಿಷತ್ತಿನಲ್ಲಿ ಅದಕ್ಕೇ "ಭಕ್ತಿರಸಾಧ್ಯ ಕಿಂಚಿದಸ್ತಿ" ಭಕ್ತಿಗೆ ಅಸಾಧ್ಯವಾದುದು ಯಾವುದೂ ಇಲ್ಲಾ ಎಂದಿದೆ. ಇಂಥಾ ಸರ್ವಸಾಧ್ಯವಾದ ಭಕ್ತಿಯೇನೆಂದು ತಿಳಿದಾದರೂ ತಿಳಿಯಬೇಡವೇ. ಶ್ರೀಶಂಕರರು ಅದೇ ಶ್ಲೋಕದ ಉತ್ತರಾರ್ಧದಲ್ಲಿ "ಸ್ವಸ್ವರೂಪಾನು ಸಂಧಾನಂ ಭಕ್ತಿರಿತ್ಯ ಅಭಿಧೀಯತೇ" ಎಂದು ಅಭಿಪ್ರಾಯಪಟ್ಟಿದ್ದಾರೆ. ತನ್ನ ಸ್ವಂತ ಸ್ವರೂಪದ ಸಂಧಾನ (ಸದಾ ಚಿಂತನ, ಸತ್‌ಧ್ಯಾನ) ಭಕ್ತಿ ಎಂದು. ಇದೂ ಕಷ್ಟವಾಗಿ ತೋರುತ್ತೆ. ಅವರೇ "ಶಿವಾನಂದಲಹರಿ" ೬೧ನೇ ದಿವ್ಯ ಶ್ಲೋಕದಲ್ಲಿ ಉಪಮಾನಗಳ ಸಹಿತ ಈ ರೀತಿ ವಿವರಿಸಿದ್ದಾರೆ.

**"ಅಂಕೋಲಂ ನಿಜ ಬೀಜ ಸನ್ತತಿ, ರಯಸ್ಕಾಂತೋಪಲಂ ಸೂಚಿಕಾ।**
**ಸಾಧ್ವೀ ನೈಜವಿಭುಂ, ಲತಾಕ್ಷಿತಿರುಹಂ, ಸಿಂಧುಸ್ಸರಿದ್ವಲ್ಲಭಂ।**
**ಪ್ರಾಪ್ನೋತೀಹ ಯಥಾ ತಥಾ ಪಶುಪತೇ ಪಾದಾರವಿಂದ ದ್ವಯಂ।**
**ಚೇತೋ ವೃತ್ತಿರುಪೇತ್ಯ ತಿಷ್ಠತಿ ಸದಾ ತದ್‌ಭಕ್ತಿ ರಿತ್ಯುಚ್ಯತೇ॥"**

ಅಂಕೋಲೆಬೀಜ ತನ್ನ ಗಿಡಮೂಲವನ್ನೂ, ಅಯಃಕಾಂತ (ಕಬ್ಬಿಣ) ಸೂಜಿಗಲ್ಲನ್ನು, ಪತಿವ್ರತಾಮಣಿ ತನ್ನ ವಿಭುವನ್ನು ಲತಾಬಳ್ಳಿಮರದಾ ಶ್ರಯುವನ್ನು ನದಿ ಸಮುದ್ರರಾಜನನ್ನು ಸ್ವಭಾವವಾಗಿ ಸ್ವಂತ ಗಮನ

ದಿಂದಲೇ ಸೇರುವಂತೆ, ಅನುಸರಿಸುವಂತೆ, ಪಶುಪತಿಯ (ನಾವೆಲ್ಲಾ ಜೀವಿಗಳು ಪಶುಗಳು, ಅವುಗಳ ಪತಿ) ಪಾದಕಮಲವೆರಡರಲ್ಲಿ ಯಾವಾಗಲೂ ಚಿತ್ತವೃತ್ತಿಯನ್ನು ಸ್ವಭಾವವಾಗಿ ಸ್ವಂತಗಮನದಲ್ಲೇ ಸದಾ ಇಡುವುದಕ್ಕೆ "ಭಕ್ತಿ" ಎನ್ನುವರು.

ತಾನೇತಾನಾಗಿ ಸ್ವಾಭಾವಿಕವಾಗಿ ಸದಾ ತನ್ನ ಮೂಲ, ಪತಿ, ಸ್ವಾಮಿಯಾದ ದೇವಪಾದ ಚಿಂತನದಲ್ಲಿ ಮನವರ್ಪಿಸಿರುವವನು (ತನ್ನೆಲ್ಲಾ ಚೇತನದ ವೃತ್ತಿಗಳನ್ನೂ) ಭಕ್ತ. ಅವನ ಮನೋವೃತ್ತಿಯೇ ಭಕ್ತಿ.

ನಮ್ಮ ವಿಶಾಲ ಶಾಸ್ತ್ರ ಪುರಾಣಗಳಲ್ಲಿ ಮಹಾಮಹಿಮರುಗಳು ಭಕ್ತಿಯನ್ನು ವಿಧವಿಧವಾಗಿ ಇದೇ ಅರ್ಥಬರುವಂತೆ ವಿವರಿಸಿರುವರು.

ಮೈತ್ರೇಯರು (ಭಾಗವತ) "ಎಲ್ಲಾ ಇರುವಿಕೆಗೂ, ಎಲ್ಲಾ ಇಂದ್ರಿಯ ಶಕ್ತಿಗೂ ಆಧಾರವಾದ ಆತ್ಯಂತಿಕ ಸತ್ಯ ಮನೋ ಚಿಂತನೆ"ಯೇ ಭಕ್ತಿಯೆಂದಿರುವರು.

ಕಪಿಲರು "ಗಂಗೆಯು ಸಮುದ್ರರಾಜನೆಡೆಗೆ ನಿರ್ಮಲವಾಗಿ ಹರಿವಂತೆ ಸಕಲ ಹೃದಯಂತರ್ಯಾಮಿಯಾದ ದೇವನಲ್ಲಿಗೆ ಸದಾ ಧ್ಯಾನ ಹರಿವುದು ಭಕ್ತಿ" ಎಂದು ಭಾಗವತದಲ್ಲಪ್ಪಣೆ ಕೊಟ್ಟಿರುವರು. ದೇವಿ ಭಾಗವತದಲ್ಲಿ "ತೈಲಧಾರೆಯಂತೆ ಸತತವಾಗಿ ಎಡಬಿಡದೆ ಸ್ವಾಮಿ ಚಿಂತನದಲ್ಲಿ ಹರಿವುದು ಪರಮ ಪ್ರೇಮ"ವೆಂದಿದೆ, ನಾರದ ಪಂಚರಾತ್ರದಲ್ಲಿ ಒಂದೆಡೆ "ಸರ್ವರ ಸರ್ವೇಂದ್ರಿಯ ಒಡೆಯನಾದವನಿಗೆ, ಉಪಾಧಿ ನಿರ್ಬಂಧವಿಲ್ಲದ ನಿರ್ಮಲ ನಿಶ್ಚಲ ಸೇವೆಯೇ ಭಕ್ತಿ" ಎಂದೂ ಮತ್ತೊಂದೆಡೆ, "ಸತತ ಧಾರಾರೂಪವಾಗಿ, ಇತರ ಯಾವ ರಕ್ತಿಯೂ ಇಲ್ಲದೆ ಭಗವತ್ಪ್ರೀತಿಯಲ್ಲಿ ಮುಳುಗಿರುವುವೇ ಭಕ್ತಿ" ಎಂದಿದೆ.

ಶ್ರೀರಾಮಾನುಜರು ಪ್ರೇಮಧ್ಯಾನದಲ್ಲಿ ಭಗವಂತ ಪಾದಾರವಿಂದದಲ್ಲಿ ಮನವಿರುವುದೇ ಭಕ್ತಿ ಎಂದಭಿಪ್ರಾಯಪಟ್ಟಿದ್ದಾರೆ.

ಜಯತೀರ್ಥರು "ನಿರವಧಿಕ, ಅನಂತ, ಅನವದ್ಯ ಕಲ್ಯಾಣವಾದವನಲ್ಲಿ ಸ್ವಆತ್ಮ, ತನ್ನ ಸಮಸ್ತ ವಸ್ತುಭೋಗಗಳಿಗಿಂತ ಹೆಚ್ಚಿನದಾಗಿ ಸಹಸ್ರ ಪ್ರತಿಬಂಧಕಗಳು ಬಂದರೂ, ನಿರಂತರ ಪ್ರವಾಹದಲ್ಲಿ ಪ್ರೇಮರೂಪವಾಗಿ

ಹರಿವದೇ ಭಕ್ತಿ" ಎಂದು 'ನ್ಯಾಯಸುಧೆ'ಯಲ್ಲಿ ಹೇಳಿದ್ದಾರೆ. "ಆತ್ಮ ರತಿ ಅವಿರೋಧ"ವಾಗಿರುವುದೇ ಭಕ್ತಿ ಎಂದು ಶಾಂಡಿಲ್ಯರೂ "ಯಾವ ದೇವರ ಸ್ವರೂಪವು ಹೃದಯಾಂತರ್ಗತವಾಗಿ ಆ ಹೃದಯವನ್ನು ಪ್ರೇಮದಲ್ಲಿ ಕರಗಿಸಿದೆಯೋ, ಆ ದೇವನ ಸತತ ಚಿಂತನ"ವೆಂದು ಭಕ್ತಿರಸಾಯನದಲ್ಲಿ ಭಕ್ತಿಯನ್ನು ಹೃದಯ ರಸಾಯನವನ್ನಾಗಿ ಮಾಡಿದ್ದಾರೆ.

ರೂಪಗೋಸ್ವಾಮಿ, ಭಕ್ತಿ ರಸಾಮೃತ ಸಿಂಧುವಿನಲ್ಲಿ ಜ್ಞಾನಕರ್ಮ ಗಳಡ್ಡಿಯಿಲ್ಲದೆ, ಇತರ ಆಸೆಗಳ ತೊಡರಿಲ್ಲದೇ ದೇವನಲ್ಲಿ ರಮಿಸುವುದೇ ಭಕ್ತಿಯೆಂದು "ರಸಾಮೃತಸಿಂಧು"ವಿನಲ್ಲೇ ಭಕ್ತನನ್ನು ಮುಳುಗಿಸಿ ಬಿಟ್ಟಿದ್ದಾರೆ. ಅವನಿಗೆ ಜ್ಞಾನಕರ್ಮಗಳ ನೆರಳೂ ಬೇಡಾ, ಆಸೆಗಳ ಅಡ್ಡಿಯೂ ಇಲ್ಲಾ. ಯಮುನಾಚಾರ್ಯರು, ಸ್ತೋತ್ರರತ್ನದಲ್ಲಿ ಈ ರೀತಿ ಸ್ತುತಿಸಿದ್ದಾರೆ,

"ಭವನ್ತಮೇವಾನು ಚರನ್ನಿರನ್ತರಂ ಪ್ರಶಾಂತ ನಿಶ್ಶೇಷ ಮನೋರಥಾನ್ತರಃ |
ಕದಾಹಮೈಕಾನ್ತಿಕ ನಿತ್ಯಕಿಂಕರಃ ಪ್ರಹರ್ಷಯಿಷ್ಯಾಮಿ ಸನಾಥ ಜೀವಿತಃ ||

ಆನಂದದಿಂದ (ಪ್ರಹರ್ಷ) "ಏಕಾಂತಿಕ ನಿತ್ಯ ಕಿಂಕರಃ" ಭಾವದಿಂದ ಪ್ರಶಾಂತವಾಗಿ ಸದಾ, ಇರುವ ಭಾಗ್ಯ, ಜೀವನದಲ್ಲಿ ಸ್ವಾಮಿ ದಾಸ್ಯ ಬೇಡಿದ್ದಾರೆ—

ಮಾರ್ಜಾಲ ಕಿಶೋರನ್ಯಾಯ–ಬೆಕ್ಕಿನ ಮರಿಯು ತನ್ನ ತಾಯಿಯು ತನ್ನನ್ನು ಎಲ್ಲಿಬೇಕಾದರೂ ಬಾಯಿಯಲ್ಲಿ ಕಚ್ಚಿ ಎತ್ತಿಕೊಂಡು ಬಚ್ಚಿಟ್ಟು ಸಲಹಲಿ (ಒಂಭತ್ತು ಮನೆಚೀಲಿ) ತಾನು ನಿರುಪದ್ರವಾಗಿ ತನ್ನ ಮಾತೃ ಪಾಲನೆಗೆ ಸ್ವಪ್ರಯತ್ನಮಾಡದೆ, ತಾಯಿಗೇ ಸರ್ವಸ್ವತಂತ್ರ ಬಿಟ್ಟು, ನಂಬಿ ಪೂರ್ಣ ಅನಾಶ್ರಯವಾಗಿರುವಂತೆ, ಭಕ್ತಿಯಲ್ಲೂ ಪ್ರಪತ್ತಿಯು ಮುಖ್ಯ ಲಕ್ಷಣವಿದೆಂದು ನಾರಿ "ತೆಂಕಲೆ" ಎಂದು ಶ್ರೀವೈಷ್ಣವರಲ್ಲಿ ಸಂಪ್ರದಾಯ ಸ್ಥಾಪಿಸಿದ (ವೇದಾಂತ ದೇಶಿಕರ 'ವಡಕಲೆ' ಎನ್ನುವ ಮರ್ಕಟ ಕಿಶೋರನ್ಯಾಯ–ಕೋತಿ ತನ್ನ ತಾಯಿಯನ್ನಪ್ಪಿ ತನ್ನ ಸಲಹೆಗೆ ತಾಯಿಗೆ ಸ್ವಪ್ರಯತ್ನದಿಂದ ಸಹಾಯಮಾಡುವಂತೆ ಎನ್ನುವುದರ ಪ್ರತಿ ಯಾಗಿ) ಮನವಾಲ ಮಹಾಮುನಿಗಳು–'ಅವಿವೇಕಿಗಳು ವಿಷಯಗಳ

ಮೇಲಿಡುವ ಪ್ರೇಮಾಸಕ್ತಿಯೇ ದೇವನಡಿಗೆ ಧಾವಿಸಿದರೆ ಭಕ್ತಿ' ಎಂದಿದ್ದಾರೆ.

ನಾರದರು ಭಕ್ತಿಸೂತ್ರದಲ್ಲಿ (೧, ೨) 'ಸಾತ್ವಸ್ಮಿನ್ ಪರ(ಮ) ಪ್ರೇಮ ರೂಪಾ' ಎಂದಿದ್ದಾರೆ. ದೇವನಲ್ಲಿಂದು ಕೂಡಾ ಅಂದಿಲ್ಲಾ ಅದು (ಭಕ್ತಿ) ಪರಪ್ರೇಮ, ಪರಮಪ್ರೇಮಾ ರೂಪವೆಂದುಬಿಟ್ಟರು. ಆ ಸತ್ ತತ್ವ ಪ್ರೇಮಸ್ವರೂಪವೇ ಭಕ್ತಿ.

"ಯಾ ಪ್ರೀತಿರವಿವೇಕಾನಾಂ ವಿಷಯೇಷ್ವನಪಾಯಿನೀ" ಎಂದು, ಆ ಅವಿವೇಕಿಗಳ ವಿಷಯಾಸಕ್ತಿ ಪ್ರೇಮವು "ತ್ವಾಮನುಸ್ಮರತಃ ಸಾಮೇ ಹೃದಯಾನ್ಮಾಪಸರ್ಪತು"—ಅಷ್ಟೇ ಬಲವಾಗಿ ನನ್ನ ಹೃದಯವನ್ನು ಯಾವಾಗಲೂ ಆವರಿಸಿರಲಿ, ಎಂಬ 'ಪ್ರಪನ್ನ ಗೀತಾ' ಪ್ರಾರ್ಥನೆಯೇ ಭಕ್ತಿಸ್ವರೂಪ.

ಆಗ "ಯಾಸ್ತಿ ತನ್ಮಯ ತಾಂಹರೇ" ಗೋಪಿಯರಂತೆ ಕೃಷ್ಣ ಸ್ವರೂಪರೇ ಆಗಿ ತನ್ಮಯರಾಗುತ್ತಾರೆ, ತಮ್ಮ ತನುವನ್ನೇ ಮರೆಯು ತ್ತಾರೆ. ಆಗ "ತನ್ಮನಸ್ಕಾಃ" ಅವನಲ್ಲೇ ಮನನೆಟ್ಟವರಾಗಿ, 'ತದಾಲಾಪ' ಅವನ ವಿಷಯವನ್ನೇ ಆಲಾಪನೆಮಾಡುತ್ತಾ 'ತದ್ವಿಚೇಷ್ಟಾ' ಅವನ ಲೀಲೆಯಲ್ಲಿ ಅನುರಕ್ತರಾಗಿ 'ತದಾತ್ಮಿಕಾ' ಅವನಲ್ಲೇ ಆತ್ಮಸಮರ್ಪಣೆ ಮಾಡಿ, ತಮ್ಮ ತನು, ಮನ, ವ್ಯಕ್ತಿತ್ವ ಮರೆತು 'ತದ್ಗುಣಾನೇವ ಗಾಯಂತೆ' ಆ ಪರಮಾತ್ಮನ ದಿವ್ಯಗುಣ ಧ್ಯಾನದಲ್ಲಿರುತ್ತಾರೆ.

ಸೂಫಿ, ಒಂದೆಡೆ ಹೇಳುವಂತೆ ಎಲ್ಲಿಯವರೆಗೆ ತನ್ಮಯತ್ವವೆಂದರೆ— ಪ್ರಿಯನು ಬಾಗಿಲು ತಟ್ಟುತ್ತಾಯಿರುವ ಪ್ರಿಯನನ್ನು 'ನೀನಾರು ?' ಎಂದು ಪ್ರಿಯೆ ಕೇಳಿದಾಗ ಕೊನೆಗೆ 'ನಾನೀನೇ' ಎಂದುತ್ತರ ವೀಯು ವಂತೆ. ನಮ್ಮ ಕೃಷ್ಣ ಭಾಮೆಯರ ಪ್ರೇಮಾಲಾಪದಲ್ಲೂ, ಶ್ರೀ ಕೃಷ್ಣ 'ಬಾಗಿಲು ತೆಗೆಯಬಾರೆ, ಭಾಮಾ ಬಾಗಿಲು ತೆಗೆಯಬಾರೆ' ಎನ್ನುವ ಜನಪದ ಸಾಹಿತ್ಯದಲ್ಲಿ, ಸತ್ಯಭಾಮೆಯೂ ಶ್ರೀ ಕೃಷ್ಣನನ್ನು 'ನೀಯಾರು ?' ಎಂದು ಸಂಬೋಧಿಸಿದಾಗ, ತಾನು ಕೃಷ್ಣ, ನಿನ್ನ ಪ್ರಿಯ ಮೊದಲಾಗಿ ಉತ್ತರ ಹೇಳಿದಾಗ, 'ಬಾಗಿಲು ತೆಗೆಯಲಾರೆ, ಪೋಗೋ ಬಾಗಿಲು ತೆಗೆಯಲಾರೆ' ಎಂದು 'ಜಾರಾ, ಚೋರಾ' ಎಂದು

ಮೂದಲಿಸುವಳು. ಶ್ರೀ ಕೃಷ್ಣನು ಕೊನೆಯದಾಗಿ 'ನಾನೀನೇ ' ಎಂದಾಗ ಮುಗ್ದೆಯು ಬಾಗಿಲು ತೆಗೆಯುವಳು. ಇದರಿಂದ ಭಕ್ತನು ಭಗವಂತನಲ್ಲೇ ತನ್ಮಯನಾಗಿರುವುದೂ, ಭಗವಂತ ಭಕ್ತನಲ್ಲೇ ತಲೀನವಾಗಿರುವುದೂ ವೇದ್ಯವಾಗುತ್ತದೆ. ಭಕ್ತ ಭಗವಂತರ ಮಿಳನ, ಐಕ್ಯ. ಆಗ ತಾನೆಂಬ ನಾಮ, ರೂಪ, ಚಿನ್ಹೆ, ವ್ಯಕ್ತಿತ್ವ ಗುರುತು ನಾಶವಾಗುತ್ತದೆ. ಇದು ಭಕ್ತಿಯ ಪರಮಾವಧಿ.

ಮೊಹಮ್ಮದನು ಒಂದೆಡೆ "ಇನ್ನಾನ್ ಅಲ್ಲಾಹು, ಲಾ ಇಲ್ಲಾಹ ಅನ" ಈ ನಾನೇ ದೇವ, ಬೇರೆ ನಾನಿಲ್ಲಾ ನಾನೆಂಬುದು ಎನ್ನುವಂತೆ.

ಪೈಂಗಲೋಪನಿಷತ್ತಿನಲ್ಲಿರುವಂತೆ "ಅಹಮೇವ ಪರಂ ಸರ್ವಮಿತಿ ಪಶ್ಯೇತ್ಪರಂ ಸುಖಂ। ಯಥಾ ಜ ಲೇ ಜಲಂ ಕ್ಷಿಪ್ತಂ ಕ್ಷೀರಂ, ಕ್ಷೀರೇ, ಘೃತಂ ಘೃತೇ॥" ಜಲದಲ್ಲಿ ಜಲಮಿಶ್ರವಾದರೆ, ಕ್ಷೀರದಲ್ಲಿ ಕ್ಷೀರ, ತುಪ್ಪದಲ್ಲಿ ತುಪ್ಪ, ಎಂತೋ ಅಂತೇ ನಾನೇ ಪರ ಸರ್ವವು, ಈ ತಿಳು ವಳಿಕೆಯೇ ಪರಸುಖ.

ವರಾಹೋಪನಿಷತ್ತಿನಲ್ಲಿ "ಅಸ್ತಿಬ್ರಹ್ಮೇತಿ ಚೇದ್ವೇದ ಪರೋಕ್ಷಜ್ಞಾನ ಮೇವತತ್। ಅಹಂ ಬ್ರಹ್ಮೇತಿ ಚೇದ್ವೆದ ಸಾಕ್ಷಾತ್ಕಾರ ಸ್ಸ ಉಚ್ಯತೇ॥" ಬ್ರಹ್ಮನಿದಾನೇ ಎನ್ನುವದು ಪರೋಕ್ಷಜ್ಞಾನ. ನಾನೇ ಬಹ್ಮನೆನ್ನುವನು ಬ್ರಹ್ಮ ಸಾಕ್ಷಾತ್ಕಾರದಿಂದ ಹೇಳುತ್ತಾನೆ. ಭಕ್ತ ಪಾಲನು "Optismum esse Unire Deo" ಭಗವಂತನಲ್ಲೊಂದಾಗಿರುವುದೇ ಸರ್ವೋತ್ತಮವು, ಎಂದಿದ್ದಾನೆ.

ಹೀಗೆ ನಾವು ಭಕ್ತರ ದೃಷ್ಟಿಕೋಣದಿಂದ ವಿಧಗಳನ್ನು ನೋಡಿದ್ದೇವೆ. ಎಲ್ಲಾ ಸತ್ಯವೇ. ಇದರಲ್ಲಿ ಉತ್ಕೃಷ್ಟವ್ಯಾವುದು? ಇದೇ ಅರ್ಜುನನ ಪ್ರಶ್ನೆಯೇ ಅಧ್ಯಾಯದ ಮೊದಲನೇ ಶ್ಲೋಕ.

**ಏವಂ ಸತತಯುಕ್ತಾ ಯೇ। ಭಕ್ತಾಸ್ತ್ವಾಂ ಪರ್ಯುಪಾಸತೇ।**
**ಯೇ ಚಾಪ್ಯಕ್ಷರಮವ್ಯಕ್ತಂ। ತೇಷಾಂ ಕೇ ಯೋಗವಿತ್ತಮಾಃ ॥೧॥**

ಈ ರೀತಿಯಾಗಿ ಸತತವಾಗಿ (ನಿರಂತರ) ಸರಿಯಾದ ರೀತಿಯಿಂದ ಯುಕ್ತಾ) ನಿನ್ನಲ್ಲಿಯೇ ಸಮರ್ಪಿಸಿದ ಚಿತ್ತದಿಂದ ಉಪಾಸನೆಮಾಡು

ತ್ತಾರೋ, ಅವ್ಯಕ್ತನಾದ, ಅಕ್ಷರನಾದ ನಿನ್ನ ಧ್ಯಾನದಲ್ಲಿರುತ್ತಾರೋ ಆ ಭಕ್ತರಲ್ಲಿ, ಯೋಗಿಗಳಲ್ಲಿ ಯಾರು ಶ್ರೇಷ್ಠರು? ಸಗುಣೋಪಾಸಕ, ನಿರ್ಗುಣಧ್ಯಾನಿ ಇವರಲ್ಲಿ ಯಾರು ಉತ್ತಮರು ?

ತಾಯಿಯನ್ನು ಇರುವ ಇಬ್ಬರ ಮಕ್ಕಳ ಪೈಕಿ ದೊಡ್ಡವನೋ ಚಿಕ್ಕವನೋ ನನಗೆ ಹೆಚ್ಚು ಪ್ರೀತಿಯವನು ಎಂದು ಕೇಳಿದರೆ ಏನು ಹೇಳಿಯಾಳು ? ಇಬ್ಬರೂ ಎನ್ನುತ್ತಾಳೆ. ಅದರಲ್ಲಿ ತೂಕಮಾಡಿ ಹೇಳಲೇ ಬೇಕೆಂದರೆ ತನ್ನನ್ನೇ ಆಶ್ರಯಿಸಿಕೊಂಡು, ನಾವಲಂಬನೆಯಿಲ್ಲದಿರುವ ಚಿಕ್ಕ ಮಗನ ಮೇಲೆಯೇ ಹೆಚ್ಚು ಪ್ರೀತಿಯೆಂದು ಹೇಳಿಯಾಳು.

ಹೇಳಿದರೂ, ಚಿಕ್ಕ ಮಗ ದೊಡ್ಡ ಮಕ್ಕಳ ಪೋಷಣೆಯಲ್ಲಿ ಹಿತ ಚಿಂತನೆಯಲ್ಲಿ ವಾತ್ಸಲ್ಯದಲ್ಲಿ ವ್ಯತ್ಯಾಸ ಉಂಟೆ. ಕೊಂಚರಕ್ಕೆ ಬಲಿತವ, ತಾಯಿಯ ಆಶ್ರಯ ಕಮ್ಮಿ ಆದರೆ ತಾನೆ ಅವನಿಗೂ ಮಾತೃ ಪ್ರೇಮ ವಿಲ್ಲವೇ ? ಅಂತೇ ಅವ್ಯಕ್ತೋಪಾಸಕ, ಜ್ಞಾನಿ. ಭಕ್ತನಾದರೋ, ಯಮುನಾಚಾರ್ಯರು, ಸ್ತೋತ್ರರತ್ನದಲ್ಲಿ ಹೇಳಿರುವಂತೆ "ನಿರಾಸಕಸ್ಯಾಪಿ ನ ತಾವದುತ್ಸಹೇ । ಮಹೇಶ ಹಾತುಂ ತವ ಪಾದ ಪಂಕಜಂ । ರುಷಾ ನಿರಸ್ತೋಽಪಿ ಶಿಶು ಸ್ತನಂಧಯೋ । ನ ಜಾತು ಮಾತುಶ್ಚರಣೌ ಜಿಹಾಸತಿ ॥" ಸ್ತನಪಾನಮಾಡುವ ಶಿಶುಳೆಯು ತಾಯಿಯು ಬೇಜಾರಿ ನಿಂದ ನೂಕಿದರೂ, ತಾಯಿಯ ಪಾದದಡಿ ಬಿಟ್ಟುಹೋಗದಂತೆ, ದೇವನ ಪಾದ ಪಂಕಜವನ್ನುಬಿಟ್ಟು ಭಕ್ತ, ದೇವ ನಿರಾಕರಿಸಿದರೂ, ದೂರ ಸರಿಯಲಾರ. ಬೇಜಾರಾದ ತಾಯಿಯು, ನೂಕಿದ ಶಿಶುಳೆಯು ಪುನಃ ಅಳುತ್ತ ತನ್ನ ಪಾದದಡಿ ಧಾವಿಸುವುದು ನೋಡಿ, ಕರುಣೆಯಿಂದ ಬಾಚಿ ತಬ್ಬಿ ಮಡಿಲನಲ್ಲಿರಿಸಿಕೊಂಡು, ಅಮೃತಪಾನಮಾಡಿಸುವಳು. ಭಕ್ತನೂ ಅಂತೆಯೇ, ಉತ್ಪಾಲದೇವನು ಶಿವಸ್ತೋತ್ರಾವಳಿಯಲ್ಲಿ "ಸಂಗ್ರಹೇಣ ಸುಖದುಃಖ ಲಕ್ಷಣಂ । ಮಾಂ ಪ್ರತಿ ಸ್ಥಿತ ಮಿದಂ ಶೃಣು ಪ್ರಭೋ । ಸೌಖ್ಯಮೇಮ ಭವತಾ ಸಮಾಗಮಃ । ಸ್ವಾಮಿನಾವಿರಹ ಏವ ದುಃಖತಾ ॥" ಭಗವಂತನ ಸಮಾಗಮವೇ (ಅವನೊಡನೊಂದಿಗಿರುವುದೇ) ಸುಖ, ಸ್ವಾಮಿಯ ವಿರಹವೇ ದುಃಖ, ಇದೇ ಪ್ರಭೋ ಸಂಗ್ರಹವಾಗಿ ನನ್ನ ಸುಖ ದುಃಖ ಲಕ್ಷಣವೆಂದಿರುವಂತೆ, ಸ್ವಾಮಿಯ ಅವಲಂಬನೆ.

ಹಿಂದೆ ಸ್ವಾಮಿಯು, ಅರ್ಜುನನು ಕರ್ಮಯೋಗಿಯೋ, ಕರ್ಮ ಸನ್ಯಾಸಿಯೋ ಶ್ರೇಷ್ಠನೆಂದು ಕೇಳಿದಾಗ, ಕರ್ಮಯೋಗಿಯೇ ಎಂದು ಹೇಳಿದ. ಕರ್ಮಯೋಗಿಯೇ ಕರ್ಮಸನ್ಯಾಸಿಯಾಗಿ ಪರಿವರ್ತನೆಯಾಗುವುದು. ಆದರೂ ಸ್ವಾಮಿ ಕರ್ಮವೆಸಗುತ್ತಿರುವ ಸಾಧಕನೂ, ಜ್ಞಾನಿಯು ಉತ್ತಮನೆಂದಭಿಪ್ರಾಯಹೇಳಿದ.

**ಮಯ್ಯಾವೇಶ್ಯ ಮನೋ ಯೇ ಮಾಂ । ನಿತ್ಯಯುಕ್ತಾ ಉಪಾಸತೇ ।**
**ಶ್ರದ್ಧಯಾ ಪರಯೋಪೇತಾ-ಸ್ತೇ ಮೇ ಯುಕ್ತತಮಾ ಮತಾಃ ॥೨॥**

ಈ ಪ್ರಶ್ನೆಗೂ ಈ ಸಂದರ್ಭದಲ್ಲಿ ಅರ್ಜುನನಿಗೆ ಶ್ರೇಯಸ್ಸಾಗುವ ಉತ್ತರವನ್ನೇ ಹೇಳುತ್ತಾನೆ ಸ್ವಾಮಿ. ನನ್ನಲ್ಲಿಯೇ ಪ್ರವೇಶಿಸಿದ ಮನಸ್ಸುಳ್ಳ ಯಾರು, ನನ್ನನ್ನೇ ನಿರಂತರವೂ ಹೆಚ್ಚಿನ ಶ್ರದ್ಧೆಯಿಂದ ನಿತ್ಯಯುಕ್ತರಾಗಿ ಉಪಾಸನೆಮಾಡುವರೋ ಅವರೇ ಯುಕ್ತತಮರೆಂದು ನನ್ನ ಮತವು.

'ಅಹಂ' ನಾನು ಎನ್ನುವ ಭಾವದಲ್ಲಿನ ಅಂತಃಕರಣವು ತ್ರಿವೃತ್ತಿಯಲ್ಲಿ ಪ್ರವಹಿಸುವುದು. ಬುದ್ಧಿ, ಚಿತ್ತ, ಮನ (Intellect, Emotion & Will) ಈ ಮೂರೂ ಅಂತಃಕರಣದ ವೃತ್ತಿದ್ವಾರಗಳು. ಇವು ಮೂರೂ ಬೇರೆಬೇರೆಯಲ್ಲ. ಅಂತಃಕರಣದಲ್ಲಿ ಆ ಆ ವ್ಯಕ್ತಿಯ ಸಂಸ್ಕಾರಾನುಗುಣವಾಗಿ ಒಂದು ಹೆಚ್ಚು, ಒಂದು ಕಮ್ಮಿಯಾಗಿ ಮೂರೂ ಇರುವುವು. ಬುದ್ಧಿಯಂಶವೇ ಹೆಚ್ಚಿನದಾಗಿರುವವರು, ಕಲ್ಪನಾ ಪ್ರಾಂತ್ಯದಲ್ಲಿ ಹೆಚ್ಚು ಪ್ರವೃತ್ತಿಯುಳ್ಳವರಾಗಿ ಜ್ಞಾನದಿಂದ ಇಹಪರವ್ಯಾಪಾರಗಳನ್ನು ಸಾಧಿಸುವರು. ಚಿದಾಂಶವೇ ಅಧಿಕವಾಗಿರುವವರು ಹೃದಯದ ಭಾವನೆಗಳಿಂದ ಮೃದು ಸ್ವಭಾವ ಪ್ರವೃತ್ತಿಯುವರಾಗಿ ಭಕ್ತಿ, ಪ್ರೇಮಗಳಿಂದ ಇಹಪರ ವ್ಯಾಪಾರಗಳಲ್ಲಿ ತೊಡಗುವರು. ಮನದಂಶವೇ ಪ್ರಧಾನವಾಗುಳ್ಳವರು ಕಾರ್ಯಾಸಕ್ತರಾಗಿ ಕರ್ಮಗಳಲ್ಲಿ ನಿರತರಾಗಿ ಇಹಪರಕ್ಕಾಗಿ ಪ್ರವರ್ತಿಸುವರು. ಹೀಗೆ ಅವರವರ ಸ್ವಭಾವಾನುಸಾರ ಅವರವರಿಗೆ ಮಾರ್ಗ ಪ್ರವರ್ತನೆಯುಂಟಾಗುವುದು. ಉದ್ಧವ ಹೇಳುವಂತೆ,

ನಿರ್ವಿಣ್ಣಾನಾಂ ಜ್ಞಾನಯೋಗಃ ಕರ್ಮಯೋಗಸ್ತು ಕಾಮಿನಾಂ ।
ನನಿರ್ವಿಣ್ಣೋ ನಾತಿಸಕ್ತೋ ಭಕ್ತಿಯೋಗೋಽಸ್ಯ ಸಿದ್ಧಿದಃ ॥

ಸಕಾಮಿಗಳಿಗೆ ಕರ್ಮಯೋಗದಲ್ಲೂ ಕಾಮವಿಲ್ಲದೆ ಕರ್ಮಬಿಡಲು ಸಿದ್ಧವಿದ್ದವರಿಗೆ ಜ್ಞಾನಯೋಗದಲ್ಲೂ ಅಕಾಮ, ಕಾಮ ಎರಡರಲ್ಲೂ ಆಸಕ್ತಿ ಇಲ್ಲದವರಿಗೆ ಭಕ್ತಿಯೋಗದಲ್ಲೂ ಸಿದ್ಧಿಯಿದೆ.

ಸಗುಣ ನಿರ್ಗುಣ ಭಕ್ತಿಯನ್ನು ರಾಮಾಯಣದಲ್ಲಿ ಲಕ್ಷ್ಮಣ, ಭರತರೂ, ಭಾರತದಲ್ಲಿ ಅರ್ಜುನ ಉದ್ಧವರೂ, ಉದಹರಿಸಿದ್ದಾರೆ.

ಲಕ್ಷ್ಮಣ ರಾಮನ ಸಗುಣಭಕ್ತ. ರಾಮನನ್ನಗಲಿ ಕ್ಷಣಕಾಲವಿರಲಾರನು. ರಾಮನಿಗಾಗಿ ಏನು ಕೆಲಸವನ್ನಾದರೂ ಮಾಡುತ್ತಿದ್ದನು. ರಾಮನಿಗಾಗಿ ಹೆಣ್ಣಿನ ಮೂಗು ಕಿವಿ ಕೊಯ್ದನು, ಅವನಪ್ಪಣೆಯಂತೆ ಸೀತಾದೇವಿಯನ್ನು ತುಂಬಿದ ಗರ್ಭಿಣಿಯಾದಾಗ ಕಾಡಿಗೆ ನಿರ್ದಾಕ್ಷಿಣ್ಯವಾಗಿ ಕರೆದೊಯ್ದು ಬಿಟ್ಟುಬಂದನು, ರಾಮನಿಗಾಗಿ ಸಮರದಲ್ಲಿ ಅದ್ವಿತೀಯವಾಗಿ ಹೋರಾಡಿದನು. ಶ್ರೀರಾಮಸೇವೆಯಲ್ಲಿ ತಾನು ತನ್ನದೆಲ್ಲಾ ಮರೆತನು. ಹೆಂಡತಿ ನವವಧುವನ್ನು ಬಿಟ್ಟುಬಂದು ಸೀತಾ ರಾಮ ಸೇವೆ ೧೪ ವರ್ಷ ಕಾಡಿನಲ್ಲಿ ಸತತ ಮಾಡಿದನು. ಆತನಿಗೆ ಅಸ್ತಿತ್ವವೆನ್ನುವುದೇ ಉಳಿಯಲಿಲ್ಲಾ, ಶ್ರೀರಾಮರ ಕಣ್ಣು ಕೈ ಮನವಾಗಿ, ನದಿ ಸಮುದ್ರವನ್ನು ಸೇರುವಂತೆ ರಾಮನಲ್ಲಿ ಮಿಲನವಾಗಿ ಬಿಟ್ಟಿದ್ದನು. ನೀರುಬಿಟ್ಟು ವಾಸಿಸಲಾರದ ಮೀನಿನಂತೆ ಶ್ರೀ ರಾಮನನ್ನು ಬಿಟ್ಟಿರಲಾರದಾದ ಲಕ್ಷ್ಮಣ. ಬಿಸುಟಕಲ್ಲಿಗೆ ಅಡ್ಡಲಾಗಿ ಬಂದು ಕೈ ರಕ್ಷಿಸುವಂತೆ, ಶ್ರೀರಾಮರನ್ನು ರಕ್ಷಿಸಿದ, ಬಾವುಟವನ್ನು ಮೇಲೆತ್ತಿ ಹಿಡಿಯುವಂತೆ ಅದರ ಸ್ಥಂಭವಾಗಿ ಮರೆಯದೆ ಶ್ರೀರಾಮ ಕೀರ್ತಿ ಎತ್ತಿ ಆಧಾರವಾಗಿ ಹಿಡಿದ. ಬಾವುಟಕ್ಕೇ ಎಲ್ಲಾ ಗೌರವ, ದಂಡಕ್ಕೆ ದಂಡವೇ ಅಂತೆ ಲಕ್ಷ್ಮಣನನ್ನು ಕೇಳುವರೇ ಇಲ್ಲಾ. ಅವನಿಗೆ ಹಿತವಾದುದೂ ಅದೇ.

ಆದರೆ ಭರತನ ಭೂಮಿಕೆಯೇ ಬೇರೆ. ಭರತ ಕರ್ತವ್ಯನಿಷ್ಠ, ಅವನದು ನಿರ್ಗುಣ ಭಕ್ತಿ. ಸಂಪತ್ತೆಲ್ಲಾ ಸ್ವಾಮಿಯದು. ಅದರ ವ್ಯವಸ್ಥೆ ಕಾಪಾಡುವ ಕರ್ತವ್ಯ ತನ್ನಭಾರ, ರಾಮಭಕ್ತಿ ಎಂದರೆ ರಾಮನಪರೋಕ್ಷವಾದರೂ ಅವನ ಕೆಲಸದಲ್ಲೇ ನಿರತವಾಗಿರುವುದೆಂದು. ಆತ ರಾಜ್ಯಭಾರ

ಮಾಡಿದುದೂ ಅಯೋಧ್ಯೆಯಿಂದ ೨ ಮೈಲಿ ದೂರವಿದ್ದ ನಂದೀಗ್ರಾಮದಲ್ಲಿ, ಅದೂ ಪಾದುಕಾಪೂಜಾ ತಪನಿಷ್ಟನಾಗಿ.

ಹೀಗೆ ರಾಜ್ಯಭಾರಮಾಡುತ್ತಿದ್ದರೂ, ತನುವು ನಂದೀಗ್ರಾಮದಲ್ಲಿದ್ದರೂ ಮನವು ರಾಮನಲ್ಲಿತ್ತು. ರಾಮನೆಂದು ಹಿಂದಿರುಗುವನೋ ಎಂದೂ ಅವನಿಗೆ ಅವನ ರಾಜ್ಯ ಸುರಕ್ಷಿತವಾಗಿ ಎಂದು ಒಪ್ಪಿಸುವೆನೋ ಎಂದೇ ತಪಿಸುತ್ತಿದ್ದ. ಏನುಮಾಡಿದರೂ ಆವನ ಪ್ರೀತಿಗಾಗಿಯೇ, ಆದರೂ ಶ್ರೀರಾಮನನ್ನೇ ವಾಪಸು ಕರೆತರಬೇಕೆಂದೂ, ಸಾಧ್ಯವಾಗದೇ ಪಾದುಕೆಯನ್ನಾದರೂ ಬೇಡಿ ಸಂಕೇತವಾಗಿ ಅವನ್ನು ಶಿರಸಾವಹಿಸಿ ತಂದಾಗ ನಿರ್ಗುಣ ಭಕ್ತಿ ಸಗುಣ ಭಕ್ತಿಯಲ್ಲಿ ಕರಗಿತು. ೧೪ ವರ್ಷ ವನವಾಸದಲ್ಲಿ ಶ್ರೀರಾಮ ಲಕ್ಷ್ಮಣರು ಪಿತೃವಾಕ್ಯ ಪರಿಪಾಲನಾ ತಪವಾಚರಿಸಿ, ೧೪ ವರ್ಷ ನಂದೀಗ್ರಾಮದ ಶ್ರೀರಾಮ ಪಾದುಕಾ ಸೇವೆಯಲ್ಲಿ ಭರತ ತಪವಾಚರಿಸಿ ಕೊನೆಯಲ್ಲಿ ಸಂಧಿಸಿ ಮಿಲನವಾದಾಗ ಈ ಮೂವರಲ್ಲಿ ಹೆಚ್ಚಿನ ನಿಜವಾದ ಏಕನಿಷ್ಠತಪಸ್ವಿ ಯಾರೆನ್ನುವುದು ಕಂಡು ಹಿಡಿಯಲಾರದಾಗಿತ್ತು. ೧೪ ವರ್ಷ ಲಕ್ಷ್ಮಣ ಶ್ರೀರಾಮ ಪಾದಾ ಸೇವಾ ನಿರತನಾಗಿ ಜೊತೆಯಲ್ಲೇ ಆಗಮಿಸಿದಾಗ ಮೂವರ ಮುಖವೂ ಅವರವರ ತಪೋಮಹಿಮೆಯಲ್ಲಿ ಅಧಿಕವಾಗಿ ಒಂದನ್ನೊಂದು ಪೈಪೋಟಿಸುವಂತೆ ಬೆಳಗಿದವು. ಈ ಮೂವರಲ್ಲಿಯೂ ಶ್ರೀರಾಮರಲ್ಲಿ ಜ್ಞಾನತಪ. ಲಕ್ಷ್ಮಣನಲ್ಲಿ ಭಕ್ತಿತಪ, ಭರತನಲ್ಲಿ ಕರ್ಮತಪ ಎಲ್ಲಾ ಏಕರೂಪವಾಗಿ ಸಂಧಿಸಿದುವು.

ಭಾರತದಲ್ಲಿ ಲಕ್ಷ್ಮಣನಂತೆ ಉದ್ಧವ, ಭರತನಂತೆ ಅರ್ಜುನ ಶ್ರೀಕೃಷ್ಣ ಪರಮಾತ್ಮನ ಸಗುಣಭಕ್ತ ಉದ್ಧವ ಬಿಟ್ಟಿರಲಾರ, ಅರ್ಜುನ ಶ್ರೀ ಕೃಷ್ಣನ ನಿರ್ಗುಣಭಕ್ತ, ಅವನ ಅಪ್ಪಣೆಯಂತೇ ಕರ್ಮಯೋಗಿಯಾಗಿ, ಧರ್ಮ ಪರಿಪಾಲನೆಗೆ ನೆರವಾಗಿದ್ದ. ಪ್ರತ್ಯಕ್ಷ ಭೇಟಿ, ಪತ್ರವ್ಯವಹಾರದಂತೆ ಸಗುಣಭಕ್ತಿ, ಭೇಟಿಯಿಲ್ಲದಿದ್ದರೂ, ವ್ಯವಹಾರವಿಲ್ಲದಿದ್ದರೂ, ಮನಸ್ಸಿನಲ್ಲೇ ಏಕೈಕ ಸ್ಮರಣೆ ನಿರ್ಗುಣಭಕ್ತಿ.

"ಕರ್ಮ ಗಂಗೇ, ಭಕ್ತಿ ಯಮುನೇ, ಜ್ಞಾನ ಸರಸ್ವತೀ,"ಯಾಗಿ ಕರ್ಮ, ಭಕ್ತಿ, ಜ್ಞಾನಗಳ ತ್ರಿವೇಣೀ ಸಂಗಮದಲ್ಲಿ ವ್ಯಕ್ತಿಜೀವನವು ಹರಿವುದು. ಕರ್ಮ ಗಂಗೆಯಂತೆ ಪ್ರಕಾಶವಾಗಿ ಪ್ರವಹಿಸುವುದು,

ಯಮುನೆಯಂತೆ ಭಕ್ತಿ ಕರ್ಮಾಶ್ರಯ ಹೊಂದುವುದು-ದೇವನ ಪರಮ ಪ್ರೇಮದಲ್ಲಿ, ಜ್ಞಾನವು ಗುಪ್ತಗಾಮಿನಿಯಾದ ಸರಸ್ವತಿಯಂತೆ, ಹೊರಗೆ ತೋರ್ಪಡದಂತೆ ಅಂತರ್ಗತವಾಗಿ ಹರಿವುದು. ಎಲ್ಲವೂ ಒಂದಾಗಿ ಪರಮಾತ್ಮನ ಪಾದ ಸೇರಲೋಸುಗವೇ ಧಾವಿಸುವುದು.

ನಿರುಪದ್ರವವಾಗಿ, ಸಾಧಾರಣರೆಲ್ಲಾ, ಸ್ತ್ರೀ ಪುರುಷರು ಕೂಡಾ, ವರ್ಣಭೇದವಿಲ್ಲದೆ, ಆಶ್ರಮ ಭೇದವಿಲ್ಲದೆ ಸರ್ವರಿಗೂ ಅಧಿಕಾರವಿರುವ ಭಕ್ತಿಯೋಗಾಶ್ರಯಿಸಿರುವ ಭಕ್ತನೇ, ಸಗುಣಾರಾಧನೆಯಲ್ಲಿ ನಿರತನಾದ ವನೇ ಶ್ರೇಷ್ಠನೆಂದು ಸ್ವಾಮಿ ಹೇಳಿದ್ದಾನೆ. ಭಕ್ತಿಗೆ ಆಶ್ರಯಬೇಕು. ಆಶ್ರಯವೇ ಸ್ವಾಮಿಪಾದ. ಚಿತ್ತವೃತ್ತಿಯು ಸ್ವಾಮಿಯನ್ನು ಪ್ರವೇಶಿಸಿ, ನಿರಂತರವೂ ತದೇಕಧ್ಯಾನದಿಂದ ಉಪಾಸನೆ ಮಾಡುತ್ತಾ, ಶ್ರದ್ಧೆಯಿಂದ, ಪರಮಪ್ರೇಮ ನಿರತರಾಗಿರುತ್ತಾರೋ ಅವರೇ 'ಯುಕ್ತತಮ'ರೆಂದು ಭಗವಂತನ ಮತ. ಒಳಹೊರಗೂ ಭಗವಂತನೇ ತುಂಬಿದ್ದಾನೆ ಭಕ್ತನಿಗೆ. ಹೃದಯವಾರಿಸಿ ಮೃದುಮಾಡಿದ್ದಾನೆ, ಎಲ್ಲೆಲ್ಲಿಯೂ, ಎಲ್ಲದರಲ್ಲೂ, ಯಾವಾಗಲೂ ಸುತ್ತಿಕೊಂಡು ಪ್ರಪಂಚವನ್ನೆಲ್ಲಾ ತುಂಬಿದ್ದಾನೆ.

ಕರ್ಮಯೋಗಿಗೆ ದೇವನು ಕಾರುಣ್ಯ ಪ್ರಭುವಿನಂತೆ, ಜ್ಞಾನಯೋಗಿಗೆ ಸುಪ್ರೀತ ಪಿತನಂತೆ, ಭಕ್ತನಿಗೆ ವಾತ್ಸಲ್ಯ ತಾಯಿಯಂತೆ. ಕರ್ಮಕ್ಕೆ ದ್ವಿಗುಣವಾಗಿ ಫಲವೀವ ಕರುಣಾಮಯ ಪ್ರಭು. ಫಲವನ್ನವನಿಗೇ ಒಪ್ಪಿಸುವುದು ಕರ್ಮಯೋಗಿಯ ಲಕ್ಷಣ. ಜ್ಞಾನಕ್ಕನುಗುಣವಾಗಿ ಸಾಕ್ಷಾತ್ಕರಿಸುವನು, ಸುಪ್ರೀತ ತಂದೆ, ಜ್ಞಾನದಾಯಕನೂ ಅವನೇ, ಜ್ಞಾನ ಗುರಿಯೂ ಅವನೇ ಎಂದು ಆತ್ಮರಾಮನಾಗಿರುವುದು ಜ್ಞಾನ ಯೋಗಿಯ ಲಕ್ಷಣ. ಆದರೆ ಭಕ್ತನಿಗೆ ಭಯಗೊಂಡು ವಾತ್ಸಲ್ಯದಿಂದ ಅವನನ್ನು ಕಾಪಾಡುವಳಂತಿರುವ ತಾಯಿಯಂತೆ. ತನ್ನನ್ನೇ ಆಶ್ರಯಿಸಿರುವ ಮಗು ತಪ್ಪು ಹೆಜ್ಜೆಯಿಟ್ಟು ಧಾವಿಸಿಬಂದರೆ, ಎತ್ತಿ, ಅಪ್ಪಿ, ಮುತ್ತಿಟ್ಟು ಆದರಿಸುವಳೆಂಬ ಭಾವನೆ ವೇದಾಂತ ದೇಶಿಕರದು. ಕೈಲಾಗದೆ ಬಿದ್ದೆಡೆಯೇ ತಾಯಿಯನ್ನು ಚೀರಿ, ಅಳತೊಡಗಿದರೆ, ನಿರತವಾಗಿರುವ ಕೆಲಸದಿಂದ, ಎಲ್ಲವನ್ನೂ ಕೈಬಿಟ್ಟು ಓಡಿಬಂದು ಏನಾಯಿತೋ ಕಂದನಿ

ಗೆಂದು, ಎತ್ತಿ, ಅಪ್ಪಿ, ಮುತ್ತಿಟ್ಟು ಆದರಿಸುವಳೆಂಬ ಭಾವನೆ ಮನಸಮೌಲ ಮುನಿಯರದು.

"ನಾಥ ಕದಾಸ ತಥಾ ವಿಧ ಆಕ್ರಂದೋ ಮಮ ಸಮುಚ್ಚರೇ ದ್ವಾಚಿ ।
ಯತ್ಸ ಮನಸ್ತ ರಮೇವ ಸ್ಪುರತಿ ಪುರಸ್ತಾವಕೀ ಮೂರ್ತಿ ॥"

ನಿನ್ನ ಮೂರ್ತಿಯು ತಕ್ಷಣ ನನ್ನ ಸಮಕ್ಷಮಕ್ಕೆ ಬರುವಂತೆ, ಯಾವಾಗ ನಾಥ ನನ್ನ ಮುಖದಿಂದ ಅಂಥಾ ಚೀರಿ ಅಳುವು ನಿನಗಾಗಿ ಹೊರಬೀಳದೋ ? ಎಂದು ಉತ್ಪಾಲದೇವನು (ಕಾಶ್ಮೀರಭಕ್ತ) ತನ್ನ ಶಿವ ಸ್ತೋತ್ರದಲ್ಲಿ ಆರ್ತದಿಂದ ಕೇಳಿದ್ದಾನೆ. ಆ ಸಾನಿಧ್ಯವು ಬಿಟ್ಟುಹೋಗದ ನಿತ್ಯಸಾನಿಧ್ಯವಾಗಿರಬೇಕು. ಇದನ್ನೂ, ಅದೇ ಸ್ತೋತ್ರದಲ್ಲಿ ಇನ್ನೊಂದು ಶ್ಲೋಕದಲ್ಲಿ ಅವರೇ ಪಾರ್ಥಿಸಿದ್ದಾರೆ.

"ಕದಾ ಕಾಮಪಿ, ತಾಂ, ನಾಥ ತವ ವಲ್ಲಭ ತಾಮಿ ಯಾಮ್ ।
ಯಥಾ ಮಾಂ ಪ್ರತಿನ ಕ್ವಾಪಿ ಯುಕ್ತಂತೇ ಸ್ಯಾತ್ಪಲಾಯಿತುಂ ॥"

ನನ್ನಿಂದ ಓಡಿಹೋಗುವುದು ಯುಕ್ತವಲ್ಲವೆಂದು ನೀನು ನನ್ನಲ್ಲೇ ಯಿರುವಂತೆ, ನಾನು ನಿನ್ನನ್ನೂ, ನೀನು ನನ್ನನ್ನೂ ಯಾವಾಗ ಪ್ರೀತಿಸುವೆವೋ ? ಸ್ವಾಮಿಯ ಸಮಾಗಮವೇ ಸುಖ, ವಿರಹವೇ ದುಃಖ. ಈ ರೀತಿ ಎಡಬಿಡದೆ ಸ್ವಾಮಿಯನ್ನುಪಾಸಿಸುವುದೇ ಭಕ್ತ.

**ಯೇ ತ್ವಕ್ಷರಮನಿರ್ದೇಶ್ಯ-ಮವ್ಯಕ್ತಂ ಪರ್ಯುಪಾಸತೆ ।**
**ಸರ್ವತ್ರಗಮಚಿಂತ್ಯಂ ಚ । ಕೂಟಸ್ಥಮಚಲಂ ಧ್ರುವಮ್ ॥೩॥**

**ಸನ್ನಿಯಮ್ಯೇಂದ್ರಿಯಗ್ರಾಮಂ । ಸರ್ವತ್ರ ಸಮಬುದ್ಧಯಃ ।**
**ತೇ ಪ್ರಾಪ್ನುವಂತಿ ಮಾಮೇವ । ಸರ್ವಭೂತಹಿತೇ ರತಾಃ ॥೪॥**

ಅದೇ ಅವ್ಯಕ್ತೋಪಾಸನೆ ಹೇಳುತ್ತಾನೆ ಸ್ವಾಮಿ.

ಇಂದ್ರಿಯ ಸಮೋಹವನ್ನು ನಿಗ್ರಹಿಸಿ, ಸರ್ವತ್ರ ಸಮಬುದ್ಧಿಯಿಂದ ಸರ್ವಭೂತಹಿತದಲ್ಲಿ ಪ್ರೀತಿಯುಳ್ಳವರಾಗಿ (ರತಾಃ) ಯಾರು, ಅವ್ಯಕ್ತ

ವಾಗಿಯೂ, ಅನಿರ್ದೇಶ್ಯವಾಗಿಯೂ, ಅಕ್ಷರವಾಗಿಯೂ, ಸರ್ವವ್ಯಾಪಿಯಾಗಿ, ಅಂತರಂಗವಾಗಿ, ಅಚಲವಾಗಿ ಸ್ಥಿರವಾಗಿ, ಸರ್ವದಾ ಸ್ಥಾಯಿ (ಅಲುಗಾಡದೇ, ಮಾರ್ಪಡದೇ) ಯಾದ ನನ್ನ ಸ್ವರೂಪವನ್ನು ಉಪಾಸನೆ ಮಾಡುವರೋ ಅವರು ನಿರ್ಗುಣ ಬ್ರಹ್ಮನಾದ ನನ್ನನ್ನೇ ಹೊಂದುವರು. ಅವರಿಗೂ ನಾನೇ ಪ್ರಾಪ್ತಿ.

ಬ್ರಹ್ಮದಲ್ಲಿ ಒಂದು ಭಾಗಮಾತ್ರ ವ್ಯಕ್ತ, ಸಗುಣಬ್ರಹ್ಮ ಈ ಚರಾಚರ ಬ್ರಹ್ಮಾಂಡವನ್ನೆಲ್ಲಾ ವ್ಯಾಪಿಸಿದೆ. ತ್ರಿಪಾದವು ಅವ್ಯಕ್ತ, ನಿರ್ಗುಣಬ್ರಹ್ಮ ಹೇಗಿದೆಯೆಂದು ನಿರ್ದೇಶಿಸಲು ಕೂಡ ಅಶಕ್ಯವಾಗಿದೆ. ಏಕಾಂಶದಿಂದ ಮಾತ್ರ ಎಲ್ಲಾ ವಿಭೂತಿಗಳಲ್ಲೂ ವ್ಯಾಪಿಸಿ ತಾನಾಗಿ ಪ್ರಕಾಶಿಸುತ್ತೇನೆಂದು "ಏಕಾಂಶೇನ ಸ್ಥಿತೋ ಜಗತ್" (ಅ ೧೦, ಶ್ಲೋ ೪೨) ಸ್ವಾಮಿ ಆಗಲೇ ಹೇಳಿದ್ದಾನೆ. ವರ್ಣಿಸಲಸದಳವಾದ ಈ ಬ್ರಹ್ಮ ಅವ್ಯಕ್ತಂ ತತ್ವಕ್ಕೆ ಬರೀ ನಿಷೇಧ ವಿ ಶೇ ಷ ಣ ಗ ಳಿಂ ದ ಲೇ ವರ್ಣನೆ. ಅಕ್ಷರಂ – ನಾಶವಿಲ್ಲದ್ದು, ಅನಿರ್ದೇಶ್ಯಂ – ನಿರ್ದೇಶಿಸಲು ಉಪಮಾನಕೂಡ ಹೀಗಿರಬಹುವೆಂದು ಊಹೆಗೆ ನಿಲುಕಲಾರದುದು, ಅವ್ಯಕ್ತಂ – ವ್ಯಕ್ತ (ಗೋಚರ) ವಾಗದುದು ಇವೇ ಅವರ ಅರ್ಥಾದ ನಿರ್ಗುಣಸಾರವನ್ನು ಸಾರಬಲ್ಲವು. ಆದರೆ ಅದು ಇದೆ ಎನ್ನುವುದು ಮಾತ್ರ ನಿರ್ಧಾರವಾಗಿದೆ.

ಕಠೋಪನಿಷತ್ತಿನಲ್ಲಿ "ನೈವ ವಾಚಾ, ನಮನಸಾ ಪ್ರಾಪ್ತುಂ ಶಕ್ಯೋನ ಚಕ್ಷುಸಾ । ಅಸ್ತೀತಿ ಬ್ರುವತೋಽನ್ಯತ್ರ, ಕಥಂ ತದುಪಲಭ್ಯತೇ ॥ ಅಸ್ತಿತ್ಯೇವೋ ಪಲಬ್ಧವ್ಯ ಸ್ತತ್ವ ಭಾವೇನ ಚೋ ಭಯೋಃ । ಅಸ್ತಿತ್ಯೇವೋ ಪಲಬ್ಧಸ್ಯ ತತ್ತ್ವ ಭಾವಃ ಪ್ರಸೀದತಿ ॥" ವಚನ, ಮನ ಚಕ್ಷುಗಳಿಂದ ಅದನ್ನು ಪ್ರಾಪ್ತಿಹೊಂದಲು ಶಕ್ಯವಿಲ್ಲಾ. 'ಇದೆ' ಎಂದು ಹೇಳುವದಲ್ಲದೆ ಮತ್ತೆಂತು ಅದನ್ನು ಹೊಂದಬೇಕು, ಇದೇ ಎಂಬ ಸತ್ವ ಉಭಯಭಾವ (ಸದಸತ್, ಸತ್, ಅಸತ್) ದಿಂದ ಅದು ಲಭ್ಯವಾಗಲವಕಾಶವಾಗುತ್ತೆ. ಇದೆ ಎನ್ನುವ ಭಾವದಿಂದ ಅದರ ತತ್ವಭಾವವು (ಸಚ್ಚಿದಾನಂದ ಸ್ವರೂಪವು) ಪ್ರಸೀದವಾಗುತ್ತೆ. (ಅಂತಃ ಪ್ರಕಾಶವಾಗಲವಕಾಶವಾಗುತ್ತೆ) ಎಂದು, ನಿರ್ಗುಣ ಸಗುಣಭಾವಗಳಿಗೆ ಮುಂಚೆ ಅಸ್ತಿತ್ವಕೊಡುವುದು ಮುಖ್ಯ, ಆಗ ನಿರ್ಗುಣ ಸಗುಣ ಭಾವವನ್ನು ಹೊಂದಬೇಕೆಂಬ

ಚಿಂತನವೂ, ಅದರ ಪ್ರಭಾವ ಪ್ರಕಾಶವೂ ಉಂಟಾಗುತ್ತೆಂದು ಉಲ್ಲೇಖಿಸಿದೆ. ಈ ಬ್ರಹ್ಮ ಅಸ್ತಿತ್ವ ದೇವನಿದ್ದಾನೆ, ಸಗುಣ ನಿರ್ಗುಣ ಬ್ರಹ್ಮ ನಿರೂಪ ಎಂಬ ಒಂದು ನಂಬಿಕೆ ನಮ್ಮ ಸನಾತನ ಧರ್ಮದಲ್ಲೂ, ಎಲ್ಲಾ ಮತ ಧರ್ಮಗಳಲ್ಲೂ ಒಂದು ಮುಖ್ಯವಾದ ಅಡಿಗಲ್ಲು.

ಇದನ್ನೆಲ್ಲಾ ವಿನೋಬಾರವರು ಸೊಗಸಾಗಿ ವರ್ಣಿಸಿದ್ದಾರೆ. ನಮ್ಮ ಈ ಕಲಿಯುಗದಲ್ಲಿ, ಮಹಾತ್ಮ ಗಾಂಧಿಯವರು ಸಗುಣಭಕ್ತರಾಗಿ ಕರ್ಮಯೋಗದಲ್ಲೂ, ವಿನೋಬಾರವರು ನಿರ್ಗುಣಭಕ್ತರಾಗಿ ಭೂದಾನ ಸರ್ವೋದಯದಲ್ಲೂ ಭಾರತ ಸೇವೆ ಮಾಡಿರುವುದು ಕಾಣುತ್ತೇವೆ.

ಆ ಇರುವಿಕೆಯೂ ಸರ್ವವ್ಯಾಪಕ, ಸರ್ವಸ್ಥಾಯಿ, ಧ್ರುವ. ಕೂಟಸ್ಥಂ, ಅಚಲಂ ಧ್ರುವಂ. ಇವು ಒಂದರರ್ಥವನ್ನು ಇನ್ನೊಂದು ಪುಷ್ಟೀಕರಿಸುವುವು. ಒಂದೊಂದೇ ಪದದಲ್ಲಿ ಮೂರರರ್ಥವೂ ಇದೆ. ಮಾರ್ಪಡದೆ, ಅಲುಗಾಡದೆ, ವಿಕಾರವಿಲ್ಲದೆ, ಇದ್ದೆಡೆಯೇ ಸ್ಥಿರವಾಗಿ, ನಾಶರಹಿತವಾಗಿ ಶಾಶ್ವತ ತತ್ವ, ಸರ್ವಾಂತರ್ಬಹಿರ್ವ್ಯಾಪಿ.

ಈ ಒಳಗೂ ಹೊರಗೂ ಹೊಕ್ಕು, ಎಲ್ಲೆಲ್ಲಿಯೂ ಎಡಬಿಡದೆ ಯಾವಾಗಲೂ ಈ ನಾಶರಹಿತ ಸ್ಥಾಯಿ ತತ್ವವು ವಿಕಾರ ರಹಿತವಾಗಿ ಸ್ಥಾಪಿತವಾಗಿ ಚಿರವಾಗಿರುವುದರಿಂದಲೇ, ನಮಗದು ಭಾಸವಾಗಿ ನಮ್ಮ ತಿಳುವಿಗೆ ಬರಬೇಕಾದ ಭಾವನೆಗವಕಾಶವೇ ಹೊರತು ಇನ್ನೇನೂ ಅದನ್ನು ಗ್ರಹಿಸಲಾರೆವು. ಆ ತನರಿವು ಅಂತರಂಗದಲ್ಲಿ ಬರಬೇಕಾದರೆ, ಎಷ್ಟು ಪ್ರಯತ್ನಬೇಕೆಂಬುದು ಸ್ವಾಮಿಯೇ ಹೇಳುತ್ತಾನೆ; ಈ ಇಂದ್ರಿಯವ್ಯೂಹದ ಚಪಲವನ್ನೆಲ್ಲಾ ಹತೋಟಿಯಲ್ಲಿಡಬೇಕು, ಸರ್ವದರಲ್ಲೂ ಸಮಬುದ್ಧಿಯಿಂದ, ಸರ್ವಭೂತಹಿತದಲ್ಲೂ ರಮಿಸಬೇಕು. ಆಗ ಪರಮಾತ್ಮ ಪ್ರಾಪ್ತಿ. ಶ್ರಮಿಸಬೇಕು, ರಮಿಸಬೇಕು. ಭಕ್ತನಂತೆ ನಿರುಪದ್ರವವಲ್ಲಾ. ಈ ಜ್ಞಾನಯೋಗ ದೃಷ್ಟಿ.

"ಸರ್ವಭೂತಹಿತೇರತಾಃ"ನಲ್ಲಿ ಸರ್ವ ಕರ್ಮಯೋಗವನ್ನೂ ತಂದಿಟ್ಟ ಸ್ವಾಮಿ. ಆ ಹಿತವನ್ನಾಚರಿಸಬೇಕಾದರೂ, ಸಂಪೂರ್ಣ ಇಂದ್ರಿಯ ನಿಗ್ರಹದಿಂದ, ಸರ್ವತ್ರ ಸಮಬುದ್ಧಿಯಿಂದ ಆಚರಿಸಬೇಕು. ಈ ವಿಶೇಷಣಗಳಿಂದ ಎಷ್ಟು ನಿಷ್ಟೆಬರುತ್ತೆ. ಈ ಪ್ರಕಾರ ಸರ್ವಭೂತ ಹಿತ

ವನ್ನೂ ಪ್ರೀತಿಯಿಂದ ಆಸಕ್ತಿಯಿಂದ ಪ್ರಯತ್ನಿಸಿದರೆ ಇನ್ನು ಸ್ವಾಮಿ ಪೂಜೆಯಲ್ಲದೇ ಮತ್ತೇನು; ದೇವ ಸುಪ್ರೀತನಾಗದೇ ಏನು. ದೇವನನ್ನು ಪಡೆದೇ ಪಡೆವನು. ರತಿಯಲ್ಲಿ ಪ್ರೇಮ ಮತ್ತು ಆಸಕ್ತಿ ಎರಡೂ ಬಂತು. ಹಿತದಲ್ಲಿ ಭೂತಕ್ಕೆ ಅನುಕೂಲವಾಗುವ ದೃಷ್ಟಿಬಂತು. ಅದೂ ಸರ್ವ ಭೂತ ಹಿತವನ್ನೇ ಅನುಸರಿಸುವ ಸೇವಾ ದೃಷ್ಟಿಬಂದರೆ, ಆಚರಣೆಯಲ್ಲಿ ಸರ್ವತ್ರ ಸಮಬುದ್ಧಿಯೂ, ತನ್ನ ಇಂದ್ರಿಯ ನಿಗ್ರಹವೂ ಬಂದುಬಿಟ್ಟರೆ, ಸರ್ವ ಭೂತಾಂತರ್ಗತವಾದ ಪರಮಾತ್ಮನ ಸೇವೆಯೇ ಪ್ರೇಮಾಸಕ್ತಿ ನಿಃಸಂಗ ದಾಸ್ಯವಾದಂತೆಯೇ ಆಯಿತು. ಆಗ ಪರಮಾತ್ಮನನ್ನು ಹೊಂದಿ, ಅವನಲ್ಲೈಕ್ಯವಾಗುವುದೇ "ಪ್ರಾಪ್ನುವಂತಿ ಮಾಮೇವ" ಎಂದು ಸ್ವಾಮಿ ಹೇಳಿರುವುದು. ಆದರೆ ಈ ನಿಷ್ಠೆ ಜ್ಞಾನಕರ್ಮ ನಿಷ್ಠೆಯು ಸಾಮಾನ್ಯ ಜನಕ್ಕೆ ಸಾಧ್ಯವೇ, ಸಾಧಿಸಲಾಗುತ್ತದೆಯೇ!

**ಕ್ಲೇಶೋಽಧಿಕತರಸ್ತೇಷಾ-ಮವ್ಯಕ್ತಾಸಕ್ತಚೇತಸಾಮ್ ।**
**ಅವ್ಯಕ್ತಾ ಹಿ ಗತಿರ್ದುಃಖಂ । ದೇಹವದ್ಭಿರವಾಪ್ಯತೇ ॥೫॥**

ಆ ವಿವೇಚನೆಯನ್ನೇ ಮಾಡಿರುವುದು ಸ್ವಾಮಿ ಈ ಶ್ಲೋಕದಲ್ಲಿ. ಅವ್ಯಕ್ತ ನಿರ್ಗುಣೋಬ್ರಹ್ಮೋಪಾಸನೆಯು ಹೇಳುವಷ್ಟು ಸುಲಭವಲ್ಲ ಮಾಡುವುದು. ಆ ಅವ್ಯಕ್ತನಲ್ಲಿ ಚೇತಸ್ಸನ್ನು ಸೇರಿಸುವುದೇನು ಸಾಧಾರಣವೇ? ಅಧಿಕವಾದ ಕ್ಲೇಶದಿಂದ ಕೂಡಿದುದು. ಮನಸ್ಸಿನ ಕಷ್ಟಕ್ಕೆ ಇಲ್ಲಿ ಕ್ಲೇಶವೆನ್ನುವುದು. ಆ ನಿರ್ಗುಣಬ್ರಹ್ಮನು ಇಂದ್ರಿಯಾ ತೀತನು. ಮನಸ್ಸಿಗೆ ನಿಲುಕದವನು. ಏನೋ ವ್ಯಕ್ತನಾದ ಸಗುಣ ಬ್ರಹ್ಮನಾದರೆ ಹೇಗಾದರೂ ಯಾವ ಉಪಾಯದಿಂದಲಾದರೂ ಗ್ರಹಿಸ ಬಹುದು. ಇವನು ಅಚಿಂತ್ಯ, ಅವ್ಯಕ್ತ, ಅಕ್ಷರ ಅನಿರ್ದೇಶ್ಯ, ಗ್ರಹಣ ವೆಂತು ಸಾಧ್ಯ. ಸರ್ವಭೂತ ಹಿತದಲ್ಲಿ, ಸರ್ವತ್ರ ಸಮಬುದ್ಧಿಯಲ್ಲಿ, ಇಂದ್ರಿಯಗಳನ್ನು ನಿಗ್ರಹಿಸಿ, ಧಾರಣಮಾಡಲು ಮನಸ್ಸಿನಲ್ಲೇ ಸತತ ಚಿಂತನದಿಂದ, ಅದನ್ನೂ ಲಯಮಾಡಿ, ಸರ್ವಭೂತದಲ್ಲಿ ಲಯವಾಗಿ ಒಂದಾಗಿ, ಕಿಂಚಿತ್ ಗ್ರಹಿಸಲು ಪ್ರಯತ್ನಿಸಬೇಕು. ಇದು ಅಧಿಕ ಕ್ಲೇಶವಲ್ಲವೇ?

ಏಕೆಂದರೆ ಈ ದೇಹಧಾರಿಗಳಾದವರಿಗೆ ಈ ಪಂಚಕರ್ಮೇಂದ್ರಿಯ, ಪಂಚಜ್ಞಾನೇಂದ್ರಿಯ ಮನಸ್ಸು ಬುದ್ಧಿ ಅಂತಃಕರಣವುಳ್ಳ ಈ ಸ್ಥೂಲ ದೇಹವುಳ್ಳವರಿಗೆ ಈ ಅವ್ಯಕ್ತ ನಿಷ್ಠೆಯು ದುಃಖಗತಿಯುಂಟುಮಾಡ ತಕ್ಕದ್ದು. ಕಷ್ಟ ಸಹಿಸಲಾರದ ಮನಃಕ್ಲೇಶದಿಂದ ದುಃಖವಾಗಬಹುದು. ಇದು ಜಿತೇಂದ್ರಿಯಾಂತಃಕರಣದಿಂದಲೇ ಸಾಧ್ಯ ಎಂದು ಸಾಧಕರ ಕಷ್ಟವನ್ನು ತಿಳಿದ ಪರಮಾತ್ಮ ಹೇಳುತ್ತಾನೆ. ಅದಕ್ಕೇ ನಿರುಪದ್ರನಾದ, ಆಶ್ರಯಕ್ಕೆ ಆಸರೆ ಉಳ್ಳ ಸಗುಣ ಬ್ರಹ್ಮೋಪಾಸನೆಯುಳ್ಳ ಭಕ್ತನೇ ಸಾಧಕರಲ್ಲಿ ಉತ್ತಮನು. ಆ ಭಕ್ತಿಮಾರ್ಗ ನಿರುಪದ್ರವ, ಈ ಜ್ಞಾನ ಮಾರ್ಗ ಅವ್ಯಕ್ತನಿಷ್ಟ ಕಷ್ಟತರ. ಈ ದೇಹ ಹೊತ್ತಿರುವ ಅಜ್ಞಾನಿಗೆ ಅದು ಕ್ಲೇಶವನ್ನುಂಟುಮಾಡುತ್ತದೆ. ಸಾಧಿಸಲು ಬಹಳ ಕಷ್ಟ ಬೀಳ ಬೇಕು. ಅಜ್ಞಾನ ನಾಶಕ್ಕೇ ಬೇಕಾದಷ್ಟು ಜ್ಞಾನಾರ್ಜನೆಗೆ ದುಡಿಯ ಬೇಕು.

ಪೂರ್ಣಜ್ಞಾನಿಗೆ ಈ ಅವ್ಯಕ್ತನಿಷ್ಠೆ ಸಾಧ್ಯ. ಅವನೇನಾಚರಿಸಿದರೂ ಧರ್ಮವೇ. ಆದರೆ ಸಾಧಕನಿಗೆ ನಾರದರು ಭಕ್ತಿಸೂತ್ರದಲ್ಲಿ ಹೇಳುವಂತೆ (ಸೂ. ೧೩) "ಅನ್ಯಥಾ ಪಾತಿತ್ಯಾಶಂಕ್ಯಾ" ಇಲ್ಲವಾದರೆ ಪುನಃ ಅಧೋ ಪತನದ ಶಂಕೆ ಉಂಟು. ಕೋತಿಯು ಜಿಡ್ಡಿನನೆಟ್ಟನೆ ದಂಡವನ್ನು ಹತ್ತುವಂತಾಗಬಾರದು, ಒಂದಡಿಹತ್ತಿ ಎರಡಡಿಜಾರಿದರೆ ಸಾಧಕನಿ ಗೇನು ಬಂದಂತಾಯ್ತು. ಸಾಧಕನು ಸಾಧನೆಯಿಂದ ಉಚ್ಚಸ್ಥಿತಿಗೇರುತ, ಏರುತ, ಹತ್ತಿದ ಸ್ಥಿತಿಯನ್ನಾದರೂ ಕಾಪಾಡಿಕೊಂಡು ನಂತರ ಮೇಲಕ್ಕೆ ಹತ್ತಲು ಪ್ರಯತ್ನಿಸಬೇಕು. ಮೇಲೆ ಹತ್ತುವ ಆತುರದಲ್ಲಿ ಕೆಳಕ್ಕೆ ಜಾರುವ, ಅಧೋಪತನವಾಗುವ, ಪೂರಾ ಕೆಳಕ್ಕೆ ಬೀಳುವವರೆಗೆ ಬರಬಾರದು. ಅದಕ್ಕೇ ಸಾಧಕನು ಶಕ್ತಿಮೀರಿ ಪ್ರಯತ್ನಕ್ಕೆ ಹೋಗದೆ ಅವ್ಯಕ್ತ ಜ್ಞಾನಸಾಧನೆಯನ್ನು ಬಿಟ್ಟು ಅನ್ಯ ಆಶ್ರಯವುಳ್ಳ ಭಕ್ತನಿಗೆ ಆಧಾರವಾದ ಸಗುಣಸ್ವಾಮಿಯ ಧ್ಯಾನವುಳ್ಳ ಭಕ್ತಿಯೋಗ ನಿರುಪದ್ರವ ಮಾರ್ಗವನ್ನು ಸ್ವಾಮಿ ಸಾಧಕ ಸಾಮಾನ್ಯರೆಲ್ಲರಿಗೂ ಹೇಳಿದ್ದಾನೆ. ಆ ಮಾಗದಲ್ಲಿ ಅತಿ ಜ್ಞಾನಿಗಳಾದ ಸಂಪೂರ್ಣ ಜ್ಞಾನೋತ್ತಮರಾದ, ಪ್ರಹ್ಲಾದ ಉದ್ಧವ, ನಾರದ ಬಸವಣ್ಣನವರೂ ತೇರ್ಗಡೆಹೊಂದಿದರು.

ಅಸ್ಪೃಶ್ಯರಾದ ನಂದ, ರವಿದಾಸ, ಕನಕರೂ ದೇವನ ಪಾದ ಸೇರಿದರು. ಹೆಣ್ಣುಗಳ ಪೈಕಿ ಮೀರಾ, ಅಕ್ಕಮಹಾದೇವಿ, ಅವ್ವೆಯಾರೂ ಭಗವದ್ಭಕ್ತಿಯಿಂದ ಅವನಲ್ಲೊಂದಾದರು, ಪತಿತರಾದ ಅಜಮಿಳ, ಬಿಲ್ವಮಂಗಳ ನಾರಾಯಣಭಟ್ಟರೂ ದೇವ ಭಕ್ತಿಯನ್ನೇ ಆಶ್ರಯಿಸಿ ಪತಿತೋಧಾರಿ ಸ್ವಾಮಿಯ ಸಾಯುಜ್ಯ ಪಡೆದರು, ಪಾಮರರಾದ ಕಬೀರ, ತುಕಾರಾಮ, ಪುರಂಧರದಾಸರು ಭಕ್ತಿಭಂಡಾರದಿಂದಲೇ ಜ್ಞಾನಭಂಡಾರವನ್ನೂ ಪುಷ್ಟಿಗೈದರು. ಅವರ ಭಕ್ತಿಸ್ತೋತ್ರಗಳು, ಕಾವ್ಯಗಳು ಜ್ಞಾನಭಂಡಾರವನ್ನು ಸೂರೆಗೊಂಡಿವೆ, ವಿನಯದ ಉಚ್ಚಶಿಖರಗಳಿಗೇರಿ ಭಕ್ತಿ ಆವೇಶದಿಂದ ಜ್ಞಾನ ಪರಾಕಾಷ್ಠತೆಗೆ ಹೋಗಿವೆ. ಈ ಭಕ್ತಿಮಾರ್ಗದಿಂದ ನರಮಾನವ, ನಾರಿಯರೇ ಅಲ್ಲದೆ ಕಿರಾತ, ಯಕ್ಷ, ಇಂದ್ರಾದಿ ದೇವತೆಗಳೂ ಪರಮ ಪಾವನರಾಗಿದ್ದಾರೆ. ವಿಭೀಷಣನಿಗಿಂತ ಭಕ್ತಬೇಕೇ. ಹನುಮನು ವಾನನಾದರೂ ಶ್ರೀ ರಾ ಮ ನ ಭ ಕ್ತ ನ ಲ್ಲ ವೇ ? ಭಕ್ತಿಪರವಶರಾದವರು ಅವನು ವಾನದಲ್ಲಿ ವಾನವಾಗಿದ್ದುದರಿಂದ ವಾನರನೆಂಬ ಸಂಭೋದನೆಯಿರಬೇಕೇ ಹೊರತು, ಯಾವ ನರನಿಗೂ ಕೀಳೆಂಬ ಭಾವನೆಯಿಂದ ವಾನರನೆಂದರೆ ಕಪಿಯೆಂಬ ಭಾವವಲ್ಲವೆಂದು ತಿಳಿಯಬೇಕೆಂದು ಆ ಭಕ್ತನಿಗೇ ಸೋತು, ರಾಮಭಕ್ತಿಗಿಂತ, ಭಕ್ತಹನುಮನ ಭಕ್ತಿಯಲ್ಲಿ ಮುಳುಗಿರುವರು. ಬಸವಣ್ಣನಂಥಾ ಪರಮ ಶ್ರೇಷ್ಠಭಕ್ತರು, ಶಂಕರನಿಗಿಂತ ಭಕ್ತ ಸೇವಕನಾದ ಕೇವಲ ಪ್ರಾಣಿಯೆಂದು ಅಂಕಿತನಾದ ಬಸವನ ನಾಮಾಂಕಿತವನ್ನು ಹೊತ್ತು ಶ್ರೇಷ್ಠಭಕ್ತ ಶಿಖಾಮಣಿಗಳಾದರು.

ಗಜೇಂದ್ರನು ಮೊಸಳೆಯ ಕೈಗೆಸಿಕ್ಕಿ ನರಳುತ್ತಿರುವಾಗ ಸ್ವಾಮಿಯನ್ನೇ ಮೊರೆಹೊಕ್ಕು ಅವನಿಂದ ಕೈವಲ್ಯಪಡೆಯಲಿಲ್ಲವೇ ? ಜಟಾಯುವು ಪಕ್ಷಿರಾಜನಾದರೂ ಸ್ವಾಮಿಯ ಸೇವೆಯಲ್ಲಿ ನಿರತನಾಗಿ, ಅಸಮಾನನಾದ ಶತೃ ರಾಕ್ಷಸನೊಡನೆ ಹೊಡೆದಾಡಿ, ಸತ್ಯ ಧರ್ಮ ಎತ್ತಿಹಿಡಿಯಲು, ಸ್ತ್ರೀ ಪಾತಿವ್ರತ್ಯ ಕಾಪಾಡಲು ಪ್ರಾಣಕೊಡತೆತ್ತು, ಸ್ವಾಮಿಯ ತೊಡೆಯ ಮೇಲೆ, ಅವನಾದರಿಸುತ್ತಿರುವಾಗ ಪರಂಧಾಮವನ್ನೈದಿದನಲ್ಲವೇ.

ಹೇಗೆ ವಾನರ ಪಶು ಪ್ರಾಣಿಪಕ್ಷಿಗಳೂ ಭಕ್ತಿಯಿಂದ ಕೂಡಿ ಪರಮ ಸಂತುಷ್ಟನಾದ ದೇವನು ಅವರನ್ನು ತನ್ನ ಕೇವಲ ಆಪ್ತ ಸೇವಕರನ್ನಾ

ಗಿಯೂ ವಾಹನವನ್ನಾಗಿಯೂ ಸ್ವೀಕರಿಸಿ ಅವರನ್ನು ಪರಮ ಪವಿತ್ರ ರನ್ನಾಗಿ ಮಾಡಿ, ತನ್ನ ಅವಿಚ್ಛಿನ್ನ ಸಹವಾಸದಿಂದ ಆ ಭಕ್ತರನ್ನೂ ತನ್ನಂಶವೆಂದೇ ತನ್ನ ದರ್ಜೆಗೇ ಏರಿಸಿ, ಈಗಿನ ಕೇವಲ ಭಕ್ತರ ಭಕ್ತರು ಅವರಲ್ಲೂ ಪರಮಾತ್ಮನನ್ನೆ ಕಂಡು ಪೂಜಿಸುವಂತೆ ಅವರನ್ನೂ ಭಕ್ತರನ್ನೂ ಅನುಗ್ರಹಿಸಿರುವುದು ಭಕ್ತಿಯ ಹಿರಿಮೆಯನ್ನು ತೋರುವುದಲ್ಲದೇ ಭಕ್ತಿ ಯಿಂದಲೇ ಸಾರೂಪ್ಯವೂ ಕೂಡ ಸಾಧ್ಯವೆಂದು ಸ್ವಾಮಿ ತನ್ನ ಅವತಾರ ದಲೀಲೆಗಳಲ್ಲಿ ಕೂಡಾ ತೋರಿದ್ದಾನೆ. ಭಕ್ತಿಯಿಂದಲೇ ಸ್ವಾಮಿ ಪದವಿಗೇರಿ ಭಕ್ತರ ಭಕ್ತರಮನಸಾದರಿಸಿರುವವರಲ್ಲಿ ಹನುಮ, ಬಸವರು ಅಗ್ರಗಣ್ಯರು. ಅವರನ್ನೇ ಸೇವಿಸಿ, ಅವರಿಂದ ಸ್ವಾಮಿ ಸಾನಿಧ್ಯ ಪಡೆದ ಭಕ್ತರೂ ಇದ್ದಾರೆ. ಪರಮ ಏಕಾಂತ ಸೇವಕನಿಗೆ ಸ್ವಾಮಿಯನ್ನು ತಾನೇ ಯಾವಾಗಲಾದರೂ ಯಾವ ವೇಳೆ ಸಮಯ ಸಂದರ್ಭಗಳ ಲ್ಲಾದರೂ ಕಾಣಲು ಮಾತಾಡಲು, ಸೇವಿಸಲು ಸಲಿಗೆ ಅವಕಾಶವುಂಟೋ ಅಂತೆಯೇ ಇತರರನ್ನು ಅವರ ಸನ್ನಿಧಿಗೆ ಸಮಯವರಿತು ಕರೆದುಕೊಂಡು ಹೋಗಿ ಅವರಿಂದನುಗ್ರಹಪಡೆಯಲು ಸಂದರ್ಶನಕೊಟ್ಟು, ಬೇಕಾದು ದನ್ನನುಗ್ರಹಿಸಲು ಸಮಯವರಿವವಕಾಶವಿಲ್ಲವೇ? ಆದುದರಿಂದಲೇ ಭಕ್ತಾಗ್ರೇಸರನೇಕರು ಸ್ವಾಮಿಯಲ್ಲತಿ ಪ್ರೀತಿಪಾತ್ರಳಾದ ದೇವಿಯನ್ನೂ (ಕಾಂತೆಯನ್ನು) ಸ್ವಾಮಿಯಲ್ಲತಿ ಪ್ರೀತಿಪಾತ್ರನಾದ ಸೇವಕ ಭಕ್ತ (ಕಿಂಕರ)ನನ್ನೂ ಸ್ವಾಮಿಯಲ್ಲತಿ ಪ್ರೀತಿಪಾತ್ರ ಸ್ವಯಂ ಸನ್ನಿಧಿಯಲ್ಲಿರುವ ಆಚಾರ್ಯರನ್ನೇ ಸೇವಿಸಿ, ಪೂಜಿಸಿ ತನ್ಮೂಲಕ ಸ್ವಾಮಿಯ ಸಾಕ್ಷಾತ್ಕಾರ ಮಾಡಿಕೊಂಡಿದ್ದಾರೆ. ಪರಾಶರ ಭಟ್ಟರು ಶ್ರೀಗುಣರತ್ನಕೋಶದಲ್ಲಿ (೫೨ ಶ್ಲೋ)

"ಪಿತೇವತ್ವತ್ಪ್ರೇಯಾನ್, ಜನನಿ ಪರಿಪೂರ್ಣ ಗಸಿ ಜನೇ।
ಹಿತ ಸ್ರೋತೋ ವೃತ್ತ್ಯಾ ಭವತಿ ಚ ಕದಾ ಚಿತ್ಕಲುಷಧೀಃ ॥
'ಕಿಮೇ ತನ್ನಿರ್ದೋಷಃ ಕಇಹ ಜಗತೀ ತಿ,' ತ್ವಮುಚಿತಾ।
ರುಪಾಯೈರ್ವಿಸ್ಮಾರ್ಯಸ್ವಜನಯಸಿ ಮಾತಾ ತದಸಿ ನಃ ॥"

ಎಂದು ಮಾತೃಭಾವದಲ್ಲಿ ಶಕ್ತಿದೇವಿಯನ್ನು ಪ್ರಾರ್ಥಿಸಿದ್ದಾರೆ.

ಜನನೀ, ತಂದೆಯಂತೆ, ನಿನ್ನ ಪ್ರಿಯನು ಪಾಪಿಗಳ ಮೇಲೆ, ಅವರ ಕ್ಷೇಮಕ್ಕಾಗಿಯೇ, ಕಲುಷಮನುಸ್ಕನಾಗುತ್ತಾನೆ ಕೆಲವುವೇಳೆ. ಆಗ "ಈ ಜಗತ್ತಿನಲ್ಲಿ ಯಾರು ತಾನೇ ದೋಷರಹಿತರು" ಎಂದು ಉಚಿತವಾಗಿ ಸಮಯವರಿತು ಉಪಾಯದಿಂದರುಹಿ ಸ್ವಜನರ ತಪ್ಪುಗಳನ್ನು ಮರೆವಂತೆ ಮಾಡುವೆಯಾದುದರಿಂದಲೇ, ನೀನು ನಮಗೆ ಮಾತೆಯು.

ನಾವು ಅಜ್ಞಾನಿಗಳು, ಪೂರ್ಣರಲ್ಲ, ಅಪರಾಧಿಗಳು ಎನ್ನುವ ಭಾವ ವಿರುವ ಸಾಧಾರಣ ಅಲ್ಪರೆಲ್ಲರೂ, ಈ ರೀತಿ ಭಕ್ತಿಯ ಆಶ್ರಯಹೊಂದಿ ಸ್ವಾಮಿಯನ್ನು ಯಾವ ರೂಪದಲ್ಲಿಯಾದರೂ ಅನುಸರಿಸಿ, ಎಡಬಿಡದೆ ಸೇವಿಸಿ ಕೈವಲ್ಯವನ್ನು ಪಡೆವರು.

ಆದುದರಿಂದಲೇ ಕುಲಶೇಖರರು, ಮುಕುಂದಮಾಲಾ ಸ್ತೋತ್ರದಲ್ಲಿ "ತ್ವದ್ಭೃತ್ಯ ಭೃತ್ಯ ಪರಿಚಾರಕ ಭೃತ್ಯ ಭೃತ್ಯ । ಭೃತ್ಯಸ್ಯ ಭೃತ್ಯ ಇತಿ ಮಾಂ ಸ್ಮರಲೋಕನಾಥ ॥" ಎಂದು ಇದೊಂದೇ ಜಲ್ಮಫಲ, ನಿನ್ನ ಸೇವಕರ ದಾಸಾನುದಾಸನಾಗಿ, ೮ ನೇ ದರ್ಜೆ ಸೇವಕನಾಗಿ Sub-asst-deputy ಎನ್ನುವಂತೆ ಭಕ್ತರ ಭಕ್ತನಾಗಿ ದೇವನು ನೆನಪಿನಲ್ಲಿಟ್ಟರೆ ಸಾಕೆಂದು–ಈ ಅನುಗ್ರಹ ಪ್ರಾರ್ಥಿಸಿಕೊಂಡಿದ್ದಾರೆ. ಏಕೆಂದರೆ ಅವನು ಲೋಕನಾಥ, ಎಷ್ಟೋ ಸೇವಕರ ವೃಂದ. ಅಲ್ಪರಾದ ನಮ್ಮಂಥ ಪಾಮರ ರನ್ನು ನೆನಪಿನಲ್ಲಿಡುವುದಕ್ಕೆ ಒಂದು ನೆಪವಾದರೂ ಬೇಡವೇ. ಚೀಟಾಳಿ ಗೊಂದು ಮೋಟಾಳು, ಆ ಆಳಿಗೊಂದು ಛೋಟಾಳು, ಎನ್ನುವಂತೆ ನಾವು ದಾಸರ ದಾಸರಾಗಿದ್ದರೆ, ಸ್ವಾಮಿಯ ಕಡೆಗಣ್ ದೃಷ್ಟಿಗಾದರೂ ಬೀಳುವ ಸಂಭವವಿದೆ. ಆದಕ್ಕೆ ಪುರಂಧರದಾಸರೂ "ದಾಸರ ದಾಸನ ಮಾಡಿಕೊಳ್ಳೋ" ಎಂದು ಬೇಡಿದ್ದಾರೆ. ಅವರ ತಂಬೂರಿ ಹೊರಲೋ, ಜೋಳಿಗೆ ಹೆಗಲೇರಿಸಲೋ ಅವಕಾಶ ಸಿಕ್ಕಿದರೆ, ಒಂದಾವರ್ತಿಯಲ್ಲಾ ಒಂದಾವರ್ತಿ ಕೈಲಿನ ತಾಳಕೊಟ್ಟು, ಅವರ ದಿವ್ಯ ಭಗವನ್ನಾಮಕ್ಕೆ ಹಿಮ್ಮೇಳಹಾಕಲು ಅಪ್ಪಣೆಕೊಟ್ಟು, ಭಗವನ್ನಾಮಾಮೃತದ ಸವಿ ನೋಡಲು ಅನುಗ್ರಹಮಾಡುತ್ತಾರೆ.

ಆಗ ಕ್ಲೇಶವಿಲ್ಲದೆ ಭಗವದನುಗ್ರಹಕ್ಕೆ ಪಾತ್ರರಾಗಲವಕಾಶವಾಗುತ್ತೆ. ಕೈಗೆ ನಿಲುಕದ ಕೈವಲ್ಯವನ್ನು ಎತ್ತಿಹಿಡಿದು ಎಟಕಿಸುತ್ತಾರೆ.

**ಯೇ ತು ಸರ್ವಾಣಿ ಕರ್ಮಾಣಿ । ಮಯಿ ಸಂನ್ಯಸ್ಯ ಮತ್ಪರಾಃ ।**
**ಅನನ್ಯೇನೈವ ಯೋಗೇನ । ಮಾಂ ಧ್ಯಾಯಂತ ಉಪಾಸತೇ ॥೬॥**

**ತೇಷಾಮಹಂ ಸಮುದ್ಧರ್ತಾ । ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನ ಚಿರಾತ್ಪಾರ್ಥ । ಮಯ್ಯಾವೇಶಿತಚೇತಸಾಮ್ ॥೭॥**

ಆ ಅವ್ಯಕ್ತ ಬ್ರಹ್ಮೋಪಾಸನೆಯ ಕಷ್ಟವನ್ನು ಸಿರ್ವಹಿಸಲಾರದ ಸಾಧಕರಿಗೆ, ಈ ಭಕ್ತಿಮಾರ್ಗಾವಲಂಬನೆಯಲ್ಲಿಯೇ ಉದ್ಧಾರಮಾಡುವೆನೆಂದು ಅಭಯಪ್ರದಾನ ಮಾಡಿದ್ದಾನೆ.

ಸಮಸ್ತ ಕರ್ಮಗಳನ್ನೂ ನನ್ನಲ್ಲಿಯೇ ಸಮರ್ಪಿಸಿ, ನನ್ನನ್ನೇ ಪರಮಾರ್ಥವೆಂದು ನಂಬಿ ಅನನ್ಯವಾಗಿ ಧ್ಯಾನಮಾಡಿ, ಉಪಾಸನೆಮಾಡುವವರನ್ನು ಈ ಮರಣ ಸಂಸಾರ ಸಾಗರದಿಂದ ಪಾರುಮಾಡಿ, ನನ್ನಲ್ಲಿ ಚಿತ್ತ ಪ್ರವೇಶಮಾಡುವಂತೆ ಅನುಗ್ರಹಿಸಿ ಶೀಘ್ರವಾಗಿ ಉದ್ಧಾರಮಾಡುವೆನು.

ಈ ಭಕ್ತಿಯ ಅನುಗ್ರಹವನ್ನೂ ಅವನೇ ದಯಪಾಲಿಸುವನು. ಆ ಅನನ್ಯ ಭಕ್ತಿಗೆ, ಕರ್ಮ, ಜ್ಞಾನ, ಧ್ಯಾನಯೋಗವನ್ನೂ ಸೇರಿಸಿಬಿಟ್ಟ ಸ್ವಾಮಿ. ತದ್ಭಿನ್ನವಾದ ಅವನ ಚಿಂತನ ಉಪಾಸನೆ. "ಸರ್ವಾಣಿ ಕರ್ಮಾಣಿ ಮಯಿಸಂನ್ಯಸ್ಯ"ದಲ್ಲಿ ಸರ್ವಕರ್ಮ ಯೋಗಸಾರವೂ ಬಂತು. ಎಲ್ಲಾ ಕರ್ಮವನ್ನೂ ಅವನಲ್ಲಿ ಅರ್ಪಣೆಮಾಡಿ ತನ್ನದಲ್ಲನೆನ್ನುವ ಬುದ್ಧಿಯಿಂದ ಯಾವ ಕರ್ಮಮಾಡಿದರೆ ತಾನೇ ಏನು ಅಂಟುತ್ತೆ. "ಮತ್ಪರಾಃ" ಎನ್ನುವುದರಲ್ಲಿ ಜ್ಞಾನಭಂಡಾರವೇ ಸೂರೆಗೊಂಡ ಅವನೇ ಪರವಸ್ತು, ಕೈವಲ್ಯ, ಇಹದಿಂದ ಸೇರಬೇಕಾದ "ಪರ" ಎನ್ನುವಜ್ಞಾನ ಬಂದುಬಿಟ್ಟರೆ ಇನ್ನು ಬಂಧನವೆಲ್ಲಿಯದು. "ಅನನ್ಯ ಯೋಗೇನ ಮಾಂ ಧ್ಯಾಯಂತ" ಅನ್ನುವುದರಲ್ಲಿ ಧ್ಯಾನಯೋಗವೆಲ್ಲಾ ಬಂತು. ಏಕಚಿತ್ತದಿಂದ ಸದಾ, ಪರಮಾತ್ಮ ಧ್ಯಾನಮಾಡಿದ ಮೇಲೆ ಇತರ ಚಿಂತೆ ಎಲ್ಲಿಬಂತು. ಈ ಮೂರರ ಅಭ್ಯಾಸದಿಂದ "ಮಯ್ಯಾವೇಶಿತಚೇತಸಾಂ" ತಾನಾಗಿ ತಾನು ಪರಮಾತ್ಮನಲ್ಲಿಯೇ ಲೀನವಾದ ಅಂತಃಕರಣವುಳ್ಳವನಾಗಿ ಪರಮ ಭಕ್ತನಾಗುತ್ತಾನೆ. ಅಂಥವರನ್ನು ಯಾರೇ ಆಗಲಿ, ಯಾವ ಸ್ಥಿತಿಯಲ್ಲಾದರೂ ಇರಲಿ ಉದ್ಧಾರಮಾಡವೇ ಎಂತುಬಿಟ್ಟಿದ್ದಾನು ಸ್ವಾಮಿ.

ಒಂದು ವಸ್ತುವನ್ನು ಅಥವಾ ವ್ಯಕ್ತಿಯನ್ನು ಪ್ರೀತಿಸಬೇಕಾದರೆ ಅದರ ಗುಣಗಳ, ಸೌಂದರ್ಯದ ತಿಳಿವಾದರೂ ಬೇಕು. ಭಗವದ್ಭಕ್ತಿ ಹುಟ್ಟಲು ಮೊದಲೇ ಭಗವಂತನ ಅನಂತ ಕಲ್ಯಾಣ ಗುಣ, ಅಮಿತ ಸೌಂದರ್ಯರಾಶಿಯು ಭಕ್ತನ ಮನ ಸೂರೆಗೊಂಡಿರಬೇಕು. ಇದು ಹೇಗೆಂಬುದನ್ನು, ಶ್ರೀಮಧ್ವಾಚಾರ್ಯ, ಶ್ರೀರಾಮಾನುಜಾಚಾರ್ಯರ ಭಗವಂತನ ಅನಂತ ಕಲ್ಯಾಣಗುಣವರ್ಣನಾ ಆಶ್ರಯದಲ್ಲಿ ಕಾಣುತ್ತೇವೆ, ಆ ಅನಂತ ಕಲ್ಯಾಣಗುಣ ಕಲ್ಯಾಣಿಯಲ್ಲಿ ಮುಳುಗಿಬಿಟ್ಟಿದ್ದರು. ಎಲ್ಲೆಲ್ಲಿಯೂ ಆ ಸೌಂದರ್ಯದ ದರ್ಶನವಾಗುತ್ತಿರಬೇಕು, ಎಲ್ಲೆಲ್ಲಿಯೂ ಆ ಗುಣಕಥನ ಕೇಳುತ್ತಿರಬೇಕು. ದಿವ್ಯ ಸುಂದರ ಸೂರ್ಯೋದಯದಲ್ಲಿ, ನವವರ್ಣ ಪುಷ್ಪಗಳ ಅರಳುವಿಕೆಯಲ್ಲಿ ಪ್ರಕೃತಿಯ ನದಿ ಬೆಟ್ಟಗಳ ನೋಟಗಳಲ್ಲಿ ದೇವನ ದಿವ್ಯ ಸೌಂದರ್ಯವು ಕಾಣುತ್ತಿರಬೇಕು. ಇಂಪಾದ ಹಕ್ಕಿಗಳ ಮಧುರ ಗಾನದಲ್ಲಿ, ಗುಂಗುರು ಕೂದಲಿನ ತೊದಲು ನುಡಿಯ ತಪ್ಪು ಹೆಜ್ಜೆಯ ಮಕ್ಕಳ ಮಾತಿನಲ್ಲಿ, ದೇವಸ್ಥಾನದ ಘಂಟಾನಾದದಲ್ಲಿ ದೇವನ ಗುಣ ಕಥನ ಆಲಿಸುತ್ತಿರಬೇಕು. ಆಗ ತನುಮನವನ್ನೆಲ್ಲಾ ಸ್ವಾಮಿಯು ಆವರಿಸುತ್ತಾನೆ. ಏನು ಮಾಡಲೀ ಬಿಡಲೀ ಆ ಕರ್ಮವೆಲ್ಲಾ ಅವನಿಗೇ ಎಂದು ಸಮರ್ಪಣ ಬುದ್ಧಿ ಬರುತ್ತದೆ. ಎಲ್ಲಿ ನೋಡಲಿ ಏನು ಕೇಳಲೀ ಅವನ ದರ್ಶನ ನೆನಪೇ ಆಗುತ್ತದೆ. ಕಣ್ಮುಚ್ಚಿ ಧ್ಯಾನ ಮಾಡಲೀ, ಎಚ್ಚರತಪ್ಪಿ ನಿದ್ರೆ ಮಾಡಲೀ ನೆನಸು ಕನಸುಗಳಲ್ಲೂ ಅವನ ಧ್ಯಾನವೇ ತುಂಬಿರುತ್ತದೆ. ಮನ ಬುದ್ಧಿ ಚಿತ್ತಗಳನ್ನೆಲ್ಲಾ ಅವನೇ ಆವರಿಸುತ್ತಾನೆ ಆಗಲೇ ಅವನಲ್ಲಿ ಲೀನವಾದಂತೆ. ಇನ್ನು ಸಂಸಾರವೆಲ್ಲಿಯದು ಆ ಭಕ್ತನಿಗೆ, ಮೃತ್ಯುವೆಲ್ಲಿಯದು ಚಿತ್ತವು ಅವನಲ್ಲಿ ಪ್ರವೇಶಿಸಿದವನಿಗೆ? "ಮೃತ್ಯುಸಂಸಾರ ಸಾಗರ"ದಿಂದ ಎತ್ತಿ "ಅಮೃತಕೈವಲ್ಯ ಹಾಲಿನ ಕಡಲಿ"ಗೆ ಸ್ವಾಮಿ ಸೇರಿಸುತ್ತಾನೆ. ಈ ಅಭಯಪ್ರಧಾನದಿಂದಲೇ ಅವನ ಮೃತ್ಯು, ಸಂಸಾರವೆಲ್ಲಾ ನೀಗಿತು, ಅವನಿಗೆ ಅಮಿತಾನಂದ ಅಮೃತ ದೊರೆಯಿತು.

ನಾರದರು ಭಕ್ತಿಸೂತ್ರದಲ್ಲಿ ಹೇಳುವಂತೆ (ಸೂ. ೩) ಭಕ್ತಿಯು "ಅಮೃತ ಸ್ವರೂಪಾಚ." ಅದು ಸಿಕ್ಕಿದ ಮೇಲೆ (ಸೂ. ೪) "ಯಲ್ಲಬ್ಧಾ

ಪುಮಾನ್ ಸಿದ್ಧೋ ಭವತಿ, ಅಮೃತೋ ಭವತಿ, ತೃಪ್ತೋ ಭವತಿ" "ಮನುಷ್ಯನು ಸಿದ್ಧನಾಗುತ್ತಾನೆ, ಅಮೃತನಾಗುತ್ತಾನೆ, ತೃಪ್ತನಾಗುತ್ತಾನೆ. ಕಠೋಪನಿಷತ್ತಿನಲ್ಲಿ ಎರಡು ಶ್ಲೋಕಗಳಲ್ಲಿ ಸಾರಿ ಹೇಳುವಂತೆ "ಅಥಮರ್ತ್ಯೋ ಅಮೃತೋ ಭವತಿ" ಎನ್ನುವಂತೆ ಭಕ್ತಿ ಸಿದ್ಧಿಯಾಗಿ, ಮನುಷ್ಯನು ಚಿರಂಜೀವಿಯಾಗಿ, ಮೃತ್ಯು ಸಂಸಾರ ಸಾಗರವನ್ನು ದಾಟುತ್ತಾನೆ. ಅಮೃತವೇ ದೊರೆತಮೇಲೆ ಇನ್ನು ತೃಪ್ತಿ ಇಲ್ಲದೇ ಮತ್ತೇನು. (ಸೂ. ೫) "ಯತ್ ಪ್ರಾಪ್ಯ ನ ಕಿಂಚಿದ್ ವಾಂಛತಿ, ನ ಶೋಚತಿ, ನ ದ್ವೇಷ್ಟಿ, ನರಮತೇ ನೋ ತ್ಸಾಹೀ ಭವತಿ" ಸಂಸಾರದಲ್ಲಿನ ಆಸೆ, ದುಃಖ, ದ್ವೇಶ, ಪ್ರೇಮ, ಉತ್ಸಾಹ ಎಲ್ಲಾ, ಮಾಯವಾಗುತ್ತೆ – ಬೇಕಾಗುವುದಿಲ್ಲಾ. ಭಕ್ತನಾದಮೇಲೆ ಅವನಲ್ಲಿ ಆಸೆಯೇ ಇಲ್ಲಾ, ಆಸೆ ಇಲ್ಲದಮೇಲೆ ಅದಕ್ಕಾಗಿ ವ್ಯಥೆಪಡಬೇಕಾದುದಿಲ್ಲಾ, ಅದು ಕೈಗೂಡದಿದ್ದರೆ ದ್ವೇಷಿಸಬೇಕಾದುದಿಲ್ಲಾ, ಕೈಗೂಡಿದರೆ ಆದರದಿಂದ ಅದರಲ್ಲಿ ಪ್ರೀತಿಸಿ ರಮಿಸಬೇಕಾದುದಿಲ್ಲಾ. ಆಸೆಯೇ ಇಲ್ಲದ ಮೇಲೆ ಉದ್ಯಮವೆಲ್ಲಿ, ಆ ಬಯಕೆ ತೀರಿಸಿಕೊಳ್ಳಬೇಕೆಂಬ ಉತ್ಸಾಹವೆಲ್ಲಿ ತಾನೇ ಇಲ್ಲವಾಗಿ ತನ್ನದೆನ್ನುವುದಿಲ್ಲವಾಗಿ ಎಲ್ಲವೂ ಭಗವಂತನೇ ಎಂಬ ಭಕ್ತಿ ಭಾವನೆ ಬಂದಮೇಲೆ ಇನ್ನು ಆಸೆಗೆ ಎಡೆಯೆಲ್ಲಿ. ಶ್ರೀರಾಮಕೃಷ್ಣರು ವಿವೇಕಾನಂದರನ್ನು ಒಂದಾವರ್ತಿ ಪರೀಕ್ಷೆ ಗೊಡ್ಡಲೋಸುಗ ತಾಯಿಯನ್ನು ಇಹ ಸುಖಭೋಗಕ್ಕಾಗಿ ಪ್ರಾರ್ಥಿಸೆಂದರು. ವಿವೇಕಾನಂದರು – ಮಾತೆಯ ಧ್ಯಾನ ಮನದಲ್ಲಿ ಮೂಡಿದೊಡನೆಯೇ ಆ ಸುಖಭೋಗಲಾಲಸೆಯು ಮನದಿಂದ ಮಾಯವಾಗಿ ಬಿಡುವುದು. ಅದರ ಆಸೆಯೇ ಇಲ್ಲದ ಮೇಲೆ ಇನ್ನು ಅದಕ್ಕಾಗಿ ಪ್ರಾರ್ಥಿಸುವುದೆಂತು? ಭಕ್ತಿಗಾಗಿಯೇ ಪ್ರಾರ್ಥಿಸುತ್ತೇನೆಂದರು.

ಭಕ್ತನು ಸುಖ ಭೋಗಗಳಿಗೆ ಪ್ರಾರ್ಥಿಸುವುದಿರಲಿ. ಜೇಬನು ಹೇಳಿರುವಂತೆ "Though He slay me, yet will I thurst in Him" "ಆತ ಕೊಂದರೂ ಆತನಾಶ್ರಯ ಬಿಡೆ" ಎಂದು ನಂಬಿರುವರು. ಚೈತನ್ಯದೇವನು, ಶಿಕ್ಷಾಷ್ಟಕದಲ್ಲಿ "ಅಶ್ಲೇಷ್ಯ ವಾ ಪಾದರತಾಂ ಪಿನಷ್ಟು ಮಾಂ। ಅದರ್ಶನಾನ್ಮರ್ಮ ಹತಾಂ ಕರೋತುವಾ। ಯಥಾ ತಥಾ

ವಾ ವಿದಧಾತು ಲಂಪಟೋ । ಮತ್ಪ್ರಾಣ ನಾಥಸ್ತು ಸ ಏವ ನಾ ಪರಃ ।” ಪಾದದ ರತಿಯಲ್ಲಿರುವ ನನ್ನನ್ನು ತಬ್ಬಲಿ, ತುಳಿಯಲಿ, ಮರ್ಮಭೇದಿಸುವಂತೆ ಅದೃಶನಾಗಲೀ, ವಿಧಿಯೆಂತಿದೆಯೋ ಅಂತೇ ಆ ಲಂಪಟನು (ಪಟಿಂಗ ಸ್ವೇಚ್ಛಾವಿಹಾರಿ) ವರ್ತಿಸಲಿ, ಆತನೇ ನನ್ನ ಪ್ರಾಣನಾಥನೇ ವಿನಾ, ಪರರಿಲ್ಲಾ ಎಂದಿದ್ದಾರೆ. ಇಂತಹವರನ್ನು ಸ್ವಾಮಿ ಇನ್ನೇನು ಮಾಡಾನು. ಕುಂತೀದೇವಿಯು ಹೇಳಿರುವ ಶ್ಲಾಘನೀಯ ಪ್ರಾರ್ಥನೆಯಂತೆ “ವಿಪದಃ ಸನ್ತು ನಃ ಶಾಶ್ವತ್ತತ್ರ ತತ್ರ ಜಗದ್ಗುರೋ । ಭವತೋ ದರ್ಶನಂ ಯತ್ಸ್ಯಾದ್ ಅಪುನರ್ಭವ ದರ್ಶನಂ ॥” ಜಗದ್ಗುರುವೇ, (ಭಕ್ತರಿಗೇನುಪದೇಶಿಸಬೇಕೆಂದು ಅರಿತವ) ವಿಪತ್ತುಗಳು ನಿನ್ನ ದರ್ಶನವನ್ನಿತ್ತು, ಪುನರ್ಜನ್ಮಗಳನ್ನು ನಾಶಗೊಳಿಸುವಂತಾದರೆ, ಅವುಬರಲಿ-ಎನ್ನುವ ವಿಪತ್ತುಗಳನ್ನು ಕೂಡ ಭಗವದ್ಭಕ್ತಿಗೆ ಭಗವದ್ದರ್ಶನಕ್ಕಾಗಿ ಎದುರಿಸುವ ಭಕ್ತರನ್ನು ಇನ್ನೆಂತು ಉದಾಸೀನಮಾಡಿಯಾನು ಸ್ವಾಮಿ. ಅದಕ್ಕಾಗಿ ಟೊಂಕಕಟ್ಟಿ ಸಿದ್ಧನಾದ-ಅವರನ್ನು ಜನನ ಮರಣ ಸಂಸಾರದಿಂದ ಉದ್ಧಾರಮಾಡುವೆನೆಂದು. ಹೀಗೆ ಅವನಿಗೆ ಗಂಟುಬೀಳಬೇಕು.

ಈ ಎರಡು ಶ್ಲೋಕದಲ್ಲಿ ಜ್ಞಾನಿ, ಯೋಗಿ, ಕರ್ಮಿ (ಮಯಿಸಂನ್ಯಸ್ಯ) ಭಕ್ತ ಎಲ್ಲರನ್ನೂ ಉದ್ದಾರಮಾಡುವುದಾಗಿ ಸ್ವಾಮಿ ತಾನೇ ಪಣತೊಟ್ಟ ಮೇಲೆ ಇನ್ನು ಜ್ಞಾನ, ಯೋಗ, ಕರ್ಮಫಲತ್ಯಾಗ, ಭಕ್ತಿಗಳಲ್ಲಿ ಭೇದವೆಲ್ಲಿ ಬಂತು. ಅವನನ್ನು ಕುರಿತು, ಅವನ ಪಾದವೆಡೆಗೆ ಇವುಯಾವುದು ಪ್ರವಹಿಸಿದರೂ, “ಮಯ್ಯಾವೇಶಿತಚೇತಸಾಂ” ಅವನಲ್ಲೇ ಲೀನಮಾಡುವುದು. ಎಲ್ಲಾ ಆತ್ಮಪ್ರಾಪ್ತಾವಸ್ಥೆಯಲ್ಲಿ ಒಂದೇ ಮುಂದಿನ ನಾಲ್ಕು ಶ್ಲೋಕಗಳಲ್ಲಿ ತನ್ನನ್ನು ಸೇರಿ ಲೀನವಾಗುವ ಬಗೆಗಳನ್ನು ಹೇಳುತ್ತಾನೆ ಸ್ವಾಮಿ.

**ಮಯ್ಯೇವ ಮನ ಆಧತ್ಸ್ವ । ಮಯಿ ಬುದ್ಧಿಂ ನಿವೇಶಯ ।**
**ನಿವಸಿಷ್ಯಸಿ ಮಯ್ಯೇವ । ಅತ ಊರ್ಧ್ವಂ ನ ಸಂಶಯಃ ॥೮॥**

ಈ ಶ್ಲೋಕದಲ್ಲಿ ಸ್ವಾಮಿ ಸ್ವಬುದ್ಧಿಯಿಂದ ಜ್ಞಾನಯೋಗದಿಂದ ಪರಮಾತ್ಮನಲ್ಲಿಯೇ ಮನಸನ್ನಿಟ್ಟು ಅವನನ್ನು ಪಡೆಯುವುದರಲ್ಲಿ

ಸಂಶಯವಿಲ್ಲವೆಂದು–ಜ್ಞಾನಯೋಗದ ಮಹಿಮೆಯನ್ನು ಪ್ರಶಂಶಿಸಿದ್ದಾನೆ. ಇದು ತನ್ನ ಬುದ್ಧಿಯ ಬಲವೊಂದರಿಂದಲೇ ಸಾಧ್ಯವಿಲ್ಲಾ. "Give me the strength to surrender my strength to thy strength with love" ಎಂದು ಗೀತಾಂಜಲಿಯಲ್ಲಿ ರವೀಂದ್ರರು ಹಾಡಿರುವಂತೆ, ಬರೀ ದೇಹದಶಕ್ತಿ (ಪಶುಶಕ್ತಿ)ಯಲ್ಲದೆ, ಮನಸ್ಸಿನ ಶಕ್ತಿ, ಬುದ್ಧಿಶಕ್ತಿ ಕೂಡಾ ಸ್ವಾಮಿಯ (ಮಹಾತ್ಮನ) ಶಕ್ತಿಯಲ್ಲಿ ಒಂದಾಗಿ ಸೇರಿ ಪ್ರವೇಶಿಸಿ ತಾನೇ ಜೇರೆಂಬ ಭಾವನೆಯಿಲ್ಲದೆ ಪ್ರಯತ್ನಮಾಡುವುದು.

"ತ್ವಂ ವಿಹಾಯ ನಶಕ್ನೋಮಿ ಜೀವಿತಂ ಕ್ಷಣಯೇ ವಹಿ !
ಅಂತರ್ಬಹಿಶ್ಚ ನಿತ್ಯಂ ತ್ವಂ ಸತ್ಯ ರೂಪೇಣ ವರ್ತಸೆ ॥"

ಎನ್ನುವ ಶ್ಲೋಕದ ಭಾವದಂತೆ ಜ್ಞಾನಿಯು ಪರಮಾತ್ಮಾ ವಿನಾ ಒಂದು ಕ್ಷಣವಾದರೂ ಜೀವಿಸಲು ಶಕ್ತನಲ್ಲವೆಂಬ ತಿಳುವಿನಲ್ಲಿ, ಒಳಗೂ, ಹೊರಗೂ, ನಿತ್ಯವೂ, ಸ್ವಾಮಿಯೇ ಸತ್ಯರೂಪನಾಗಿ ನಮ್ಮನ್ನು ಅನುಗ್ರಹಿಸಿ ನಡೆಸುತ್ತಾನೆ, ಎಲ್ಲಾ ಅವನ ಲೀಲೆ, ಇಚ್ಛೆ ಎನ್ನುವ ದೃಢ ಜ್ಞಾನ ಬಂದಮೇಲೆ ಇನ್ನು ಸಂಶಯವೆಲ್ಲಿ. ಇದು ಕ್ಲೇಶತರವಾದುದು ಸ್ವಾಮಿಯೇ ಹೇಳಿರುವಂತೆ. ಈ ತಿಳುವಿನ ನಿಷ್ಠೆಯಲ್ಲಿಯೇ ಪರಮಾತ್ಮನಲ್ಲಿ ಲೀನವಾಗುವುದು ಈ ದೇಹಧಾರಿಗಳಾದ, ಈ ಇಹಲೋಕ ವ್ಯಾಪ್ತಿಯಲ್ಲಿರುವವರಿಗೆ ಕಷ್ಟಕರವು. ಎಲ್ಲವೂ ನೀನೇ, ನನ್ನದೇನೂ ಇಲ್ಲ ಎನ್ನುವ ಭಾವನೆ ಬಂದು ಹೊರಗೂ ಒಳಗೂ ಎಲ್ಲಾ ಸತ್ಕಾರ್ಯದಲ್ಲೂ ಅವನ ಲೀಲೆಯನ್ನೇ ಕಾಣುತ್ತಿರುವುದು ಜ್ಞಾನದ ಪರಮಾವಧಿ.

ಆಗ ಅವನಲ್ಲೇ ಮನ, ತನು, ಬುದ್ಧಿ ಅವನಲ್ಲೇ ಜೀವನ "ತನು ನಿನ್ನದು, ಜೀವನ ನಿನ್ನದೂ" ಎನ್ನುವ ಪುರಂಧರದಾಸರ ಕೀರ್ತನೆಯು ಅನುದಿನದ ವ್ಯವಹಾರವೂ ನಿನ್ನದೆಂಬ ಭಾವನೆಯು ತಿಳಿವಿನಮೇಲ್ಮೆ.

ಕವಿ ರವೀಂದ್ರರು ಈ ಜ್ಞಾನದ ಮತ್ತು ಸ್ವಪ್ರಯತ್ನದಿಂದ ಇಹ ಸಂಸಾರನಾಟಕ ಕೈವಲ್ಯ ಪಡೆಯುವುದನ್ನು, Gardener ಎನ್ನುವುದರಲ್ಲಿ "There is only your own pair of wings and the pathless sky, bird, O my bird, listen to me, donot close your

wings" ನಿನ್ನ ನೆರವಿಗೆ ನಿನ್ನ ಸ್ವಂತ ರಕ್ಕೆ ಜೊತೆ, ಈ ಮಾರ್ಗವಿಲ್ಲದ ನೀಲಾಕಾಶವಿದೆ, ಹಕ್ಕಿಯೇ, ನನ್ನ ಹಕ್ಕಿಯೇ ನನ್ನ ಮಾತು ಕೇಳು, ರಕ್ಕೆ ಮುದರಬೇಡ ಎಂದು, ಊರ್ಧ್ವಮುಖವಾಗಿ ಅವ್ಯಕ್ತ ಪರಮಾತ್ಮ, ಸರ್ವವ್ಯಾಪಿಯೊಳಗೆ ಪ್ರಯತ್ನ ಸತತವಾಗಿ ಹಾರಿ ಸೇರಬೇಕೆಂದು, "ಅವನಾರೇ ಭೂಲೋನಾಕ ಖೋನೊ" ಯಾವಾಗಲಾದರೂ ನಿನ್ನನ್ನೇ ನೀನು ಮರೆತೀಯೋ? ಎಂದು ಜಲ್ಮದಿನದಲ್ಲಿ ಎಚ್ಚರಿಸಿದ್ದಾರೆ.

**ಅಥ ಚಿತ್ತಂ ಸಮಾಧಾತುಂ । ನ ಶಕ್ನೋಷಿ ಮಯಿ ಸ್ಥಿರಮ್ ।**
**ಅಭ್ಯಾಸಯೋಗೇನ ತತೋ । ಮಾಮಿಚ್ಛಾಪ್ತುಂ ಧನಂಜಯ ॥೯॥**

ಇದು ಒಂದುವೇಳೆ ಚಿತ್ತವನ್ನು ಸಮಧಾತುವಾಗಿಮಾಡಿ ನನ್ನಲ್ಲಿ ಸ್ಥಿರವಾಗಿ ನಿಲ್ಲಿಸಲು ಆಗದೇ ಹೋದರೆ, ಪುನಃ ಅಭ್ಯಾಸಯೋಗದಿಂದ ನನ್ನನ್ನು ಹೊಂದಲು ಇಚ್ಛೆಯುಳ್ಳವನಾಗು. ಇದು ಯೋಗಾಭ್ಯಾಸ, ಪ್ರಯತ್ನ ಪೂರ್ವಕವಾಗಿ ಶ್ರಮಪಟ್ಟು ದೇಹದಂಡನೆಯಿಂದ, ಇಂದ್ರ ನಿಗ್ರಹಿಸಿ ಪರಮಾತ್ಮನನ್ನೇ ಪಡೆಯಬೇಕೆಂಬ ನಿಷ್ಠೆಯೋಗ. ಇದರ ಅಭ್ಯಾಸ, ಅನವರತ ನಡೆಸುವಿಕೆ, ಸೋಲಿಗೆ ಹೆದರದೆ, ಫಲಕ್ಕೆ ಬಾಯಿ ಬಿಡದೆ, ಯೋಗವೇ ಯೋಗದ ಫಲವೆಂದು ಸತತಮಾಡುವುದು ಅಭ್ಯಾಸ ಯೋಗ. "The heights by great men reached and kept were not attained in a single day, they while their brethren slept toiled along on the way" ಎನ್ನುವಂತೆ ಮೇಲೇರಿ ಆ ಉಚ್ಚ ಸ್ಥಿತಿಯಲ್ಲಿರಬೇಕಾದರೆ ಸತತ ಅಭ್ಯಾಸಪ್ರಯತ್ನಬೇಕು.

ಪಾತಂಜಲಿ ಯೋಗ ಸೂತ್ರದಲ್ಲಿ (ಸೂ. ೨) "ಯೋಗಶ್ಚಿತ್ತವೃತ್ತಿ ನಿರೋಧಃ" ಎಂದು ಹೇಳಿದೆ. ಸಮಸ್ತ ವ್ಯವಹಾರ ವ್ಯಾಪಾರಗಳಿಗೆ ಹರಿಯುವ ಚಿತ್ತವೃತ್ತಿ, ಪರಿಣಾಮವನ್ನು ರೂಪಧರ್ಮಗಳನ್ನು ನಿಗ್ರಹಿಸುವುದೇ ನಿರೋಧ. ಚಿತ್ತವೃತ್ತಿ ತ್ರಿಗುಣ ಪ್ರಧಾನವಾಗಿ, ತಮೋಗುಣ ಪ್ರಧಾನವಾದಾಗ ವಿವೇಚನೆಯಿಲ್ಲದೆ ಕ್ರೋಧಾದಿಗಳಲ್ಲಿ ಪ್ರವೇಶಿಸುವಾಗ "ಮೂಢ"ವೆಂದೂ, ರಜೋಗುಣ ಪ್ರಧಾನವಾಗಿ ಕಾಮಾದಿ ಸುಖ ಲೋಲಾಪ್ತಿಗಳಲ್ಲಿ ಪ್ರವರ್ತಿಸುವಾಗ "ಕ್ಲಿಪ್ತ"ವೆಂದೂ, ಸತ್ವಗುಣ

ಪ್ರಧಾನವಾಗಿ ಸಾಧನೆಗಳಲ್ಲಿ ಪ್ರವರ್ತಿಸುವುದಕ್ಕೆ "ವಿಕ್ಷಿಪ್ತ"ವೆಂದೂ, ಬಾಹ್ಯದಲ್ಲಿ ಪಸರಿಸದೆ ಒಂದೇ ಗುರಿಯಲ್ಲಿ ಹೊಕ್ಕಿರುವಾಗ "ಏಕಾಗ್ರ" ವೆಂದೂ, ವೃತ್ತಿ ಸಂಸ್ಕಾರಗಳಿಲ್ಲದಿರುವಾಗ "ನಿರುದ್ಧ"ವೆಂದೂ, ಪಂಚಾವಸ್ಥೆಗಳಲ್ಲಿರುತ್ತದೆ. ಈ ಪಂಚಾವಸ್ಥೆಗಳೂ ಪ್ರತಿ ಅವಸ್ಥೆಯಲ್ಲಿ ಸೇರಿದ್ದರೂ, ಒಂದೊಂದೇ ಪ್ರಧಾನವಾಗಿರುವಾಗ ಆ ಸ್ಥಿತಿಯೆಂದು ಸಂಕೇತ. ಈ ಪಂಚಾವಸ್ಥೆಗಳಲ್ಲಿ "ಮೂಢ"ವು ಸಂಸ್ಕಾರವಿಲ್ಲದ ಜನಗಳಿಗೂ, "ಕ್ಷಿಪ್ತ"ವು ಜನಸಾಮಾನ್ಯ ರಾಗಿಣಿಗಳಿಗೂ, "ವಿಕ್ಷಿಪ್ತ"ವು ದೈವೀಗುಣ ಸಂಭೂತರಾದವರಿಗೂ, "ಏಕಾಗ್ರ"ವು ಉಪಾಸಕರಿಗೂ, "ನಿರುದ್ಧ"ವು ಯತಿ, ಸಿದ್ಧ, ಸಾಧುಗಳಿಗೂ ಮುಖ್ಯವಾಗಿರುತ್ತದೆ. ಈ ಪಂಚಾವಸ್ಥೆಗಳಲ್ಲಿ ಚಿತ್ತಕ್ಕೆ, ಮೊದಲೆರಡು "ಮೂಢ, ಕ್ಷಿಪ್ತಾ"ವಸ್ಥೆಗಳು ಯಾವಾಗಲೂ ಬಾರದಂತೆಯೂ, "ವಿಕ್ಷಿಪ್ತದಿಂದ, ಏಕಾಗ್ರವಾಗಿ ನಿರೋಧ" ಸ್ಥಿತಿಯಲ್ಲಿರಲು ಪ್ರಯತ್ನಿಸುವುದೇ ಈ"ಅಥಚಿತ್ತಂ ಸಮಾಧಾತುಂ, ಮಯಿಸ್ಥಿರಂ."

(ಸೂ. ೧೨) "ಅಭ್ಯಾಸ ವೈರಾಗ್ಯಾಭ್ಯಾಂತನ್ನಿರೋಧಃ" ಎಂದು ಪಾತಂಜಲಿಗಳು ಮುಂದೆ, ಅಭ್ಯಾಸ ವೈರಾಗ್ಯಗಳಿಂದ, ಚಿತ್ತವೃತ್ತಿಯು ನಿಗ್ರಹಿಸಲ್ಪಡುವುದು ಎಂದಿದ್ದಾರೆ. ಇದೇ ಅಭ್ಯಾಸಯೋಗ. "ತತ್ರ ಸ್ಥಿತಾ ಯತ್ನೋಽಭ್ಯಾಸಃ" (ಸೂ. ೧೩) – ಆ ಸ್ಥಿತಿಗೆ ಚಿತ್ತವೃತ್ತಿಲಯಕ್ಕೂ, ಏಕಾಗ್ರಕ್ಕೂ ಪ್ರಯತ್ನಮಾಡುವುದೇ "ಅಭ್ಯಾಸ" ಚಿತ್ತವೃತ್ತಿಯಲ್ಲಿ, ಚಿತ್ತವು ಕರ್ಮೇಂದ್ರಿಯ ಪಂಚಕ, ಜ್ಞಾನೇಂದ್ರಿಯ ಪಂಚಕಗಳ ದ್ವಾರ ಬಾಹ್ಯಕ್ಕೆ ಬರುವುದು. ಈ ಚಿತ್ತವೃತ್ತಿಯಿಂದಲೇ ಸುಖ ದುಃಖ, ಮೋಹ ರೂಪಗಳಲ್ಲಿ ಹೊರಗಿನ ಪ್ರಪಂಚಾನುಭವ ಸತತವಾಗಿ ನಡೆಯುತ್ತಿದೆ. ಈ ನವದ್ವಾರಗಳಲ್ಲಿ ಚಿತ್ತವೃತ್ತಿಯು ನುಸಳಿಕೊಂಡು, ವೃತ್ತಿಯಿಂದ ವಿಮುಖವಾಗಿರುವುದೇ ಅಭ್ಯಾಸವಾಗಿಬಿಟ್ಟಿದೆ. ಹೀಗೆ ಬಾಹ್ಯಕ್ಕೆ ಬರುವ ಚಿತ್ತವೃತ್ತಿಯನ್ನು ನಿಲ್ಲಿಸಿಬಿಟ್ಟರೆ ಅದೇ ಅಂತರ್ಮುಖಸಾಗುತ್ತದೆ. ಈ ಬಹಿರ್ಮುಖವಾದ ಚಿತ್ತವೃತ್ತಿಯು ತಪ್ಪಿಸಲು ಅಭ್ಯಾಸ ಸತತ ಬೇಕು. ಈ ಅಭ್ಯಾಸದಿಂದ ಅಂತರ್ಮುಖವಾದ ಚಿತ್ತವು, ವೈರಾಗ್ಯದಿಂದ ಏಕಾಗ್ರತೆಹೊಂದಿ "ಮಯಿಸ್ಥಿತಂ" ಅಂತರಾತ್ಮನಲ್ಲಿ ಸ್ಥಿರವಾಗುತ್ತದೆ.

ನಶ್ಯ, ಧೂಮಪಾನ ತೆಗೆದುಕೊಳ್ಳಿ, ಶುರುಮಾಡುವಾಗ ಆ ಘಾಟಿಗೆ ಸೇವನೆಯೇ ಅಸಹ್ಯವಾಗಿ, ಕಷ್ಟವಾಗುತ್ತದೆ. ಸಹವಾಸ ದೋಷ ದಿಂದಲೋ, ಭೋಗಲಾಲಸೆಯೆಂಬ ಭ್ರಾಂತಿಯಿಂದಲೋ, ಚಟ ದಿಂದಲೋ ಆ ದುರಭ್ಯಾಸ ಇಂದ್ರಿಯಗಳು ಬ್ಯಾಡವೆಂದರೂ ಚಿತ್ತಚಪಲ ದಿಂದ, ಮೌಢ್ಯದಿಂದ, ಮಾಡಿಸುತ್ತೇವೆ. ಅದೇ ಆ ಮೇಲೆ ಆಪ್ಯಾಯಮಾನವಾಗಿಬಿಡುತ್ತದೆ. ಹೀಗೆ ಮದ್ಯಪಾನಾಸಕ್ತನಾದ ಒಬ್ಬ ಮಗನಿಗೆ ಅವನ ತಂದೆ ಬಿಟ್ಟುಬಿಡಲು ಹೇಳಿದರಂತೆ. ಮಗ .ಹೇಳಿದ "ಅಪ್ಪಾ ನಿನಗೂ ನಾಲ್ಕುದಿನ ಆ ಪಾನಭೋಗ, ಅಮಲು ಸುಖ ಅಭ್ಯಾಸಿಸುತ್ತೇನೆ. ರುಚಿ ನೋಡಿ ನಂತರ ಬಿಡೆಂದರೆ ಬಿಟ್ಟುಬಿಡು ತ್ತೇನೆ" ಎಂದು. ಹಾಗೆಯೇ ನಾಲ್ಕಾರು ದಿನ ಅಭ್ಯಾಸವಾದ ತಂದೆ ಯನ್ನು ಮಗ ಕೇಳಿದನಂತೆ "ಈಗೇನು ಹೇಳುತ್ತೀಯಪ್ಪಾ" ಅಂತ. ತಂದೆ ಹೇಳಿದ "ನೀ ಬೇಕಾದರೆ ಮದ್ಯಪಾನ ಬಿಡು. ನಾನಂತೂ ಇನ್ನು ಬಿಡಲ್ಲೆ ಈ ಅಮಲು ಸುಖ"—ಈ ಕಥೆ ಶ್ರೀರಾಮಕೃಷ್ಣರು ಭಗವ ಧ್ಯಾನ ಧ್ಯಾನ ಸುಖದ ರುಚಿ ಒಂದಾವರ್ತಿ ಗೊತ್ತಾದರೆ ಬಿಡಲಸಾಧ್ಯ ವೆನ್ನುವುದಕ್ಕೆ ಉದಾಹರಿಸಿದ್ದಾರೆ.

ಈ ರೀತಿ ದುರಭ್ಯಾಸವಾಗಿರುವುದನ್ನು ಬಿಡಬೇಕಾದರೆ "ವೈರಾಗ್ಯ" ಬೇಕು ಆ ಚಟದಲ್ಲಿ "ರಾಗ" ಆಸಕ್ತಿ ತಪ್ಪಬೇಕು. ಅದಕ್ಕೆ ಪುನಃ ನಿರೋಧಾಭ್ಯಾಸಬೇಕು. ಕ್ರಮಂಗವಾಗಿ ಇಂದ್ರಿಯ ನಿಗ್ರಹಮಾಡಬೇಕು. ಪುನಃ ಪುನಃ ಈ ಇಂದ್ರಿಯ ನಿಗ್ರಹವೇ ಅಭ್ಯಾಸವಾಗಿ, ಪಡೆಯಬೇಕಾ ದುದಕ್ಕೆ ಪ್ರಯತ್ನವೇ ಅಭ್ಯಾಸ ಯೋಗ.

"ಥೂ ಈ ಧೂಮಪಾನ ಕೆಟ್ಟದ್ದು" ಎಂದು ಯಾರೋ ಹಿರಿಯರು ನೋಡಿದಾಗ ನಾಚಿಯೋ, ಪ್ರೇಯಸಿಯು, ಕಾಮಾಲಿಂಗನದಲ್ಲಿದ್ದಾಗ "ಹಾಳು ಸಿಗರೇಟ್ ವಾಸನೆ" ಎಂದು ಚುಂಬನೋತ್ಸಾಹ ಅಧರದಿಂದ ವಿಮುಖಳಾಗಿ, ಮುಸುಡಿಯನ್ನು ತಿರುಗಿಸಿ ಬಿಟ್ಟಾಗಲೋ, ಆ ಸಿಗರೇಟ್ ಸೇದುವುದರ ಮೇಲಿನ "ರಾಗ"ದ ಮೇಲೆ ಈ ಪ್ರೇಯಸಿಯ ಚುಂಬನಾಸಕ್ತಿ ರಾಗಕ್ಕಾಗಿ, ಜಿಗುಪ್ಸೆಬಂದು, ಧೂಮಪಾನ ಬಿಟು ಬಿಡುವುದಾಗಿ ನಿಶ್ಚಯಿಸಿ, ಅವತ್ತಿನಿಂದ ಧೂಮಪಾನ ಮಾಡದಿರುವುದು

ಕಷ್ಟವಾದರೂ ಅಭ್ಯಾಸಿಸುವಂತೆ, ಪರಮಾತ್ಮನು ಪ್ರೇಮದಿಂದ ವಿಮುಖ ನಾದನೆಂಬ ಹೆದರಿಕೆಯಿಂದ, ಆ ಹೆಚ್ಚಿನ ಅನಂತ ಸುಖಾನಂದಕ್ಕಾಗಿ, ಈ ಅಲ್ಪ, ಕ್ಷಣಿಕ ಸುಖ ಭೋಗಲಾಲಸೆಗಳಿಂದ ಚಿತ್ತವನ್ನು ಸಮಾಧಾನ ಮಾಡಿ, ಇಂದ್ರಿಯಗಳ ಮೂಲಕ ಹೊರಕ್ಕೆ ಭೋಗಲಾಲಸಾ ವೃತ್ತಿಗೆ ಹೋಗದಂತೆ, "ಮಯಿಸ್ಥಿರಂ" ಅಂತರಾತ್ಮನಲ್ಲಿ ಸ್ಥಿರಗೊಳಿಸುವ ಪ್ರಯತ್ನ ಮಾಡುವುದೇ ಅಭ್ಯಾಸಯೋಗ.

ಇದು ಪುನಃ ಪುನಃ ಪ್ರಯತ್ನರೂಪವಾಗಿರಬೇಕು. ಗಟ್ಟಿ ಮನಸ್ಸು ಮಾಡಿ ಯಾವುದೋ ಮೇಲೆ ಹೇಳಿದ ನಿಶ್ಚಯದಿಂದ ತ್ಯಜಿಸಿ ಬಿಟ್ಟ ಚಪಲವು, ಮಾಯವಾಗಿ, ಚಂಚಲ ಬುದ್ಧಿಯ ಸಾಧಕರು, ಪುನಃ ಹಿಂದಿನ ದುರಾಭ್ಯಾಸದ ಬಲೆಗೆ ಬೀಳುತ್ತಾರೆ, ಬಿಡೋ, ಸಿಗರೇಟ್ ಶೋಕೂ ಇಲ್ಲದಮೇಲೆ ಇನ್ನೇನು ಜೀವನದಲ್ಲಿ ರುಚಿ" ಎಂದು ಆ ಚಾಳಿಯ ಸಹವಾಸಿಯೋ ಎಂದಾಗ, ಒಂದು ಸಿಗರೇಟ್ ಕೈಗೆಕೊಟ್ಟು "ಸೇದಮ್ಮಾ ಇರಲಿ, ನಿನ್ನ ವೈರಾಗ್ಯ" ಅಂದಾಗ "ಹಚ್ಚಮ್ಮಾ ಹಚ್ಚು" ಎಂದು ಅದನ್ನು ಬಾಯಿಗೆ ಕಚ್ಚುವವನದು, ಅಭ್ಯಾಸವಲ್ಲಾ. ಅಭ್ಯಾಸ ವೆಂದರೆ ಒಂದು ದಿನದ ಪ್ರಯತ್ನವಲ್ಲಾ. ದೀರ್ಘಕಾಲ, ನಡೆಯ ಬೇಕು. (ಸೂ. ೧೪) "ಸತು ದೀರ್ಘಕಾಲ, ನೈರನ್ತರ್ಯ ಸತ್ಕಾರ ಸೇವಿತೋ ದೃಢ ಭೂಮಿಃ" ದೃಢವಾಗುವವರೆಗೂ ನಡೆಸುವುದೇ ಅಭ್ಯಾಸ. ಎಷ್ಟು ಸುಲಲಿತವಾಗಿ ಬೋಧಿಸಿದ್ದಾರೆ. ಅದು ದೀರ್ಘಕಾಲ, ಎಡ ಬಿಡದೆ ಆದರತಿಶಯದಿಂದ ಸೇವಿಸಿದರೆ ಸ್ಥಿರವಾದ ದೆಸೆ ತಾನಾಗುವುದು. "ಸತ್ಕಾರ ಸೇವಿತೊ" ನಮ್ಮ ಗೃಹಕ್ಕೆ ಬಂದ ಅತಿಥಿಯನ್ನು ಸತ್ಕರಿಸಿ ಸೇವಿಸುವಂತೆ. ಆ ಪ್ರಯತ್ನ ನಮ್ಮಲ್ಲಿ ಒಂದು ದಿನದ ಅನಾದರದ ಅತಿಥಿಯಾಗಬಾರದು "ಮಯಿಸ್ಥಿರಂ" ಆಗುವವರೆಗೂ, ಚಿತ್ತ ಸಮಾಧಾನ ಬರುವವರೆಗೂ ಅತಿಶಯವಾದ ಆದರದಿಂದ ಆ ಮನೋವೃತ್ತಿಯನ್ನು ಸೇವಿಸಿ, ಪೋಷಿಸ ಬೇಕು. ಅತಿಥಿಗೆ "ತಮ್ಮ ಮನೆಯೆಂದೇ ಭಾವಿಸಬೇಕೆಂದು" ಉಪ ಚರಿಸುವಂತೆ, ಆ ಅವಸ್ಥೆ ನಮ್ಮಲ್ಲಿ ಸ್ವಂತಮನೆ ಮಾಡಿಕೊಳ್ಳಬೇಕು.—ದೃಢ ಭೂಮಿಃ ಆ ಚಿತ್ತದಾರ್ಢ್ಯಕ್ಕೆ – "ಚಿತ್ತಂ ಸಮಾಧಾತುಂ"

ಇದು ಸಾಧ್ಯವಾಗದಿದ್ದರೆ ಎಂದ ಭಗವಂತ. ಏಕೆಂದರೆ ಹಿಂದೆ (ಅ ೬, ಶ್ಲೋ ೩೪) ರಲ್ಲಿ ಅರ್ಜುನನು "ಚಂಚಲಂ ಹಿಮನಃ ಕೃಷ್ಣ ಪ್ರಮಾಥಿ ಬಲವದ್ದೃಢಂ । ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಂ ॥" ಎಂದು ತನ್ನ ಕಷ್ಟವನ್ನು, ತನ್ಮೂಲಕ ಸಾಧಕರೆಲ್ಲರ ಕಷ್ಟವನ್ನೂ ಹೊರಗೆಡಹಿದ್ದಾನೆ. ಗಾಳಿ ಮೂಟೆ ಕಟ್ಟೋ ಹಾಗೆ ಕಷ್ಟ ಕೃಷ್ಣಾ– ಈ ವಾಯುವೇಗ ಮೀರಿರೋ ಮನಸ್ಸು ಕಟ್ಟಿಹಾಕೋದು.

ಆ ನಿರಾಶಾ ಭಾವಕ್ಕೆ ಸ್ವಾಮಿ ನಸುನಗುತ್ತಲೇ ಹೇಳಿರಬೇಕು ಉತ್ತರ. (ಅ ೬, ಶ್ಲೋ ೩೫) "ಅಸಂಶಯಂ, ಮಹಾ ಬಾಹೋ, ಮನೋ ದುರ್ನಿಗ್ರಹಂ ಚಲಂ । ಅಭ್ಯಾಸೇನ ತು ಕೌಂತೇಯ, ವೈರಾಗ್ಯೇಣ ಚ ಗೃಹತೇ ॥'' ಸಾಧಕರ ಕಷ್ಟವನ್ನರಿಯನೇ ದೇವಾ. ಅಂಥಾ ಮಹಾ ಬಾಹು, ವೀರಗ್ರೇಸರನಿಗೇ ಪ್ರಚಲಿತವಾದ ಈ ದುರ್ನಿಗ್ರಹವಾದ ಮನಸ್ಸನ್ನು ನಿಗ್ರಹಿಸಿರುವುದು ಕಷ್ಟವೆಂದು ಸಂಶಯವಿಲ್ಲದೇ ಅರಿತ. ಇನ್ನು ನಮ್ಮಂತಹ ಕುಬ್ಜ, ನಿಶ್ಯಕ್ತರಿಗೆ ಇನ್ನೆಷ್ಟು ಕಷ್ಟವಿರಬೇಕು. ಆಗಲೇ ಅದಕ್ಕುಪಾಯವನ್ನು "ಅಭ್ಯಾಸ ವೈರಾಗ್ಯ''ಗಳಿಂದ ಸಾಧಿಸಲೇ ಬೇಕೆಂದು ಅಪ್ಪಣೆಕೊಡಿಸಿರುವುದು. ಇದೇ ಯೋಗ ಸೂತ್ರದಲ್ಲೂ ಒತ್ತಿ ಹೇಳಿರುವುದು. ಈ ಅಭ್ಯಾಸಕ್ಕೆ "ಮಾಮಿಚ್ಛಾಪ್ತುಂ'' ಪರಮಾತ್ಮನನ್ನು ಪಡೆಯಬೇಕೆಂಬ ತೀವ್ರ ಇಚ್ಛೆಯೇ ಸಹಾಯ. ಯಾವುದಾದರೂ ತೀವ್ರವಾಗಿ ಹೊಂದಬೇಕೆಂದು ಮನದಲ್ಲಿ ಇಚ್ಛೆಯುಂಟಾದರೆ ಎಷ್ಟಾದರೂ ಪ್ರಯತ್ನಿಸುತ್ತೇವೆ. ಶ್ರೀ ರಾಮಕೃಷ್ಣರು ಈ ಆತುರ ತೀವ್ರತೆಯನ್ನು ತೋರಲು ಒಂದಾವರ್ತಿ ಒಬ್ಬ ಸಾಧಕ ಶಿಷ್ಯನನ್ನು ಗಂಗಾ ನದೀ ಸ್ನಾನ ಮಾಡುವಾಗ ಮುಳುಗಿಸಿ ಒತ್ತಿ ನೀರಿನಲ್ಲಿ ಹಿಡಿದರು. ನಂತರ ಅವನನ್ನು ನೀರಿನಮೇಲೆ ತೇಲಲುಬಿಟ್ಟು "ನಿನಗೆ ನೀರಿನೊಳಗೆ ಮುಳುಗಿಸಿದ್ದಾಗ ಏನು ಹೆಚ್ಚು ಬೇಕಾಗಿತ್ತು'' ಎಂದು ಕೇಳಿದರು. ''ಹೊರಗಿನ ಗಾಳಿ'' ಎಂದೊಡನೆಯೇ ''ನೀರಿನಲ್ಲಿ ಮುಳುಗಿರುವಾಗ ಹೇಗೆ ಬಂಧನದಿಂದ ಮೇಲೆ ಬಂದು ಸರ್ವತ್ರವ್ಯಾಪಕ ವಾಯುಸೇವನೆಗೆ ಅತುರ ಪಟ್ಟೆಯೋ ಅದೇ ತೀವ್ರತೆಯಿಂದ ಸಂಸಾರ ಮಗ್ನನಾದ ನೀನೂ ಸ್ವಾಮಿಯ ಸರ್ವಾಂತರ್ಯಾಮಿಯ ಸೇವೆಗೆ ಆತುರಪಡಬೇಕು ಲಭಿಸಿಯೇ

ಲಭಿಸುವನು ಸರ್ವಾಂತರ್ಯಾಮಿ" ಎಂದು ಬೋಧಿಸಿದರು. ಈ ತೀವ್ರೇಚ್ಛೆ ಬರಬೇಕು ಭಗವಂತನನ್ನು ಪಡೆಯುವುದಕ್ಕೆ.

**ಅಭ್ಯಾಸೇಽಪ್ಯಸಮರ್ಥೋಽಸಿ । ಮತ್ಕರ್ಮಪರಮೋ ಭವ ।**
**ಮದರ್ಥಮಪಿ ಕರ್ಮಾಣಿ । ಕುರ್ವನ್ ಸಿದ್ಧಿಮವಾಪ್ಸ್ಯಸಿ ॥೧೦॥**

ಚಿತ್ತ ಸಮಾಧಾನದಿಂದ ನನ್ನಲ್ಲಿಯೇ ಸ್ಥಿರವಾಗಿರುವ ಅಭ್ಯಾಸ ಯೋಗ ವನ್ನು ಮಾಡಲು ಅಸಮರ್ಥನಾದರೆ, ನನಗೋಸ್ಕರವಾಗಿ ಕರ್ಮಾಸಕ್ತ ನಾಗು; ಅದರಿಂದ ಸಿದ್ಧಿಹೊಂದುವೆ.

ಜ್ಞಾನನಿಷ್ಠೆಗೆ ಬುದ್ಧಿ ಸಾಲದೇ, ಧ್ಯಾನಮಗ್ನನಾಗಿರಲು ಶಕ್ತಿಸಾಲದೇ ಕರ್ಮದಲ್ಲಿ ನಿರತರಾಗಿರುವವರಿಗೆ, ಆ ಮಾಡುವ ಕರ್ಮದಲ್ಲೂ ಪರಮೇಶ್ವರ ಪ್ರೀತ್ಯರ್ಥವಾದ ಸರ್ವಭೂತಹಿತಕ್ಕೆ ಅನುಕೂಲವಾಗುವ ಸತ್ಕರ್ಮಗಳಲ್ಲೇ ಆಸಕ್ತಿ ಹೊಂದಿದ್ದರೆ ಸಿದ್ಧಿಹೊಂದಲು ಮಾರ್ಗವಾಗು ತ್ತದೆ.

ಜ್ಞಾನವಂತರೂ, ಧ್ಯಾನಮಗ್ನರು ಕೂಡಾ, ಜೀವಿತ ಕಾಲದಲ್ಲಿ ಏನಾದರೂ ಕರ್ಮಮಾಡುತ್ತಲೇ ಇರಬೇಕಾಗುತ್ತದೆ. ಮನುಷ್ಯನಾದ ಮೇಲೆ ಜೀವಧಾರಣಕ್ಕೂ, ತದುಪಾಯಕ್ಕೂ ಏನಾದರೂ ಕೆಲಸ ಮಾಡಲೇಬೇಕು. ಆ ಕರ್ಮಾಚರಣೆಯೂ, ಪರಮಾತ್ಮನಿಗೋಸ್ಕರ, ಅವನ ಪ್ರೀತ್ಯರ್ಥವಾಗಿರಬೇಕು. ಮಹದಾತ್ಮನ ಸೇವೆಯಲ್ಲಿ, ಪರಮಾತ್ಮನ ಸಂಕಲ್ಪದಂತೆ ನಡೆಯುತ್ತಿರುವ ಈ ಪ್ರಪಂಚಚಕ್ರಕ್ಕೆ, ನಮ್ಮ ಕರ್ಮಾ ಚರಣೆಯೂ ಸಹಾಯವಾಗುವಂತಿರಬೇಕು. ನಾವೇನು ಕೆಲಸಮಾಡಿ ದರೂ, ಸೃಷ್ಟಿ ಸಲಹಾ ಕಾರ್ಯಕ್ಕೆ ಕಿಂಚಿತ್ಸೇವೆಯಾಗಿ ಪರಿಣಮಿಸಬೇಕು ಅದೇ ಪರಮಾತ್ಮ ಸೇವೆ. ನಾವು ಮಾಡುವ ನಿತ್ಯನೈಮಿತ್ತಿಕ ಕರ್ಮ ಗಳನ್ನು ಕೂಡಾ, ಪ್ರತಿದಿನ ಜೀವಧಾರಣೆಗೆ, ಜೀವ ಪೋಷಣೆಗೆ, ಜೀವ ನಾಗಿಸುವುದಕ್ಕೆ ಪ್ರಕೃತಿ ಧರ್ಮದಿಂದ ಮನುಷ್ಯ ಮಾತ್ರದವನು ಮಾಡುವ ಕರ್ಮವನ್ನೆಲ್ಲಾ ಪರಮಾತ್ಮನಿಗಾಗಿ ಮಾಡುತ್ತಿರಬೇಕು. ಯಾವಾಗ ನಾವು ಮಾಡುವ ಕರ್ಮವನ್ನೆಲ್ಲಾ ಪರಮಾತ್ಮನ ಅರ್ಥವಾಗಿ ಮಾಡುವ ಸ್ವಭಾವ ಬರುತ್ತದೆಯೋ, ಆಗ ನಾವು ಮಾಡುವ ದುಷ್ಕರ್ಮ,

ವ್ಯರ್ಥ ಕರ್ಮವನ್ನು ಹೇಗೆ ಅವನಿಗೆ ಒಪ್ಪಿಸಬಹುದೆಂಬ ಶಂಕೆ ಬಂದು, ವ್ಯರ್ಥಕರ್ಮ, ದುಷ್ಕರ್ಮಗಳನ್ನು ಮಾಡಲು ಹಿಂಜರಿವೆವು. ಸ್ವಾಮಿ ಸೇವೆಗಾಗಿ ಕರ್ಮವೆಸಗುವ ಸೇವಕನು ತಾನು ಮಾಡುವ ಕೆಲಸಗಳಲ್ಲೆಲ್ಲಾ, ಸ್ವಾಮಿಗೆ ಯಾವುದು ಅಸಮಾಧಾನವಾಗುವುದೋ ಯಾವುದನ್ನು ಸ್ವಾಮಿ ಒಪ್ಪುವುದಿಲ್ಲವೋ ಎಂದು ಎಲ್ಲವನ್ನೂ ಮನದಲ್ಲಿ ತುಲನಮಾಡಿ, ಸ್ವಾಮಿಗೆ ಪ್ರೀತ್ಯರ್ಥವಾದ, ಸ್ವಾಮಿಯೊಪ್ಪಬಹುದಾದ ಸ್ವಾಮಿಗೆ ಒಪ್ಪಿಸಬಹುದಾದ ಕರ್ಮವನ್ನೇ ಮಾಡುತ್ತಾ, ಇತರ ಕರ್ಮಗಳನ್ನು ತ್ಯಜಿಸುವನೋ, ಅಂತೇ ನಾವು ದಿನಕರ್ಮಗಳಲ್ಲೂ, ನಾವು ಮಾಡುವ ಕರ್ಮಗಳನ್ನೆಲ್ಲಾ ಸ್ವಾಮಿ ನೋಡುತ್ತಿದ್ದಾನೆ, ಅವನ ಸೇವೆಗಾಗಿ, ಮಹಾತ್ಮನ ಸಂಕಲ್ಪಕ್ಕನುಗುಣವಾಗಿ ಯಾವುದೂ ಆ ಚಕ್ರ ನಡೆಯುವುದಕ್ಕಡಚಣೆಯಾಗದಂತೆ ಎಚ್ಚರಿಕೆಯಿಂದ ಮಾಡಬೇಕು. ಮತ್ಕರ್ಮ, ಮದರ್ಥದ ಮರ್ಮವಿದೇ. ಆಗ ನಮ್ಮ ಕರ್ಮಗಳ ಮೇಲೆಲ್ಲಾ, ಎಚ್ಚರಿಕೆ ಕಾವಲಿರುತ್ತೆ. ಯಾವಾಗಲೂ ಭಗವತ್ಪ್ರೀತ್ಯರ್ಥವಾದ ಕರ್ಮವನ್ನೇ, ಸರ್ವರಲ್ಲೂ ಸಮನಾಗಿರುವ ಸ್ವಾಮಿಯ ಸೇವೆಯನ್ನೇ ಮಾಡಲು ತೊಡಗುವೆವು. ಇದು ಜ್ಞಾನ, ಧ್ಯಾನ ನಿರತರಲ್ಲದೆ ಸಾಮಾನ್ಯವಾಗಿ ದಿನಚರಿಯನ್ನಾಚರಿಸುವ ಜನಗಳಿಗೆಲ್ಲಾ ಸುಲಭೋಪಾಯ. ಕ್ಲೇಶ, ಕಷ್ಟಗಳಿಲ್ಲದೆ ಮಾಡುವ ಕರ್ಮವೆಲ್ಲಾ ನನ್ನದಲ್ಲಾ, ಸ್ವಾಮಿಯದೇ ಎಂಬ ಭಾವನೆ ಬಂದರೆ ಸಾಕು. ಯಾರುತಾನೇ ತಾನುಮಾಡುವ ಕರ್ಮವೆಲ್ಲಾ ಸ್ವಾರ್ಥತೆಗಾಗಿ ಮಾಡುತ್ತಾರೆ. ಸಂಸಾರದಲ್ಲಿರುವವರು, ನೆರಹೊರೆಯವರು, ಊರಿನವರು, ದೇಶದವರು ಇವರನುಕೂಲಕ್ಕಾಗಿಯೇ, ಯಾರಮಧ್ಯೆ ವಾಸಿಸುವರೋ, ಅವರಲ್ಲಿ ತಾನೂ ಒಂದು ವ್ಯಕ್ತಿಯೆಂದು, ಅವರೆಲ್ಲರ ಸುಖವಾದರೆ ತನಗೂ ಆಗುವುದೆಂದು, ತಿಳಿವು ಮಾತ್ರವಿಲ್ಲದೆ, ಅವರಿಗಾಗಿಯೇ ದುಡಿಯುವುದು. ಆ ಕರ್ಮವೆಲ್ಲಾ ನನಗಾಗಲ್ಲಾ, ದೇವರ ಕೆಲಸ, ದೇವಾರ್ಥವಾಗಿ ಮಾಡುತ್ತೇನೆಂಬ ಭಾವನೆ ಇಲ್ಲಾ. ಅದು ಬರಬೇಕು. ಆಗ ಕರ್ಮವೂ ಪವಿತ್ರವಾಗುತ್ತದೆ, ತಾನೂ ಶುಚಿಯಾಗುತ್ತಾನೆ. ಹಾಗೆಮಾಡುವ ಸತ್ಕರ್ಮ ಭಗವಂತನಿಗರ್ಪಿಸಲೂ ಯೋಗ್ಯವಾಗುತ್ತದೆ. ಎಷ್ಟೋ ಸಾಧಾರಣ

ರಂತೆ ತೋರುವ ಜ್ಞಾನಿಗಳು, ಇತರರಂತೆ ಸದಾ ಕರ್ಮದಲ್ಲಿ ನಿರತರಾಗಿದ್ದರೂ ಮನದಲ್ಲಿ ದೇವರ ಚಿಂತನದಿಂದ ಎಲ್ಲಾ ಸ್ವಾಮಿಗೇ ಪ್ರೀತಿಯೆಂದು ಮಾಡುತ್ತಾರೆ. ಶ್ರೀ ಶಂಕರರು ಹೇಳಿದ್ದಾರೆ.

"ಆತ್ಮಾತ್ವಂ ಗಿರಿಜಾಮತಿಃ ಸಹಚರಾಃ, ಪ್ರಾಣಾಃ ಶರೀರಂ ಗೃಹಂ
ಪೂಜಾತೇ ವಿಶಯೋಪಭೋಗ ರಚನಾ, ನಿದ್ರಾಸಮಾಧಿ ಸ್ಥಿತಿಃ
ಸಂಚಾರಃ ಪದಯೋ ಪ್ರದಕ್ಷಿಣ ವಿಧಿಃ, ಸ್ತೋತ್ರಾಣಿ ಸರ್ವಾಂಗಿರೋ
ಯದ್ಯತ್ಕರ್ಮಂ ಕರೋಮಿ ತತ್ತದಖಿಲಂ, ಶಂಭೋ ತವಾರಾಧನಂ ||"

ಎನ್ನುವ ಶಿವಮಾನಸ ಪೂಜೆಯ ಶ್ಲೋಕದ ಅರ್ಥವಾದರೂ, ದಿನಚರಿ ಕರ್ಮಕೂಡಾ, ಯಾವಕರ್ಮ ಮಾಡುವೆನೋ, ಆ ಅಖಿಲವೂ, ಶಂಭೋ, ನಿನ್ನ ಆರಾಧನೆ—ಎನ್ನುವುದೇ "ಮದರ್ಥ." ವಿಷ್ಣುವಿನ ಜಿತಂತೇ ಸ್ತೋತ್ರದ "ಮನಸಾ ಕರ್ಮಣಾ ವಾಚಾ ಶಿರಸಾ ವಾಕಥಂ ಚನ | ತ್ವಾಂ ವಿನಾನ್ಯಮುದ್ದಿಶ್ಯ ಕರಿಷ್ಯೇ ಕಿಂ ಚಿದಪ್ಯಹಂ ||" ನಿನ್ನ ವಿನಃ ಇನ್ಯಾವ ಉದ್ದಿಶ್ಯದಿಂದಲೂ, ನಾನು ಮನಸಾ, ವಾಚಾ, ಕರ್ಮಣಾ ಶಿರಸಾ, ಯಾವ ಕಾರ್ಯವನ್ನೂ ಮಾಡಲೊಲ್ಲೆ ಎಂಬ ದೃಢ ಬುದ್ಧಿ ಬರಬೇಕು-'ಮತ್ಕರ್ಮ' ಅದೇ ಮತ್ಕರ್ಮ ಪರನಾಗುವುದರಲ್ಲಿ ಬೇರೇ ಅದಕ್ಕಾಗಿ ಅವನ ಪ್ರೀತಿಗೆಂದು ಹೆಚ್ಚಿನದೇನನ್ನೂ ಮಾಡಬೇಕಾದುದಿಲ್ಲಾ. ಮಾಡುವುದೆಲ್ಲಾ ಸ್ವಾಮಿಯ ಕರ್ಮವೇ, ನಾನು ಮಾಡುವವನಲ್ಲಾ, ಅವನೇ ನನ್ನಲ್ಲಿ ನಿಂತು ನನ್ನ ನಿಮಿತ್ತ ಮಾತ್ರ ಮಾಡಿಕೊಂಡು ನನ್ನಿಂದ ಕರ್ಮಮಾಡಿಸುತ್ತಿರುವನು ಎಂಬ ಭಾವದ ಮೇಲೆ ಎಲ್ಲಾ ಕರ್ಮವನ್ನೂ ಅವನಿಗರ್ಪಿಸಿಬಿಡುವುದು. "ಯತ್ಕೃತಂ ಯತ್ಕರಿಷ್ಯಾಮಿ ತತ್ಸರ್ವಂ ನಮಯಾಕೃತಂ | ತ್ವ ಯಾ ಕೃತಂತು, ಫಲ ಭುಕ್ತ್ವಮೇವ ಮಧುಸೂದನ" ಎನ್ನುವ ಮುಕುಂದಮಾಲಾ ಸ್ತೋತ್ರದಂತೆ ನಾನು ಯಾವ ಕರ್ಮಮಾಡಿದರೂ, ಅದೆಲ್ಲ ನಾ ಮಾಡಿದ್ದಲ್ಲಾ, ನೀನೇ ಮಾಡಿದುದು, ಅದರ ಫಲವನ್ನು ನೀನೇ ಭುಜಿಸು ಎನ್ನುವ ತಾತ್ಪರ್ಯದಲ್ಲೇ ಸರ್ವಕರ್ಮವನ್ನೂ ಮಾಡಿ, ಫಲಾರ್ಪಣೆ ಮಾಡಿಬಿಡ

ಬೇಕು. ಇದನ್ನೂ ಮಾಡಲಸಮರ್ಥನಾದರೆ, ನನ್ನನ್ನು ಶರಣುಹೊಂದಿ, ಆತ್ಮಸಾಕ್ಷಿಯಾಗಿ ಸಮಸ್ತ ಕರ್ಮಫಲ ತ್ಯಾಗಮಾಡುವವನಾಗು.

**ಅಥೈತದಪ್ಯಶಕ್ತೋಽಸಿ । ಕರ್ತುಂ ಮದ್ಯೋಗಮಾಶ್ರಿತಃ ।**
**ಸರ್ವಕರ್ಮಫಲತ್ಯಾಗಂ । ತತಃ ಕುರು ಯತಾತ್ಮವಾನ್ ॥೧೧॥**

ಸರ್ವಕರ್ಮ ಫಲತ್ಯಾಗ ಹೇಗೆ ಮುಖ್ಯ ಎನ್ನುವುದನ್ನು ಅದರಿಂದಲೇ ಏನು ಫಲಹೇತು (ಕಾರಣ)ವೆನ್ನುವುದನ್ನೂ, ನಾರದಭಕ್ತಿ ಸೂತ್ರ (೪೮) ದಲ್ಲಿ "ಯಃ ಕರ್ಮಫಲಂ ತ್ಯಜತಿ, ಕರ್ಮಾಣಿ ಸನ್ನ್ಯಸ್ಯತಿ, ತತೋ ನಿರ್ದ್ವಂದ್ವೋ ಭವತಿ"—ಯಾರು ತಾನುಮಾಡುವ ಎಲ್ಲಾ ಕರ್ಮದ ಸರ್ವಫಲವನ್ನು ಬಿಟ್ಟು, ಕರ್ಮದಲ್ಲಿ ಸ್ವಸಂಬಂಧವಿಲ್ಲದೆ ಇರುತ್ತಾರೋ, ಅವರು ನಿರ್ದ್ವಂದರಾಗುತ್ತಾರೆ ಎಂದು ಹೇಳಿದ್ದಾರೆ. ಸುಖ ದುಃಖ, ಮಾನಾಪಮಾನ, ಸ್ತುತಿ ನಿಂದೆ, ಜಯಾಪಜಯ ಇವೇ ದ್ವಂದ್ವಗಳು. ಯಾವ ಕರ್ಮವಾದರೂ, ಒಂದಾದರಲ್ಲ ಮತ್ತೊಂದು ಈ ಫಲದ್ವಯ ಗಳಲ್ಲಿ ಪರಿಣಮಿಸುತ್ತೆ, ನಾವು ಮಾಡಿದ ಕಾರ್ಯ ಫಲಬಂದಾಗ ಜಯ ವಾಗಿ, ಜನ ಸ್ತುತಿಸಿ, ಮಾನ್ಯತೆ ಬಂದರೆ ಮನಸ್ಸಿಗೆ ಸುಖವಾಗುತ್ತದೆ. ಮನುಷ್ಯ ಹರ್ಷಿತನಾಗುತ್ತಾನೆ. ಕೆಲಸ ಅಪಜಯವಾಗಿ, ಜನನಿಂದೆ ಮಾಡಿ, ಅವಮಾನವಾದರೆ ದುಃಖವಾಗುತ್ತೆ. ಈ ದ್ವಂದ್ವಗಳು ಮನಸ್ಸನ್ನು ಗಡಿಯಾರದ ಲೋಲಕದಂತೆ (Pendulum) ಒಂದು ಕಡೆಯಿಂದ ಮತ್ತೊಂದು ಕಡೆಗೆ ತೂಗುತ್ತದೆ. ಅದರಿಂದ ಚಿತ್ತ ಚವಲತೆ ಜಾಸ್ತಿ. ಆ ಫಲದಮೇಲೆ ಗಮನವೇ ಇಲ್ಲವಾದರೆ ಈ ಚಪಲ ವಿಲ್ಲಾ. ಮನಸ್ಸು ತನ್ನಲ್ಲೇ ಸ್ಥಿರವಾಗಿ ಆರಾಮವಾಗಿರುತ್ತೆ–ಶಾಂತಿ.

ದೇವನ ಪೂಜೆ, ಭಕ್ತಿ ಮುಂತಾದುವಕ್ಕೆ ದೇವನಭಾವ, ಗುಣ ಗ್ರಹಣಬೇಕು. ಪೂಜಾವಿಧಾನಗಳಲ್ಲಿ ಭಿನ್ನತೆಗಳು ಬರಬಹುದು. ಆದರೆ ಈ ಕರ್ಮಫಲ ತ್ಯಾಗದಲ್ಲಿ ಯಾವ ಕಾಲದಲ್ಲೂ, ಯಾರಿಗೂ ಭಿನ್ನಾಭಿ ಪ್ರಾಯವೇ ಇಲ್ಲಾ. ಜೀವನದಲ್ಲಿ ಕರ್ಮದ ನಿರತನಾಗಿಯೇ ಇರ ಬೇಕಾಗಿದೆ, ಆ ಕರ್ಮ ಏನಾದರೂ ಫಲ ಕೊಟ್ಟೇಕೊಡುತ್ತದೆ. ಆ ಕರ್ಮಮಾಡುವವನು ನಾನು, ಆ ಕರ್ಮಫಲ ನನ್ನದು ಎನ್ನುವ

ಬುದ್ಧಿಯೇ ಬಂಧಿಸುವುದು. ಅದನ್ನು ತ್ಯಾಗಮಾಡುವುದೇ ಈ ಬಂಧನದಿಂದ ಬಿಡುಗಡೆ ಮಾಡುವುದು, ದಾಸ್ಯಬುದ್ಧಿಯಿಂದ ಮಾಡಿದ್ದಾಗಿದೆ, ಅದರ ಫಲದ ಮೇಲೇ ಚಿಂತೆಯಿಲ್ಲಾ. ಕರ್ಮ ಭಗವತ್ಪಾದಕ್ಕೆ ಅರ್ಪಿಸಿಬಿಟ್ಟಿದ್ದಾದರೆ ಅದರ ಫಲ ಜಯವಾಗಲೀ ಅಪಜಯವಾಗಲೀ ಅದರ ಚಿಂತೆಯೇ ಇಲ್ಲಾ. ಅನುಭವಿಸಬೇಕಾದ ಪ್ರಮೇಯವೇ ಇಲ್ಲದ ಮೇಲೆ ಇನ್ನು ಅದರ ಫಲ ಚಿಂತೆಯೇಕೆ. ಆಗ ಈ ದ್ವಂದ್ವ, ಜಯಾಪಜಯ, ಮಾನಾಪಮಾನ, ಸುಖದುಃಖ ಶೀತೋಷ್ಣ ಎಲ್ಲಾದರಿಂದಲೂ ಬಿಡುಗಡೆಯಾಗುತ್ತೆ. ಆ ಫಲತ್ಯಾಗಕ್ಕೆ ಈ ದಾಸ್ಯಬುದ್ಧಿಯು ಅವಶ್ಯಕ. ರಾಮಾಯಣದಲ್ಲಿ ಬರುವಂತೆ "ದೇಹ ಬುದ್ಧ್ಯಾ ದಾಸೋಸ್ಮೀತಿ । ಜೀವಬುದ್ಧ್ಯಾತ್ತ್ವ ದಂಶಕಃ । ಆತ್ಮ ಬುದ್ಧ್ಯಾತ್ವಮೇ ವಾಹಮಿತಿ ಮೇ ನಿಶ್ಚಿತಾಮತಿಃ ॥"—ಈ ದೇಹಭಾವನೆಯಿಂದ ನಾನು ನಿನ್ನ ದಾಸ; ಈ ಜೀವ ಬುದ್ಧಿಯಿಂದ ನಾನು ನಿನ್ನಂಶ, ಈ ಆತ್ಮ ತಿಳುವಳಿಕೆಯಿಂದ ನಾನು ನೀನೇ ಇದೇ ನಿಶ್ಚಯ ಜ್ಞಾನ-ನಿಜವಾದ ನೈಜವಾದ ಸ್ಥಿತಿ. ಈ ಪಂಚಭೂತ ದೇಹವು ಹುಟ್ಟುವುದು, ಇರುವುದು, ಸಾಯುವುದು. ಅಸ್ಥಿರ, ಆದರೂ ಇದು ನಾನಲ್ಲ ನನ್ನದಲ್ಲ, ಇದು ನಿನ್ನ ದಾಸವೃತ್ತಿಗಾಗಿ ಒಂದು ಉಪಕರಣ. ಇದರಿಂದ ನಿನ್ನ ಸೇವೆ ನಡೆಯಲಿ. ಇದು ಸವೆಯಲೇ ಬೇಕು ಬಿದ್ದುಹೋಗಲೇ ಬೇಕು. ಇದೇ ನಿಜವಾದ ಮೇಲೆ ನಿನ್ನ ಸೇವೆಯಲ್ಲೇ, ಮಾಡುವ ಕೆಲಸದ ಫಲವೆಲ್ಲಾ ನಿನಗರ್ಪಿಸಿ ತ್ಯಾಗಮಾಡಿ, ಸವೆಯಲಿ, ಅದರಲ್ಲೇ ನಿರತನಾಗಿ ಬಿದ್ದುಹೋಗಲಿ-ಎಂಬ ಭಾವ ಬರಬೇಕು. ಜೀವವೂ ಅವನ ಅಂಶವೇ, ಈ ಜೀವನ ಕಾರ್ಯವೆಲ್ಲಾ, ಅವನ ಕಿಂಚಿತ್ ಭೋಗಕ್ಕಾಗಿಯೇ ಆದುದರಿಂದ ಈ ಜೀವನದ ಸಮಸ್ತ ಕರ್ಮಫಲವೂ ಅವನದೇ ಆಗಿರುವುದರಿಂದ ಅದನ್ನೂ ತ್ಯಜಿಸಬೇಕು. ಅಂತರಾತ್ಮನು ಅವನೇ, ಮಹದಾತ್ಮನು ವಾಸವಾಗಿದ್ದಾನೆ. ಅವನಿಗೆ ಹುಟ್ಟಿಲ್ಲಾ ಸಾವಿಲ್ಲಾ. ಈ ಬಿದ್ದುಹೋಗುವ ಅಸ್ಥಿರವಾದ ದೇಹದಲ್ಲಿ, ಎಲ್ಲಾ ಕಡೆ ತುಂಬಿ ಜೀವಾಂಶನಾಗಿ ಆತ್ಮ ಮನೆ ಮಾಡಿಕೊಂಡಿದ್ದಾನೆ, ಕೆಲವುದಿನ. ಆ ಅವಧಿಯಲ್ಲಿ ಏನುಮಾಡಿದರೂ, ಏನು ಫಲಿಸಿದರೂ ನಮ್ಮದೆಂಬ ಭಾವನೆಯಾತಕ್ಕೆ. ಆ ತ್ಯಾಗವನ್ನೂ

"ಆತ್ಮನ್ಯಾಸ್" ಒಂದೇ ಮನಸ್ಸಿನಿಂದ ಮಾಡಬೇಕು. ಈ ತ್ಯಾಗದಿಂದ ಇಹದಿಂದಲೇ ಬಿಡುಗಡೆ. ಇದು ಮಾಡಬೇಕಾದರೆ ಏನು ಕಷ್ಟ ? ಒಂದು ಮನೋವೃತ್ತಿ ಸಾಕು. "ಶ್ರೀ ಕೃಷ್ಣಾರ್ಪಣಮಸ್ತು" "ಇದಂ ನಮಮ" ಎಂದು ಮಾಡಿದ ಕರ್ಮ, ಫಲ, ಎಲ್ಲಾ ತ್ಯಾಗಮಾಡುವ ಭಾವನೆ ಬಂದರೆ ಸಾಕು.

ಮಾಡುವ ಕರ್ಮ ಮಾಡುತ್ತಾಯಿರಬಹುದು, ಆಗುವ ಫಲವಾಗುತ್ತಿರುತ್ತದೆ, ಯಾವಾಗ ಎರಡರಲ್ಲೂ ತಾನು ತನ್ನದೆಂಬ ಭಾವನೆ ಮಾಯವಾಗುತ್ತೋ ಆಗ ಏನಾದರೂ ಮಾಡಿ, ದುಷ್ಕರ್ಮವಾದರೂ ಎಸಗಿ ತತ್ಕಾಲಕ್ಕೆ ಅದರ ಫಲ ತಾನು ಪಡೆಯಬೇಕೆಂಬ ಕಾಂಕ್ಷೆ ಇಲ್ಲವಾಗಿ ಕೆಟ್ಟಕೆಲಸ, ಕೆಲಸಕ್ಕೆ ಬಾರದ ಕೆಲಸಗಳನ್ನೇ ಮಾಡದೆ ಯಾವಾಗಲೂ ಸತ್ಕರ್ಮ ನಿರತನಾಗುತ್ತಾನೆ. ಫಲ ಸಮರ್ಪಣೆ ಮಹದಾತ್ಮನಿಗಾಗುವುದರಿಂದ ಸತ್ಫಲ ಪ್ರತಿಫಲಿಸುವಂತಹುವನ್ನೇ ಎಸಗುತ್ತಾನೆ. ಈ ಫಲ ತ್ಯಾಗದಿಂದ ಇವನೇನು ಬೇಡವೆಂದರೂ ಫಲಹೊಂದದೇ ಇಲ್ಲಾ. ಮಹದಾತ್ಮನ ಕಲ್ಯಾಣದಲ್ಲಿ, ಸರ್ವರ ಸುಖದಲ್ಲಿ, ಜಗತ್ ಶಾಂತಿಯಲ್ಲಿ, ಇವನೂ ಕಿಂಚಿತ್ ಒಂದಂಶವಾಗಿ ಸೇರಿಯೇ ಇರುವುದರಿಂದ, ಆ ಕಲ್ಯಾಣ, ಸುಖ, ಶಾಂತಿಯಲ್ಲಿ ಭಾಗಿಯಾಗಲೇ ಬೇಕು. ಬೇಡವೆಂದರೂ ಸಾಧ್ಯವಿಲ್ಲಾ. ಆದರೆ ಈ ತ್ಯಾಗವೇ ಅಭ್ಯಾಸವಾಗಿ, ಆ ಸುಖವೂ ಇವನನ್ನು ಕಟ್ಟುವುದಿಲ್ಲಾ.

ಈ ೪ ಶ್ಲೋಕಗಳಲ್ಲಿ "ಮಯಿಬುದ್ಧಿಂ ನಿವೇಶಯ, ನಿವಸಿಷ್ಯಸಿ ಮಯ್ಯೇವ" ಎಂದು ಬುದ್ಧಿ ಪ್ರವೇಶ ಸ್ವಾಮಿಯಲ್ಲೇಮಾಡಿ, ಅವನಲ್ಲಿಯೇ ವಾಸಿಸುವುದು (ಬುದ್ಧಿ ಸಾಧ್ಯ) ಶಕ್ಯವಿಲ್ಲವಾದರೆ ಚಿತ್ತ ಸಮಾಧಾನ ಮಾಡಿ, ಸ್ವಾಮಿಯಲ್ಲೇ ಸ್ಥಿರವಾಗಿ ನಿಲ್ಲಿಸುವ ಅಭ್ಯಾಸ ಯೋಗವಾದರೂ ಮಾಡು. ಅದೂ ಅಸಮರ್ಥನಾದರೆ "ಮದರ್ಥಮಪಿ ಕರ್ಮಾಣಿ ಕುರ್ವನ್" ಅದಕ್ಕೂ ಅಶಕ್ತನಾದರೆ "ಮದ್ಯೋಗಮಾಶ್ರಿತಃ ಸರ್ವ ಕರ್ಮ ಫಲತ್ಯಾಗಂ" ಎಂದು, ಒಂದಕ್ಕಿಂತ ಒಂದು ಸುಲಭವಾಗಿದ್ದಂತೆಯೂ, ಒಂದು ಸಾಧ್ಯವಿಲ್ಲದಿದ್ದರೆ ಮತ್ತೊಂದು ಸುಲಭತರವಾದ್ದು ಮಾಡೆಂದೂ "ಕರ್ಮ ಫಲತ್ಯಾಗ"ವೇ ಅತಿ ಸುಲಭವೆಂದೂ,

ಅದನ್ನಾದರೂ ಮಾಡೆಂದು ಹೇಳಿದ ಸ್ವಾಮಿ, ಮುಂದಿನ ಶ್ಲೋಕದಲ್ಲಿ ಹಿಂದೆ ಹೇಳಿದ ಮಾರ್ಗಗಳೆಲ್ಲಕ್ಕಿಂತಲೂ ಕರ್ಮಫಲ ತ್ಯಾಗವೇ ಶ್ರೇಷ್ಠ ವೆಂದುಲ್ಲೇಖಿಸಿದ್ದಾನೆ ಸುಲಭವಾದುದೇ ಶ್ರೇಷ್ಠವಾಯಿತು.

**ಶ್ರೇಯೋ ಹಿ ಜ್ಞಾನಮಭ್ಯಾಸಾ-ಜ್ಜ್ಞಾನಾದ್ಧ್ಯಾನಂ ವಿಶಿಷ್ಯತೇ ।**
**ಧ್ಯಾನಾತ್ಕರ್ಮಫಲತ್ಯಾಗ-ಸ್ತ್ಯಾಗಾಚ್ಛಾಂತಿರನಂತರಮ್ ॥೧೨॥**

ಅಭ್ಯಾಸಕ್ಕಿಂತಲೂ ಜ್ಞಾನವು ಶ್ರೇಯವು, ಜ್ಞಾನಕ್ಕಿಂತಲೂ ಧ್ಯಾನವು ವಿಶೇಷವಾದ್ದು, ಧ್ಯಾನಕ್ಕಿಂತಲೂ ಕರ್ಮಫಲತ್ಯಾಗವು ಶ್ರೇಷ್ಠವು. ಅದರಿಂದ (ಕರ್ಮಫಲತ್ಯಾಗದಿಂದ) ನಂತರ ಶಾಂತಿ ದೊರೆಯುವುದು. ಅಭ್ಯಾಸ (ಯೋಗಭ್ಯಾಸ) ಜ್ಞಾನ, ಧ್ಯಾನ ಎಲ್ಲಕ್ಕಿಂತಲೂ ಕರ್ಮಫಲ ತ್ಯಾಗದಿಂದಲೇ ಕರ್ಮ ಫಲತ್ಯಾಗಾನಂತರವೇ ಶಾಂತಿ ದೊರೆಯುವುದು. ಆದುದರಿಂದಲೇ ಅದೇ ಯೋಗಾಭ್ಯಾಸ, ಜ್ಞಾನ, ಧ್ಯಾನ ಎಲ್ಲಕ್ಕಿಂತಲೂ ಕರ್ಮಫಲ ತ್ಯಾಗವೇ ಶ್ರೇಷ್ಠವಾದ ಶಾಂತಿ ಮಾರ್ಗ. ಅದೇ ಸುಲಭವೂ ಶ್ರೇಷ್ಠವೂ ಆದುವರಿಂದ ಅದನ್ನೇ ಸಾಧಕರೆಲ್ಲರೂ ಅಧಿಕ ಕ್ಲೇಶವಿಲ್ಲದೇ ಅನುಸರಿಸಲನುಕೂಲವಾಗುತ್ತೆ.

ಇದೊಂದು ಸ್ವಾರಸ್ಯವಾದ ವಿಷಯ ಇಲ್ಲಿ ಗ್ರಹಿಸಬೇಕಾಗಿದೆ. ಗೀತೆ ಯಲ್ಲಿ ಮೋಕ್ಷ ಸಾಧನೋಪಾಯವಿದ್ದರೂ, "ಮೋಕ್ಷ"ವೆಂಬ ಮಾತು ಅಪರೂಪ. ಎಲ್ಲಾ ಮಾರ್ಗಬೋಧನೆಯೂ ಇವೆ, ಕರ್ಮಯೋಗ, ಅಭ್ಯಾಸಯೋಗ, ಧ್ಯಾನಯೋಗ, ಭಕ್ತಿಯೋಗ, ಜ್ಞಾನಯೋಗ ಎಲ್ಲದರ ಅಂತ್ಯಮ ಧ್ಯೇಯವೂ "ಶಾಂತಿ" ಪರಮಶಾಂತಿ. ಅದನ್ನು ಹೊಂದಲೋ ಸುಗವೇ ಇಷ್ಟು ಕಷ್ಟ. ಶಾಂತಿಲಭಿಸಿತೆಂದರೆ ಇನ್ನೇನು ಸಾಧನೆಯೂ ಬೇಡಾ, ಯೋಗವೂ ಬೇಡಾ. ಅದೇ ಪರಮಾಪ್ತಿ, ಪರಮಗುರಿ. ಮಾಂಡೂಕ್ಯದಲ್ಲಿ, "ಶಾಂತಂಶಿವಂ, ಅದ್ವೈತಂ, ಚತುರ್ಥಂ" ಎಂದೇ ಆತ್ಮನ, ವಾಚಾಮಗೋಚರಕ್ಕೆ ನಿಲುಕದ ಸ್ವರೂಪ ವರ್ಣನೆಯಿದೆ. ಈ ಶಾಂತಿ ಸಿಕ್ಕಿದ ಮೇಲೆ ಪರಮಾತ್ಮನೇ ದೊರಕಿದಂತೆ. ಅದಕ್ಕಾಗಿ ನಾವು ಬೇರೆ ಕಡೆ, ಬೇರೆ ಸ್ಥಿತಿಗೆ, ಬೇರೆ ಅವಸ್ಥೆಗೆ ಹೋಗಬೇಕಾದುದೇ ಇಲ್ಲಾ.

ಅದು ನಮ್ಮಲ್ಲೇ ಇದೆ. ಅದನ್ನು ಪಡೆಯಬೇಕಷ್ಟೆ. ಸದಾಶಿವಬ್ರಹ್ಮರು 'ಅದ್ವೈತತಾರಾವಳಿ' ಸಮಾಪ್ತಿಯಲ್ಲಿ ಹೇಳಿರುವಂತೆ "ಶ್ರೀಗುರುಕಟಾಕ್ಷ ಪಾತಾಶ್ಚಿಶಿರಾಶ್ಯ ಮಯಂತು ಚಿತ್ತ ಸಂತಾಪಂ " ಎನ್ನುವಂತೆ, ಯಾವಾಗ ಗುರು ಕಟಾಕ್ಷ ಬಿದ್ದಿತೋ ಆಗ ಶಿಶಿರ ಋತುವಿನಂತೆ ಚಿತ್ತ ಸಂತಾಪವನ್ನು ಶಮಯಮಾಡುವುದು, ಆ ಶಮಯವಾದ ಮೇಲಿನ ಚಿತ್ತ ಸ್ಥಿತಿಯೇ ಶಾಂತಿ. ಅದೇ ಶಿವಂ ಸುಖವನ್ನುಂಟುಮಾಡುವುದು, ಅದ್ವೈತಂ, ಎರಡನೆಯದಿಲ್ಲದ್ದು, ಚತುರ್ಥಂ, ಮೂರು ಅವಸ್ಥೆಗಳಿಗೂ ಅತೀತವಾದುದು, ತುರೀಯಾತೀತ. ಆ ಅಂತರಂಗಸ್ಥಿತಿ ಪಡೆದಮೇಲೆ ಇನ್ಯಾವ "ಭೋಗ" ಪಡೆಯಬೇಕಾದುದೂ ಇಲ್ಲಾ. ಅದಕ್ಕೇ ಯಾವ ಸತ್ಕಾರ್ಯ, ಪೂಜೆ, ಜಪ, ಹೋಮ, ಹವನ ಮಹತ್ಕಾರ್ಯಗಳಾದ ಮೇಲೆಯೂ, "ಓಂ ಶಾಂತಿಃ ಶಾಂತಿಃ ಶಾಂತಿಃ " ಎಂದು ತ್ರಿರುಚ್ಚಾರಣೆ ಮಾಡುತ್ತಾರೆ. ಒಂದೇ ಆವರ್ತಿ ಹೇಳದೆ ತ್ರಿಪಠಣ ಮಾಡಿದರೆ ಶಾಂತಿಯೇ ಎಲ್ಲಾ ಆವರಿಸಿ ತಾಂಡವಾಡಲಿ ಎಂದು. ಈ ಅವಸ್ಥೆ ಬರುವ ಮುಂಚೆಯೇ ಏನಿದ್ದರೂ ಪರದಾಟ, ಅಶಾಂತಿ. ಈ ಅವಸ್ಥೆಯನ್ನು ಹೊಂದಲು ಇಹವನ್ನು ದಾಟಿ, ಈ ದೇಹವನ್ನು ಬಿಟ್ಟು, ಬೇರೆ ಹೋಗ ಬೇಕೆಂಬುದೇ ಇಲ್ಲಾ. ಇಹದಲ್ಲೇ, ಈ ದೇಹದಲ್ಲಿದ್ದಾಗಲೇ "ಶಾಂತಿ" ಪಡೆಯಬಹುದು. ಇದು ಮಾರ್ಪಾಟು ಕೂಡಾ ಅಲ್ಲಾ. ಇರುವ ನಿಜಾಂತರ್ಗತಿ, ಧೂಳನ್ನೆಲ್ಲಾ ಚನ್ನಾಗಿ ಒರಸಿದಮೇಲೆ ಬಿಂಬವೆಂತು ತಾನಾಗಿ ಪ್ರಕಾಶಿಸುತ್ತೊ ಆ ರೀತಿ ಅಶಾಂತಿ ಎಲ್ಲಾ, ಅಶಾಂತಿಗೆ ಕಾರಣ ಗಳನ್ನೆಲ್ಲಾ ತೊಡೆದು ಹಾಕಿದರೆ, ಒಳಗಣ ಶಾಂತಿ ಪ್ರಕಟವಾಗುತ್ತೆ. ಇದನ್ನು ಇಹದಲ್ಲೇ, ಈ ದೇಹದಲ್ಲೇ ಪಡೆದವನೇ ಜೀವನ್ಮುಕ್ತ, ಭಕ್ತ, ಸ್ಥಿತಪ್ರಜ್ಞ, ಜ್ಞಾನಿ, ದೈವೀಸಂಪತ್ತಿನವ, ಎಷ್ಟು ವಿಧದಲ್ಲಿ ಈ ಶಾಂತಿ ಸ್ಥಿತಿ, ಎಷ್ಟು ಕಡೆ ಶ್ಲಾಘಿಸಿದರೂ ಸ್ವಾಮಿಗೆ ತೃಪ್ತಿಯಿಲ್ಲಾ. ಮುಂದಿನ ಏಳು ಶ್ಲೋಕಗಳಲ್ಲಿ ಭಕ್ತನ ಲಕ್ಷಣಗಳೆಂದು ಗುಣಕಥನ ಮಾಡಿದ್ದರೂ ಮೊದಲೆರಡರಲ್ಲಿ (ಶ್ಲೋ. ೧೩, ೧೪) "ಮಯ್ಯರ್ಪಿತ ಮನೋ ಬುದ್ಧಿಯೋ ಮದ್ಭಕ್ತ" ಎಂದು ೮ನೇ ಶ್ಲೋಕದಲ್ಲಿ ಹೇಳಿದ "ಮಯಿ

ಬುದ್ಧಿಂ ನಿವೇಶಯ"ನ ಲಕ್ಷಣಗಳನ್ನು ಹೇಳಿದ್ದಾನೆ. ಇದು ಕೇವಲ ಜ್ಞಾನಿಯ ಸದ್ಗುಣಗಳಂತಿವೆ ಆ ಮೇಲಿನ ಶ್ಲೋಕ (೧೫) ರಲ್ಲಿ ಯೋಗಾಭ್ಯಾಸ ಯೋಗಭಕ್ತಿಯ ಲಕ್ಷಣಗಳನ್ನು ತೋರುತ್ತಾನೆ. ನಂತರ ೧೬ ನೇ ಶ್ಲೋಕದಲ್ಲಿ ೧೦ನೇ ಶ್ಲೋಕದಲ್ಲಿನ "ಮತ್ಕರ್ಮ ಮದರ್ಥಮಪಿಕರ್ಮಾಣಿ ಕುರ್ವನ್" ಸಿದ್ಧನಾದ ಕರ್ಮಯೋಗಿ ಲಕ್ಷಣ. ೧೧ನೇ ಶ್ಲೋಕದ "ಸರ್ವಕರ್ಮ ಫಲತ್ಯಾಗಂ" ಮಾಡುವ ಕರ್ಮ ಸಫಲ ಸಂನ್ಯಾಸಿಯ ಲಕ್ಷಣವನ್ನು ೧೭ನೇ ಶ್ಲೋಕದ "ಶುಭಾಶುಭಪರಿತ್ಯಾಗೀ" ಉಲ್ಲೇಖಿಸಿದೆ. ೧೮, ೧೯ನೇ ಶ್ಲೋಕಗಳಲ್ಲಿ ಈ ಎಲ್ಲಾ ಭಕ್ತರ "ಶಾಂತಿ"ಯ ವರ್ಣನೆಯಿದೆ. "ಭಕ್ತಿಮಾನ್ ಮೇ ಪ್ರಿಯೋ ನರಃ" ಕೊನೇ ಶ್ಲೋಕ ಫಲ ಶ್ರವಣ ಹೇಳಿದ್ದಾನೆ.

ಇದರಿಂದ ದೇವನೆಡೆಗೆ ಪ್ರಯತ್ನಪೂರ್ವಕವಾಗಿ ಧಾವಿಸುವರೆಲ್ಲಾ ಭಕ್ತರೇ, ಅವರ ಮಾರ್ಗಗಳಲ್ಲಿ, ಸಾಧನಗಳಲ್ಲಿ ಭಗವತ್ಪ್ರೇಮವೇ ಒಳಸೂತ್ರ–ಅಂತರ್ಗತ ಜೀವಾಳ.

ಎಲ್ಲಾ ಒಟ್ಟಿನಲ್ಲಿ ಸೇರಿಸಿರುವ ಈ ಸಂಗ್ರಹ ಪುಟ್ಟ ಅಧ್ಯಾಯ (ಕೇವಲ ೨೦ ಶೋಕಗಳೇ) ವನ್ನು ಮಹಾತ್ಮ ಗಾಂಧಿಯವರು ಸದಾ ತಮ್ಮ ಭಜನ ಸಭೆಗಳಲ್ಲಿ ಪಠಿಸಲು ಅಪ್ಪಣೆಮಾಡುತ್ತಿದ್ದರು–ಅಂಥಾ "ಧರ್ಮಾಮೃತಮಿದಂ."

**ಅದ್ವೇಷ್ಟಾ ಸರ್ವಭೂತಾನಾಂ । ಮೈತ್ರಃ ಕರುಣ ಏವ ಚ ।**
**ನಿರ್ಮಮೋ ನಿರಹಂಕಾರಃ । ಸಮದುಃಖಸುಖಃ ಕ್ಷಮೀ ॥೧೩॥**

**ಸಂತುಷ್ಟಃ ಸತತಂ ಯೋಗೀ । ಯತಾತ್ಮಾ ದೃಢನಿಶ್ಚಯಃ**
**ಮಯ್ಯರ್ಪಿತಮನೋಬುದ್ಧಿ-ರ್ಯೋ ಮದ್ಭಕ್ತಃ ಸ ಮೇ ಪ್ರಿಯಃ ॥೧೪॥**

ಸರ್ವಭೂತಗಳಲ್ಲೂ ದ್ವೇಷವಿಲ್ಲದವನಾಗಿಯೂ, (ಬರೀ ದ್ವೇಷ ರಹಿತನಾದರೆ ಸಾಲದೆಂದು "ಮೈತ್ರಃ" ಸೇರಿಸಿದ) ಸರ್ವಭೂತಗಳಲ್ಲೂ ಸ್ನೇಹಭಾವವುಳ್ಳವನಾಗಿಯೂ, (ಶತೃ ಮಿತ್ರರ ವಿಷಯ ಹೇಳಿದುದು ಸಾಲದೆಂದು ದೀನರಲ್ಲಿ "ಕರುಣ" ಸೇರಿಸಿದ ಸ್ವಾಮಿ–ಕರುಣಾಳು) ಸರ್ವಭೂತಗಳಲ್ಲೂ ಕರುಣಾಮಯನಾಗಿಯೂ, ಅಹಂಕಾರ ಮಮಕಾರ ರಹಿತ

ನಾಗಿಯೂ, ಎಲ್ಲಿ ತಾನು ಈ ಉತ್ಕೃಷ್ಟ ಗುಣವಂತನೆಂಬ ಭಾವ ಬರುತ್ತೋ ಎಂದು "ನಿರ್ಮಮೋ ನಿರಹಂಕಾರಃ" ಸೇರಿಸಿದ,-ಹಿಂದೆ ೨ ಅಧ್ಯಾಯ ೬೧ ನೇ ಶ್ಲೋಕದ ಉತ್ತರಾರ್ಧ ಮೊದಲಿನಲ್ಲೇ ಈ ಗುಣ ಗಳನ್ನು ಸ್ಥಿತಪ್ರಜ್ಞನ ಗುಣಕಥನ ಮುಕ್ತಾಯದಲ್ಲಿ ಹೇಳಿರುವಂತೆ,-ಸುಖ ದುಃಖಗಳಲ್ಲಿ ಸಮವರ್ತಿಯಾಗಿಯೂ, ಕ್ಷಮಾನಿಧಿಯಾಗಿಯೂ, ಯಾವಾಗಲೂ ದೇವನನ್ನು ಪಡೆಯುವ ಆಚರಣೆಯಲ್ಲಿಯೇ (ಯೋಗೀ) ನಿರತನಾಗಿಯೂ, ತನ್ನ ಆತ್ಮತತ್ವದಲ್ಲೇ ದೃಢನಂಬಿಕೆಯುಳ್ಳವನಾಗಿಯೂ (ತತ್ವಮಸಿ ಎಂಬ ದೃಢ ನಿಶ್ಚಯದಿಂದ ಅಯಂ ಆತ್ಮಾ ಬ್ರಹ್ಮವೆಂದು ಸಾಕ್ಷಾತ್ಕಾರ ಮಾಡಿಕೊಂಡು) ನನ್ನಲ್ಲಿಯೇ ಅರ್ಪಿಸಿದ ಮನೋಬುದ್ಧಿ ಯುಳ್ಳ ನನ್ನ ಭಕ್ತನು ನನಗೆ ಪ್ರಿಯನು.

ಭಗವದ್ಗೀತೆಯ ಸಹಗ್ರಂಥವಾದ ಭಾಗವತದಲ್ಲೂ ಈ ಭಕ್ತನ ಲಕ್ಷಣ ಗಳು ದಿವ್ಯವಾಗಿ ಸ್ವಾಮಿ ಪ್ರಶಂಸಿಸಿದ್ದಾನೆ.

"ಕಾಮೈರಹತಧೀ ರ್ದಾಂತಃ ಮೃದು ಶ್ಶುಚಿರಕಿಂಚನಃ
ಅನೀಹೋ ಮಿತಭುಕ್ಶಾಂತಃ ಸ್ಥಿರೋ ಮಚ್ಛರಣೋ ಮುನಿಃ
ಕೃಪಾಳುರಕೃತದ್ರೋಹ ಸ್ತಿತಿಕ್ಷು ಸ್ಸರ್ವದೇಹಿನಾಂ
ಸತ್ಯಸಾರೋಽನವದ್ಯಾತ್ಮಾ ಧೃತಿರ್ಮಾಜಿತ ಷಡ್ಗುಣಃ
ಅಮಾನೀ ಮಾನದಃ ಕಲ್ಪೋ ಮೈತ್ರಃ ಕಾರುಣಿಕಃ ಕವಿಃ
ಆಜ್ಞಾಯೈವಂ ಗುಣಾ ದೋಷಾನ್ ಮಯಾದಿಷ್ಟಾನಪಿ ಸ್ವಕಾನ್
ಧರ್ಮಾನ್ ಸಂತ್ಯಜ್ಯಯ ಸ್ಸರ್ವಾನ್ ಮಾಂ ಭಜೇತಸ ಉತ್ತಮಃ
ಜ್ಞಾತ್ವಾಽಜ್ಞಾತ್ವಾಥಯೇ ವೈ ಮಾಂ ಯಾವಾನ್ ಯಶ್ಚಾಸ್ಮಿಯಾದೃಶಃ
ಭಜಂತ್ಯನನ್ಯ ಭಾವೇನ ತೇ ಮೇ ಭಕ್ತತಮಾ ಮತಾಃ

(ಭಾ. ೧೧-೧೧, ೨೯, ೩೩)

ಕಾಮದಿಂದ ಹತನಾಗದ ಬುದ್ಧಿಯುಂಶವುಳ್ಳವನೂ, (ಇಂದ್ರಿಯ ಗಳನ್ನು ಗೆದ್ದವನು.) ಮೃದು, ಶುಚಿ ಸ್ವಭಾವದವನು, (ಜೇಡಿಮಣ್ಣಿ ನಂತೆ ಮೆತ್ತನೆಯ ಮನಸ್ಸು-ಆದರೆ ಶುಚಿ) ಆಸೆಯಿಲ್ಲದವನು, ಮಿತಾ ಹಾರಿಯು, ಶಾಂತನು, ಸ್ಥಿರನು, (ವಿಷಯಗಳಿಂದ ಅಲುಗನು), ಭಗವಚ್ಛರಣವನ್ನೇ ನಂಬಿ ತದೈಕಧ್ಯಾನದ ಮನನ ಶೀಲನು, ಮೌನ

ವಾಗಿರುವನು (ಎರಡೂ ಸೇರಿ, ಮನನ ಮೌನ ಮನಸಿನವ ಮುನಿ) ಕೃಪಾಳು, ಯಾವ ಪ್ರಾಣಿಮಾತ್ರಕ್ಕೂ ದ್ರೋಹ ಚಿಂತನ ಕೂಡಾ ಮಾಡದವನೂ, ತಾಳ್ಮೆ (ತಿತೀಕ್ಷಂ, ಸಹಿಷ್ಣುತ್ವ) ಯುಳ್ಳವನು ಸರ್ವ ಸಹನಾಭಾವವುಳ್ಳವನೂ, ಸತ್ಯನಾರನೂ, ಸತ್ಯದ ಅಂತಸ್ರಸ ಗ್ರಹಿಸಿದ, ತನ್ನ ಸಾರವೆಲ್ಲಾ ಸತ್ಯ ತುಂಬಿದವನೂ, ಅಸೂಯೆಯಿಲ್ಲದವನೂ, ಸಮತ್ವವುಳ್ಳವನೂ, ಎಲ್ಲರಿಗೂ ಎಲ್ಲ ಕಾಲದಲ್ಲೂ ಉಪಕಾರಿಯೂ, ಆಳವಾದ ಮನವುಳ್ಳವನು, ಧೈರ್ಯವಂತನೂ, ಪ್ರಮಾದ (ಮರವೆ) ವಿಲ್ಲ ದವನೂ ಸದ್ಗುಣ ಸಂಪನ್ನನೂ, ಸರಳನೂ, ಮಾನವನ್ನು ಬಯಸ ದವನೂ (ತನ್ನ ಗುಣ ಪ್ರಕಟಣೆಮಾಡಿಕೊಳ್ಳದವನೂ, ೧೩ ಅ ೭ನೇ ಶ್ಲೋ "ಅಮಾನಿತ್ವದಂಭಿತ್ವಂ") ಪರರನ್ನು ಗೌರವದಿಂದ ಕಾಣುವವನೂ (ಮಾನಂ) ಕಲ್ಪನಾಶಕ್ತಿವಂತನೂ (ಉಪದೇಶಿಸಬಲ್ಲವನೂ) ಸ್ನೇಹ ಪರನು, ಕರುಣೆಯು (ದಯಾಪಂತ), ಸಮ್ಯಕ್ ಜ್ಞಾನಿ (ಕವಿ)ಯೂ ಆಜ್ಞಾಪಿಸಲ್ಪಟ್ಟ (ವೇದಗಳಿಂದ) ಗುಣದೋಷಗಳನ್ನು ತಿಳಿದೂ, ತನ ಗಾಗಿಯೇ ಸ್ವಾಮಿಯಿಂದ ನಿರ್ದಿಷ್ಟವಾದ, ಸ್ವಧರ್ಮವನ್ನು ಕೂಡಾ ಬಿಟ್ಟು, ಸ್ವಾಮಿಯೇ ತನ್ನ ಸರ್ವಸ್ವವೆಂದು ಯಾವನು ಸ್ವಾಮಿಯನ್ನೇ ನಂಬಿ ಭಜಿಸುವನೋ ಅವನೇ ಉತ್ತಮನು. ಯಾರು ನನ್ನನ್ನು ಏನು ಫಲ ಕೊಡಬಲ್ಲವನು, ಯಾವನು, ಎಂತಹವನು, ಯಾವ ರೀತಿ ಕಾಣ ಬಹುದು ಎಂದು ತಿಳಿದಾಗಲೀ, ತಿಳಿಯದಾಗಿಯಾಗಲೀ, ಅನನ್ಯ ಭಾವದಿಂದ ಏಕಾಂತ ಭಕ್ತಿಯಿಂದ ಭಜಿಸುವರೋ ಅವರೇ ನನ್ನ ಉತ್ತಮ ಭಕ್ತರು-ಭಕ್ತ, ಭಕ್ತತರಾ, ಭಕ್ತತಮಾ-ಸರ್ವಶ್ರೇಷ್ಠ ಭಕ್ತ-ಎಂತು ಎಲ್ಲೆಲ್ಲಿಯೂ ಒಂದೇ ಸದುಪದೇಶ ನಿನ್ನದು, ಸ್ವಾಮೀ. ನಮೋ ನಮೋ.

'ಅದ್ವೇಷ್ಟಾ' ಎನ್ನುವುದರಲ್ಲಿ ಪಶುತ್ವವನ್ನು ಕಳೆದುಕೊಂಡು, 'ಮೈತ್ರಃ' ಎನ್ನುವುದರಲ್ಲಿ ಮಾನವನ ಸ್ನೇಹಗುಣ ಸಂಪಾದಿಸಿ, 'ಕರುಣ' ಎನ್ನುವುದರಲ್ಲಿ ದೈವತ್ವವನ್ನು ಪಡೆವವನಾಗ. 'ಸರ್ವಭೂತಾನಾಂ' ಎನ್ನುವುದು ಇವು ಮೂರಕ್ಕೂ ಸೇರುತ್ತೆ. ಶತೃಗಳಲ್ಲಿ ದ್ವೇಷರಹಿತವೂ, ಮಿತ್ರರಲ್ಲಿ ಸ್ನೇಹವೂ ದೀನದಲಿತರಲ್ಲಿ ಕರುಣೆಯೂ ಮಾನವನು ಸಂಪಾದಿಸಬೇಕಾದ ನಿಜಸ್ವಭಾವವಾದರೂ, ಎಲ್ಲಾ ಭೂತಗಳಲ್ಲೂ ಈ

ಮೂರನ್ನೂ ಸೇರಿಸಿ ನಡೆದರೆ ಉತ್ಕೃಷ್ಟವಾದ ನಡೆತೆಯಾಗಿ ಪರಿಣಮಿಸುತ್ತದೆ.

'ದ್ವೇಷ್ಯಾ'ದಲ್ಲಿ ಇಂಗ್ಲೀಷಿನ 'Passion' ಎನ್ನುವಪದದ ಭಾವಾರ್ಥವೆಲ್ಲಾ, ದ್ವೇಷಾ ಸೂಯೆಗಳೆಲ್ಲಾ ಸೇರಿದೆ. "Animal passions"— ಪಶುಮನೋವೃತ್ತಿಯು ಕಂಡು ಸೈರಿಸದ, ಮುಯ್ಯಿ ತೀರಿಸುವ ಕೆಳದರ್ಜೆ ಕೀಳು ಮನೋವೃತ್ತಿಗಳನ್ನು ಬಿಟ್ಟು ಪಶುತ್ವ ಹೋಗಿ ಮುಂಚೆ ಮನುಷ್ಯನಾಗಬೇಕು. ಕಳೆಕೀಳುವುದು, ಬಿತ್ತನೆಗೆ ನೆಲ ಹದಮಾಡುವುದಕ್ಕೆ ಮೊದಲು ಹೇಗೆ ಅಗತ್ಯವೋ, ಹಾಗೆ ಮನದಲ್ಲಿ ಕಲ್ಯಾಣ ಗುಣಗಳನ್ನು ನೆಡಲು ಮುಂಚೆ, ಬೆಳೆದಿರುವ ಕಳೆ 'ದ್ವೇಷ' ಕಿತ್ತೊಗೆಯು ಬೇಕು.

ದ್ವೇಷದಿಂದಲೇ ಪ್ರಪಂಚದ ಎಲ್ಲಾ ಅನರ್ಥ ಪರಂಪರೆಗಳಾಗುತ್ತವೆ. ವ್ಯಕ್ತಿ ದ್ವೇಷ, ಜನಾಂಗ ದ್ವೇಷ, ಮತ ದ್ವೇಷ, ದೇಶ ದ್ವೇಷ ಹೀಗೆಯೇ ದ್ವೇಷವು ಪಸರಿಸುವುದು. ದ್ವೇಷದಿಂದ ಅಸೂಯೆ ಹುಟ್ಟುವುದು. ದ್ವೇಷಕ್ಕೆ ಕಾರಣವಿರಬೇಕೆಂದೇ ಏನಿಲ್ಲಾ. ಅಸೈರಣೆಯಿಂದ, ಇತರರ ಅಭ್ಯುದಯ, ಸುಖಗಳನ್ನು ನೋಡಿ ಸಹಿಸಲಾರದೆಯೇ ದ್ವೇಷೋತ್ಪನ್ನವಾಗುತ್ತದೆ. ತನಗೆ ಬೇಕಾದಷ್ಟು ಭಗವಂತ ಕೊಟ್ಟಿರಬಹುದು. ಆದರೂ ನೆರೆಯುವರಿಗೇನಾದರೂ ಅನುಕೂಲವಾದರೆ ಕರುಬು.

ಜನಾಂಗ, ದೇಶ, ವರ್ಣ ದ್ವೇಷಗಳಲ್ಲಂತೂ ಅನರ್ಥಗಳು ಅಳತೆಗೇ ಅಸದಳ. ಇವೂ ವ್ಯಕ್ತಿಗಳಿಂದಲೇ ಉತ್ಪನ್ನವಾಗುತ್ತದೆ. ನಂತರ ಸಾಂಕ್ರಾಮಿಕ ಜಾಡ್ಯದಂತೆ ಸಾರ್ವಜನಿಕ ಜೀವನವನ್ನೆಲ್ಲಾ ಆಕ್ರಮಿಸಿಕೊಳ್ಳುತ್ತದೆ. ಹಿಟ್ಲರನು ಎಂತು ತನ್ನೊಬ್ಬನಲ್ಲಿ ತುಂಬಿದ್ದ ಶತೃ ದ್ವೇಷದಿಂದ, ಎರಡನೆಯ ಯುದ್ಧಕ್ಕೆ ಕಾರಣನಾದ. ಈಗಂತೂ ಆಟಂಬಾಂಬ್ ಹೈಡ್ರೋಜನ್ ಬಾಂಬ್ ಶೋಧನೆಗಳು ನಡೆದು, ದ್ವೇಷದಿಂದಲೇ ಧ್ವಂಸ ಸಹಾಯಕ ಸಾಧನಗಳನ್ನು ತಯಾರುಮಾಡಿ ಮಾನವನ ನಾಶಕ್ಕೆ ಎಡೆ ಕೊಡುತ್ತಿದೆ. ಇವೆಕ್ಕೆಲ್ಲಾ ಕಾರಣವೇನಿದೆ – ದ್ವೇಷಾಸೂಯೆಗಳಲ್ಲದೆ. ಇದ್ದ ಬುದ್ಧಿಯನ್ನೆಲ್ಲಾ ಖರ್ಚುಮಾಡಿ ಇದ್ದುದನ್ನೆಲ್ಲಾ ನಾಶಮಾಡಿಕೊಳ್ಳುವ ಬುದ್ಧಿ.

ಇದು 'ಅದ್ವೇಷ್ಟಾ' ಮಾನವನಾಗಲು, ಕೀಳುದರ್ಜೆಯ ಪಶುವೃತ್ತಿ, ಮನಸ್ಸಿನ ದ್ವೇಷವನ್ನು ತೊಡೆದು, ಮಾನವನು ಮಾಡಬೇಕಾದ ಮೊದಲನೆಯ ಪ್ರಯತ್ನವಾದುದರಿಂದ, ಸ್ವಾಮಿ ಭಕ್ತನ ಗುಣಗಳಲ್ಲಿ ಮೊದಲಾಗಿ ಕೊಟ್ಟಿದ್ದಾನೆ. ಸಂಸ್ಕೃತಿ ಕಡಮೆಯಾಗಿ, ರಾಜಸಗುಣದ ನಿತ್ಯ ಇಹ ವ್ಯವಹಾರದ ಈಗಿನ ನಡವಳಿಕೆಗಳಲ್ಲಿ ದ್ವೇಷ ಹೆಚ್ಚು ಉತ್ಪನ್ನವಾಗಲವಕಾಶವಿರುವುದರಿಂದ 'ಅದ್ವೇಷ್ಟಾ' ಅಭ್ಯಾಸ ಪೂರ್ವಕವಾಗಿ ಮನುಷ್ಯನು ಎಚ್ಚತ್ತು "ಮಯ್ಯರ್ಪಿತ ಮನೋಬುದ್ಧಿ"ಯಿಂದ ಅದು ತಲೆ ಎತ್ತದಂತೆ ಎಚ್ಚರಿಕೆಯಿಂದ ಅದನ್ನು ತುಳಿಯಬೇಕು. ದ್ವೇಷಾಸೂಯೆಗಳಂಕುರಕ್ಕೇ ಎಡೆಕೊಡಬಾರದು. ಅದು ಸರ್ವಭೂತಗಳಲ್ಲೂ, ನಮಗೆ ಕೆಡಕು ಮಾಡಲು ಪ್ರಯತ್ನಿಸುವ ಶತೃವಿನಲ್ಲೂ, ಅಭ್ಯುದಯಕ್ಕೆ ಬರುತ್ತಿರುವ ಮಿತ್ರ ಸಹೋದ್ಯೋಗಿಯಲ್ಲೂ, ಸಹಾಯಕ್ಕಾಗಿ ಇರುವ ಅಧೀನದ ಜನದ ದಿಟ್ಟತನದ ನಡುವಳಿಕೆಯಿಂದಲೂ ಯಾರಲ್ಲೂ ದ್ವೇಷ ಉತ್ಪನ್ನವಾಗದಂತೆ ಸರ್ಪ ಕಾವಲಿರಬೇಕು. ನಮಗೆ ಗೋಚರವಾಗದೇ ಅಂತರಂಗದಲ್ಲೇ (Subconscious) ಅದು ಬಂದು ಸೇರುವುದು, ಬೆಳೆಯುವುದು, ನಮ್ಮ ಕಾವಲು ತಪ್ಪಿದಾಗ ಪ್ರದರ್ಶಿಸಲೆತ್ನಿಸುವುದು.

ಅಂತೆಯೇ ಇತರ ಜನಾಂಗಗಳಲ್ಲಿ, ಮತಗಳಲ್ಲಿ, ದೇಶಗಳ ಮೇಲೆ, ಗುಪ್ತವಾಗಿ ದ್ವೇಷೋತ್ಪನ್ನವಾಗಿ, ವೃಥಾ ಯುದ್ಧಗಳಿಗೂ, ಅಸೂಯೆಗಳಿಗೂ, ವಿರುದ್ಧ ಪಂಗಡಗಳಿಗೂ ಆಸ್ಪದವಾಗುವುದು. "ಜೀವಿಸು, ಜೀವನಕ್ಕೆಡೆಕೊಡು–"Live and let live" ಎನ್ನುವ ಧ್ಯೇಯವನ್ನು ಅಭ್ಯಾಸಿಸಬೇಕು. ಸಹನತೆಯಿಂದ (Tolerence) ಎಲ್ಲರ ವರ್ತನೆಯನ್ನು ಈಕ್ಷಿಸುವ, ಅವರ ಸ್ಥಳದಲ್ಲಿ ನಮ್ಮನ್ನಿರಿಸಿಕೊಂಡು ಅವರನ್ನು ತುಲನ ಮಾಡುವ ವಿಶಾಲ ದೃಷ್ಟಿಯು ನಿತ್ಯ ವ್ಯವಹಾರದಲ್ಲಿ ಸರಳವಾಗಿ ಬಂದುಬಿಟ್ಟರೆ ವ್ಯಕ್ತಿ, ಮತ, ದೇಶ, ಜನಾಂಗ ವರ್ಣದ್ವೇಷಗಳಿಗೆ ಕಾರಣವೇ ಇರುವುದಿಲ್ಲಾ.

ಸಹನತೆಯೇ ಸರಳಜೀವನವಾಗಿಬಿಟ್ಟರೆ ದ್ವೇಷವಿಲ್ಲದುದರಿಂದ, ಮೈತ್ರಿತ್ವ–ಸರ್ವಭೂತಗಳಲ್ಲೂ ಸಹಾನುಭೂತಿತ್ವ ಬರುತ್ತದೆ. "ದೃಷ್ಟೀಂ ಮೈತ್ರಿಮಯೀಂ ಕೃತ್ವಾ, ಪಶ್ಯೇತ್ ಸರ್ವಮಿದಂ ಜಗತ್" ಎನ್ನುವಂತೆ

ಪ್ರಯತ್ನಪೂರ್ವಕವಾಗಿ ನಮ್ಮ ದೃಷ್ಟಿಯನ್ನು ಸರ್ವಭೂತಗಳಲ್ಲೂ ಸ್ನೇಹಮಯವಾಗಿ ಮಾಡಿಕೊಂಡು, ಸರ್ವ ಜಗತ್ತನ್ನೂ ನೋಡಬೇಕು. ಯಾವಾಗ ನಾವು ಎಲ್ಲದರಲ್ಲೂ, ಯಾವಾಗಲೂ, ಅಂತರ್ಗತವಾದ ಸಚ್ಚಿದಾನಂದ ಸ್ವರೂಪವನ್ನು ನೋಡುತ್ತೇವೋ ಆಗ ಸರ್ವಭೂತಗಳಲ್ಲಿನ ಸದ್ಗುಣಗಳು, ಸರ್ವಾತ್ಮನ ಕಲ್ಯಾಣಗುಣಗಳೇ ನಾವು ಗ್ರಹಿಸಿ, ಅವುಗಳಲ್ಲಿನ ದೋಷವನ್ನು ದೃಷ್ಟಿಸಿ ನೋಡುವುದಿಲ್ಲಾ. ಆಗ ಮೈತ್ರೀ ಭಾವವೇ ಇರುತ್ತದೆ.

ಒಂದು ತರಗತಿಯ ವಿದ್ಯಾರ್ಥಿಗಳ ಪಾಠ ಪ್ರವಚನಗಳ ಬರವಣಿಗೆಗಳನ್ನು (Exercises) ಶಾಲಾಗುರು ನೋಡುತ್ತಾನೆ. ಅವನು ಅವುಗಳಲ್ಲಿನ ತಪ್ಪುಗಳನ್ನು ತಿದ್ದಿ ಸರಿಮಾಡುತ್ತಾನೆ. ಅದೇ ವಿದ್ಯಾರ್ಥಿಗಳ ಪರೀಕ್ಷಾಪತ್ರವನ್ನು ಪರೀಕ್ಷಕನು ನೋಡುತ್ತಾನೆ. ಅವುಗಳಲ್ಲಿನ ತಪ್ಪು ತುಲನಮಾಡಿ, ತೇರ್ಗಡೆಯಾಗುವುದೂ ಇಲ್ಲದುದೂ ನಿಶ್ಚಯಿಸುತ್ತಾನೆ. ಅಂತೇ ನಾವೂ ದಿನಾ ನಮ್ಮನ್ನು ಶಾಲಾಗುರುವಿನಂತೆ ಪರೀಕ್ಷಿಸಿಕೊಂಡು ತಿದ್ದಿಕೊಳ್ಳಬೇಕು. ಇತರರನ್ನು ಪರೀಕ್ಷಕನಂತೆ, ಆಗಿಂದಾಗ್ಯೆ, ತುಲನ ಮಾಡಿ ಸಹವಾಸಕ್ಕೆ ಯೋಗ್ಯರೇ ತ್ಯಾಜರೇ ನಿಶ್ಚಯಿಸಬೇಕಷ್ಟೆ ; ಇತರರನ್ನು ತಿದ್ದಲು ಹೋಗಬಾರದು. ಆ ಪರೀಕ್ಷೆಯಲ್ಲಿಯೂ ಮೈತೀ ಭಾವವಿರಬೇಕು. ಸರ್ವಭೂತ ಮೈತ್ರೀ ಭಾವ ಬಹಳ ದೊಡ್ಡಗುಣ. ಸ್ನೇಹಪರವಾದ ಹೃದಯವು ಇತರರ ಕಷ್ಟಕ್ಕೆ, ಅವರ ಕಷ್ಟದ ಕಾರಣವನ್ನೂ ವಿವೇಚನೆ ಮಾಡದೆ, ಸಹಾಯಮಾಡಲು ಮುಂದೊರೆಯುತ್ತದೆ. ನೆರೆಯವರಿಗೆ ನೆರವಾಗಬೇಕಾದರೆ ಈ ಮೈತ್ರಿ ಬೇಕು. ಅವರ ಅಭ್ಯುದಯದಲ್ಲಿ ಸಂತೋಷ ಪಡಬೇಕು, ಕಷ್ಟಕ್ಕೆ ನೆರವಾಗಬೇಕು.

ಈ ಮೈತ್ರಿಯಿಂದಲೇ ಅಲ್ಲವೇ ಶ್ರೀ ಕೃಷ್ಣಸ್ವಾಮಿಯು ಪಾಂಡವರಿಗೆ ಕುರುಕ್ಷೇತ್ರದಲ್ಲಿ ನೆರವಾದುದೂ, ಅರ್ಜುನನಿಗೆ ಗೀತೋಪದೇಶ ಮಾಡಿದುದೂ.

ಕರುಣವೆನ್ನುವುದು ಒಂದು ದೇವಗುಣ. ಇದು ಹೃದಯಗುಣ. ಸರ್ವಭೂತಗಳಲ್ಲಿ ಎಷ್ಟೋ ಕಷ್ಟಗಳಲ್ಲಿ ನರಳುವ ಪ್ರಾಣಿಗಳಿರುವವು, ಅವುಗಳಲ್ಲಿ ಕರುಣೆಯು ಸಹಜವಾಗಿರಬೇಕು. ಕಪಟದಿಂದಲಾಗಲೀ

ದಾಂಭ್ಯಕ್ಕಾಗಲೀ ತೋರುವ ಸಹಾನುಭೂತಿ 'ಕರುಣ'ವಲ್ಲಾ ಅದು ಹೃದಯದಿಂದ ಹೃದಯಕ್ಕೆ ತಾಕಬೇಕು. ಷೇಕ್ಸ್‌ಪಿಯರ್ ಕವಿಯು ಕರುಣೆಯ ಗುಣವನ್ನು ಅಮೋಘವಾಗಿ ಹಾಡಿದ್ದಾನೆ. "The qualify of mercy is not strained ” ಬಲತ್ಕಾರದಿಂದ ಕರುಣಾಗುಣ ಉತ್ಪನ್ನವಾಗಲಾರದು. ಇದು ಕರುಣೆ ತೋರಿದವನನ್ನು ಕರುಣೆ ಪಡೆದವನನ್ನೂ ಆಶೀರ್ವದಿಸುತ್ತದೆ. ಇಬ್ಬರಿಗೂ ಹೃದಯ ನಿರ್ಮಲವಾಗುತ್ತದೆ. ದೇವನಿಗೆ "ಕರುಣಾಕರ" ದೇವಿಗೆ "ಕಾರುಣ್ಯಮಯಿ" ಎಂಬ ಸಂಭೋದನೆಯೇ ಕರುಣೆಯ ಹಿರಿಮೆ ತೋರುತ್ತದೆ.

ಈ 'ನಿರ್ಮಮ, ನಿರಹಂಕಾರ' ವೆನ್ನುವುದನ್ನು ಒತ್ತಿ ಉಪದೇಶಿಸುತ್ತಾನೆ ಬಾರಿಬಾರಿಗೂ ಸ್ವಾಮಿ. ನಾನು ನನ್ನದು ಎನ್ನುವುದು ಹೋಗುವುದು ಬಹಳಕಷ್ಟ ಈ ದೇಹವಿರುವವರೆಗೂ ಇರುವ ದೇಹಿಯೇ ದೇಹವೆಂದು ಭ್ರಮೆಯಿಂದ, ದೇಹಮಾಡುವ ಕೆಲಸವೆಲ್ಲಾ "ನಾನು"— ದೇಹಿ ಮಾಡಿದುದೆಂದು ಭಾವಿಸುತ್ತೇವೆ. ಈ ಚರ್ಮದ ಚೀಲದಿಂದ 'ನಾನು' ಹಾರಿಹೋಗಿ ಕೆಲಸಮಾಡುವಂತಿಲ್ಲಾ, "ನಾನು" ಎಂಬ ವಸ್ತುವು ಹಾರಿಹೋಯಿತೆಂದರೆ, ಈ ನಿರ್ಜೀವವಸ್ತು ಏನನ್ನೂ ಮಾಡಲೂ ಆರದು. ಸುಮ್ಮನೆ ನಾನು ಎನ್ನುವಭ್ರಮೆ. ನಾನುಹೋದರೂ ನನ್ನದು ಎನ್ನುವುದು ಹೋಗುವುದಿಲ್ಲಾ. ಏಕಪುತ್ರನನ್ನು ಕಳೆದುಕೊಂಡ ತಂದೆ ತಾಯಿಯರು, "ನನ್ನಮಗು" ಹೋಯಿತಲ್ಲಾ ಎಂಬ ವ್ಯಸನದಲ್ಲೇ ತಾನೆಂಬುದನ್ನೇ ಮರೆವರು; ಅದರಲ್ಲೇ ತಮ್ಮ ಸ್ವಂತ ಜೀವದಾನೆಯನ್ನೇ ತೊರೆವರು. ನನ್ನದು ಎನ್ನುವ ವ್ಯಾಮೋಹ ಹಚ್ಚಿಕೊಂಡಷ್ಟೂ ಜಾಸ್ತಿಯಾಗುತ್ತದೆ. ಎಲ್ಲೋ ಬೆಳೆದ ಹೆಣ್ಣನ್ನು ತಂದು ನನ್ನ ಹೆಂಡತಿಯೆಂದು ಮದುವೆಯಾದ ಮೂರನೇ ದಿನವೇ, ಹುಟ್ಟಿದಾಗಿನಿಂದ ಸಾಕಿದ ತಾಯಿಯು, ಅತ್ತೆಯ ದರ್ಪದಲ್ಲಿ ಸೊಸೆಗೇನಾದರೂ ಅಹಿತವಾಗಿ ಅಪ್ಪಣೆ ಮಾಡಿದರೆ, ತಾಯಿಯ ಮೇಲೆಯೇ ಅಸಮಾಧಾನವಾಗುತ್ತದೆ- ನನ್ನ ಹೆಂಡತಿ ಎಂಬಭಿಮಾನ. "ನಾನು" ಎಂಬುದು, "ದೇಹ ಬುದ್ಧ್ಯಾಶಿ ದಾಸೋಹಂ ” ಎನ್ನುವವರಿಗೆ ಇರುವುದು ಒಳ್ಳೆಯದೇ. ದೇವನ

ಸೇವೆಯನ್ನು, ನನ್ನ ಅಣ್ಣತಮ್ಮಂದಿರಂತಿರುವ ನೆರೆಹೊರೆಯ ಸೇವಾ ರೂಪದಲ್ಲಿ ನನ್ನ ದೇಹವಾದರೂ ಸವೆಸಿ, ನಾನು ಮುಂದೆಂದು ನುಗ್ಗುವ ವರೆಗೆ "ನಾನೆಂ"ಬ ಭಾವನೆಯಿರುವುದೊಳ್ಳೆಯದು. ಆ ನತ್ಸೇವೆ ಮುಗಿದು ಫಲ ಸನ್ನಿಹಿತವಾದಾಗ "ನಾನು" ಎನ್ನುವದಳಿಯಬೇಕು. ಫಲ ನನ್ನದಲ್ಲ ವೆಂಬ ಭಾವ ಬರಬೇಕು. ಸ್ವಾಮಿ ದಾಸನ ಕೈಲಿ ಕಿಂಚಿತ್ಸೇವೆ ಮಾಡಿಸಿ ಕೃತಾರ್ಥನನ್ನಾಗಿ ಮಾಡಿದರೆಂಬ ಭಾವ ಬರಬೇಕು.

ಆ 'ನಾನು' ನನ್ನದು ಎಂಬ ಭಾವನೆ ಅಳಿದು ನೀನು 'ನಿನ್ನದು' ಭಾವನೆ ಬರುವವರೆಗೆ ಅಂತರಂಗದಲ್ಲಿರುವ ಪರಮಾತ್ಮ ಬಾಗಿಲು ತೆಗೆದು ದರ್ಶನಕೊಡುವುದಿಲ್ಲಾ. ಒಳಗೇ ಕೂತ ಸಾಕ್ಷಿ ಎಲ್ಲಾ ನೋಡುತ್ತಿರು ತ್ತಾನೆ. ಯಾವ ಸತ್ಕಾರ್ಯಮಾಡಿದಾಗಲೂ, 'ಯಾರು ಮಾಡಿದುದು' ಎನ್ನುತ್ತಲೇ–ಹಾರಿ, 'ನಾನು' ಎನ್ನುತ್ತಿರುವೆವೋ, ಯಾವ ಪ್ರತಿಫಲ ಬಂದಾಗಲೂ 'ಯಾರದು' ಎಂದರೆ 'ನನ್ನದು' ಎಂದು ಫಲಾಕಾಂಕ್ಷಿ ಗಳಾಗಿರುವೆವೋ, ಅದುವರೆಗೂ, ಆ ಅಂತರಾತ್ಮ, "ಸರಿ, ಹಾಗಾದರೆ ಆ ವ್ಯಾಮೋಹದಲ್ಲೆ ಇರು" ಎಂದು ದರ್ಶನವೀಯುವುದಿಲ್ಲಾ. ಸ್ವಾಮೀ "ನನ್ನ ನಳಿಸು, ನಾ ಮಾಡುವುದೆಲ್ಲಾ ನೀನೇ ಮಾಡಿದುದು, ಫಲವೆಲ್ಲಾ ನಿನ್ನದೇ. ಮಹದಾತ್ಮನನುಭವಿಸಲಿ. ನೀನಲ್ಲದೇ ನಾನೆಲ್ಲಿ. ಅಂತರಂಗ ಸನ್ನಿಧಿ ಸಾಕ್ಷಾತ್ಕಾರ ಮಾಡಿ ನೀ ನನ್ನಲ್ಲಿ ವಾಸಿಸಿರುವವರೆಗೇ ಈ 'ನಾನು' ಎಂಬುದೊಂದು ಸೂತ್ರದ ಬೊಂಬೆ. ನಾನಲ್ಲ, ನೀನೇ"ಎಂದು ದಿನಾ ಜಪಿಸಿದಲ್ಲಿ ಅಂತರಾತ್ಮ ಸಾಕ್ಷಾತ್ತಾದಾನು. ಅವನೊಡನೆ ನಾವೂ ಒಂದಾದೇವು. ನಾನೆಂದರೆ ಅವನಿಗೆ ಅಪಚಾರ, ನೀನೆಂದರೆ ಉಪಚಾರ. "ದಯಮಾಡಿ, ಬನ್ನಿ ಕುಳಿತುಕೊಳ್ಳಿ, ತಮ್ಮ ಸ್ವಂತ ಮನೆಯೆಂದೇ ಭಾವಿಸಿ" ಎಂದು ಮನೆಗೆ ಬಂದ ಆಗಂತುಕ ಅತಿಥಿಯನ್ನೇ ಉಪಚರಿಸ ಬಲ್ಲ ನಾವು ಆ ಸಂಸ್ಕೃತಿಯ ಹಿರಿಮೆಯಲ್ಲೆ ಈ ದೇಹಾಂತರ್ಗತನಾದ ದೇವನನ್ನು ಅವನ ಗುಡಿಯೆಂದೇ ಭಾವಿಸಿ, ಇದು ನಂದಲ್ಲಾ, ವಾಸ ಮಾಡುವ ಅಂತರ್ಯಾಮಿ ವಾಸುದೇವನೇ ಎಂಬ ಉಪಚಾರದಿಂದ ದಿನಾ ಎಲ್ಲಾ ಕರ್ಮವನ್ನೂ ಏಕೆ ಮಾಡಬಾರದು. ನನ್ನದು ಎಂದು ಹೇಳಿ ಕೊಳ್ಳುವ ಈ ದೇಹ, ನನ್ನವಳು ಎಂದು ಹೇಳಿಕೊಳ್ಳುವ ನನ್ನ ಹೆಂಡತಿ,

ನನ್ನವ ಎಂದು ಹೇಳಿಕೊಳ್ಳುವ ಸೇವಕರೇ ನನ್ನ ಮಾತು ನನ್ನ ಇಚ್ಛೆಯನ್ನು ನಡೆಸದ ಮೇಲೆ, ನನ್ನದೆನ್ನುವುದೇನು ಬಂತು?

ಬೇಡವೆನ್ನುವದನ್ನೆಲ್ಲಾ ಅನುಭವಿಸಬೇಕೆನ್ನುತ್ತದೆ ದೇಹ, ಕೈಲಾಗದುದೆಲ್ಲಾ ತಂದುಕೊಡೆನ್ನುತ್ತಾಳೆ ಹೆಂಡತಿ, 'ಆಗೋಲ್ಲಾ ಮಾಡೋಕ್ಕೆ' ಎನ್ನುತ್ತಾನೆ ಸೇವಕ, ಇನ್ನು ನನ್ನದೆಂಬ ಅಧಿಕಾರವೆಲ್ಲಿಂದ ಬಂತು. ಆ ಬೊಗಳಿಕೆ ತಾನೇ ಯಾಕೆ. ನನ್ನದು ಎನ್ನುವ ಅಭಿಮಾನ ಕಮ್ಮಿಯಾಗಿ, ದೇಹ, ಭಗಿನಿ, ಸೇವಕರ ಮೇಲೆ ಕೊಂಚ ಉದಾಸೀನ ವರ್ತನೆಯಿಂದಿದ್ದರೆ, ತಾವೇ ತಾವಾಗಿ ಮಾರ್ಗಕ್ಕೆ ಬರುತ್ತವೆ. ಹೆಚ್ಚಿಕೊಂಡಷ್ಟೂ ಬೆಳೆಯುವವು ' ಮಮ, ಅಹಂ ' ಎನ್ನುವವು, ಕೊನೆಯಲ್ಲಿ. ಪ್ರಪಂಚದಲ್ಲಿರುವ ಐಶ್ವರ್ಯವಷ್ಟೂ ಒಬ್ಬನಿಗೇ ಲಭಿಸಿದರೂ ತೃಪ್ತಿಯಾಗದು ' ಮಮ 'ತ್ವ. ಹೆಚ್ಚಾಗುವುದು ' ಅಹಂ 'ತ್ವ.

ಈ 'ಸಮ ದುಃಖ ಸುಖ'ವೂ ಅನೇಕ ಬಾರಿ ಹೇಳಿದ್ದಾನೆ ಪರಮಾತ್ಮ. ಒಬ್ಬ ಧರ್ಮಪ್ರವರ್ತಕ ಅವನ ವ್ಯಾಪಾರದ ಧರ್ಮ ಮರ್ಮವನ್ನೆಲ್ಲಾ ಸಂಗ್ರಹಿಸಿ ಹೇಳಿದ "ತಕಡೀ ಕೋಲು ಸಮನಾಗಿರಲಿ" ಎಂದು ಒಂದು ಏರಬಾರದು, ಒಂದು ಇಳಿಯಬಾರದು. "ಏನೇ ಬರಲಿ ದೇವರ ದಯೆ ವೊಂದಿರಲಿ" ಎನ್ನುವ ನುಡಿಯಂತೆ ಸುಖಬರಲಿ ದುಃಖಬರಲಿ ಎಲ್ಲವೂ ದೇವನ ದಯೆಯಿಂದೇ ಅನುಭವಿಸಬೇಕು. "ಉಪ್ಪು ಇಲ್ಲದಿದ್ದರೆ ಸಪ್ಪೆ ಮಾಡಬೇಕು, ನಮ್ಮ ಪ್ರಮುಖರಿಗೇ ಒಪ್ಪಿಸಬೇಕು, ಅಪ್ರಮುಖರೂ ಒಪ್ಪದೆ ಹೋದರೆ ಸಪ್ಪೆಯೇ ತಿಂದು ಸಹಿಸಬೇಕು" ಎನ್ನುವ ದಾಸರ ಪದವೊಂದರಂತೆ, ಬಂದುದೆಲ್ಲಾ ದೇವಾರ್ಪಣಮಾಡಿ ಸುಖವನ್ನೂ ದುಃಖವನ್ನೂ, ಉಪ್ಪಾಗಲೀ ಸಪ್ಪೆಯಾಗಲೀ ಅನುಭವಿಸಿ ಸಹಿಸಬೇಕು. ಆದಕ್ಕೆ ಸುಖ ದುಃಖವ್ಯಾವುದೂ ಶಾಶ್ವತವಲ್ಲಾ, ಎಷ್ಟು ದಿನವಿದ್ದೀತು, ಪರಮಾತ್ಮನ ಇಚ್ಛೆ, ಕೃಪೆ ಎಂಬ ಭಾವನೆ ಬಂದುಬಿಟ್ಟರೆ ಸುಖದ ಏರಿಲ್ಲಾ ದುಃಖದ ಇಳಿವಿಲ್ಲಾ ಸಮನಾಗಿರುತ್ತಾನೆ.

ಅಲ್ಲದೆ ಈ ಸುಖ ದುಃಖವೆನ್ನುವುದೂ ಎಲ್ಲರಿಗೂ ಒಂದೇ ಸಮನಲ್ಲಾ, ಯಾವಾಗಲೂ ಒಂದೇ ಸಮನಲ್ಲಾ. ಇದೊಂದು ಮನೋಭಾವನೆ.

ಒಬ್ಬರಿಗೆ ಸುಖಪ್ರದವಾದುದು ಮತ್ತೊಬ್ಬರಿಗೆ ದುಃಖ ಕಾರಣವಾಗ ಬಹುದು. ಒಬ್ಬನಿಗೇ ಒಂದಾವರ್ತಿ ಸುಖದಾಯಕವಾದುದು ಇನ್ನೊಂದಾ ವರ್ತಿ ಖೇದವನ್ನುಂಟುಮಾಡಬಹುದು. ಅವನವನ ಸಂಸ್ಕೃತಿ, ಮನೋ ವೃತ್ತಿ, ಇತರ ಕಾರಣಗಳನ್ನನುಸರಿಸಿ ಸುಖ ದುಃಖಗಳುಂಟಾಗುತ್ತವೇ ಹೊರತು, ಇದೇ ಸುಖ ಇದೇ ದುಃಖವೆಂದು ಸಾರ್ವಜನಿಕ, ಸರ್ವ ಕಾಲ ನಿರ್ಣಯಮಾಡುವಂತಿಲ್ಲ. ಹೆಚ್ಚು ಹಣ ಹೆಚ್ಚು ಸೌಕರ್ಯಗಳಿರುವ ವರೇ ಸುಖಿಗಳೆಂದು ಎಷ್ಟೋ ಜನ ಇಲ್ಲದ ಜನಗಳು ಅಭಿಪ್ರಾಯ ಪಡುವರು. ಅವರ ಕಷ್ಟವೇನು ಹೇಳುತ್ತೀರಿ. ಸಂಪಾದಿಸುವುದೊಂದು ಕಷ್ಟ, ಶೇಖರಿಸುವುದೊಂದು ಕಷ್ಟ, ವಿನಿಯೋಗಿಸುವುದೊಂದು ಕಷ್ಟ, ವಿನಿಯೋಗವಾಯಿತೆಲ್ಲಾ ಎಂಬ ವೆಥೆ, ಹೆಚ್ಚಿನದಾಗಿ, ಎಲ್ಲಿ ಇಷ್ಟು ಕಷ್ಟಪಟ್ಟು ಕಾಪಾಡುತ್ತಿರುವ ಹಣ, ಸೌಕರ್ಯ, ಹೆಂಡತಿ, ಮನೆ, ಮಕ್ಕಳು ಎಲ್ಲಿ ನಷ್ಟವಾಗಿ ಬಿಡುವದೋ ಎನ್ನುವುದೇ ಸದಾ ಸಂಕಟ. ಅವಕ್ಕೆಲ್ಲಾ ಏನು ಹೆಚ್ಚು ಕಮ್ಮಿಯಾದರೂ ಅತಿ, ಮನೋವ್ಯಥೆ. ಆಗ ದಿದ್ದಾಗಲೂ, ಯಾವಾಗ ಏನಾಗಿಬಿಡುವುದೋ ಎನ್ನುವ ಚಿಂತೆ. ಹಣ, ಸೌಕರ್ಯಗಳಿಲ್ಲದವರ ಪಾಡಂತೂ ಬೇಡ, ಈಗಿನ ಕಾಲದಲ್ಲಿ. ಅಲ್ಲದೆ ಸುಖವಾಗಲೀ, ದುಃಖವಾಗಲೀ ಶಾಶ್ವತವಲ್ಲ. "ಕ್ಷಣಮಾಯಂತಿ ಸಂಪದಃ, ಕ್ಷಣಮಾಯಂತಿ ವಿಪದಃ" ಎನ್ನುವಂತೆ ಕ್ಷಣಿಕ. ಇದು ಚಕ್ರ. ಸುಖದ ಅಭಾವವೇ ಕೆಲವರಿಗೆ ದುಃಖ; ದುಃಖ ಮಗ್ನರಾಗಿರುವವರಿಗೆ ಇದುಕೊಂಚ ಕಮ್ಮಿಯಾದರೇ ಸುಖ. ಏನೂ ಇಲ್ಲದ ಕೆಲವರು ಸುಖದ ಹಂಬಲದಲ್ಲಿಯೇ ದುಃಖವನುಭವಿಸುವರು. ಆದುದರಿಂದ ಯಾವುದೂ ಶಾಶ್ವತವಲ್ಲವಾದುದರಿಂದ ಬಂದುದು ಅನುಭವಿಸಲೇ ಬೇಕಾಗಿರುವುದ ರಿಂದ ಸುಖದುಃಖದಲ್ಲಿ ಸಮನಾಗಿ ಅದರಿಂದ ಮನೋವೃತ್ತಿ ಬದಲಾಗ ದಿರುವುದೇ ಭಕ್ತನ ಲಕ್ಷಣ.

ಭಕ್ತಾಗ್ರೇಸರನಾದ ಉತ್ಪಾಲದೇವನು ಸೊಗಸಾಗಿ 'ಶಿವಸ್ತೋತ್ರವಳಿ' ಯಲ್ಲಿ "ಸಂಗ್ರಹೇಣ ಸುಖದುಃಖ ಲಕ್ಷಣಂ ಮಾಂ ಪ್ರತಿ ಸ್ಥಿತಮಿದಂ ಶೃಣು ಪ್ರಭೊ। ಸೌಖ್ಯಮೇವ ಭವತಾ ಸಮಾಗಮಃ। ಸ್ವಾಮಿನಾ ವಿರಹ ಏವ ದುಃಖ ತಾ ॥" ಎಷ್ಟು ದಿವ್ಯವಾಗಿದೆ. ಕೇಳು ಸ್ವಾಮಿಯೆ

ಎಂದು ಪ್ರಭುವಿಗೆ ವಿಜ್ಞಾಪಿಸಿಕೊಂಡಿದ್ದಾನೆ. ತನ್ನ ಸುಖದುಃಖದ ಲಕ್ಷಣ ಸಂಗ್ರಹವಾಗಿ, ಸ್ವಾಮಿಯ ಸಮಾಗಮವೇ ಸುಖ, ಸ್ವಾಮಿಯ ವಿರಹವೇ ದುಃಖ. ಆದುದರಿಂದ ನಾವ್ಯಾಕೆ ಸ್ವಾಮಿಯನ್ನಗಲಿ ದುಃಖಿಸ ಬೇಕು. ಸ್ವಾಮಿಯ ಚಿಂತನೆಯಲ್ಲಿಯೇ, ಬಂದುದನ್ನೆಲ್ಲಾ ಅನುಭವಿಸಿ ಬಿಡೋಣ ಅವನನ್ನೊಬ್ಬನನ್ನು ಬಿಡದಿದ್ದರಾಯಿತು. "ಬಂದಪ್ಪೆಲ್ಲಾ ಬರಲಿ, ಗೋವಿಂದನ ದಯವೊಂದಿರಲಿ"

"ನಾನ್ಯಾಕೆ ಬಡವನೋ, ನಾನ್ಯಾಕೆ ಪರದೇಶಿ, ಶ್ರೀಪತಿ ನೀನೆನಗೆ ಇರಲು" ಎನ್ನುವ ಶ್ರೀಪತಿಯೇ ನನ್ನ ಸಕಲೈಶ್ವರ್ಯ, ಶ್ರೀಪತಿಯೇ ನನ್ನ ತಂದೆ ತಾಯಿ ಎನ್ನುವ ಭಾವಬಂದರೆ ದುಃಖವೇ ಇಲ್ಲಾ, ಸರ್ವವೂ ಸುಖಮಯ; ನಮ್ಮನ್ನೇ ನಾವೇ ಅವನ ಮಡಿಲಿನಲ್ಲಿ ಹಾಕಿಕೊಂಡ ಮೇಲೆ.

ಕ್ಷಮೀ – ಕ್ಷಮಾನಿಧಿಯಾಗಿರುವನು. "Tooth for a tooth" ಎನ್ನುವ ಮುಯ್ಯಿಗೆ ಮುಯ್ಯಿ ಭಕ್ತನಭಂಡಾರದಲ್ಲಿಲ್ಲಾ. ಒಂದು ಕೆನ್ನೆಗೆ ಹೊಡೆದರೆ ಮತ್ತೊಂದು ಕೆನ್ನೆ ತೋರುವ ಲಕ್ಷಣ ಭಕ್ತನದು. "Forgive them my Lord, they know not what they do" ಎಂದು ತನ್ನನ್ನು ಶಿಲುಬೆಗೇರಿಸುತ್ತಿದ್ದ ಶತೃಗಳ ಪರವಾಗಿ ಕೂಡಾ, "ಅವರೇನು ಮಾಡುತ್ತಾರೇನ್ನುವರಿವು ಅವರಿಗೇ ಇಲ್ಲಾ, ಪ್ರಭೊ, ಆದಕಾರಣ ಅವರ ತಪ್ಪನ್ನೆಲ್ಲಾ ಕ್ಷಮಿಸಿ ಕಾಪಾಡು" ಎಂದು ದೇವನನ್ನು ಏಸು ಶಿಲುಬೆ ಯಿಂದಲೇ ಪ್ರಾರ್ಥಿಸಿದ್ದಾನೆ. ಗುಂಡಿನೇಟಿಟ್ಟ ಶತ್ರುವನ್ನು ನೋಡುತ್ತಾ "ಹರೆರಾಂ" ಎಂದು ಪ್ರಾಣಬಿಟ್ಟ ಧೀರ ಮಹಾತ್ಮ ಗಾಂಧಿಯಂತೆ. ಮಹಾತ್ಮರೇನಾದರೂ ಆ ಮೃತ್ಯುವಿನ ಘಾತದಿಂದ ಪಾರಾಗಿದ್ದಿದ್ದರೆ ಹಂತಕನನ್ನು ಶಿಕ್ಷಿಸಲು ಬಿಡುತ್ತಿದ್ದರೇ! ಅವನಪರಾಧಕ್ಕಾಗಿ, ಅವನ ಚಿತ್ತ ಶುದ್ಧಿಗಾಗಿ ಉಪವಾಸಮಾಡಿ, ಪ್ರಾರ್ಥಿಸಿ, ತಮ್ಮ ಚಿತ್ತವನ್ನು ಹೆಚ್ಚು ಶುದ್ಧಿಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದರೇನೋ!

ತಪ್ಪುಮಾಡುವವನು ತಾನಾಗಿ ಮಾಡುವುದಿಲ್ಲಾ; ಏನೋ ಮನೋ ವಿಕಲ್ಪದಿಂದ ತಪ್ಪೆಸಗುವನು. ಎಂಥಾ ಹಂತಕನಾದರೂ ಅವನ ಮನಸ್ಸಿನ ಸ್ಥಿತಿ ಅಲ್ಲಾಡಿ ವಿಕಲ್ಪವಾಗಿ ಮಾನವತ್ವಹೋಗಿ ದುಸ್ಥಿತಿ

ಯಲ್ಲಿದ್ದಾಗಲೇ ತಪ್ಪುಮಾಡುವವನೇ ವಿನಹ, ಆ ಸ್ಥಿತಿ ಬದಲಾಯಿಸಲು ಕೊಂಚಕಾಲ ಸಿಕ್ಕಿದರೆ, ಆ ವಿಕಲ್ಪಹೋಗಿ ಆ ಕ್ಷಣ ಮುಂದಾದಾಗ ತಪ್ಪುಮಾಡಲೇ ಆರ, ತಪ್ಪುಮಾಡುವುದೂ ಒಂದು ಮನೋರೋಗ, ಅದಕ್ಕೆ ಚಿಕಿತ್ಸೆಮಾಡಬೇಕೇ ಹೊರತು ತಪ್ಪನ್ನು ದಂಡಿಸಿದರೇನು ಪ್ರಯೋಜನ. ದಂಡದಿಂದ ಕಲ್ಲುಮನಸ್ಕನಾಗಿ. ಸಮಾಜ, ದಂಡಿಸಿದ ವ್ಯಕ್ತಿ ದ್ವೇಷ ಕಲ್ಪಿಸಿದಂತಾಗುತ್ತದ್ದಷ್ಟೇ? ಎನ್ನುವುದೊಂದು ಮನೋಶಾಸ್ತ್ರ ತತ್ತ್ವ.

ತನ್ನನ್ನು ಕೊಲ್ಲಲುಬಂದ, ಶತೃವನ್ನು, ತನ್ನವರಕೈಲಿ ಸಿಕ್ಕಿಬಿದ್ದು ಶಿಕ್ಷೆಗೊಳಗಾಗುವ ಸಂಭವ ತಪ್ಪಿಸಲೋಸುಗ ತನ್ನ ಕುದುರೆಯನ್ನೇ ಕೊಟ್ಟು, “ನಾಗಲೋಟದಿಂದ ಓಡಿಹೋಗು ಪ್ರಾಣ ಉಳಿಸಿಕೋ ಹೋಗು” ಎಂದು ಪ್ರಾಣಹೋಗುವ ಗದ್ಗದ ಕಂಠದಿಂದ ಮೊರೆಯಿಟ್ಟ ಅರಬ್ಬನ ಕ್ಷಮಾಗುಣ ಕಥನವನ್ನು ಕೇಳಿಲ್ಲವೇ. ಕ್ಷಮೆಯು ಒಂದು ನಿಧಿಯಂತೆ. ಕ್ಷಮೆ ಪಡೆದವನು ಆ ನಿಧಿ ಸಿಕ್ಕಿ ಸದ್ಗುಣ ಸಂಪತ್ತಿನವನಾಗುವನು. ಅವನಲ್ಲಿ ಮಾರ್ಪಾಡಾಗುವುದು. ಅದನ್ನುಳ್ಳ ಕ್ಷಮಾನಿಧಿಗಳಿಗೆ, ಶತ್ರುವಿನ ಭಯವೇ ಇಲ್ಲಾ. ಶತೃಗಳಿಗೂ ಅವರಿಂದ ಅಭಯ ಪ್ರಧಾನ. ಈ ವಿಶೇಷಗುಣವನ್ನು ಪ್ರಶಂಸಿಸಿ ಸ್ವಾಮಿಯು ಮುಂದಿನ ಶ್ಲೋಕ(೧೫)ವನ್ನುಲ್ಲೇಖಿಸಿದ್ದಾನೆ. ಸ್ವಾಮಿಯು ಕ್ಷಮಾನಿಧಿಯೆಂದೇ, ನಮ್ಮ ತಪ್ಪುಗಳನ್ನೆಲ್ಲಾ ಅವನಿಗೊಪ್ಪಿಸಿ ಕ್ಷಮೆ ಬೇಡುವ ಶಿವ ಮತ್ತು ದೈವಿಯ “ಕ್ಷಮಾಪರಾಧಸ್ತೋತ್ರ”ಗಳನ್ನು ಶ್ರೀಶಂಕರರು ನಮ್ಮಂಥಹ ಪಾಮರರಿಗಾಗಿ ರಚಿಸಿದ್ದಾರೆ. “ತಪ್ಪುಗಳನ್ನೆಲ್ಲಾ ನೀನೊಪ್ಪಿಕೊಳ್ಳೊ, ತಿರುಪತಿ ತಿಮ್ಮಪ್ಪ” ಎಂದು ದಾಸರೂ ಹಾಡಿರುವರು.

ಸಂತುಷ್ಟಃ – ಸದಾ ತೃಪ್ತಿಯುಳ್ಳವನಾಗಿರಬೇಕು. ಅತೃಪ್ತಿಯೋ ಮಾನವನಗುಣ-ಅವಗುಣವೆನ್ನಬಹುದು. ಅತೃಪ್ತಿಯಿಲ್ಲವಾದರೆ ಪ್ರಗತಿಗೇ ಎಡೆಯಿಲ್ಲವೆಂದು ಕೆಲವರಭಿಪ್ರಾಯ. ಅತೃಪ್ತಿಯಿಂದಲೇ, ಹೆಚ್ಚು ಪಡೆಯಲು ಪ್ರಯತ್ನಿಸಿ, ಪ್ರಗತಿ ಸಾಗಿದೆಯೆಂದು ಭಾವಿಸುವರು. ಅದು ಎಲ್ಲಿಯವರೆಗೆ ಬಂದಿದೆಯೆಂದರೆ ಎಷ್ಟಾದರೂ ತೃಪ್ತಿಯಿಲ್ಲದ್ದಾಗಿದೆ. ಶಂಕರರು ವಿವೇಕ ಚೂಡಾಮಣಿ (೫೪೪ ಶ್ಲೋಕ) ದಲ್ಲಿ

"ನಿರ್ಧನೋಽಪಿ ಸದಾ ತುಷ್ಟೋಽಪ್ಯಸಹಾಯೋ ಮಹಾಬಲಃ ।
ನಿತ್ಯತೃಪ್ತೋಽಪ್ಯಭುಂಜಾನೋಽಪ್ಯಸಮಃ ಸಮದರ್ಶನಃ ॥"

ನಿರ್ಧನನಾದರೂ ಸದಾ ತುಷ್ಟನಾಗಿಯೂ, ಅಸಹಾಯನಾದರೂ ಮಹಾಬಲನಾಗಿಯೂ, ಭೋಜನವಿಲ್ಲದಿದ್ದರೂ ನಿತ್ಯ ತೃಪ್ತನಾಗಿಯೂ, ಸಮದರ್ಶಿಯು ಸಮವಾಗಿರುವನು—ಎಂದು, ತೃಪ್ತಿಯೇ ಧನ, ಧನದಿಂದಲೇ ತೃಪ್ತಿಯಲ್ಲ, ಯಾರ ಸಹಾಯವಿಲ್ಲದಿದ್ದರೂ ಸ್ವಂತ ಆತ್ಮಬಲವೇ ಬಲ ಸಮದರ್ಶಿಗಳಿಗೆ ಎಂದು ಬ್ರಹ್ಮವಿದನ ವಿಷಯದಲ್ಲಿ ಶ್ಲಾಘಿಸಿರುವರು. ಈ ಶ್ಲೋಕವು ಆತ್ಮೋಪನಿಷತ್ತಿನಲ್ಲಿ ಬಂದಿದೆ. ಇದನ್ನೇ ಅಲ್ಲದೆ ೨೭ ಶ್ಲೋಕಗಳನ್ನು ಅಕ್ಷರಶಃ "ಆತ್ಮೋಪನಿಷತ್ತಿ"ನಿಂದ ಶ್ರೀ ಶಂಕರರು, ವಿವೇಕ ಚೂಡಾಮಣಿಗೆ "ಬ್ರಹ್ಮವಿದಃ ಸಮಾಚಾರಃ" ವಿವರಣೆಗೆ ತೆಗೆದುಕೊಂಡಿದ್ದಾರೆ. ಆತ್ಮವಂತನು, ಬ್ರಹ್ಮವಿದನು ಯಾವ ರೀತಿ ಸಮವಾಗಿ ನಡೆವಳಿಕೆಯುಳ್ಳವನೆಂದು ತಿಳಿಸುವ ಶ್ಲೋಕಗಳಿವು. ಕೇವಲ ಕೆಲವೇ ಶ್ಲೋಕಗಳುಳ್ಳವಾದರೂ ಈ "ಆತ್ಮೋಪನಿಷತ್ತು" "ಆತ್ಮಾ ಅಂತರಾತ್ಮ ಪರಮಾತ್ಮಾ-ತ್ರಿವಿಧ ಪುರುಷ "ವರ್ಣನೆಯುಳ್ಳ ದಿವ್ಯೋಪನಿಷತ್ತು.

ದೇವನು ಏನು ದಯಪಾಲಿಸಿದ್ದರೆ ಅದೇ ಮಹಾಪ್ರಸಾದವೆಂದು, ಅದರಲ್ಲೇ ಸಂತುಷ್ಟನಾಗಿ ಅದನ್ನೇ ಭೋಗಿಸಬೇಕೇ ಹೊರತು ಅತೃಪ್ತಿ ಪಡಬಾರದು. ಈಶಾವಾಸ್ಯದ ಪ್ರಥಮ ಮಂತ್ರದ ದಿವ್ಯೋಪದೇಶವನ್ನು ಗ್ರಹಿಸಿ ಅದರಂತೆ ಬರಾಬರಿ ಶತ ಸಂವತ್ಸರ ಜೀವಿಸಬೇಕು.

"ಈಶಾವಾಸ್ಯಮಿದಂ ಸರ್ವಂ, ಯತ್ಕಿಂಚ ಜಗತ್ಯಾಂ ಜಗತ್
ತೇನ ತ್ಯಕ್ತೇನ ಭುಂಜೀಥಾ ಮಾಗೃಧಃ ಕಸ್ಯಸ್ವಿದ್ಧನಂ ।"

ಜಗತ್, ಜ – ಹುಟ್ಟುವುದು, ಗತ್ – ಸಾಯುವುದು ಈ ಅಸ್ಥಿರವಾದ ಜಗತ್ತಿನಲ್ಲಿ ಏನೇನಿದೆಯೋ ಎಲ್ಲವೂ ಈಶಾವ್ಯಾಸವು. ಎಲ್ಲಾ ಪರಮಾತ್ಮನದು. ಅವನು ಏನು ಕೊಟ್ಟರೂ ಊಟಮಾಡಬೇಕು. ಪರಧನಕ್ಕಪೇಕ್ಷೆ ಪಡಬಾರದು – ಇದೇ ಸಂತೃಪ್ತಿ. ಪರರನ್ನು ನೋಡಿ ಕರುಬಿದರೆ ತೃಪ್ತಿ ಎಲ್ಲಿಯದು. ಯಾವುದು ಶಾಶ್ವತ? ಏನು ಅನುಭವಿಸಿ

ಏನಾಗಬೇಕು. ನನ್ನದೇನಿದೆ, ಎಲ್ಲಾ ಸ್ವಾಮಿಯದು. ಅವ ಕರುಣಿಸಿ ಕೊಟ್ಟದ್ದು ನನಗೆ ಬೇಕಾದಷ್ಟು ನನ್ನ ಅರ್ಹತೆಗೆ ಮೀರಿದುದು ಎನ್ನುವ ದೈನ್ಯ ಭಾವನೆ ಬೇಕು. ಶಂಕರರ "ಯೋಗ ಕ್ಷೇಮಧುರಂ" ಎನ್ನುವ ಪ್ರಾರ್ಥನೆಯಲ್ಲಿನ ಭಾವದಂತೆ ನಮ್ಮ ಯೋಗಕ್ಷೇಮ, ಶ್ರೇಯಸ್ಸು, ಎಲ್ಲಾ ಸ್ವಾಮಿಯೇ ನೋಡಿಕೊಳ್ಳುತ್ತಾನೆ, ಅವ ಕೊಡುವುದೆಲ್ಲಾ ನಮಗೊಳ್ಳೆಯದಕ್ಕೆ ಎನ್ನುವ ದೃಢ ಭಾವನೆಬೇಕು.

ಸತತಂ ಯೋಗಿ – ಯಾವಾಗಲೂ ಪರಮಾತ್ಮನನ್ನು ಪಡೆಯುವ ಪ್ರಯತ್ನದಲ್ಲಿರಬೇಕು. ಯಾವ ಮಾರ್ಗದಿಂದಲಾಗಲೀ ಅವನನ್ನು ಪಡೆಯುವ ಉತ್ಕೃಷ್ಟೇಚ್ಛೆಬೇಕು. ಜ್ಞಾನ, ಕರ್ಮ, ಯೋಗ ಯಾವು ದಾದರೂ ಸರಿಯೆ. ಭಕ್ತಿ ಮಾರ್ಗದಿಂದ ಇಚ್ಛಿಸಿದರಂತೂ ನಿರುಪಾಧಿಕ. ನಾರದ ಭಕ್ತಿ ಸೂತ್ರದಲ್ಲಿ ಭಕ್ತಿಯೋಗವನ್ನನುಸರಿಸಿದರೆ (ಸೂ. ೨೫) "ಸಾ ತು ಕರ್ಮ ಜ್ಞಾನ ಯೋಗೇಭ್ಯೋऽಪ್ಯಧಿಕತರಾ" ಭಕ್ತಿಯು ಕರ್ಮ ಜ್ಞಾನ ಯೋಗ (ಪಾತಂಜಲಿಯ ಯೋಗಾಭ್ಯಾಸ) ಎಲ್ಲಕ್ಕಿಂತಲೂ ಅಧಿಕತರವಾದುದೆಂದು ಅಭಿಪ್ರಾಯವಿದೆ. ಏಕೆಂದರೆ (ಸೂ ೨೬) "ಫಲರೂಪತ್ವಾತ್" ಇವೆಲ್ಲದರ ಫಲರೂಪವಾಗಿದೆ, ಅಥವಾ ಭಕ್ತಿ ಮಾರ್ಗವೇ ಫಲ. ಅದೇ ಯೋಗ ಆ ಸ್ಥಿತಿಯೇ ಫಲ, ಮೋಕ್ಷ. ಯಾವಾಗಲೂ ಯೋಗಸ್ಥಿತಿ, ಯಾವುದೇ ಆಗಲೀ ಕರ್ಮಯೋಗ, ಜ್ಞಾನಯೋಗ, ಚಿತ್ತವೃತ್ತಿ ನಿರೋಧಯೋಗ, ಭಕ್ತಿಯೋಗ ಯಾವು ದಾದರೂ ತನ್ನಲ್ಲಿನ ಪರಮಾತ್ಮನನ್ನು ಹೊಂದುವ ಪ್ರಯತ್ನವಾದುದರಿಂದ ಸತತ ಧ್ಯಾನವಾಗಿ ಆತ್ಮ ಪರಮಾತ್ಮೈಕ್ಯಾವಸ್ಥೆಯಲ್ಲಿಯೇ ಇಟ್ಟು, ಫಲರೂಪವಾಗಿಯೂ ಪರಿಣಮಿಸಿ, ಪರಮಾತ್ಮನಲ್ಲಿ ಲೀನವಾಗಲವಕಾಶ ವಾಗುತ್ತೆ. ಆದುದರಿಂದ ಯಾವ ಯೋಗಿಯಾದರೂ ಪ್ರಿಯನೆ.

ಹೀಗೆ ಆತ್ಮವಸ್ತುವನ್ನು ಪಡೆದಮೇಲೆ ಆ ಆತ್ಮನಲ್ಲಿ ದೃಢ ನಿಶ್ಚಯ ವುಳ್ಳವನಾಗಿ, ಸರ್ವಾತ್ಮನಲ್ಲಿಯೇ ಮನಸ್ಸನ್ನೂ ಬುದ್ಧಿಯನ್ನೂ ಅರ್ಪಿಸಿ ಯಾವಾಗಲೂ ಆನಂದ (ಸಂತುಷ್ಟ) ನಾಗಿರುತ್ತಾನೆ. ಅಂತಹ ಭಕ್ತನನ್ನು ಕಂಡರೆ ಸ್ವಾಮಿಗೆ ಪ್ರೀತಿ. ಮಹಾ ವಾಕ್ಯೋಪದೇಶಗಳ ಫಲವೂ ಅದೇ – ಯತಾತ್ಮಾ ದೃಢ ನಿಶ್ಚಯಃ.

“ತತ್ತ್ವಮಸಿ”– ಅದೇ (ಆ ಸದ್ವಸ್ತುವೇ) ನೀನಾಗಿದ್ದೀ (ನಿನ್ನಲ್ಲಿರುವ ಸದ್ವಸ್ತು) ಎಂದು ತಾನು ಬ್ರಹ್ಮಸ್ವರೂಪ (ಅಹಂ ಬ್ರಹ್ಮಾಸ್ಮಿ) ಎಂದು ನಿಶ್ಚಯಿಸಿ, ಈ ಅಂತರಾತ್ಮನೇ ಬ್ರಹ್ಮ (ಅಯಮಾತ್ಮಾ ಬ್ರಹ್ಮ) ಎಂದು ದೃಢೀಕರಿಸಿ ಆ ಮನೋ ಬುದ್ಧಿಯು ಅವನದೇ ಎಂದು ಅರ್ಪಿಸುವುದು ಪ್ರಜ್ಞಾನಂ ಬ್ರಹ್ಮ—ತಿಳಿವ ತಿಳಿವೂ ಅವನೇ. ಬುದ್ಧಿಪೂರ್ವಕವಾಗಿ ಅವನನ್ನಾಶ್ರಯಿಸುವುದು ಜ್ಞಾನಯೋಗವಾದರೂ ಒಂದಕ್ಕೊಂದು ಹೇಗೆ ನಿಕಟ ಸಂಬಂಧವಾಗಿದೆ ಎನ್ನುವುದು ವೇದ್ಯವಾಗುತ್ತೆ. ಜ್ಞಾನ ಭಕ್ತಿಗಳಲ್ಲಿ ಪ್ರತ್ಯೇಕಿಸುವಂತೆಯೇ ಇಲ್ಲಾ. ಸ್ವಸ್ವರೂಪ ತಿಳಿದು ಅದನ್ನೇ ಆಶ್ರಯಿಸುವುದು. ಹಿಂದೆ ಬಂದಿರುವ “ಆತ್ಮೈವ ಹ್ಯಾತ್ಮನೋ ಬಂಧು” (ಅ. ೬, ಶ್ಲೋ. ೫) ಎನ್ನುವುದು ಆತ್ಮಾಲಂಬನದ ತತ್ತ್ವಾರ್ಥ– ಯತಾತ್ಮಾ ದೃಢ ನಿಶ್ಚಯಃ ತನ್ನ ಆತ್ಮಬಲದಲ್ಲಿ ಅಚಲ ನಂಬಿಕೆಬಂದರೆ ಆತ್ಮ ಉದ್ಧಾರವಾಗುತ್ತಾನೆ. ಪರಾವಲಂಬನೆಯಿಲ್ಲಾ. ಮನೋ ಬುದ್ಧಿಯೆಲ್ಲಾ ಸ್ವಾಮಿಗರ್ಪಿತವಾಗುತ್ತೆ. ಬುದ್ಧದೇವನ “ಅತ್ತ ಸರಣಾ ಅನನ್ಯ ಸರಣಾ” ತತ್ತ್ವೋಪದೇಶವೂ ಈ ಯತಾತ್ಮಾ ದೃಢ ನಿಶ್ಚಯ ಮಾರ್ಗವೇ. ತನ್ನಲ್ಲಿ ತಾನು ನಂಬಬೇಕೇ ಹೊರತು ಪರರಾಶ್ರಯಾವ ಲಂಬಿಯಾಗಬಾರದು. ಯಾವಾಗ ಪರಾವಲಂಬನಬಂತೋ ಆಗ ಆತ್ಮ ಶಕ್ತಿಯಲ್ಲಿನ ವಿಶ್ವಾಸವೇ ಕಮ್ಮಿಯಾಗುತ್ತೆ. ಕ್ರಮೇಣ ಆತ್ಮ ಶಕ್ತಿಯೇ ಕುಗ್ಗುತ್ತೆ. ತನ್ನಲ್ಲೇ ತನಗೆ ಪೂರ್ಣ ವಿಶ್ವಾಸಬೇಕು, ನಂಬಿಕೆ ಬೇಕು.

**ಯಸ್ಮಾನ್ನೋದ್ವಿಜತೇ ಲೋಕೋ । ಲೋಕಾನ್ನೋದ್ವಿಜತೇ ಚ ಯಃ ।**
**ಹರ್ಷಾಮರ್ಷಭಯೋದ್ವೇಗೈ-ರ್ಮುಕ್ತೋ ಯಃ ಸ ಚ ಮೇ ಪ್ರಿಯಃ ॥**

ಯಾರ ದೆಸೆಯಿಂದ ಈ ಲೋಕವು ವ್ಯಾಕುಲಗೊಳ್ಳುವುದಿಲ್ಲವೋ, ಲೋಕಕ್ಕೆ ಯಾರು ಭಯ ಸಂತಾಪ ಪಡುವುದಿಲ್ಲವೋ ಸಂತೋಷ, ಅಸಹನ, ಭಯ, ಕ್ರೋಧ, ವ್ಯಾಕುಲತೆಗಳಿಂದ ಮುಕ್ತನೋ (ಬಿಡಲ್ಪಟ್ಟಿರುವನೋ) ಅವನು ನನಗೆ ಪ್ರಿಯನು. ಮುಕ್ತನ ಲಕ್ಷಣಗಳನ್ನೇ ತಂದುಬಿಟ್ಟ ಸ್ವಾಮಿ. ಜೀವನ್ಮುಕ್ತ ಲಕ್ಷಣಗಳು ಭಾಗವತ ಉಪನಿಷತ್ತು

ಗಳು, ವಿವೇಕ ಚೂಡಾಮಣಿ, ಯೋಗವಾಸಿಷ್ಟ ಮತ್ತಿತರೆಡೆಗಳಲ್ಲಿ ವಿಸ್ತಾರವಾಗಿ ಬರುತ್ತವೆ. ಮುಕ್ತನನ್ನು ಓರೆಗಲ್ಲಿನಲ್ಲಿ ತಿಕ್ಕಿ ಪರೀಕ್ಷಿಸಿ ನೋಡಬೇಕಾದರೆ ಅವನ ನಿತ್ಯ ವ್ಯಾಪಾರದಲ್ಲಿ–ಅಭಯ ನಿರ್ಭಯಗಳಲ್ಲಿ. ಮುಕ್ತ ಭಕ್ತನಿಂದ ಯಾರಿಗೆ ಏನೂ ತೊಂದರೆಯಿಲ್ಲಾ. ಅವನಿಗೆ ಯಾರೂ ಹೆದರುವುದಿಲ್ಲಾ. ಮಕ್ಕಳೂ, ಸಾಧು ಜಂತುಗಳೂ ಅವನಲ್ಲಿಗೆ ಧಾವಿಸಿ ಬರುವುವು. "Suffer the children to come to me" ಎಂದು ಕ್ರೈಸ್ತನು ಹೇಳಿದುದಾದರೂ ಇದೇ. ಸಾಧು ಸಜ್ಜನರ, ಮಹರ್ಷಿಗಳ ತಪೋವನದಲ್ಲಿ, ಹೇಗೆ ಪರಸ್ಪರ ವೈರವುಳ್ಳ ಜಂತುಗಳು ಕೂಡಾ, ಹುಲಿ ಹುಲ್ಲೆಗಳೂ, ಹಾವು ಕಪ್ಪೆಗಳೂ, ಪರಸ್ಪರ ವೈರ, ಘಾತಕವನ್ನು ಮರೆತು ಭಯವಿಲ್ಲದೆ, ಸಹಪಾನದಿಂದ ಜೀವಿಸುವುವೆಂದು ಕೇಳಿದ್ದೇವೆ. ಅವರಿಂದಿರಲಿ, ಅವರಿರುವ ವಾತಾವರಣದಲ್ಲೇ ಭಯ, ವೈರ, ವ್ಯಾಕುಲಗಳಿಲ್ಲಾ. ಅವರ ಆತ್ಮ ಪ್ರಭೆಯಿಂದ ಸುತ್ತಮುತ್ತಲಿನ ವಾತಾವರಣವೆಲ್ಲಾ ಶಾಂತವಾಗಿರುವುದು. ಕ್ರೂರ ಹೃದಯವನ್ನು ಕರುಣೆಯಾಗಿಮಾಡುವುದು, ಕಂಪಿತಹೃದಯವನ್ನು ಸ್ಥಿರವಾಗಿಮಾಡುವುದು. ಮುಕ್ತರೂ, ಭಕ್ತರೂ, ಎಂಥಾ ಶಕ್ತಿಯುತ ವೈರಿಬಂದರ ಕೂಡಾ ನಿರ್ಭಯರಾಗಿರುವರು. ಅವರ ಸನ್ನಿಧಿಗೆ ಎಂಥಾ ಭಯಗ್ರಸ್ಥ, ಧೀನರು ಬಂದರೂ ಹೆದರದಿರುವರು. ಇದು ಅವರ ಪ್ರಸನ್ನತೆಯ ಲಕ್ಷಣ. ಸತ್ಯ ಜ್ಞಾನಾನಂದ ಹೊಂದಿದವರು.

ಮುಕ್ತರ ಮುಖದಲ್ಲಿ ಆ ಪ್ರಸನ್ನತೆಯು ತಂಡವಾಡುವುದು. ಭಕ್ತರ ಮುಗುಳು ನಗೆಯ ಮುಖವನ್ನು ನೋಡಿ, ಹಸುಳೆಗಳೂ, ಚಿಕ್ಕಕರು ತುರುಗಳೂ ಅವರಲ್ಲಿಗೆ ಮೈದಡವಿಸಿಗೊಳ್ಳಲು ಹತ್ತಿರ ಧಾವಿಸುವುದನ್ನು ನೋಡಿದ್ದೀರಿ. ಕರೆದರೂ ಇತರರೆಡೆಗೆ ಬರುವುದಿಲ್ಲಾ. ಈ ಪ್ರಸನ್ನತೆ ಮುಖದಲ್ಲಿ ಮೂಡಬೇಕಾದರೆ, ಅಂತರಶಾಂತಿ ತುಂಬಿರಬೇಕು. ಅದು ತುಳಕಿ ಹೊರಗೆ ತಾಂಡವಾಡಬೇಕು.

ನಾರದ ಪರಿವ್ರಾಜಕೋಪನಿಷತ್ತಿನಲ್ಲಿ

"ಅಭಯಂ ಸರ್ವಭೂತೇಭ್ಯೋ ದತ್ವಾ ಚರತಿಯೋ ಮುನಿಃ ।
ನ ತಸ್ಯ ಸರ್ವಭೂತೇಭ್ಯೋ ಭಯ ಮುತ್ಪದ್ಯತೇ ಕ್ವಚಿತ್ ॥"

ಎಂದು ಪರಿವ್ರಾಜಕರ ಗುಣ ಹೇಳುವಾಗ, ಸರ್ವಭೂತಗಳಿಗೂ ಅಭಯದಾನ ಮಾಡುವಂತೆ ಮುನಿಯು ಆಚರಿಸುತ್ತಾನೆ, ಯಾವಾಗಲೂ ಸರ್ವಭೂತಗಳಲ್ಲೂ ಆತನಿಂದಲಾಗಲೀ, ಆತನಿಗಾಗಲೀ ಭಯೋತ್ಪನ್ನವಾಗುವುದಿಲ್ಲವೆಂದಿದೆ. ಬರೀ ಮನಸ್ಸಿನಲ್ಲಿ ಈ ಭಾವನೆ ಇದ್ದರೇ ಸಾಲದು. ಪ್ರತಿ ಕ್ಷಣದ ಚರಿಯಲ್ಲೂ, ಪ್ರತಿ ವ್ಯವಹಾರದಲ್ಲೂ ಅಭಯ ನಿರ್ಭಯಗಳು ಪ್ರಕಟವಾಗಬೇಕು. ಎಲ್ಲರಿಗೂ ಅವರ ನಡವಳಿಕೆಯಿಂದಲೇ ವೇದ್ಯವಾಗಬೇಕು.

ಅಧ್ಯಕ್ಷ ರಾಜೇಂದ್ರ ಪ್ರಸಾದರು ಒಂದಾವರ್ತಿ ಕಾಂಗ್ರೆಸ್ ಮುಖಂಡರಿಗೆ ಈ ವಿಷಯ ಸ್ವಾರಸ್ಯವಾಗಿ ಹೇಳಿದರು. ಕಾಂಗ್ರೆಸ್ ಮುಖಂಡರು ಲಂಚ ರುಷುವತ್ತುಗಳಿಗೂ, ಲಾಭಕ್ಕೂ, ತಮ್ಮವರಿಗನುಕೂಲಕ್ಕೂ ಕೈಹಾಕುತ್ತಾರೆಂದು ಗುಲ್ಲೆದ್ದಾಗ, ಅವರು ಇಲ್ಲವೆಂದು ಹೇಳುತ್ತಿದ್ದಾಗ "ನೀವು ನಿಮ್ಮ ನಡವಳಿಕೆಯಲ್ಲಿ, ವ್ಯವಹಾರದಲ್ಲಿ ನಿಮ್ಮ ನಿಷ್ಕಪಟತ್ವವನ್ನು ವ್ಯಕ್ತಪಡಿಸಬೇಕು. ಸುಮ್ಮನೆ ಮನಸಿನಲ್ಲಿ ಭಾವನೆಯಿದ್ದರಾಗದು. ನಿಮ್ಮ ವ್ಯವಹಾರವನ್ನವಲೋಕಿಸುವ ಜನ, ನೋಡಿದ ಮಾತ್ರದಿಂದಲೇ ನಿಮ್ಮ ನಿರ್ಮಲತ್ವ ಕಾಣುವಂತಿರಬೇಕೆಂದು" ಉಪದೇಶಿಸಿದರು.

ದೂರದಲ್ಲಿ ಆಡುವ ಹುಡುಗನೊಬ್ಬನನ್ನು 'ಬಾ, ಇಲ್ಲಿ' ಎಂದು ಕರೆಯುತ್ತೀರಿ. ನಿಮ್ಮ ಮುಖಭಾವ, ಧ್ವನಿ ನೋಡುತ್ತಾನೆ. ಕರೆ ಮಾತ್ರ ಅದೇ 'ಬಾ, ಇಲ್ಲಿ'ಯಾದರೂ, ನಗುಮುಖದಿಂದ ಮೃದು ಧ್ವನಿಯ ಕರೆಯಾದರೆ, ಹತ್ತಿರ ಓಡಿಬರುತ್ತಾನೆ. ಸಿಡುಕುಮುಖ, ಕಠಿಣ ಧ್ವನಿಯಾದರೆ, ಇತ್ತಿಡೆ ನೋಡದೆ ಓಡಿಹೋಗುತ್ತಾನೆ. ಹಸುಳೆಗಳೂ ಪ್ರಾಣಿಗಳೂ, ತಿಳಿದವರೂ ದೊಡ್ಡವರಿಗಿಂತ ಜಾಗ್ರತೆಯಾಗಿ, ಸುಲಭವಾಗಿ, ಮನುಷ್ಯನ ಅಂತರಂಗದ ಶಾಂತತೆಯನ್ನೂ, ಅವನ ಸ್ನೇಹಪರತೆಯನ್ನೂ ನೋಡಿದೊಡನೆಯೇ ಗ್ರಹಿಸುವುವು. ಶಾಂತರಾದವರಲ್ಲಿ ಕರೆಯದೆ ಧಾವಿಸುವುವು. ಅಶಾಂತರು ಎಷ್ಟು ಗೋಗರೆದರೂ ಹೋಗವು. ಈ ಶಾಂತ ಪ್ರತಿಭೆ ಭಕ್ತನ ಲಕ್ಷಣ, ಮುಕ್ತನ ನೈಜಗುಣ.

ನಮ್ಮ ಕಾಲದಲ್ಲೇ ನಾವು ಮಹಾತ್ಮ ಗಾಂಧಿಯವರಲ್ಲಿ ಈ ಶ್ಲೋಕಾರ್ಥವನ್ನು ಪೂರ್ಣವಾಗಿ ಕಂಡಿದ್ದೇವೆ. ಯಾರೂ ಅವರಿಂದ ವ್ಯಾಕುಲ

ಹೊಂದಿಲ್ಲಾ. ಯಾರೊಡನೆ ಸ್ವಾತಂತ್ರ್ಯಕ್ಕಾಗಿ ಹೋರಾಡಿದರೋ, ಆ ಆಂಗ್ಲರನ್ನು ಕೂಡಾ ಅವರು ವ್ಯಾಕುಲಪಡಿಸುತ್ತಿರಲಿಲ್ಲಾ, ಪ್ರೀತಿಸುತ್ತಿದ್ದರು; ಅವರಿಗೆ ಅವರ ವೈರಿಗಳಲ್ಲಿ ಕೂಡ ಭಯವಿರಲಿಲ್ಲಾ. ವೈರಿಗಳಿದ್ದರೆ ತಾನೆ ಅವರಿಗೆ; ಶತೃ, ವೈರಿ ಎನ್ನಲೇಬಾರದು ಪ್ರತಿಕಕ್ಷಿಗಳೆನ್ನುವುದೇ ಸರಿಯಾದ, ಪದ ಇದು ಅವರ 'ಅಹಿಂಸಾ' ತತ್ವದ ಫಲ. ಮುಕ್ತರಿಗೆ ಯಾವಾಗ ಯಾರಲ್ಲೂ ಹಿಂಸಾಭಾವವೇ ಇರುವುದಿಲ್ಲವೋ, ಎಲ್ಲರನ್ನೂ ಯಾವಾಗ ಪ್ರೀತಿಸುತ್ತಾರೋ, ಆಗ ಯಾರು ತಾನೆ ಅವರಿಗೆ ಭಯಪಡುತ್ತಾರೆ. ಇದೇ ಅಭಯ. ಅತಿಕ್ರಮಿಸಿ ನಡೆದರೂ, ತಪ್ಪಿ ನಡೆದರೂ, ಪ್ರೀತಿಯಿಂದ ತಿದ್ದುತ್ತಾರೆಯೋ ಹೊರತು, ದಂಡಿಸುವುದಿಲ್ಲವೆನ್ನುವ ಧೈರ್ಯ ಅವರನುಯಾಯಿಗಳಿಗಿತ್ತು. ಹತರಾಗಲು ಮುನ್ನ, ಎದುರಿಗೆ ತುಪಾಕಿ ಹಿಡಿದು ಗುಂಡು ಹಾರಿಸಿದ ವ್ಯಕ್ತಿಯನ್ನು ಕಂಡಾಗಲೂ ನಿರ್ಭಯರಾಗಿದ್ದರು. ನವಕಾಲಿ ಪ್ರವಾಸದಲ್ಲಿ, ಅಶಾಂತ ವಾತಾವರಣದಲ್ಲಿ, ದ್ವೇಷ ಅಸೂಯೆಯು ತಾಂಡವಾಡುತ್ತಿದ್ದಾಗ, ದುಃಖ ಶೋಕಗಳಲ್ಲಿ ಉದ್ವೇಗಗೊಂಡ ಜನ ಸಂದಣಿಯ ಮಧ್ಯೆ, ನಿರ್ಭಯರಾಗಿ, ಅರಕ್ಷಕರಾಗಿ, ದುಃಖ ಶೋಕ ಶಮನಮಾಡುತ್ತಾ, ಉದ್ವೇಗಿಗಳಿಗೆ ಬುದ್ಧಿ ಹೇಳುತ್ತಾ, ಶಾಂತಿ ವಾತಾವರಣ ಕಲ್ಪಿಸಲು ಅಭಯ ಹಸ್ತದಿಂದ ಓಡಾಡಲಿಲ್ಲವೇ ? ತಮ್ಮ ಜೀವನದಲ್ಲಿ, ಮರಣದಲ್ಲಿ ಈ ಶ್ಲೋಕ ಪೂರ್ವಾರ್ಧದ ಅರ್ಥವನ್ನು ಪೂರ್ಣವಾಗಿ ತೋರಿದರು ಮಹಾತ್ಮರು.

ಕಠೋಪನಿಷತ್ತಿನಲ್ಲಿ

"ತದ್ಬ್ರಹ್ಮಾನಂದ ಮದ್ವಂದ್ವಂ ನಿರ್ಗುಣಂ ಸತ್ಯ ಚಿದ್ಘನಂ ।
ವಿದಿತ್ವಾ ಸ್ವಾತ್ಮರೂಪೇಣ ನಬಿಭೇತಿ ಕುತಶ್ಚನ ॥"

ಆನಂದ ದ್ವಂದ್ವರಹಿತ, ನಿರ್ಗುಣ, ಸತ್ಯ ಚಿದ್ಘನ, ಸ್ವಾತ್ಮರೂಪವನ್ನು ತಿಳಿದವನು ಯಾವುದಕ್ಕೂ ಭಯಪಡುವುದಿಲ್ಲಾ—ಪೂರ್ಣ ಆತ್ಮಜ್ಞಾನವೇ ನಿರ್ಭಯಕ್ಕೆ ಕಾರಣವೆಂದು ಸಾರಿದ್ದಾರೆ. "ವಿಜಾನಾತಿ ತದಾತಸ್ಯ, ಭಯಂ ಸ್ಯಾನ್ನಾತ್ರ ಸಂಶಯಃ ।" ತದಾತಸ್ಯ—"ನಿರ್ಭೇದಂ ಪರಮಾದ್ವೈತಂ ವಿನ್ದತೇಚ ಮಹಾಯತಿಃ । ತದೇವಾಭಯಮಿತ್ಯಂತಂ

ಕಲ್ಯಾಣಂ ಪರಮಾನ್ಮೃತಂ"–ತಿಳಿದ ಮೇಲೆ ಮಹಾಯತಿ, ಕಲ್ಯಾಣ ಪರಮಾನ್ಮೃತದಲ್ಲಿ ಅಭಯನಾಗಿರುತ್ತಾನೆ (ಕಠ) ಬೃಹದಾರಣ್ಯ (ಅ ೩, ಬ್ರಾ ೪, ಶ್ಲೋ ೨) ದಲ್ಲಿ "ಸೋಽಬಿಭೇತ್ತಸ್ಮಾದೇಕಾಕೀ ಬಿಭೇತಿ, ಸಹಾಯಮೀ ಕ್ಷಾಂಚಕ್ರೇಯನ್ಮದನ್ಯನ್ನಾಸ್ತಿ, ಕಸ್ಮಾನ್ನುಬಿಭೇಮೀತಿ, ತತ ಏವಾಸ್ಯಭಯಂ, ವೀಯಾಯ ಕಸ್ಮಾದ್ಧ್ಯ ಭೇಷ್ಯತ್, ದ್ವಿತೀಯಾದ್ವೈ ಭಯಂ ಭವತಿ." ಎಂದು ಈ ಭಯಕ್ಕೆ ಕಾರಣವನ್ನು ತರ್ಕಮಾಡಿ ನಿಶ್ಚಯಿಸಿದ್ದಾರೆ. ನನ್ನ ವಿನಾ ಬೇರೆ ಯಾವುದೂ ಇಲ್ಲದಿರುವಾಗ ನಾನ್ಯಾವುದಕ್ಕೆ ಹೆದರಿದ್ದೇನೆ? ಎಂಬ ವಿವೇಚನೆಯಿಂದ ಎರಡನೇ ವಸ್ತುವಿನಿಂದಲೇ ಭಯ ಎಂದು ನಿರ್ಧರಿಸಿದ್ದಾರೆ. ಅದ್ವೈತದಲ್ಲಿ ಬೇರೆ ಇಲ್ಲದೆ, ಎರಡನೆಯದೇ ಇಲ್ಲದೆ, ಇರುವಿಕೆಯಲ್ಲಿ ಅಭಯ, ನಿರ್ಭಯ, ಯಾರು ಹೆದರಬೇಕಾದುದಿಲ್ಲಾ "ಏಕಮೇವಾದ್ವಿತೀಯಂ."

ಪ್ರಾಣೋಗ್ನಿಹೋತ್ರೋಪನಿಷತ್ತಿನಲ್ಲಿ "ಅಭಯಂ ಸರ್ವ ಭೂತೇಭ್ಯೋ ನಮೋ ಭೀತಿಃ ಕದಾಚನೇತಿ। ವಿಶ್ವೋ ವೈಶ್ವಾನರೋ ವಿಶ್ವರೂಪಂತ್ವಯಾ ಧಾರ್ಯತೆ ॥" ವಿಶ್ವ, ವೈಶ್ವಾನರ, ವಿಶ್ವರೂಪಧಾರಣ ಮಾಡಿದವನಿಗೆ, ಸರ್ವಭೂತಗಳಲ್ಲೂ ಅಭಯವೂ, ಯಾವುದರಲ್ಲಿಯೂ ಭಯ ಇಲ್ಲದಿರುವಿಕೆಯೂ ಉಂಟಾಗುತ್ತದೆ ಎಂದಿದ್ದಾರೆ.

ಗಣಪತ್ಯುಪನಿಷತ್ತಿನಲ್ಲಿ "ಬ್ರಹ್ಮಾದ್ಯಾಚರಣಂ ವಿದ್ಯಾ, ನ್ನಬಿಭೇತಿ ಕದಾ ಚನೇತಿ।" ಬ್ರಹ್ಮಾದ್ಯಾಚರಣೆ ತಿಳಿದವನು ಯಾವಾಗಲೂ ಯಾವುದಕ್ಕೂ ಭಯ ಪಡುವುದಿಲ್ಲವೆಂದಿದೆ.

ಈ ಭಯಬರಬೇಕಾದರೆ ಯಾವಾಗಲೂ "Inferiority complex" ಅಯೋಗ್ಯತಾ ಭಾವದಿಂದ. ಪ್ರಧಾನಿ ನೆಹ್ರುರವರೂ ಜನಾಂಗಗಳ ಯುದ್ಧಕ್ಕೂ, ಯುದ್ಧ ಸಲಕರಣೆ, ತರಪೇತಿಗೂ, ಅಣುಬಾಂಬು ತಯಾರಿಕೆಗಳಿಗೂ "Fear complex" ಈ ಭಯದ ವಾಸನೆಯೇ ಕಾರಣವೆಂದಿದ್ದಾರೆ, ಈ ಭಯ ಬರಬೇಕಾದರೂ ಏನಾದರೂ ಅಸಂಸ್ಕೃತ ನಡತೆ ಭಾವನೆಗಳಿಂದಲೇ.

ಅಲ್ಲದೆ ನಾವು ಒಂದು ತಪ್ಪು ಮಾಡಿದರೇ ಭಯ, ಇಲ್ಲವಾದರೆ ನಿರ್ಭಯ. ಯಾರಿಗೆ ಯಾಕೆ ಹೆದರಬೇಕು. ಅಭಯ ಯಾರೂ ಹೆದರ

ದಿರುವುದು ವ್ಯಕ್ತಿಯ ನರಳತೆಯನ್ನು ತೋರುತ್ತದೆ. ಸ್ವಭಾವಸಾನುಭವ ಜೀವಿ. ಹಿಟ್ಲರ್, ಮುಸುಲೋನಿ ಮುಂತಾದವರು ಗುಪ್ತ ಅಂಗರಕ್ಷಕರನ್ನಿಟ್ಟುಕೊಂಡು ತಮ್ಮಂತೆ ಇನ್ನೊಬ್ಬ ವ್ಯಕ್ತಿಯೂ ವ್ಯವಹರಿಸುವಂತೆ (Double) ಮಾಡಿ, ಇತರರ ಭಯದಿಂದ ಜೀವಿಸುತ್ತಿದ್ದರು. ಏಕೆಂದರೆ ತಮ್ಮನ್ನು ಕಂಡರೆ ಎಲ್ಲರೂ ನಡುಗಬೇಕೆಂದು ಆಟೋಪಕಟ್ಟಿ ದರ್ಪ ಜೀವನ ನಡೆಸುತ್ತಿದ್ದರು. ಪೂರ್ವದಲ್ಲಿ ರಾಕ್ಷಸರೂ ಅಂತೆಯೇ. ಎಲ್ಲರನ್ನೂ ಹೆದರಿಸಿ ಜೀವನ. ಆ ರೀತಿ ಜೀವಿಸುವವರಿಗೆ ಯಾರು ಯಾವಾಗ ಏನು ಮಾಡುತ್ತಾರೋ ಎಂಬ ಭಯ. ಅಭಯ ನಿರ್ಭಯಗಳು ಕಾರ್ಯ ಪ್ರತಿ ಕಾರ್ಯಗಳಂತೆ (Action & reaction) ಈ ರೀತಿ ಭಯ ಸಂತಾಪಗಳಿಲ್ಲದವನು, ಹರ್ಷ, ಅಸಹನತೆ, ಭಯ, ಕೋಪ ಯಾವುದರಿಂದಲೂ ಏರಿಳಿತವಿಲ್ಲದೆ ಅವುಗಳ ಹೊಡೆತಕ್ಕೆ ಸಿಕ್ಕದೆ, ಅವುಗಳಿಂದ ಬಿಡುಗಡೆ ಹೊಂದುವನು. ಆ ರೀತಿ ಬಿಡುಗಡೆ ಹೊಂದಿದವನು ಸ್ವಾಮಿಗೆ ಪ್ರಿಯನು. ಮಹೋಪನಿಷತ್ತಿನಲ್ಲಿ

"ಆಪತತ್ಸು ಯಥಾ ಕಾಲಂ ಸುಖ ದುಃಖೇಷ್ವನಾರತಾಃ ।
ನ ಹೃಷ್ಯತಿ ಗ್ಲಾಯತಿ ಯಃ ಸ್ವಜೀವನ್ಮುಕ್ತ ಉಚ್ಯತೇ ।
ಹರ್ಷಾಮರ್ಷ ಭಯ ಕ್ರೋಧ ಕಾಮ ಕಾರ್ಪಣ್ಯ ದೃಷ್ಟಿಭಿಃ ।
ಸಪರಾ ಮೃಶ್ಯತೇ ಯಾಂ ತಸ್ಸ ಜೀವನ್ಮುಕ್ತ ಉಚ್ಯತೇ ॥"

ಎಂದು ಆಪತ್ತು ಸ್ಸುಖ ಬಂದಾಗ ಹರ್ಷ, ದುಃಖವಿಲ್ಲದವ, ಹರ್ಷಾಮರ್ಷ ಭಯ ಕ್ರೋಧ ಪರವಶನಾಗದವ ಜೀವನ್ಮುಕ್ತನೆಂದು ಹೇಳಿದೆ. ಜೊತೆಗೆ ಕಾಮ, ಕಾರ್ಪಣ್ಯ ದೃಷ್ಟಿಯನ್ನು ಸೇರಿಸಿದ್ದಾರೆ. ಸಂತೋಷ, ಭಯ, ಅಸಹನೆ, ಉದ್ವೇಗಗಳ ಹೊಡೆತದ ತಾಡನದಿಂದ ಕದಲದವನಿಲ್ಲಾ. ಅವಕ್ಕೆ ಪರವಶರಾಗದೇ ಗಾಂಭೀರ್ಯದಿಂದನುಭವಿಸಬೇಕು. ತನ್ನ ಮೇಲೆ ಹತೋಟಿಯಿದ್ದವನಿಗೆ ಹರ್ಷವಾಗಿದೆಯೋ, ಭಯವಾಗಿದೆಯೋ ಎನ್ನುವುದು ಅವನನ್ನು ನೋಡಿದರೂ ಗೋಚರವಾಗದು. ತನ್ನ ಮೇಲೆ ತಾನೇ ಕಾವಲಿದ್ದು, ಏಳುವ ಎಲ್ಲಾ ವಿಕಾರಗಳಿಗೂ ತಡೆಗಟ್ಟಿ ಪರವಶನಾಗದೇ ಅನುಭವಿಸುತ್ತಾನೆ – ಇದು ಮುಕ್ತ ಚಿನ್ಹೆ.

ವರಹೋಪನಿಷತ್ತಿನಲ್ಲಿ ಈ ಶ್ಲೋಕವು ಕೊನೆ ಪಾದ ಪಿನಾ ಅಕ್ಷರತಃ

"ಯಸ್ಮಾನ್ನೋ ದ್ವಿಜತೇ ಲೋಕೋ, ಲೋಕಾನ್ನೋ ದ್ವಿಜತೇ ಚಯಃ ।
ಹರ್ಷಾಮರ್ಷ ಭಯೋನ್ಮುಕ್ತ ಸ ಜೀವನ್ಮುಕ ಉಚ್ಯತೇ ॥"

ಎಂದು ಜೀವನ್ಮುಕ್ತ ಲಕ್ಷಣಗಳಲ್ಲಿ ಬರುತ್ತದೆ, ಮುಂದೆಯೇ "ಪ್ರಜಾ ಹಾತಿಯ ದಾಕಾ ಮಾನ್ ಸರ್ವಾನ್ಪಿತ್ರ ಗತಾಮುನೇ .... " ಎನ್ನುವ ಶ್ಲೋಕವೂ ಬರುತ್ತದೆ. ಹರ್ಷಭಯೋದ್ವೇಗಗಳು. ಕಾಮಿಯ ಲಕ್ಷಣಗಳು; ಮುನಿಯು, ಮುಕ್ತನು ಅವುಗಳನ್ನೆಲ್ಲಾ ಗೆದ್ದಿರುತ್ತಾನೆ.

ತೈತ್ತರಿಯೋಪನಿಷತ್ತಿನ ಆನಂದವಲ್ಲಿಯ ೯ನೇ ಅನುವಾಕದಲ್ಲಿ,

"ಆನನ್ದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನೇತಿ ।
ಏತಗ್ ಹಾವಾವನ ತಪತಿ ।
ಕಿಮಹಗ್ಂ ಸಾಧೂನಾ ಕರವಂ ।
ಕಿಮಹಂಪಾಪ ಮಕರವಮಿತಿ ॥"

ಬ್ರಹ್ಮಾನಂದವನ್ನು ತಿಳಿದವನು ಯಾವುದಕ್ಕೂ ಹೆದರುವುದಿಲ್ಲ. ಸಾಧು ಕಾರ್ಯ ಮಾಡಲಿಲ್ಲ ಪಾಪ ಮಾಡಿದೆ ಎಂದು ಅವನು ಆ ಚಿಂತೆಯಿಂದ ತಪಿಸುವುದಿಲ್ಲ ಆದಕ್ಕಾಗಿ ಯಾವುದಕ್ಕೂ ಎಂದು ಬ್ರಹ್ಮವಿದನನ್ನು ಮುಕ್ತನನ್ನು ಶ್ಲಾಘಿಸಿದ್ದಾರೆ.

ಬೃಹದಾರಣ್ಯ (೪, ೨, ೪ ಶ್ಲೋ) ದಲ್ಲಿ "ಅಭಯಂ, ವೈ, ಜನಕ ಪ್ರಾಪ್ತೋಸಿತಿ, ಹೋವಾಚ ಯಾಜ್ಞವಲ್ಕ್ಯಃ" ಎಂದು "ನವಪನೇತಿ ನೆತ್ಯಾತ್ಮಾ" ಆತ್ಮ ಅದಲ್ಲ, ಇದಲ್ಲ ಎಂದು ನಿಷೇಧಗುಣಗಳನ್ನೆಲ್ಲಾ ಹೇಳಿ, ಅದು ತಿಳಿದುದರಿಂದ "ಅಭಯ ಪ್ರಾಪ್ತಿಯಾಗಿದೆ ನಿನಗೆ ಜನಕ ಮಹಾರಾಜ"ನೆಂದು ಯಾಜ್ಞವಲ್ಕ್ಯ ವಚನವಿದೆ. "ನಮಗೆಲ್ಲಾ ಅಭಯ ವನ್ನು ವಿದಿತಮಾಡುವ ಭಗವಾನನಾದ ನಿನಗೆ ಅಭಯವಾಗಲಿ, ನಮಸ್ತೆ" ಎಂದು ವೈದೇಹಿ ಜನಕನು ಗುರುವಿಗೆ ನಮಸ್ಕಾರ ಮಾಡು ತ್ತಾನೆ.

ಇವೆರಡರಿಂದ ವಿದೇಹಮುಕ್ತರಿಗೆ ಆನಂದಗುಣ ಬ್ರಹ್ಮಪ್ರಾಪ್ತಿಯಿಂದ ಇತರರ ಭಯವಿಲ್ಲದಿರುವಿಕೆಯೂ, ಇತರರಿಗೆ ಅಭಯವೂ ಬ್ರಹ್ಮಜ್ಞಾನದಿಂದಲೇ ಉಂಟಾಗುತ್ತೆ. ಆ ಸ್ಥಿತಿ ತಲುಪಿದವರು ಭಗವತ್ಪ್ರಿಯರಾಗಿ ಅವನಲ್ಲೇ ಇರುವರು.

ಅಸಹನತೆಯಿಂದ ಮುಕ್ತನಾಗುವುದು ಒಂದು ದೊಡ್ಡ ಸಾಧನ. ಎಲ್ಲರ ಪುರೋಭಿವೃದ್ಧಿಯಲ್ಲಿಯೂ, ಎಲ್ಲರ ಸುಖದಲ್ಲಿಯೂ ಸಂತೋಷಿಸಬೇಕು. ನಮಗೆ ಎದುರಾಳಿಗಳ ಪಕ್ಷದಲ್ಲಿ ಸಹನತೆಯಿರಬೇಕು. ಅವರಭಿಪ್ರಾಯಕ್ಕೆ ಮನ್ನಣೆಬೇಕು.

**ಅನಪೇಕ್ಷಃ ಶುಚಿರ್ದಕ್ಷ-ಉದಾಸೀನೋ ಗತವ್ಯಥಃ ।**
**ಸರ್ವಾರಂಭಪರಿತ್ಯಾಗೀ । ಯೋ ಮದ್ಭಕ್ತಃ ಸ ಮೇ ಪ್ರಿಯಃ ॥೧೬॥**

ಅಪೇಕ್ಷಾರಹಿತನಾಗಿಯೂ, ನಿರ್ಮಲನಾಗಿಯೂ, ದಕ್ಷತೆಯುಳ್ಳವನಾಗಿಯೂ, ವಿಷಯಗಳಲ್ಲಿ ಉದಾಸೀನತೆಯುಳ್ಳವನಾಗಿಯೂ, ವ್ಯಥೆ ಇಲ್ಲದವನಾಗಿಯೂ, ಎಲ್ಲಾ ಆರಂಭವನ್ನೂ ಪರಿತ್ಯಾಗಮಾಡಿದವನಾಗಿಯೂ ಇರುವ ನನ್ನ ಭಕ್ತನು ನನಗೆ ಪ್ರಿಯನು.

ಅನ್ನಪೂರ್ಣೋಪನಿಷತ್ತಿನಲ್ಲಿ

"ಸರ್ವ ಕರ್ಮ ಪರಿತ್ಯಾಗೀ. ನಿತ್ಯತೃಪ್ತೋ ನಿರಾಶಯಃ ।
ನ ಪುಣ್ಯೇನ ಚ ಪಾಪೇನ ನೇತರೇಣ ಚ ಲಿಪ್ಯತೇ ॥"

ಸರ್ವಾರಂಭವನ್ನೂ ಪರಿತ್ಯಜಿಸಿ, ನಿತ್ಯತೃಪ್ತನಾಗಿ ಯಾರ ಆಶ್ರಯವನ್ನೂ ಮಾಡದೆಯಿರುವನಿಗೆ ಪುಣ್ಯ, ಪಾಪ ಇತರವು ಅಂಟುವುದಿಲ್ಲಾ ಎಂದಿದೆ.

ಈ ಶ್ಲೋಕದಲ್ಲಿ ಅಂತರಂಗದ ಗುಣಗಳು ಯಾವುವು ಭಕ್ತನನ್ನು ಪ್ರಿಯನನ್ನಾಗಿ ಮಾಡುತ್ತದೆಂದು ಹೇಳುತ್ತಾನೆ ಸ್ವಾಮಿ. ಹಿಂದಿನ ಶ್ಲೋಕದಲ್ಲಿ ಯಾವ ಬಹಿರ್ವ್ಯಾಪಾರಗಳು, ಯಾವ ರೀತಿ ಇತರರೊಡನೆ ನಡವಳಿಕೆ ಇಟ್ಟುಕೊಂಡರೆ, ಯಾವ ರೀತಿ ಹೊರಗಿನ ಸನ್ನಿವೇಶಗಳಲ್ಲಿ ತನ್ನ ಮನೋರೀತಿಯನ್ನಿರಿಸಿದರೆ, ಯಾವ ರೀತಿ ಮನದ ಮೇಲಾಗುವ

ಪರಿಣಾಮದಿಂದಬಿಡುಗಡೆ ಹೊಂದಿದರೆ, ತನಗೆ ಪ್ರಿಯನಾದ ಭಕ್ತನಾಗುತ್ತಾರೆಂದು ವಿವರಿಸಿದ. ಈಗ, ಅಂತರಂಗ ವ್ಯಾಪಾರದ ಹತೋಟಿ ಹೇಳುತ್ತಾನೆ.

ಅಪೇಕ್ಷೆ ಇಲ್ಲದಿರುವುದರಿಂದ, ಯಾವುದನ್ನೂ ಕಾಂಕ್ಷಿಸದಿದ್ದರೆ, ಯಾವುದು ಪಡೆದರೂ ಸಂತೋಷವೂ, ಪಡೆಯದಿದ್ದರೆ ತಾಪವೂ ಆಗುವುದಿಲ್ಲ. ಮನುಷ್ಯನ ಇಹವ್ಯಾಪಾರಗಳೆಲ್ಲಾ ಅವನಪೇಕ್ಷೆಗಳನ್ನೇ ಅವಲಂಬಿಸಿದೆ. ಉತ್ಕೃತೇಚ್ಛೆಯಿಂದ ಯಾವುದು ಪಡೆಯಬೇಕೆಂದು ಪ್ರಯತ್ನಿಸುತ್ತಾನೋ ಅದು ಪಡೆಯಲೇ ಎಲ್ಲಾ ಕೆಲಸ ಕಾರ್ಯವನ್ನೂ ಮಾಡುವನು. ಅವನ ಅಪೇಕ್ಷೆ ಅವನ ಹಿಂದಿನ ವಾಸನಾಫಲ ಅವನ ಸಂಸ್ಕೃತಿಯ ಮಟ್ಟದಲ್ಲಿ. ಭೋಗಲಾಲಸೆ, ಸೇವಾಕಾಂಕ್ಷೆ, ತಾಮಸ ಜೀವನ, ರಜೋಚಟುವಟಿಗೆ ಎಲ್ಲಾ ಅವನವನಪೇಕ್ಷೆಯಿಂದ ಉದ್ಭವಿಸುವವು. ಯಾವುದನ್ನೂ ಹೊಂದಲಪೇಕ್ಷೆಯಿಲ್ಲದವನು, ಶಾಂತನಾಗಿ ನಿತ್ಯ ನೈಮಿತ್ತಿಕ ಕರ್ಮಗಳಲ್ಲಿ ತೊಡಗಿರುವನು. ಇಲ್ಲದ ಸಲ್ಲದ ಉತ್ಸಾಹ ಭರದಿಂದ ತನ್ನಪೇಕ್ಷೆಯನ್ನು ಪೂರೈಸಿಕೊಳ್ಳುವ ತಟಪಟವಿರುವುದಿಲ್ಲಾ. ಒಂದು ಆಸೆ ಉದ್ಭವವಾದರೆ ಅವನ್ನು ತೀರಿಸಿಕೊಳ್ಳುವವರೆಗೂ ಅದರದೇ ಚಿಂತೆಯಾಗಿ ಅದಕ್ಕಾಗಿಯೇ ಪ್ರಯತ್ನ, ಕಾರ್ಯಮಾಡುವನು. ಅನಪೇಕ್ಷನು ನಿಶ್ಚಿಂತನಾಗಿ ನಿರುತ್ಸಾಹಿಯಾಗಿರುವನು. ಬೃಹನ್ನಾರದ ಪುರಾಣದಲ್ಲಿ

> "ಆಶಾಯಾ ಏದಾಸಸ್ತೇ ದಾಸಾ ಸರ್ವಲೋಕಸ್ಯ ।
> ಆಶಾಯೇಶಾಂದಾಸೀತೇಷಾಂ ದಾಸಾಯತೇ ಲೋಕಃ ॥"

ಯಾರು ಆಸೆಯ ದಾಸನೋ ಅವನು ಸರ್ವಲೋಕಕ್ಕೂ ದಾಸ, ಯಾರಿಗೆ ಆಸೆ ದಾಸಿಯೋ ಅವನಿಗೆ ಸರ್ವಲೋಕವೂ ದಾಸ-ಎಂದಿದ್ದಾರೆ. ಆಸೆಯನ್ನು ಭರಿಸಲು ಲೋಕದಲ್ಲಿನ ಕೀಳು ಜನರನ್ನಾದರೂ ಆಸರಿಸುತ್ತಾರೆ. "ಕೆಲಸವಾಗಬೇಕಾದರೆ ಕತ್ತೆ ಕಾಲಾದರೂ ಕಟ್ಟಬೇಕು" ಎನ್ನುವಂತೆ. ಅದೇ ಆಶಾರಹಿತನಿಗೆ, ಯಾರನ್ನನುಸರಿಸಲೇನಿದೆ? ಅವನಲ್ಲಿಗೆ ಲೋಕ ದಾಸನಾಗಿ ಬರುತ್ತದೆ. ಮಹೋಪನಿಷತ್ತಿನಲ್ಲಿ

"ಯಸ್ಯನೇಚ್ಛಾತಥಾ ಸಿಚ್ಛಾಜ್ಞಸ್ಯ ಕರ್ಮಾಣಿ ತಿಷ್ಠತಿ ।
ನತಸ್ಯ ಲಿಪ್ಯತೇ ಪ್ರಜ್ಞಾ, ಪದ್ಮಪತ್ರಮಿವಾಂ ಬುಭಿಃ ॥"

ಇಚ್ಛೆಯಿಲ್ಲದ ಜ್ಞಾನಿಯು, ಮಾಡಬೇಕಾದ ಕರ್ಮದಲ್ಲಿ ಮಾತ್ರ ನಿಯಮಿತನಾಗಿ ಅವನ ಪ್ರಜ್ಞೆಯು ಯಾವುದರಿಂದಲೂ ಅಂಟದ, ನೀರಂಟದ ಕಮಲದೆಲೆಯಂತಿರುತ್ತದೆ. ಅಲಿಪ್ತತೆಗೆ ಅನಿಚ್ಛೆ ಸಹಾಯಕ. ಏನೂ ಬಯಸದವನಿಗೆ ಯಾವುದೂ ಅಂಟದು.

ಶುಚಿತ್ವವು ಹೊರಗಿನ ಮತ್ತು ಒಳಗಿನ ಪರಿಶುದ್ಧತೆಯೆರಡನ್ನೂ ಸೂಚಿಸುತ್ತದೆ. ಸ್ನಾನಾದಿಗಳಿಂದ ದೇಹ ನೈರ್ಮಲ್ಯವನ್ನು ಕಾಪಾಡಿ ಕೊಳ್ಳಬೇಕು. ಕೆಟ್ಟ ಚಿಂತನೆಗಳಿಗೆಡೆ ಕೊಡದೆ ಮನೋ ನೈರ್ಮಲ್ಯ ವನ್ನು ಕಾಪಾಡಿಕೊಳ್ಳಬೇಕು. "Inner cleanliness comes first" ಅಂತಶುಚಿ ಪ್ರಮುಖ. "ಅಪವಿತ್ರಃ ಪವಿತ್ರೋವಾ ಸರ್ವಾವಸ್ಥಾಂಗತೋ ಪಿವಾ । ಯಸ್ಮರೇತ್ ಪುಂಡರೀಕಾಕ್ಷಂ ತದಾಭ್ಯಾಂತರಃ ಶುಚಿಃ ॥" ಎನ್ನುವ ದಿವ್ಯ ಮಂತ್ರದಂತೆ ಸದಾ ದೇವಧ್ಯಾನದಲ್ಲಿರುವವರು ಪವಿತ್ರ ರಾಗಿರಲಿ, ಅಪವಿತ್ರರಾಗಿರಲಿ, ಯಾವಾಗ ಭಗವತ್ ಸ್ಮರಣದಲ್ಲಿರು ತ್ತಾರೋ, ಒಳಗೂ, ಹೊರಗೂ ಶುಚಿಯಾಗುತ್ತಾರೆ. ಜೀವನ್ಮುಕ್ತರು ಜ್ಞಾನ ಪರಾಕಾಷ್ಠತೆಯಲ್ಲಿ ಮೈಮರೆತಿರುವಾಗ "ಬಾಲೋನ್ಮತ್ತ ಪಿಶಾಚಿ ವತ್" ಮಕ್ಕಳು, ಹುಚ್ಚರು, ಪಿಶಾಚಿಗಳಂತೆ ಲೋಕವರ್ತನೆಯಲ್ಲಿ ಚರಿಸಿದರೂ,–ಮಹಾ ಜ್ಞಾನಿ ಸದಾಶಿವ ಬ್ರಹ್ಮೇಂದ್ರರಂತೆ–ಸಾಧಕರು, ಸಾಧುಗಳು ಯೋಗ ಶಿಯೋಪನಿಶತ್ತಿನಲ್ಲಿ ಹೇಳಿರುವಂತೆ "ದೇಹಂ ವಿಷ್ಣ್ವಾಲಯಂ ಪ್ರೋಕ್ತಂ ಸಿದ್ಧಿದಂ ಸರ್ವದೇಹಿನಾಂ ।" (ಮತ್ತೊಂದೆಡೆ ಅದೇ ಉಪನಿಷತ್ತಿನಲ್ಲಿ ಈ ಶ್ಲೋಕ ಬಂದು "ದೇಹಂ ಶಿವಾಲಯಂ ಪ್ರೋಕ್ತಂ........" ಎಂದಿದೆ. ಈ ದೇಹವೇ ಶಿವ, ವಾ, ವಿಷ್ಣುವಿನ ಆಲಯ–ವಾಸಸ್ಥಾನವೆಂದು ಹೇಳಿದೆ, ದೇಹಿ ಪ್ರತಿಯೊಬ್ಬನೂ ಸಿದ್ಧನು ಎಂಬ ಭಾವನೆಯಿಂದ–"ಶಿವಸ್ಯ ಜೀವರೂಪಸ್ಯ ಸ್ಥಾನಂ ತಧಿ ಪ್ರತಿಕ್ಷತೇ" ಶಿವನೇ ಜೀವರೂಪದಿಂದ ಅದರಲ್ಲಿ ಸ್ಥಾನ ಹೊಂದಿದ್ದಾನೆಂದು, ದೇಹ ನೈರ್ಮಲ್ಯಕ್ಕಾಗಿ ಸ್ನಾನ ಮಡಿಗಳಲ್ಲಿ ನಿರತರಾಗಿ ಹೊರಗಿನ ಶುಚಿಯನ್ನು ಕಾಪಾಡಿಕೊಳ್ಳುವರು. ಮನೆ ಮುರಿದು ತಲೆಯ ಮೇಲೆಬಿದ್ದರೆ ಮನೆ

ಯೊಳಗಿರುವವನಿಗೆ ಘಾಸಿ, ಆದರಿಂದ ಮನೆ ಸರಿಯಾಗಿ ಕಾಪಾಡಿ ಕೊಳ್ಳಬೇಕು.

ಈ ಬಾಹ್ಯಶುದ್ಧಿಯು ಅಂತಶುದ್ಧಿಗೂ ಸಹಾಯಕವಾಗುತ್ತೆ. ಅಂತ ಶುದ್ಧಿಗಾಗಿ ಯೋಗಾಭ್ಯಾಸಕ್ರಮವನ್ನು, ಅನೇಕ ವಿಧವಾದ ಶ್ವಾಸೋಚ್ಛ್ವಾಸ ನಿರೋಧದಿಂದ ಚಿತ್ತವೃತ್ತಿಯನ್ನು ಹತೋಟಿ ಮಾಡಿಕೊಳ್ಳಲೋಸುಗ ಸಹಾಯಕವಾಗಿಯೇ ಯೋಗಶಿಖೋಪನಿಷತ್, ಯೋಗಬಿಂದು, ಧ್ಯಾನ ಬಿಂದು, ಯೋಗಕುಂಡಲ್ಯುಪನಿಷತ್ ಮುಂತಾದುವುವೆಲ್ಲಾ ಬೆಳೆದಿವೆ. ಈ ಅಂತಶುದ್ಧಿಯು ಅತಿಮುಖ್ಯವೆಂದು ತೋರಲು ದರ್ಶನೋಪನಿಷತ್ತಿ ನಲ್ಲಿ "ಚಿತ್ತಮಂತರ್ಗತಂ ದುಷ್ಟಂ ತೀರ್ಥಸ್ನಾನೈರ್ನಶುಧ್ಯತಿ | ಶತಶೋಪಿ ಜಲೈರ್ಧೌತಂ, ಸುರಾಭಾಂಡಂ ಮಿವಾಶುಚಿ |" ಚಿತ್ತದಲ್ಲಿ ಹೊಕ್ಕಿರುವ ದುಷ್ಟತನವು ಎಷ್ಟು ತೀರ್ಥಸ್ನಾನ ಮಾಡಿದರೂ ಶುದ್ಧವಾಗುವುದಿಲ್ಲಾ. ನೂರು ಸಾರಿ ನೀರಿನಿಂದ ತೊಳೆದರೂ, ಹೆಂಡದ ಗಡಿಗೆಯು ಶುಚಿಯಾಗು ವುದಿಲ್ಲಾ. ಹೆಂಡವೇ ಒಳಗೆ ತುಂಬದಂತೆ ಮಡಕೆಯನ್ನು ಶುಚಿ ಯಾಗಿಡುವಂತೆ, ಇತರೆಲ್ಲಾ ಕೆಲಸಕ್ಕೂ ಯೋಗ್ಯವಾಗಿರುವಂತೆ ದುಷ್ಟತ್ವವೇ ಚಿತ್ತದಲ್ಲಿ ಸೇರದಂತೆ ನೋಡಿಕೊಳ್ಳಬೇಕು.

ಪ್ರಖ್ಯಾತ ನಟ ನಾಟಕ ಶಿಖಾಮಣಿ ಗಿರೀಶಚಂದ್ರಘೋಷನು ಶ್ರೀರಾಮಕೃಷ್ಣ ಪರಮಹಂಸರ ಶಿಷ್ಯನಾಗಲು ಬಹಳ ಪ್ರಯತ್ನಿಸು ತ್ತಿದ್ದನು. ಎಷ್ಟು ತಿದ್ದಿದರೂ, ಎಷ್ಟು ಉಪದೇಶಿಸಿದರೂ, ನಾಯಿಬಾಲಕ್ಕೆ ಕಟ್ಟಿದ ದಬ್ಬೆಯಂತಾಗಿ ಬಿಚ್ಚುತ್ತಲೆಡೊಂಕಾಗಿ ಇವರ ಸಾನಿಧ್ಯ ತಪ್ಪಿ ದೊಡನೇ ಗಿರೀಶನು ಪುನಃ ತನ್ನ ಪೂರ್ವ ವ್ಯಾಪಾರಗಳಿಗೆ ತೊಡಗಿ ಸಾಧನೆಯಲ್ಲಿ ಮುಂದುವರಿಯುತ್ತಿರಲಿಲ್ಲಾ. ಏನು ಮಾಡುವುದು ವೃತ್ತಿ ಜೀವನ, ಹಳೇ ಸಹವಾಸ, ಗಾನ, ನಾಟಕದ ಚಪಲ ಅವನನ್ನು ಆ ಪ್ರಪಂಚದಲ್ಲೇ ಮಗ್ನನನ್ನಾಗಿ ಮಾಡಿಬಿಡುತ್ತಿತ್ತು. ಆದರೂ ಅವನ ಸಂಸ್ಕೃತಿ ಫಲವಾಗಿ ಪುನಃ ಪುನಃ ಗುರುದೇವನೆಡೆಗೆ ಬಂದು ಅವರನ್ನಾ ಶ್ರಯಿಸುತ್ತಿದ್ದನು. ಎಷ್ಟು ಪ್ರಯತ್ನಿಸಿದರೂ ಸಫಲವಾಗದಿದ್ದ ಶಿಷ್ಯನ ನಡವಳಿಕೆ ಕಂಡು ಗುರುದೇವನು ಬೇಜಾರಿನಿಂದ ಒಂದಾವರ್ತಿ "ಗಿರೀಶ, ನೀನು ಬೆಳ್ಳುಳ್ಳಿರಸತುಂಬಿದ ಬೆಳ್ಳಿಬಟ್ಟಲಂತೆ, ಎಷ್ಟು ತೊಳೆದರೂ

ಆ ಹಳೇ ದುರ್ವಾಸನೆ ಹೋಗದೆಲ್ಲೊ !" ಎಂದು ಬಿಟ್ಟರು. ಇದು ಗಿರೀಶನ ಮನ ನಾಟಿತು. ಗುರುವಿನ ಕಟಾಕ್ಷವು ಒದಗಿತು. "ಗುರುದೇವಾ, ನನ್ನನ್ನು ರಕ್ಷಿಸು ; ಪತಿತನನ್ನು ನಿರಾಕರಿಸಬೇಡ" ಎಂದು ಕಣ್ಣೀರಿನಿಂದ ಕಾಲ್ಕಟ್ಟಿ ಶರಣಾಗತನಾಗಿ, ಅವತ್ತಿನಿಂದ ಪ್ರಯತ್ನಪೂರ್ವಕವಾಗಿ ಸನ್ಮಾರ್ಗಪ್ರವರ್ತಕನಾಗಿ ಗುರುದೇವನ ಗೃಹಸ್ಥ ಶಿಷ್ಯರಲ್ಲೊಬ್ಬನಾದನು.

ಶುಚಿತ್ವದಲ್ಲಿ ದೇಹಬಾಹಿರ್ಅಂತ ಶುಚಿಯಲ್ಲದೆ, ಸರ್ವ ಆಚಾರ ವ್ಯವಹಾರದಲ್ಲೂ ಶುಚಿತ್ವವಿರಬೇಕು. ಧ್ಯೇಯವೆಂತು ಶುಚಿಯೋ ಮಾರ್ಗವೂ ಶುಚಿಯಾಗಿರಬೇಕು. ಇದು ಚಿತ್ತ ಶುದ್ಧಿಯಾದರೆ ತಾನಾಗಿ ತಾನು ಸಕಲೇಂದ್ರಿಯಗಳ ವ್ಯಾಪಾರದಲ್ಲೂ ಶುದ್ಧವಾಗಿ ಪ್ರವಹಿಸುತ್ತೆ. "My strength is the strength of ten because my heart is pure" ಎಂದು ಒಬ್ಬ ಹಿಂದಿನ ಯೋಧನು (Knight Errant) ಹೇಳಿದಂತೆ – ನನ್ನ ಹೃದಯವು ಶುದ್ಧವಾಗಿರುವುದರಿಂದ ನನ್ನ ಶಕ್ತಿ ದಶ ಗುಣವಾಗಿದೆ ಎಂದು. ಮನಸ್ಸು ಶುಚಿಯಾದರೆ ಪರಿಪಕ್ವವಾಗುವುದು. ಅದರಿಂದಲೇ ದಕ್ಷತೆಯೂ ಬರುವುದು.

ದಕ್ಷತೆಯೆಂದರೆ ನಾನಾನಾನಾ ವಿವೇಚನೆಯಿಂದ ಚತುರ ನಡವಳಿಕೆ, ಧೈರ್ಯದಿಂದ ಕೆಲಸಕ್ಕೆ ಕೈ ಹಾಕಿಸಾಧಿಸುವುದು. ದಕ್ಷತೆಯಲ್ಲಿ ಕಾರ್ಯ ವನ್ನು ನಿರ್ಧರಿಸಲು ಮನೋವಿವೇಕವೂ, ಅದನ್ನಾರಂಭಿಸಲು ಧೈರ್ಯವೂ, ಅದನ್ನೆಸಗಲು ಸ್ಥೈರ್ಯವೂ ಅದನ್ನು ಕೊನೆಗಾಣಿಸಲು ಶಕ್ತಿಯೂ ಸೇರಿದೆ.

ಕಾರ್ಯದಲ್ಲಿ ದಕ್ಷನಾದರೂ ಅದರ ಫಲದಲ್ಲಿ ಉದಾಸೀನತೆಯಿಂದಿರ ಬೇಕು. ಫಲವೇನಾಯಿತು, ಏನಾಗುತ್ತದೆಂಬ ದೃಷ್ಟಿಯೇ ಇರಬಾರದು. ಸ್ವಾಮಿಯ ದಾಸನಾದುದರಿಂದ, ಅವನ ಕಾರ್ಯವನ್ನು ಅವನು ನನ್ನಲ್ಲಿ ಮಾಡಿಸಿಕೊಳ್ಳುವುದರಿಂದ ಆ ಕಾರ್ಯದಲ್ಲಿ ದಕ್ಷನಾಗಿರಬೇಕು. ಶ್ರದ್ಧೆ ಯಿಂದ ಮಾಡಬೇಕು. ಏನು ಸ್ವಾಮಿ ಪ್ರೇರೇಪಿಸುತ್ತಾನೋ ಆ ಸತ್ಕಾರ್ಯ ವನ್ನು ದಕ್ಷತೆಯಿಂದ ನಿರ್ವಹಿಸಬೇಕು. ಕಾರ್ಯಮಾಡುವಧಿಕಾರ ನನ್ನದು. ಅದರ ಫಲದ ಚಿಂತೆಯೇತಕ್ಕೆ ಫಲ ಮಹದಾತ್ಮನಿಗೆ ಪ್ರೇರೇಪಿಸಿದ ಸ್ವಾಮಿಗೆ ಸೇರಿದುದು. ಅದು ಸಫಲವಾಗಲಿ, ಅಫಲವಾಗಲಿ ನಮಗೇನು.

ಅದರ ವಿಷಯ ಉದಾಸೀನತೆ ಬೇಕು. ವಿಷಯಗಳಲ್ಲೂ ಆಸಕ್ತಿಯಿಲ್ಲದೆ ಉದಾಸೀನನಾಗಬೇಕು. ವಿಷಯಾಸಕ್ತಿಯಿಂದ ಅವುಗಳಲ್ಲಿ ಸಂಬಂಧ ಬೆಳೆಯಲವಕಾಶವಾಗುತ್ತೆ. ಉದಾಸೀನತೆಯಿಂದ ಇಂದ್ರಿಯ ವ್ಯಾಪಾರ ಗಳು ಕಮ್ಮಿಯಾಗುತ್ತೆ, ಅವುಗಳ ಚಪಲಕ್ಕೆ ಕಾರಣವಿಲ್ಲಾ. ಉದಾಸೀನತೆಯಿಂದ ಎಲ್ಲಾ ಹಚ್ಚಿಕೊಂಡು ಇಹವ್ಯಾಪಾರ ಮಗ್ನನಾಗುವುದು ತಪ್ಪುತ್ತೆ. ಶಂಕರರು ವಿವೇಕ ಚೂಡಾಮಣಿ (೪೩೩ ಶ್ಲೋ) ಯಲ್ಲಿ,

ಅತೀತಾ ನನುಸಂಧಾನಂ, ಭವಿಷ್ಯದ ವಿಚಾರಣಂ ।
ಔದಾಸೀನ್ಯಮಪಿ ಪ್ರಾಪ್ತೇ, ಜೀವನ್ಮುಕ್ತಸ್ಯ ಲಕ್ಷಣಂ ॥

ಜೀವನ್ಮುಕ್ತನ ಲಕ್ಷಣಗಳನ್ನು ವಿವರಿಸುತ್ತಾ, ಕಳೆದು ಹೋದುವರ ಯೋಚನೆಯೂ, ಮುಂದಿನ ವಿಚಾರವೂ ಏನು ವರ್ತಮಾನದಲ್ಲಿ ಪ್ರಾಪ್ತವಾದರೂ ಉದಾಸೀನದಿಂದಿರುವನೆಂದು ಹೇಳಿದ್ದಾರೆ. ನಡೆದು ಹೋದುದಕ್ಕೆ ಚಿಂತಿಸದಿರುವುದು, ಭವಿಷ್ಯತ್ತಿಗೆ ಮುಂದಾಲೋಚನೆಯಿಲ್ಲದಿರುವುದು, ಈಗ ನಡೆಯುವುದನ್ನು ಆಸಕ್ತಿಯಿಲ್ಲದೆ ಅನುಭವಿಸುವುದೇ ಉದಾಸೀನತೆ; ವ್ಯಥೆಯಿರುವುದಿಲ್ಲಾ. ಹೀಗೆಯೇ ೧೬ ಶ್ಲೋಕಗಳಲ್ಲಿ ಜೀವನ್ಮುಕ್ತನ ಲಕ್ಷಣಗಳನ್ನು ದಿವ್ಯವಾಗಿ ಉಲ್ಲೇಖಿಸಿದ್ದಾರೆ.

ಹಚ್ಚಿಕೊಂಡಷ್ಟೂ ವ್ಯಥೆ ಹೆಚ್ಚು—ಉದಾಸೀನನಾಗಿದ್ದರೆ ವ್ಯಥೆಯಿಲ್ಲದವನಾಗುತ್ತಾನೆ. ಇಲ್ಲಸಲ್ಲದ ವ್ಯಥೆ (Worry) ಮನುಷ್ಯನ ಮನವನ್ನಾಕ್ರಮಿಸಿ ಅವನನ್ನು ತಿಂದುಬಿಡುತ್ತದೆ. ಒಳ್ಳೆಯದೋ ಕೆಟ್ಟದ್ದು ಆಗಿ ಹೋದುದು ಆಗಿಹೋಗಿರುತ್ತೆ. ಅದನ್ನು ಕಟ್ಟಿಕೊಂಡು ವ್ಯಥಪಟ್ಟರೇನು ಪ್ರಯೋಜನ. "Crying over spilt milk"—ಚೆಲ್ಲಿಹೋದ ಹಾಲಿಗಾಗಿ ವ್ಯಥೆಪಟ್ಟರೆ ಹಾಲು ಬಾಚಿ ಉಪಯೋಗಿಸಲಾಗುತ್ತೆಯೇ, ಏನುಪಯೋಗ, ವ್ಯಥೆಪಟ್ಟರೇನಾದರೂ ಅದರಿಂದ ಪ್ರಯೋಜನ ಉಂಟೆ. ವೃಥಾವ್ಯಥೆ. ಎಷ್ಟೋ ಜನ ಯಾವುದೋ ನಡೆದುಹೋದ ದುರಂತಗಳನ್ನು ಹೇಳಿಕೊಂಡು ಪೇಚಾಡುತ್ತಿರುತ್ತಾರೆ. ಪ್ರಪಂಚದಲ್ಲಿ ನಮ್ಮ ಹತೋಟಿ ಮೀರಿದ, ಮಾನವನ ಕೈವಶಕ್ಕೆ ಮಿಗಿಲಾದ ಎಷ್ಟೋ ವೈಯಕ್ತಿಕ ಸಾಮಾಜಿಕ, ಸಾರ್ವಜನರ ದುರಂತಗಳು ಎಲ್ಲೆಲ್ಲೋ ದಿನ

ನಡೆಯುತ್ತಿರುತ್ತವೆ. ಈ ವೃತ್ತಾಂತ ಪತ್ರಿಕೆ, ಆಕಾಶವಾಣಿಗಳ ಕಾಲದಲ್ಲಿ ಆ ದುರಂತರಗಳು ಮಿಂಚಿನ ವೇಗದಿಂದ ಪ್ರಪಂಚದಲ್ಲೆಲ್ಲಾ ಕಡೆಗೂ ತಲುಪುತ್ತವೆ. ಅವನ್ನು ಕಟ್ಟಿಕೊಂಡು ವ್ಯಥೆಪಡುವವರಿಷ್ಟು ಜನವಿಲ್ಲಾ. ಭಗವತ್ಸಂಕಲ್ಪದಲ್ಲಿ ಏನು ನಡೆಯಬೇಕೋ, ನಡವೇ ಹೋಯಿತು. ಅದಕ್ಕಾಗಿ ಅಲ್ಪರಾದ ನಾವು ಪರದಾಡಿದರೇನು ಫಲ. ನಾನು, ನನ್ನದು ಎನ್ನುವುದೊಂದು ವ್ಯಥೆಗೆ ಕಾರಣ–"ನನ್ನ ಹೀಗೆಂದುಬಿಟ್ಟನಲ್ಲಾ" "ನನ್ನದು ಹಾಡು ಹೀಗಾಯಿತೇ" ಎನ್ನುವ ದುರಭಿಮಾನದ ವ್ಯಥೆ. ನನ್ನಂತೆ ಎಷ್ಟು ದಾನಯ್ಯಗಳಾಗಿಹೋದರೋ; ಅಧಿಕಾರ, ಲೋಲಾಪ್ತಿ ಅನುಭವಿಸಿದರೋ, ಇನ್ನೆಷ್ಟು ದಾನಯ್ಯಗಳು ಜಾಗಟೆ ಬಡಿದುಕೊಂಡು, ಶಂಖ ಊದುತ್ತಾ ಬರುತ್ತಾರೋ–ಎನ್ನುವ ಉದಾಸೀನತೆ ಬೇಕು. ನನ್ನದೇನು ಹೆಚ್ಚು ಎನ್ನುವ ದೈನ್ಯತೆಬೇಕು. ತನಗಿಂತ ಕೆಳದರ್ಜೆಯವರನ್ನು, ಹೆಚ್ಚು ಕಷ್ಟದಲ್ಲಿರುವವರನ್ನು ದುರಾದೃಷ್ಟರನ್ನೂ ನೋಡಿ ದೇವನು ನನ್ನ ಮೇಲೆ ಕರುಣಿಸಿ ಇಷ್ಟು ಮಟ್ಟಿಗೆ ಅನುಗ್ರಹಿಸಿ ನನ್ನನ್ನು ನಡೆಸಿಕೊಂಡು ಬರುತ್ತಿದ್ದಾನಲ್ಲಾ" ಎನ್ನುವ ಕೃತಜ್ಞತೆ ಬರಬೇಕೇ ವಿನಾ ಇಲ್ಲದ ಸಲ್ಲದ ತಾಪತ್ರಯ ಹಚ್ಚಿಕೊಂಡು ವ್ಯಥಪಟ್ಟು ಪ್ರಯೋಜನವಿಲ್ಲಾ. ಗತವ್ಯಥನಾದರೆ ಸುಖಿ.

ಬಂಧನಕಾರ್ಯಗಳನ್ನೆನಗುವುದನ್ನೆ ಪರಿತ್ಯಾಗವಮಾಡುತ್ತಾನೆ. ಯಾವಾಗ "ಅನಪೇಕ್ಷಃ" "ಉದಾಸೀನೋ" "ಗತವ್ಯಥಃ" ನಾಗುತ್ತಾನೋ ಅಪೇಕ್ಷೆಗಾಗಲೀ, ತೌತ್ಸುಕತೆಯಿಂದಾಗಲೀ, ವ್ಯಥೆ ಪರಿಹಾರಕ್ಕಾಗಲೀ ಆರಂಭಮಾಡಬೇಕಾದುದೇ ಇಲ್ಲಾ. ಸರ್ವಾರಂಭ ಪರಿತ್ಯಾಗೀ–ಎನ್ನುವುದು ಸರ್ವಸಂಗ ಪರಿತ್ಯಾಜ ಎನ್ನುವಂತೆ. ಸರ್ವಸಂಗವೆಂದರೆ ಸತ್ಸಂಗ, ಸಾಧುಗಳ, ಭಕ್ತರ ಸಂಗಬಿಡೆಂದರ್ಥವಲ್ಲಾ. ಅವನ್ನು ಹುಡುಕಿಕೊಂಡುಹೋಗಿ ಅನುಸರಿಸಬೇಕು. ಹಾಗೆಯೇ ಸರ್ವಾರಂಭ ಪರಿತ್ಯಾಗೀ ಎಂದರೆ ಬಂಧನಕರವಾದ, ಇಹಕ್ಕೆ ಹೆಚ್ಚು ಕಟ್ಟುವ, ಆರಂಭವನ್ನು ಪರಿತ್ಯಾಗಮಾಡಬೇಕೇ ಹೊರತು ಸತ್ಕಾರ್ಯ, ನಿತ್ಯನೈಮಿತ್ತಿಕ, ಸ್ವಧರ್ಮಗಳನ್ನಾಚರಿಸಬೇಡವೆಂದಲ್ಲಾ. ಕರ್ಮವನ್ನು ಮಾಡದೇ ಒಂದು

ಕ್ಷಣವಾದರೂ ಇರಲಾಗುವುದಿಲ್ಲಾ, ಕರ್ಮಮಾಡದಿದ್ದರೆ ಹೊಟ್ಟೆ ಹೊರೆಯಲು ಕೂಡಾ ಸಾಧ್ಯವಿಲ್ಲಾ ಮುಂತಾಗಿ ಕರ್ಮಯೋಗದಲ್ಲಿ ಭಗವಂತನೇ ಅಪ್ಪಣೆಕೊಡಿಸಿ, ಸತ್ಕರ್ಮ, ಭಗವದರ್ಪಿತ ಕರ್ಮ, ಸ್ವಧರ್ಮಕರ್ಮಗಳನ್ನು ಅಗತ್ಯವಾಗಿ ಮಾಡಬೇಕೆಂದಿದ್ದಾನೆ. ಇಷ್ಟೆಲ್ಲಾ ಭಗವದ್ಗೀತೆಯನ್ನು ಅರ್ಜುನನಿಗೆ ಉಪದೇಶಿಸುತ್ತಿರುವುದೂ, ಬಾಣ ಬಿಲ್ಲು ಪರಿತ್ಯಜಿಸಿ, ಕೈಕಟ್ಟಿಕೂತಿರುವ ಅರ್ಜುನನನ್ನು ಸ್ವಧರ್ಮ ಕರ್ಮ ವನ್ನು ಭಗವದಿಚ್ಛೆಯಂತೆ ನಿಮಿತ್ತ ಮಾತ್ರನಾಗಿಮಾಡಲೇ ಅಲ್ಲವೇ. ಆರಂಭವೇ ಮಾಡದಿದ್ದರಾಗುತ್ತಿಯೇ. ಭಕ್ತನಾದವನು ಭಗವದ್ಭಕ್ತಿ ಯಿಂದ ಭಗವತ್ಪ್ರೀತ್ಯರ್ಥವಾದ ಕರ್ಮವನ್ನು ಧ್ಯಾನವನ್ನೂ ತಪವನ್ನೂ ಆಚರಿಸುತ್ತಲೇ ಜೀವಮಾನ ಕಳೆವನು.

ಇದು ೧೦ ನೇ ಶ್ಲೋಕದಲ್ಲಿ "ಮತ್ಕರ್ಮ ಪರಮೋಭವ, ಮದರ್ಥ ಮಪಿ ಕರ್ಮಾಣಿ, ಕುರ್ವಾನ್ ಸಿದ್ಧಿ ಮವಾಪ್ಸ್ಯಸಿ" ಎನ್ನುವ ಭಕ್ತನ ವಿಷಯ; ಬುದ್ಧಿಯನ್ನು ಅವನಲ್ಲಿ ಸೇರಿಸಿಯಾಗಲೀ, ಚಿತ್ತ ಸಮಾ ಧಾನಕ್ಕೆ ಯೋಗಾಭ್ಯಾಸವಾಗಲೀ ಮಾಡಲು ಅಸಮರ್ಥನಾದವನು, ಈ ರೀತಿ ಅನಪೇಕ್ಷನಾಗಿ, ಉದಾಸೀನತೆಯಿಂದ, ಗತವ್ಯಥನಾಗಿ, ಬಂಧನ ಕಾರ್ಯಾರಂಭವನ್ನು ಪರಿತ್ಯಾಗಮಾಡಿ, ಮತ್ಕರ್ಮ, ಮದರ್ಥ ವಾಗಿ ಸಿದ್ಧಿಗಾಗಿ ಸತ್ಕರ್ಮಮಾಡುವ ಭಕ್ತನೂ ಪ್ರಿಯನೇ.

**ಯೋ ನ ಹೃಷ್ಯತಿ ನ ದ್ವೇಷ್ಟಿ । ನ ಶೋಚತಿ ನ ಕಾಂಕ್ಷತಿ ।**
**ಶುಭಾಶುಭಪರಿತ್ಯಾಗೀ । ಭಕ್ತಿಮಾನ್ ಯಃ ಸ ಮೇ ಪ್ರಿಯಃ ॥೧೭॥**

ಯಾವನು ಇಷ್ಟಪ್ರಾಪ್ತಿಯಾದಾಗ ಹರ್ಷಿಸುವುದಿಲ್ಲವೋ ಅನಿಷ್ಟ ಒದಗಿದಾಗ ದ್ವೇಷಿಸುವುದಿಲ್ಲವೋ, ಸಂಕಟ ನೋವಾದಾಗ ಶೋಕಿಸುವು ದಿಲ್ಲವೋ, ಅದು ಬೇಕು, ಇದುಬೇಕೆಂದು ಅಪೇಕ್ಷಿಸುವುದಿಲ್ಲವೋ, ಶುಭ ಅಶುಭಗಳನ್ನೆಲ್ಲಾ ಪರಿತ್ಯಾಗಮಾಡುವನೋ–ಪರಮಾತ್ಮನಲ್ಲಿ ಒಪ್ಪಿಸು ವನೋ–ಶುಭವನ್ನು ಅಶುಭವನ್ನೂ ಅದರ ಫಲ ತನ್ನದಲ್ಲವೆಂದು ತ್ಯಾಗ ಮಾಡುವನೋ ಆ ಭಕ್ತನು ನನಗೆ ಪ್ರಿಯನು.

೨ ಅಧ್ಯಾಯ ೫೭ ನೇ ಶ್ಲೋಕದಲ್ಲಿ ಸ್ಥಿತಪ್ರಜ್ಞನ ವಿವರಣೆಯಲ್ಲಿ. ಇದೇ ಪದಗಳ ಸಮೋಹವಿದೆ. "ತತ್‌ಪ್ರಾಪ್ಯ ಶುಭಾ ಶುಭಂ ನಾಭಿ ನಂದತಿ, ನದ್ವೇಷ್ಟಿ"—

ಅನ್ನಪೂರ್ಣೋಪನಿಷತ್ತಿನಲ್ಲಿ,

"ಸ್ಫಟಿಕಃ ಪ್ರತಿಬಿಂಬೇನ ಯಥಾ ನಾಯಾತಿ ರಂಜನಂ ।
ತತ್‌ಜ್ಞಃ ಕರ್ಮಫಲೇ ನಾಂ ತಸ್ತಥಾ ನಾಯಾತಿ ರಂಜನಂ ॥"

ಕನ್ನಡಿಯಲ್ಲಿನ ಪ್ರತಿಬಿಂಬನೋಡಿ ಹೇಗೆ ಹಿಗ್ಗುವುದಿಲ್ಲವೋ ಅದೇ ರೀತಿ ತತ್ವಜ್ಞನು ಕರ್ಮಫಲಕ್ಕಾಗಿ ಹಿಗ್ಗುವುದಿಲ್ಲಾ ಎಂತು ಬಿಂಬವೋ ಅಂತು ಪ್ರತಿಬಿಂಬ, ಎಂತು ಕರ್ಮವೋ ಅಂತು ಫಲ. ಶುಭಾ ಶುಭ ವೆರಡನ್ನೂ ಉದಾಸೀನತೆಯಿಂದ ಪರಿತ್ಯಜಿಸುತ್ತಾನೆ. ಕರ್ಮಫಲವು ಕನ್ನಡಿಯಲ್ಲಿನ ಗಂಟೆನಂತೆ. ನಮಗೆ ಅಪ್ರಾಪ್ತ. ಅದನ್ನು ಭಯಸದೆ ಪರಿತ್ಯಾಗ ಮಾಡಬೇಕು. ಪ್ರತಿಬಿಂಬದ ಕಾರ್ಯವಾವುದೂ ಇಲ್ಲಾ. ಬಿಂಬ ಎಂತು ನಟಿಸಿದರೆ ಅದೇ ಪ್ರತಿಬಿಂಬದಲ್ಲಿ ತೋರಿಬರುವುದು. ಮುಂದೆ ಅಲ್ಲೇ.

"ಖೇದಾಹ್ಲಾದೌ ನಜಾನಾತಿ ಪ್ರತಿಬಿಂಬಗತೈರಿಸ ।
ನಿಸ್ತೋತ್ರೋ ನಿರ್ವಿಕಾರಶ್ಚ ಪೂಜ್ಯ ಪೂಜಾವಿವರ್ಜಿತಃ ॥"

ದುಃಖಾನಂದಗಳು ಪ್ರತಿಬಿಂಬಕ್ಕೆ ತಿಳಿಯದು. ಸ್ತೋತ್ರವಿಲ್ಲಾ, ವಿಕಾರವಿಲ್ಲ ಪೂಜಾ ಪೂಜವಿವರ್ಜಿತವು – ಎಂದಿದೆ.

ಇದು ೧೧ ನೇ ಶ್ಲೋಕದಲ್ಲಿಯಾವುದೂ ಮಾಡಲು ಅಶಕ್ತನಾದರೆ, ಸರ್ವಕರ್ಮವನ್ನೂ ತ್ಯಾಗಮಾಡಿ, ದೇವನನ್ನು ಶರಣು ಹೊಂದುವ ಭಕ್ತನ ವಿಷಯ. ಶರಣು ಭಕ್ತ. ಇದು ಪ್ರಪತ್ತಿಯ ಲಕ್ಷಣ. ಈ ರೀತಿ ಭಗವತ್ ಶರಣು ಹೊಂದಿದವ ಈ ಕೆಳಗೆ ಕಂಡ ಗುಣ ತೋರುತ್ತಾನೆ.

೧) ಆನುಕೂಲ್ಯ ಸಂಕಲ್ಪ- ಸುಖವೆಲ್ಲಾ ದೇವಕೊಟ್ಟದ್ದು, ನಹೃಷ್ಯತಿ.
೨) ಪ್ರಾತಿಕೂಲಸ್ಯ ವರ್ಜನಃ — ದುಃಖ ನನ್ನ ಕರ್ಮಫಲ,
ದೇವದತ್ತವಲ್ಲ, ನದ್ವೇಷ್ಟ.

೩) ರಕ್ಷಿಷ್ಯತೀತಿ ವಿಶ್ವಾಸಃ — ದೇವ ಕಾಪಾಡುವನೆಂಬ ಅಖಂಡ ನಂಬಿಕೆ–ನಶೋಚತಿ.

೪) ಗೋಪ್ತೃತ್ವ ವರಣಂ ರಕ್ಷಣಾ ಭಾರ ಅವನದೇ, ನಕಾಂಕ್ಷತಿ.

೫) ಕಾರ್ಪಣ್ಯಂ — ದೀನತೆ (Helplessness) } ಶುಭಾಶುಭ

೬) ಆತ್ಮನಿಕ್ಷೇಪಂ — ಸರ್ವಾಶ್ರಯ (Surrender) } ಪರಿತ್ಯಾಗೀ.

ಶ್ರೀ ರಾಮಾನುಜ, ಶ್ರೀ ಚೈತನ್ಯ, ಶಿವಶರಣರು, ಆಳ್ವಾರುಗಳು ಎಲ್ಲರೂ ಈ ಭಗವದಾಶ್ರಯದಿಂದ ತಮ್ಮ ಸಂಪೂರ್ಣವನ್ನೂ ಅವನಲ್ಲಿ ಅರ್ಪಿಸಿ, ತಮ್ಮದೇನೂ ಇಲ್ಲವೆಂದು, ಅವನ ರಕ್ಷಣೆಗೇ ಅವನ ಮಡಿಲಿನಲ್ಲಿ ಬಿದ್ದು ಅವನೇ ಕಾಪಾಡುವನೆಂದು ಭಾರ ಸಂಪೂರ್ಣವಾಗಿ ಅವನ ಮೇಲೇ ಹಾಕಿ–ಪ್ರಪತ್ತಿಯನ್ನವಲಂಬಿಸಿದ್ದರು. ಈ ಮಾರ್ಗವನ್ನು ಯಾವನಾದರೂ ಅವಲಂಬಿಸಲು ಸಾಧ್ಯವಿದೆ. ಜ್ಞಾನಬೇಕಿಲ್ಲ, ಕುಲ ಬೇಕಿಲ್ಲ, ಶೀಲಬೇಕಿಲ್ಲಾ, ಹೆಣ್ಣಾಗಬಹುದು, ಪಾಪಿಯಾಗಬಹುದು, ಪಾಮರನಾಗಬಹುದು, ಯಾರಾದರೂ ಪೂರ್ಣವಾಗಿ ಭಗವಂತನನ್ನು ಶರಣುಹೊಕ್ಕು, ಅವನೇ ಖಂಡಿತ ಕಾಪಾಡುವನೆಂಬ ಪೂರ್ಣನಂಬಿಕೆಯಿಂದ ತಮ್ಮ ದೀನತೆಯನ್ನು ತೋರಿದರೆ ಸ್ವಾಮಿ ಓಡಿಬಂದು ಕೈಹಿಡಿದು ಎತ್ತಿ ಸಲಹಲು ಸಂದೇಹವಿಲ್ಲಾ. ಈ ಅವಲಂಬನ ಬರಬೇಕಾದರೆ ಎಷ್ಟು ಸಂಸ್ಕೃತಿ, ಮನೋಪಕ್ವ, ದೃಢವೈರಾಗ್ಯ ಬೇಕು. ಎಷ್ಟು ಬಳಲಿ ತಾನು ತನ್ನದೆಂಬ ಅಭಿಮಾನ ತೊರೆದು ಪೈಸ್ಯತೆಯು ಪಾತಾಳಕ್ಕೆ ಹೋಗಿರಬೇಕು. "ನನ್ನನಳಿಸು ನೀನೆ ನೆಲಸು" ಎಂಬ ಪ್ರಾರ್ಥನೆ ಎಷ್ಟು ಮಾಡಿರಬೇಕು. ಭಗವಂತನ ಪೂರ್ಣಾಶ್ರಯ ಸಿಕ್ಕಿದರೆ, ತಾಯಿಯ ಮಡುಲಿನಲ್ಲಿ ಸೇರಿದ ಮಗುವಿನಂತೆ, ಸರ್ವರಕ್ಷಣೆ, ಪೋಷಣೆ, ಆದರ ಸಿಕ್ಕಿದಂತೆ. ಹುಡುಗರು ಬಣ್ಣದ ಕಾಗದದಲ್ಲಿ ದೋಣಿಮಾಡಿ, ನೀರಿನಲ್ಲಿ ತೇಲಿಬಿಟ್ಟು ಆನಂದಿಸಿ ಚಪ್ಪಾಳೆಹಾಕಿ, ಕೇಕೆಹಾಕುವಂತೆ, ತನ್ನ ಸರ್ವಸ್ವವನ್ನೂ ಬಿಟ್ಟು, ಕರುಣಾಸಾಗರನಲ್ಲಿ ಲೀನವಾದ ಭಗವದ್ಭಕ್ತನು, ಆನಂದದಿಂದ ಅವನ ಸಂಕೀರ್ತನದಲ್ಲೇ ತಾಳಹಾಕುತ್ತಿರುತ್ತಾನೆ. ಎಲ್ಲಿ ತೇಲಿದರೂ ಆ ಕರುಣಾಸಾಗರದಲ್ಲಿಯಲ್ಲೇ.

"ಪುಣ್ಯಸ್ಯ ಫಲಮಿಚ್ಛಂತಿ, ಪುಣ್ಯಂನೇಚ್ಛಂತಿ ಮಾನವಾಃ" ವ್ಯಾಸರು ಹೇಳುವಂತೆ ಪುಣ್ಯಫಲ ಸುಖ, ಸಂತೋಷಮಾತ್ರ ಮನುಷ್ಯನಿಗೆಬೇಕು. ಅದೇ ಪುಣ್ಯಕಾರ್ಯವೆಸಗಲು ಇಚ್ಛೆಯಿಲ್ಲ.

ಪುಣ್ಯಫಲ, ಸುಖ ಸಂತೋಷ ಬಿಡುವುದಕ್ಕಿಷ್ಟವಿಲ್ಲದಿದ್ದರೂ ಅಶುಭ ಫಲಬೇಕಾದರೆ ಸ್ವಾಮಿಗೆ ಒಪ್ಪಿಸಲು ಸಿದ್ಧರಾಗಿದ್ದಾರೆ ಎಲ್ಲರೂ. ಸ್ವಾಮಿ ಫಲವೆಲ್ಲಾ ಪರಿತ್ಯಾಗಮಾಡೆಂದು, ಶುಭ ಅಶುಭ ಏನೇ ಫಲಬರಲಿ ಎಲ್ಲಾ ನನ್ನದಲ್ಲವೆಂಬ ಭಾವನೆಬೇಕು. ಶಂಕರರು, ವಿವೇಕ ಚೂಡಾಮಣಿ (೫೩೭ ಶ್ಲೋ) ಯಲ್ಲಿ ಬ್ರಹ್ಮನಿದ ಸಮಾಚಾರ-ಬ್ರಹ್ಮ ತಿಳಿದ ಭಕ್ತನ ನಡವಳಿಕೆಯಲ್ಲಿ "ನಖಿದ್ಯತೇನೋ ವಿಷಯೈಃ ಪ್ರಮೋದತೇ-ನಸಜ್ಜತೇ, ನಾಪಿವಿಜ್ಯತೇ" ಎಂದು ಭಕ್ತನ ಈ ನಹೃಷ್ಯತಿ, ನಶೋಚತಿ, ನಕಾಂಕ್ಷತಿ ಹೇಳಿದ್ದಾರೆ.

ಮಹೋಪನಿಷತ್ತಿನಲ್ಲಿ "ಶ್ರುತ್ವಾ ಸ್ಪೃಷ್ಟ್ವಾ ಚ ಭುಕ್ತ್ವಾ ಚ ದೃಷ್ಟ್ವಾ ಜ್ಞಾತ್ವಾ ಶುಭಾಶುಭಂ। ನಹೃಷ್ಯತಿ ಗ್ಲಾಯತಿಯಸ್ಸ ಶಾಂತ ಇತಿ ಕಥ್ಯತೇ॥" ಶುಭಾಶುಭವನ್ನು ಕೇಳಿ, ಸ್ಪರ್ಶಿಸಿ, ಅನುಭವಿಸಿ, ನೋಡಿ, ತಿಳಿದರೂ, ಹರ್ಷವನ್ನೂ ಶೋಕವನ್ನೂ ಹೊಂದದ ಮನುಷ್ಯನೇ ಶಾಂತನೆಂದು ಹೇಳುವರು.

ಮಹೋಪನಿಷತ್ತಿನಲ್ಲೇ ಒರುವ,

"ಉದ್ವೇಗಾನಂದ ರಹಿತ, ಸ ಮಯಾ ಸ್ವಚ್ಛಯಾಧಿಯಾ।
ನಶೋಚತಿ ನಚೋದೇತಿ ಸ ಜೀವನ್ಮುಕ್ತ ಉಚ್ಯತೇ॥
ನಕಿಂಚನ ದ್ವೇಷ್ಟಿತಥಾ ನಕಿಂಚದಪಿ ಕಾಂಕ್ಷತಿ।
ಭುಂಕ್ತೇಯಃ ಪ್ರಕೃತಾನ್ ಭೋಗಾನ್ ಸ ಜೀವನ್ಮುಕ್ತ ಉಚ್ಯತೇ॥"

ಈ ಎರಡು ಶ್ಲೋಕಗಳಲ್ಲೂ ಈ ಶ್ಲೋಕಾರ್ಥವೇ ಬಂದಿದೆ. ಹೇಗಿರುವುದೆಂದರೆ ಅವರ ಮನಸ್ಸು "ತುಷಾರಕರಬಿಂಬಾಚ್ಛಂ ಮನೋಯಸ್ಯ ನಿರಾಕುಲಂ। ಮರಣೋತ್ಸವ ಯುದ್ಧೇಷು ಸ ಶಾಂತ ಇತಿ ಕಥ್ಯತೇ" ಮರಣ, ಉತ್ಸವ, ಯುದ್ಧದಲ್ಲೂ ಯಾರ ಮನವು ವ್ಯಾಕುಲವಿಲ್ಲದೇ ಚಂದ್ರಬಿಂಬದಂತೆ ಪ್ರಶಾಂತವಾಗಿರುತ್ತದೆಯೋ ಅವನೇ 'ಶಾಂತ'ನೆಂದು

ಹೇಳಿದೆ. ಈ ರೀತಿ ದ್ವಂದ್ವಾತೀತನಾಗಿ ಶಾಂತನಾದ ಜ್ಞಾನ, ಅಭ್ಯಾಸ, ಧ್ಯಾನಕ್ಕಿಂತ ವಿಶೇಷವಾದ ಕರ್ಮಫಲ ತ್ಯಾಗಮಾಡಿದನಂತರ ಬರುವ ಶಾಂತಿ (ಶ್ಲೋ ೧೨) ಎಂತಹ ದ್ವಂದ್ವಾತೀತನ ವರ್ಣನೆಯನ್ನು ಮುಂದಿನೆರಡು ಶ್ಲೋಕದಲ್ಲಿ ವಿವರಿಸಿದೆ.

**ಸಮಃ ಶತ್ರೌ ಚ ಮಿತ್ರೇ ಚ । ತಥಾ ಮಾನಾಪಮಾನಯೋಃ ।**
**ಶೀತೋಷ್ಣಸುಖದುಃಖೇಷು । ಸಮಃ ಸಂಗವಿವರ್ಜಿತಃ ॥೧೮॥**

**ತುಲ್ಯನಿಂದಾಸ್ತುತಿರ್ಮೌನೀ । ಸಂತುಷ್ಟೋ ಯೇನ ಕೇನಚಿತ್ ।**
**ಅನಿಕೇತಃ ಸ್ಥಿರಮತಿ-ರ್ಭಕ್ತಿಮಾನ್ ಮೇ ಪ್ರಿಯೋ ನರಃ ॥೧೯॥**

ಶತ್ರುಮಿತ್ರರಲ್ಲಿ ಸಮನಾಗಿಯೂ, ಅಂತೆಯೇ ಮಾನಾಪಮಾನಗಳಲ್ಲಿ ಸಮನಾಗಿಯೂ, ಶೀತೋಷ್ಣ, ಸುಖ ದುಃಖಗಳಲ್ಲಿ ಸಮನಾಗಿಯೂ, ಸಂಗಬಿಟ್ಟವನಾಗಿಯೂ (ಕರ್ತೃತ್ವಾಭಿಮಾನ ಫಲಕಾಂಕ್ಷೆ - ಇವುಗಳೇ ಸಂಗ) ಸ್ತುತಿ ನಿಂದೆಗಳು ಸಮಾನವೆಂದೆಣಿಸಿ, ಮೌನವಾಗಿಯೂ, ಏನು ದೊರೆತರದರಿಂದಲ್ಲೇ ಸಂತುಷ್ಟನಾಗಿಯೂ, ವಾಸಸ್ಥಾನವಿಲ್ಲದವನಾಗಿಯೂ, ಸ್ಥಿರಚಿತ್ತವುಳ್ಳವನಾಗಿ ಯಾವ ಭಕ್ತನಿದ್ದಾನೋ ಅವನು ನನಗೆ ಪ್ರಿಯನು.

"ಯೇನಕೇನ ಚಿದಾಚ್ಛನ್ನೋ, ಯೇನಕೇನ ಚಿದಾಶಿತಃ ।
ಯತ್ರಕ್ವಚನ ಶಾಯೀ ಸ್ಯಾತ್ತಂ ದೇವಾ ಬ್ರಾಹ್ಮಣಂ ವಿದುಃ ॥

ಎಂದು ಶಂಕರರು ೧೯ ನೇ ಶ್ಲೋಕದ ಭಾಷ್ಯದಲ್ಲಿ (ಯಾವ್ಯಾವುದನ್ನೊ ಊಟ, ವಸ್ತ್ರ, ನಿದ್ದೆಗಳ ವಿಷಯ ಚಿತ್ತದಲ್ಲಿ ಇಚ್ಛಿಸದೆ, ಯಾವ್ಯಾವುದನ್ನೂ ಚಿತ್ತದಲ್ಲಿ ಆಶಿಸದೆ. ಎಲ್ಲಿ ಯಾವುದಕ್ಕೂ ಆಸೆ ಇಲ್ಲದವ ಬ್ರಾಹ್ಮಣನೆಂದು ತಿಳಿ. ಈ ಶ್ಲೋಕವನ್ನು ಉಲ್ಲೇಖಿಸಿದ್ದಾರೆ.

ಅನ್ನಪೂರ್ಣೋಪನಿಷತ್ತಿನಲ್ಲಿ

"ಯದಸಕ್ತಂ, ಸಮಂ, ಸ್ವಚ್ಛಂ ಸ್ಥಿತಂ ತತ್ಕಾರ್ಯ ಮುಚ್ಯತೇ ।
ಯಸ್ಸ್ವಚ್ಛಾ ಸಮತಾ ಶಾಂತಾ ಜೀವನ್ಮುಕ್ತವ್ಯವಸ್ಥಿತಃ ॥"

ಅಸಕ್ತಂ (ಆಸಕ್ತಿ ಇಲ್ಲದಿರುವಿಕೆ) ಸಮತ್ವ, ಸ್ವಚ್ಛ ಸ್ಥಿತಿಯೇ

ತುರ್ಯಾವಸ್ಥೆ ಎಂದು ಹೇಳಲ್ಪಟ್ಟಿದೆ. ಸಚ್ಛ, ಸಮತಾ ಶಾಂತವೇ ಜೀವನ್ಮುಕ್ತ ವ್ಯವಸ್ಥಿತಿ—ಎಂದಿವೆ.

ಈ ಸ್ಥಿತಿಯಲ್ಲಿ ಅಂತರಂಗವನ್ನು ಪರಿಪಕ್ವಮಾಡಿಕೊಂಡು, ಏನು ಪ್ರಾಪ್ಯವಾದರದನ್ನು ಬಹಿರ್ ವ್ಯಾಪಾರದಲ್ಲಿ ಮಾಡು—"ಅಂತಸ್ಸರ್ವ ಪರಿತ್ಯಾಗೀ, ಬಹಿಃ ಕುರುಯಥಾಗತಂ ." ಎಂದು ಮುಂದೆ ಹೇಳಿದ್ದಾರೆ. ಇದು ಭಕ್ತ, ಜೀವನ್ಮುಕ್ತನ ಸ್ಥಿತಿ. (ಯಾವುದೆಂದರದನ್ನು ಹೊದೆದು-ಬಟ್ಟೆ ವಸ್ತ್ರ ವಿಶ್ರಾಂತಿ, ಯಾವುದು ದೊರಕಿದರದನ್ನು ತಿನ್ನುತ್ತಾ ಊಟದ ವಿಷಯ–ಎಲ್ಲಿಂದರಲ್ಲಿ ಮಲಗುವನು ದೇವ ಬ್ರಾಹ್ಮಣನೆನಿಸುವನು.)

ಇದು ಭಾರತದ ಮೋಕ್ಷಧರ್ಮ (೨೪೫ ಅ ೧೨ ಶ್ಲೋ) ದಲ್ಲಿ ಬರುವುದು ಇತರ ೭ ಶ್ಲೋಕಗಳೂ "ತಂ ದೇವಾ ಬ್ರಾಹ್ಮಣಂ ವಿದುಃ" ಎಂದು ಮುಕ್ತಿಯಾಗುವವು.

ಈ ಶ್ಲೋಕಗಳ ಗುಂಪಿನಲ್ಲೇ

> "ನಕ್ರುಧ್ಯೇನ್ನ ಪ್ರಹೃಷ್ಯೇಚ್ಚ ಮಾನಿತೋಽವಮಾನಿತಶ್ಚಯಃ
> ಸರ್ವಭೂತೇಷ್ವ ಭಯದಸ್ತಂ ದೇವಾ ಬ್ರಾಹ್ಮಣಂವಿದುಃ ||"

ಮಾನಿಸಿದರೆ ಹಿಗ್ಗದೆ, ಅವಮಾನಿಸಿದರೆ ಕುಪಿಸದೆ, ಸರ್ವಭೂತಗಳಿಗೂ ಅಭಯ ನೀಡಿರುವನನ್ನು ದೇವ ಬ್ರಾಹ್ಮಣನೆನ್ನುವರು ಎಂದು ಹೇಗೆ ಭಕ್ತನ ಮತ್ತು ಬ್ರಹ್ಮಾನೇಷಿಯ ಗುಣಗಳು ಜೊತೆಗೆ ಓಡುತ್ತವೆಂದು ತಿಳಿಯುತ್ತದೆ.

ಅದರಲ್ಲೇ ಮತ್ತೊಂದು ಶ್ಲೋಕವು

> "ಜೀವಿತಂ ಯಸ್ಯ ಧರ್ಮಾರ್ಥಂ, ಧರ್ಮೋಹರ್ಯರ್ಥಮೇವ ಚ |
> ಅಹೋರಾತ್ರಾಶ್ಚಪುಣ್ಯಾರ್ಥಂ ತಂದೇವ ಬ್ರಾಹ್ಮಣಂ ವಿದುಃ ||"

ಯಾರ ಜೀವಿತವೇ ಧರ್ಮಾರ್ಥಕ್ಕಾಗಿ ಜೀವಿಸಲ್ಪಡುವುದೋ ಆ ಧರ್ಮವೂ ಶ್ರೀಹರಿಯ ಪ್ರಿತ್ಯರ್ಥವಾಗಿಯೇ ಪ್ರವಹಿಸುವುದೋ ಹಗಲು ರಾತ್ರಿಗಳೆಲ್ಲಾ ಪರೋಪಕಾರ ಪುಣ್ಯಾರ್ಥವಾಗಿ ಕಳೆವನೋ ಆತನೇ ದೇವನ ದೃಷ್ಟಿಯಲ್ಲಿ ಬ್ರಾಹ್ಮಣನೆಂದು ತಿಳಿ. ಭಕ್ತನ ಜೀವ, ಜೀವನ,

ಜೀತ, ಜನ್ಮನೇ ಪ್ರತಿರಾತ್ರಿ ದಿನ ಕ್ಷಣವೂ ಹರಿಗೆ, ಧರ್ಮಕ್ಕೆ ಪರೋಪಕಾರ ಪುಣ್ಯಕಾರ್ಯಕ್ಕೇ ಮುಡುಪಲ್ಲವೇ—ಮುಂದಕ್ಕೆ

"ನಿರಾಶಿ ಷಮನಾರಮ್ಭಂ ನಿರ್ನಮಸ್ಕಾರಮಸ್ತುತಿಂ ।
ನಿರ್ಮುಕ್ತಮ್ ಬನ್ಧನೈಃ ಸರ್ವೈಸ್ತಂ ದೇವಾ ಬ್ರಾಹ್ಮಣಂ ವಿದುಃ ॥"

ಆಶೆಯಿಲ್ಲದೆ, ಸ್ವಕಾರ್ಯಾರಂಭವಿಲ್ಲದೆ, ನಿಂದಾ ಸ್ತುತಿಗಳಿಲ್ಲದೆ ಸರ್ವ ಬಂಧನ ಮುಕ್ತನಾಗಿರುವನೇ ಬ್ರಾಹ್ಮಣನೆಂದು ಸಮಾಪ್ತಿಯಲ್ಲಿ ಭಕ್ತ ಲಕ್ಷಣದವರೆಲ್ಲಾ ಬ್ರಾಹ್ಮಣರೆಂಬ ಭಾವ ಬಂದಿದೆ.

ಇದು ಸಮತ್ವದಿಂದ ಬರುವ ಶಾಂತಾತೀತನ ವರ್ಣನೆ. ಮಹೋಪನಿಷತ್ತಿನಲ್ಲಿ ಘನೀಭೂತವಾಗಿ ಇದರ ಸಾರವಿಳಿಸಿ, ಅರ್ಧಶ್ಲೋಕದಲ್ಲಿ "ಸಮಾಸ್ಸಮರಸಾ, ಸ್ಸೌಮ್ಯಾ, ಸ್ಸತತಂ ಸಾಧುವೃತ್ತಯಃ" ಎಂದು ಉಲ್ಲೇಖಿಸಿದ್ದಾರೆ. "ಅಬ್ಧಿವದ್ಧೃತ ಮರ್ಯಾದಾ ಭವಂತಿ ವಿಶದಾಶಯಾಃ ।"—ಅವನ ಮರ್ಯಾದೆಯು, ಸಮುದ್ರದಂತಿರುವುದು-ಆತನು ಮಹೋಪನಿಷತ್ತಿನಲ್ಲಿ ಬರುವ,

"ಸಂತೋಷಾ ಮೃತಪಾನೇನ, ಯೇ ಶಾಂತಾ ಸ್ತೃಪ್ತಿಮಾಗತಾಃ ।
ಆತ್ಮಾರಾಮಾ ಮಹಾತ್ಮಾ ನ ಸ್ತೇ ಮಹಾಪದ ಮಾಗತಾಃ ॥
ಅಪ್ರಾಪ್ತಂ ಹಿ ಪರಿತ್ಯಜ್ಯ, ಸಂಪ್ರಾಪ್ತೇ ಸಮತಾಂ ಗತಾಃ ।
ಅದೃಷ್ಟ ಖೇದಾ ಖೇದೋಯ ಸ ತುಷ್ಟ ಇತಿ ಕಥ್ಯತೇ ॥
ನಾಭಿನಂದತ್ಯ ಸಂಪ್ರಾಪ್ತಂ ಭುಂಕ್ತೇ ಯಥೇಪ್ಸಿತಂ ।
ಯಸ್ಸ ಸೌಮ್ಯ ಸಮಾಚಾರ ಸತುಷ್ಟ ಇತಿ ಕಥ್ಯತೆ ॥"

ಅಪ್ರಾಪ್ತವಾದುದನ್ನು ಬಿಟ್ಟು, ಸಂಪ್ರಾಪ್ತವಾದುದನ್ನು ಅನುಭವಿಸುತ್ತಾ ಅದರಲ್ಲೂ ಅಭಿನಂದನವಿಲ್ಲದೆ, ಏನು ದೊರಕಿದುದನ್ನೂಟ ಮಾಡಿ, ಸೌಮ್ಯ, ಸದಾಚಾರದಲ್ಲಿರುವವನು ತುಷ್ಟನೆನ್ನುವರು. ಸಂತೋಷವೆಂಬ ಅಮೃತಪಾನಮಾಡಿ ಶಾಂತನಾಗಿ ತೃಪ್ತಿಹೊಂದಿ ಆತ್ಮಾರಾಮನಾಗಿ, ಮಹಾಪದವಿಯಲ್ಲಿರುವನು.

೪ನೇ ಅಧ್ಯಾಯ ೨೨ನೇ ಶ್ಲೋ "ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ಸಮಃ ಸಿದ್ಧಾವಸಿದ್ಧೌ ಚ" ೬ನೇ ಅಧ್ಯಾಯ

೭ ನೇ ಶ್ಲೋ "ಪರಮಾತ್ಮಾ ಸಮಾಹಿತಃ | ಶೀತೋಷ್ಣ ಸುಖದುಃಖೇಷು ತಥಾಮಾನಾಪಮಾನಯೋಃ" ಎಲ್ಲಾ ಈ ಶಾಂತಾತೀತನ ವರ್ಣನೆಯೇ. ಅವನನ್ನೇ ಭಗವಂತ ಪ್ರೀತಿಸುವುದು.

ಈ ಸಮತ್ವ, ಹಿಗ್ಗುವುದು ಕುಗ್ಗುವುದಿಲ್ಲದ, ದ್ವಂದ್ವಾತೀತನಾಗಿ ಸಮಭಾವನೆಯಲ್ಲಿರುವುದು ಮನಸ್ಸಿಗೆ ನೆಮ್ಮದಿಯನ್ನು ತರುತ್ತದೆ. ಇದು ಎಲ್ಲರಲ್ಲಿಯೂ ಪರಮಾತ್ಮ ದರ್ಶನವಾಗಿ, ಎಲ್ಲೆಲ್ಲಿಯೂ ಪರಮಾತ್ಮನನ್ನು ಕಂಡವನಿಗೆ ಮಾತ್ರವೇ ದೊರಕುವ ಸ್ಥಿತಿ. ಸಂಗವರ್ಜಿತನಾದರೇ ಈ ಭಾವ ಬರುವುದು. ಶತ್ರುಮಿತ್ರರಲ್ಲಿ ಸಮಭಾವನೆ, ಜನಗಳಲ್ಲೆಲ್ಲಾ ಸಮತ್ವ ತೋರಲೂ, ಮಾನಾಪಮಾನದಲ್ಲಿ ಸಮಭಾವನೆ, ಮನಸ್ಸಿನ ಸಮತೂಕತೋರಲೂ, ಶೀತೋಷ್ಣ, ಸುಖದುಃಖ ಸಮಭಾವನೆ, ದೇಹದ ಮತ್ತು ಬುದ್ಧಿಯ ಸಮಭಾವ ತೋರಲೂ, ತಾನು ಮಾಡುವುದರಲ್ಲೆಲ್ಲಾ ಬಂಧನವೇ ಇಲ್ಲದಿರುವುದೂ ವೈರಾಗ್ಯದ ಪರಮಾವಧಿಯಾಗಿ ಹೇಳಿದ್ದಾನೆ, ೨ನೇ ಅಧ್ಯಾಯದಲ್ಲಿ ತನ್ನ ಬೋಧಾಮೃತವನ್ನು ಶುರುಮಾಡುತ್ತಲೇ ೧೫ನೇ ಶ್ಲೋಕದಲ್ಲಿ ಸ್ವಾಮಿ ಯಾರು "ಸೋಽಮೃತತ್ವಾಯ ಕಲ್ಪತೇ" ಅಮೃತವನ್ನು (ಮೋಕ್ಷವನ್ನು) ಕಲ್ಪಿಸಿ ಕೊಳ್ಳುವರು ಎನ್ನುವುದಕ್ಕೆ "ಸಮದುಃಖಸುಖಂ ಧೀರಂ" ಸುಖದುಃಖಗಳಲ್ಲಿ ಸಮನಾಗಿರಬಲ್ಲ ಧೀರನು ಯಾವಪುರುಷರ್ಷಭನಿಗೆ "ಯಂ ಹಿ ನ ವ್ಯಥಯಂತ್ಯೇತೇ" ಹಿಂದಿನ ೧೪ನೇ ಶ್ಲೋಕದಲ್ಲಿ ಹೇಳಿದ ವಿಷಯ ಸಂಬಂಧದಿಂದಾದ "ಶೀತೋಷ್ಣ ಸುಖದುಃಖದಾಃ" ದ್ವಂದ್ವಗಳನ್ನು ತಡೆದು ವ್ಯಥೆಪಡುವುದಿಲ್ಲವೋ ಆ ಉತ್ತಮ ಪುರುಷನೇ ಎಂದು ಸಾರಿದ್ದಾರೆ.

ಅನಿಕೇತಃದಲ್ಲಿ ಒಂದು ತತ್ವವಿದೆ. ನಿವಾಸವು ಶ್ರೀನಿರಂಥಾಮವಾಗಿರಬೇಕೇ ಹೊರತು, ಜೀವನವು ವಿಶಾಲಾಕಾಶದಲ್ಲಿರಬೇಕೇ ಹೊರತು ತನಗಾಗಿ ಒಂದು ನಿಕೇತವನ್ನು ಕಲ್ಪಿಸಿಕೊಳ್ಳುವವನು, ತಾನು, ತನ್ನದು, ತನ್ನ ರಕ್ಷಣೆ ಭಾವದಲ್ಲೇ ಮುಳುಗಿದ್ದಾನೆ. ವೈಟ್‌ಫೀಲ್ಡ್ ಎಂಬ ತತ್ವಜ್ಞನು-" when Thou seest me in danger of nestling, in pity put a thorn in my nest to prevent me from it" White-feild,—ನಾನು ಗೂಡುಮಾಡಿಕೊಳ್ಳುವದುರಂತ ನಿನಗೆ ಕಂಡು

ಬಂದರೆ, ದೇವಾ, ನೀಗೂಡಿನೊಳಗೆ ಒಂದು ಮುಳ್ಳನಿರಿಸಿ, ನನಗದನ್ನು ತಪ್ಪಿಸು-ಎಂದು ಪ್ರಾರ್ಥಿಸಿದ್ದಾನೆ. ಒಂದು ಮನೆ ಮಾಡಿಕೊಂಡರೆ, ಅದರಲ್ಲಿ ವ್ಯಾಮೋಹದ ಕೇಂದ್ರ ಸ್ಥಾಪಿಸಿದಂತೆ. ಮನೆಗೆ ಸಾಮಾನು ಸರಂಜಾಮು, ಗೃಹಕ್ಕೆ ಗೃಹಿಣಿ, ಗೃಹಿಣಿಗೆ ಮಕ್ಕಳು ಮರಿ, ಬಂದುಹೋಗುವ ನೆಂಟರಿಷ್ಟರು ಎಲ್ಲಾ ಪರಂಪರೆಗಳ ಕಷ್ಟ ವ್ಯಸನವು ಆರಂಭಿಸುವುದು. ಒಂದು ಹಕ್ಕಿ ಗೂಡು ಕಟ್ಟಲು ಮನಮಾಡುವುದು ಮಕ್ಕಳು ಮರಿಗಾಗಿ, ಸಂಸಾರಕ್ಕಾಗಿ. ಅಂತೆ ಮಾನವನು ಒಂದು ಮನೆ ಕಟ್ಟಿಕೊಂಡರೆ, ಸಂಸಾರಕಟ್ಟಿಕೊಳ್ಳುವ ಯೋಚನೆಯಿಂದಲೇ ತಾನು, ತನ್ನದು, ಸುಖವಾಗಿ ಪ್ರತ್ಯೇಕವಾಗಿ, ಏಕಾಂತವಾಗಿ ಸ್ವೇಚ್ಛೆಯಾಗಿರಲು ಸ್ಥಳಮಾಡಿಕೊಳ್ಳಲೇ ಜಾಗ ಅದು. ಆದರಿಂದಲೇ 'ಗೃಹ'ದಿಂದಲೇ ಒಂದಾ ಶ್ರಮ ಶುರುವಾಗಿ 'ಗೃಹಸ್ಥ'ನಾಗುತ್ತಾನೆ. ಗೃಹಸ್ಥನಾದ ಮೇಲೆ ಅದರ ಧರ್ಮಗಳನ್ನು ಕಾಪಾಡಲೆ,ಬೇಕಾಗಿ ಆ ಹೊರೆ ತಲೆಯಮೇಲೆ ಬೀಳು ತ್ತದೆ. ಒಂದಕ್ಕೊಂದು ಜೋಡಿ ಹೆಣೆದುಕೊಂಡು ಅಗಾಧನಾದ ಭಾರ ಹೊತ್ತಂತೆಯೇ. "ಇದ್ದವನಿಗೊಂದು ಮನೆ; ಇಲ್ಲದವನಿಗೆ ಊರೆಲ್ಲಾ ಮನೆ" ಎನ್ನುವ ಗಾದೆಯಂತೆ ತನ್ನದೆಂದು ಒಂದು ಮನೆ ಮಾಡಿ ಕೊಂಡಿಲ್ಲದಿದ್ದರೆ, ತನ್ನ ಜೈತನ್ಯಕ್ಕೆ, ಅನುಕೂಲಕ್ಕೆ ತಕ್ಕಂತೆ ಒಂದು ಬಾಡಿಗೆ ಮನೆ ಮಾಡಿಕೊಂಡಿರುತ್ತಾನೆ. ಅದರ ಅಸ್ಥಿರತೆಯಿಂದ ಅದರಲ್ಲಿ ಮಮತೆ ಕಮ್ಮಿ. ಯಾವಾಗ ದಗಲ್ಬಾಟ್ಟೆಯೋ ಎಂಬ ಭಯ, ನನ್ನದಲ್ಲದ ಮನೆಗೆ ಏಕೆ ಹೆಚ್ಚು ಶ್ರಮವಹಿಸಿ ಸಿಂಗರಿಸಬೇಕೆಂಬ ಉದಾಸೀನ. ಹೇಗೋ ಹಾಗೆ ಈ ಕ್ಷಣಿಕಜೀವನ ಕಾಲಹಾಕಬೇಕು.

ಶ್ರೀ ಶಂಕರರು "ಅನಿಕೇತ"ವೆಂದರೆ "ನಿವಾಸೋನಿಯತೋ ನವಿದ್ಯತೇ ನಗಾರ ಇತ್ಯಾದಿ ಸ್ಮೃತ್ಯಂತರಾತ್" ಎಂದು ಭಾಷ್ಯಮಾಡಿದ್ದಾರೆ—ನಿಯತವಾದ ನಿವಾಸ ತಿಳಿಯದವ, ಸ್ಮೃತಿಗಳಲ್ಲಿ "ನಗಾರ" ಎಂದು ಹೇಳಿರುವಂತೆ. "ನಾಗಾರೇ, ನಾಸನೇ ನಾಸ್ನೇ ಯಸ್ಯಾಸ್ತೈ ಮೋಕ್ಷ ವಿತ್ತುನಃ" ಮೋಕ್ಷ ಪಡೆವವನಿಗೆ ಪರಂಧಾಮವೇ ಧಾಮ. ದಿಗಂಬರವೇ ವಿಶಾಲವಾದ ವಾಸಸ್ಥಾನ. "ನಗರ"ವಾಸಿಯಾದರೂ ಭಕ್ತ "ನಗಾರ" ನಾಗಬೇಕು. ಮನೆಗಳ ಸಮೋದದಲ್ಲಿ ಮನೆಯಿಲ್ಲದವನಾಗಬೇಕು.

ನಗರದಲ್ಲಿನ “ ಗಾರ ”ದ ವ್ಯಾಮೋಹ ತಪ್ಪಿಸಲೇ, ಗೃಹಸ್ಥಾಶ್ರಮದಿಂದ ವಾನಪ್ರಸ್ಥಾಶ್ರಮಕ್ಕೆ ಹೋದಾಗ ಮನೆ ಬಿಟ್ಟು ವನಕ್ಕೆ ಹೋಗಬೇಕೆಂಬ ನಿಯಮ. “ ಗಾರ ”ವು ನಾಲ್ಕು ಗಾರೆ ಗೋಡೆಗಳ ಮಧ್ಯೆ ಬಂಧಿಸುತ್ತದೆ. ನಾನು ತನ್ನದೆಂಬ ನಾಲ್ಕು ಗೋಡೆಗಳ ಬಂಧನದ ಜೊತೆಗೆ ಕಣ್ಣಿಗೆ ಕಟ್ಟಿದ, ಕಲ್ಲು ಇಟಿಕೆಯಿಂದ ಕಟ್ಟಿದ, ಆವರಿಸಿಕೊಂಡಿರುವ ಈ ಸುತ್ತು ಕಟ್ಟಿರುವ ಕೋಟೆಯೊಳಗೆ ಬಂಧನಗೃಹದಿಂದ ವನಕ್ಕೆ ತೆರಳಬೇಕು.

ನನ್ನದು ಮನೆ ಎನ್ನುವುದರ ಮಮತೆ ಬಹಳ ಬೇರೂರುತ್ತದೆ. ಒಂದರಮನೆ ಹೊರಬಾಗಿಲಿನ ಜಗಲಿಯಲ್ಲಿ ಒಬ್ಬ ಫಕೀರನು ಝೂಂಡಾ ಹಾಕಿ ಕುಳಿತುಬಿಟ್ಟನು. ಸೇವಕರು ಹೊರಡಿಸಿದರೂ ಹೋಗದ ಭಂಡನ ವಿಷಯ ರಾಜನವರೆಗೂ ದೂರು ಹೋಯಿತು. ದಿನಾ ಹೊರಗೆ ಹೋಗುವಾಗ ಇವನು ಅಲ್ಲಿ ಕೆಲವು ದಿನದಿಂದ ಇರುತ್ತಿದ್ದುದು ನವಾಬ ನೋಡಿದ್ದ. ತಾನೇ ದೂಡಲು ಅಪ್ಪಣೆ ಮಾಡಿದ್ದ. ಯಾಕೆ ಹೋಗೋದಿಲ್ಲ ವಿಚಾರಿಸೋಣ ಯಾರದು? ಎಂದು ಫಕೀರನನ್ನು ನವಾಬನು ಎದುರಿಗೆ ಬರಮಾಡಿಕೊಂಡ. ಫಕೀರ ಕೇಳಿದ, “ಯಾರು ವಾಸನಾಗಿದ್ದಾರೆ ಈ ಅರಮನೆಯಲ್ಲಿ ?” ನವಾಬ : “ ನಾನು ”. ಫ : “ಮೊದಲಿನಿಂದಲೂ ನೀವೇ ಇದ್ದೀರೋ ಮುಂಚೆ ಯಾರಾದರೂ ಇದ್ದರೋ ?” ನ : “ನಮ್ಮ ತಂದೆಯವರಿದ್ದರು ನನ್ನ ಮುಂಚೆ.” ಫ: “ಅವರ ಹಿಂದೆ ?” ನ : “ನಮ್ಮ ತಾತ ಇದ್ದರು ” ಫ: “ಅವರೆಲ್ಲಿ ?” ನ : “ ಸತ್ತುಹೋದರು ” ಫ: “ಸತ್ತುಹೋದವರು ಇದನ್ನು ತೆಗೆದುಕೊಂಡು ಹೋಗಲಿಲ್ಲವೆ ಜೊತೆಗೆ” ನವಾಬನು ನಕ್ಕನು. ಫಕೀರ “ಅವರು ಕೆಲವು ವರ್ಷವಿದ್ದು ಬಿಟ್ಟು ಹೋದರು. ನೀವೂ ಕೆಲವು ವರ್ಷವಿದ್ದು ಬಿಟ್ಟು ಹೋಗುತ್ತೀರಿ. ನಾನೂ ಒಂದೆರಡು ದಿನವಿದ್ದು, ಇಕೋ ಹೋಗುತ್ತೇನೆ. ಯಾರೂ ಇದನ್ನು ಜೊತೆಗೆ ತೆಗೆದುಕೊಂಡು ಹೋಗುವುದಿಲ್ಲಾ, ಭಯ ಬೀಳಬೇಡಿ.” ನವಾಬ : “ಎಷ್ಟು ಮಾತನಾಡುತ್ತಿ.” ಫ : “ನೀನು ವಾಸಿಸುವ ನಿನ್ನ ದೇಹವನ್ನೇ ನಿನ್ನದೆಂದು ಸದಾ ಕಚ್ಚಿಕೊಂಡಿರುವುದನ್ನೇ ನೀ ಬಿಟ್ಟು ಹೋಗಬೇಕಾದಾಗ, ಈ ಮಣ್ಣು ಕಲ್ಲಿನ ಮನೆಯೇನು ನಿನಗೆ ಸ್ಥಿರ. ಇದೂ ಸ್ಥಿರವಲ್ಲಾ ಯಾರಿಗೂ, ದೇಹವೂ ಸ್ಥಿರವಲ್ಲಾ ಇದೋ ಹೊರಟೆ ”

ಎನ್ನುತ್ತಾ ನಿಂತಂತೆಯೇ ನಡೆದೇ ಬಿಟ್ಟನು. ನವಾಬನಿಗೆ ಎಚ್ಚರವಾಗಿ ಅವನೆಲ್ಲೆಂದು ಹುಡುಕಿ ಕರೆತನ್ನಿರೆಂದರೂ ಅವ ಸಿಕ್ಕಲೇ ಇಲ್ಲವಂತೆ. ಜೀವನಿಗೆ ಈ ದೇಹವೊಂದು ವಾಸಿಸುವ ಮನೆ, ಈ ದೇಹಕ್ಕೆ ಕಟ್ಟಿಕೊಂಡಿರುವ ನಮ್ಮ ವಾಸದಮನೆ. ಎರಡೂ ಸ್ಥಿರವಿಲ್ಲಾ ಎನ್ನುವ ಜ್ಞಾನ ಬಂದರೆ "ಸ್ಥಿರಮತಿ"ಯಾದ.

ಆ ಸ್ಥಿರ ಬುದ್ಧಿಯು ಬಂದರೆ ಪ್ರಪಂಚಗಳ್ಯಾವುವೂ ಅಲ್ಲಾಡಿಸಲಾರವು. ನಿಂದಿನಲೀ, ಸ್ತುತಿನಲೀ ಒಂದೇ. ನಿಂದಿಸಿದವರನ್ನು ದ್ವೇಷಿಸುವುದಿಲ್ಲಾ; ಸ್ತುತಿಸಿದವರಿಗೆ ವಂದಿಸುವುದಿಲ್ಲಾ ಮೌನವಾಗಿಯೇ ಇರುವನು. ಮೌನ ಧ್ಯಾನದಲ್ಲಿ ಸದಾ ಭಗವದ್ಭಕ್ತನಿರತನಾಗಿ, ಸ್ವಾಮಿಗೆ ಅತ್ಯಂತ ಪ್ರಿಯನಾಗಿರುವನು.

**ಯೇ ತು ಧರ್ಮ್ಯಾಮೃತಮಿದಂ । ಯಥೋಕ್ತಂ ಪರ್ಯುಪಾಸತೇ ।**
**ಶ್ರದ್ದಧಾನಾ ಮತ್ಪರಮಾ । ಭಕ್ತಾಸ್ತೇಽತೀವ ಮೇ ಪ್ರಿಯಾಃ ॥೨೦॥**

ಯಾರು ಈ ಧರ್ಮಾಮೃತವನ್ನು ಹೇಳಿದ ಪ್ರಕಾರ (ಯಥೋಕ್ತಂ) ಅನುಸರಿಸಿ ಉಪಾಸನೆ ಮಾಡುತ್ತಾರೋ, ಶ್ರದ್ಧಾಯುಕ್ತರಾದ ನನ್ನ ಪರಮಭಕ್ತರು ನನಗೆ ಅತ್ಯಂತ ಪ್ರಿಯರು.

ನಾರದರು ಭಕ್ತಿಸೂತ್ರದಲ್ಲಿ (ಸೂ. ೩) "ಅಮೃತ ಸ್ವರೂಪಾ ಚ" ಎಂದು ಪರಪ್ರೇಮ ಸ್ವರೂಪವಾದ ಭಕ್ತಿಯನ್ನು ವ್ಯಾಖ್ಯಿಸಿದ್ದಾರೆ. ಇದು ಮಾನವನ ಧರ್ಮಗಳಲ್ಲೆಲ್ಲಾ ಧರ್ಮಾಮೃತವು. ಅಮೃತಶಬ್ದಕ್ಕೆ ಎಷ್ಟೋ ಅರ್ಥವುಂಟು.

೧) ಮೃತವಿಲ್ಲದ್ದು ಅಮೃತ. ಈ ಸ್ಥಿತಿಯು ಒಂದಾವರ್ತಿ ಹೊಂದಿದ ಮೇಲೆ ಸ್ಥಿರವಾಗಿ ನಿಲ್ಲುತ್ತೆ. ಭಗವದ್ಭಕ್ತಿಯು ಯಾವಾಗಲೂ ಇರುವಂಥಾದ್ದು. ಭಕ್ತನಿಗೆ ಸದಾ ಭಗವಂತನ ಸಾನಿಧ್ಯ. ಪರಮಭಕ್ತನು ಚಿರಂಜೀವಿ.

೨) ಅಮೃತವೆಂದರೆ ಆನಂದ ಮಧು. ಅದು ಕೊನೆಯಿಲ್ಲದ ಆನಂದ ಸವಿ. ತಮಿಳಿನಲ್ಲಿ 'ಅರಾವ ಮುದ'ವೆನ್ನುತ್ತಾರಲ್ಲಾ–'Nectar endless' ಅದು. ಇದನ್ನು 'ಆಳ್ವಾರ್'ಗಳು ಪೂರ್ಣವಾಗಿ ಅನುಭವಿಸುತ್ತಿದ್ದರು.

ಆಳ್ವಾರೆಂದರೇ ಆನಂದದಲ್ಲಿ ಮುಳುಗಿರುವವರು. ಪರಾಶರಭಟ್ಟನು "ಪರಮ ಪ್ರೇಮ (ಭಕ್ತಿ) ಮತ್ತು ಆನಂದ ಒಂದೇ ನತ್ಯಾರ್ಥ" ಎಂದಿದ್ದಾನೆ. "ಆನಂದದ ಕೈವಲ್ಯಪಡೆದ ಮೇಲೂ, ಪರಮ ಪ್ರೇಮಾನುಸರಣೆ (ಭಕ್ತಿ ಮಾರ್ಗ) ಯಲ್ಲಿದ್ದರೆ, ಆ ಆನಂದ ಇಮ್ಮಡಿಯಾಗುವುದು" ಎಂದು ಲೋಕಾಚಾರ್ಯರು ಅಪ್ಪಣೆಕೊಡಿಸಿದ್ದಾರೆ. "ಭಕ್ತಿಯು ಮಾನವನ ಸರ್ವ ಪ್ರಯತ್ನದ ಅಂತಿಮ ಧ್ಯೇಯ, ಅನದಳ ಅಚ್ಚ ಆನಂದ" ಎಂದು ಭಕ್ತಿ ರಸಾಯನ ಪ್ರಾರಂಭವಾಗಿದೆ. ನನ್ನ ಭಕ್ತಾಮೃತವನ್ನು ನಿನಗರ್ಪಿಸುತ್ತೇನೆ. ಅದನ್ನು ಯಾವ ಮಾನವನು ಭಕ್ತನಿಂದ ಬೇರೆ ಮಾಡಲಾರರು ಎಂದು ಅರ್ಥಬರುವಂತೆ ತಾಯಿ ಮುಸ್ಕಾರರೂ, ಯೇಸುವೂ, (My joy I give unto you and your joy no man taketh from you) ಹೇಳಿರುವರು. ನಾರಾಯಣಭಟ್ಟರು ನಾರಾಯಣೀಯದಲ್ಲಿ "ಭಕ್ತಿಯು ಆದಿಯಲ್ಲಿ ಮಧುರ, ಮಧ್ಯೆದಲ್ಲಿ ಮಧುರ, ಕೊನೆಯಲ್ಲಿ ಅಂತ್ಯಂತ ಮಧುರ, ಕೈವಲ್ಯ ಧಾಮ" ಎಂದಿದ್ದಾರೆ. ಎಷ್ಟೇ ದೈನ್ಯದಿಂದ ಸ್ವಲ್ಪವಾಗಿ ಶುರುವಾದರೂ ಭಕ್ತಿಯು ಅಲ್ಪವಲ್ಲಾ. ಭಕ್ತಿ ಉದ್ಭವವಾಗುತ್ತಲೇ ಆನಂದ ಬೀರಲು ಶುರುವಾಗುತ್ತದೆ. ಬೆಳೆಯುತ, ಕೊನೆಯಲ್ಲಿ ದೇವಪಾದಾರವಿಂದದಲ್ಲಿ ಸೇರುತ್ತಾ ಅತಿಮಧುರ. ಎಮರಸನ್ನನು "ಪ್ರತಿ ಸಿಹಿಯಲ್ಲಿ ಕೊಂಚ ಕಹಿಯುಂಟು ಆದರೆ ಈ ಭಕ್ತಾಮೃತ ತಿಳಿವಿನಲ್ಲಿ ಅದರ ಸೊಂಕೇ ಇಲ್ಲಾ" ಎಂದು (Unadulterated unalloyed bliss) ವಿವರಿಸಿದ್ದಾರೆ.

೩) ಅಮೃತವೆಂದರೆ ಮೋಕ್ಷ. ಇಹತಾಪತ್ರಯವೆಲ್ಲಾ ದಾಟಿದುದು ಅಮೃತ (ಇರುವ ಮೃತಸ್ವಭಾವ ನಾಶ); ಅಥವಾ ಕೈವಲ್ಯಾನಂದ ಪಡೆವಿಕೆ ಎಂದು ಎರಡುಭಾವವಾಗಿ ಗ್ರಹಿಸಿದ್ದಾರೆ.

ಕಠೋಪನಿಷತ್ತಿನ ಪ್ರಸಿದ್ಧ ಮಂತ್ರಗಳೆರಡರಲ್ಲಿ ಹೇಳುವಂತೆ "ಅಥ ಮರ್ತ್ಯೋಽಮೃತೋ ಭವತಿ" ಎನ್ನುವಂತೆ–"ತತ್ರಬ್ರಹ್ಮ ಸಮಶ್ನುತ್ತೆ" ಆಗಲೆ ಬ್ರಹ್ಮ ಸಮಾನನಾಗುತ್ತಾನೆ. ಪುರುಷಸೂಕ್ತದ "ತಮೇವಂ ವಿದ್ವಾ ನಮೃತ ಇಹ ಭವತಿ" ಬೃಹದಾರಣ್ಯದ "ಅತ್ರ ಬ್ರಹ್ಮ ಸಮಶ್ನುತೇ" ತಾತ್ಪರ್ಯವೂ ಇದೇ.

೪) ಅಮೃತವೆಂದರೆ–ಅಯಾಚಿತಯೋಗ್ಯ ಕೇವಲವರ. ಭಕ್ತನು ಭಗವದ್ಭಕ್ತಿ ಭಾಗ್ಯಾನುಭವಿಸುವುದಕ್ಕಾಗಿಯೇ ಜೀವಿಸಿದ್ದಾನು. ಇನ್ನೇನು ಮುಕ್ತಿಯನ್ನೂ ಅಪೇಕ್ಷಿಸುವುದಿಲ್ಲಾ. ಆದರೂ ದೇವನು ತನ್ನ ಮಿತ ಕರುಣೆಯಲ್ಲಿ ತಾನಾಗಿ ಭಕ್ತನಿಗೆ ಮುಕ್ತಿ ಪಾಲಿಸುವನು. ಆ ಭಕ್ತನು ಜೀವಿತದಲ್ಲೇ ಜೀವನ್ಮುಕ್ತ. "ಯಮೇವೈಷ ವೃಣುತೇ ತೇನ ಲಭ್ಯಃ" ತಾನೇತಾನಾಗಿ ಕರುಣಿಸಿ ಆರಿಸಿದವನಿಗೇ ಅದು ಲಭ್ಯವೆಂದು ಕಠೋಪ ನಿಷತ್ತು ಸಾರಿದೆ.

೫) ಅಮೃತವೆಂದರೆ ಯಜ್ಞಶೇಷ (Result of sacrifice) ದೇವನ ಕರುಣೆಯು ಪ್ರಾಪ್ತವಾಗಿ, ಅಮೃತತ್ವವು, ದೇವತಾ ಪ್ರೀತ್ಯರ್ಥವಾಗಿ, ಪರಾರ್ಥ ಸತ್ಕರ್ಮಾಚರಣೆ ಮಾಡಿದರೇ ಲಭಿಸುವುದು, ಭಕ್ತನಾದವನು ಯಾವಾಗ ಸತತ–ಸರ್ವರಲ್ಲೂ ಅಂತರ್ಗತನಾದ ತನ್ನ ಸ್ವಾಮಿಯನ್ನು ಪ್ರತಿಫಲಾಪೇಕ್ಷೆಯಿಲ್ಲದೆ,–ದೇವ ದಲಿತರ ಸೇವಾನಿರತನಾಗಿರುತ್ತಾನೋ ಆಗ ಆ ಸೇವಾ ಫಲವಾಗಿ ಅಮೃತ ಕೈವಲ್ಯವನ್ನು ಸ್ವಾಮಿ ಪಾಲಿಸುವನು. ಈ ಅಮೃತವು, ಅಮರತ್ವ, ಆನಂದ, ಸ್ವತಂತ್ರ (ಬಿಡುಗಡೆ) ಭಕ್ತಿಯ ಫಲ, ಭಕ್ತಿ ನಿರತ ಶ್ರದ್ಧೆ ದೇವನ ಅಮಿತ ಕರುಣೆ ಹೊಂದುವ ಮಾರ್ಗ. ಈ ಇಷ್ಟು ಅರ್ಥವನ್ನು ಸ್ವಾಮಿ ಮಾನವನ ಧರ್ಮಗಳಲ್ಲಿ ಅಮೃತ ಪ್ರಾಯವಾದ ಈ ಭಕ್ತಿಗೆ "ಧರ್ಮ್ಯಾಮೃತ ಮಿದಂ" ಎನ್ನುವ ಪದದಲ್ಲಿ ತುಂಬಿದ್ದಾನೆ. ಇದರ ವಿವೇಚನೆ ಬಂದರೆ ಯಥೋಕ್ತವಾಗಿ ಶ್ರದ್ಧೆಯಿಂದ ಉಪಾಸನೆಮಾಡಲು ಸಾಧ್ಯ.

"ಅದ್ವೇಷ್ಟಾ" (ಶ್ಲೋ ೧೩) ದಿಂದ ಶುರುಮಾಡಿ ಇಲ್ಲಿಯವರೆಗೂ ಹೇಳಿಕೊಂಡು ಬಂದಿರುವುದೇ–ಯಥೋಕ್ತ. ಸರ್ವಭೂತಗಳಲ್ಲಿ ದ್ವೇಷ ವಿಲ್ಲದಂತೆ ಮೊದಲುಮಾಡಿ ಸ್ಥಿರಮತಿಯ ವರೆಗೆ ಹೇಳಿರುವ ಸಾಧನ ಗಳನ್ನು–ಪರ್ಯುಪಾಸತೇ–ಶ್ರದ್ಧೆಯಿಂದ ಅನುಷ್ಠಾನಮಾಡುವುದೇ ಅವನ ಉಪಾಸನೆ. ಈ ಧರ್ಮವೇ "ಅಮೃತತ್ವಕ್ಕೆ ಹೇತು–ಕಾರಣ ಎಂದಿದ್ದಾರೆ ಶಂಕರರು.

"ಮತ್ಪರಂ" ಎನ್ನುವುದನ್ನು ೧೧ ನೇ ಅಧ್ಯಾಯದ ಕೊನೇ ಶ್ಲೋಕ ದಲ್ಲೂ ಹೇಳಿ ಉಪಾಸನೆಯಲ್ಲಿ ಭಗವತ್ ಪರಚಿಂತನವು ಸರ್ವಶ್ರೇಷ್ಠ

ಭಾವದ ಮುಖ್ಯತ್ವ ತೋರಲು ೯ ನೇ ಅಧ್ಯಾಯದ ಕೊನೇ ಶ್ಲೋಕದಲ್ಲೂ "ಮನ್ಮನಾಭವ.......ಮತ್ಪರಾಯಣಃ" ಎಂದೂ ೮ ನೇ ಅಧ್ಯಾಯದ ಕೊನೆಯಲ್ಲಿ ಶ್ಲೋಕದ 'ಇದಂ ವಿದಿತ್ವಾಯೋಗೀ ಪರಂಸ್ಥಾನ ಮುಪೈತಿಚಾದ್ಯಂ' ಎಂದೂ, ೭ ನೇ ಅಧ್ಯಾಯದ ಕೊನೆಯ ಶ್ಲೋಕದಲ್ಲಿ "ಮಾಂತೇ ವಿದುರ್ಯುಕ್ತ ಚೇತಸಃ" ಎಂದೂ, ಈ ಉಪಾಸನಾ ಕಾಂಡದ ಅಧ್ಯಾಯದ ಕೊನೆಯಲ್ಲೆಲ್ಲಾ ಹೇಗೆ ಪರಮಾತ್ಮನು ಅವನೊಡನೆ ಚೇತಸ್ಸನ್ನೆಲ್ಲಾ ಸೇರಿಸಿ, (Heart Union) ಪರಂಧಾಮೈಕ್ಯನಾಗುವ ಭಾವವನ್ನು ಒತ್ತಿ ಹೇಳಿದ್ದಾನೆ. ಇದೇ ಉಪಾಸನಾ ತತ್ವಾರ್ಥ.

ಜ್ಞಾನಿಯೂ, ಕರ್ಮಿಯೂ ಗಂಡಸಿನಂತೆ, ಭಕ್ತನು ಹೆಂಗಸಿನಂತೆ, ಮಿತ್ರ ಬಂಧುಗಳ ಮನೆಗೆ ಹೋದರೆ ಗಂಡಸು ಹೊರಾಂಗಣದಲ್ಲೇ, ಬೈಟಕ್ಕು ಖಾನೆಯವರೆಗೇ ಪ್ರವೇಶಿಸಬಹುದು. ಹೆಂಗಸಾದರೆ ಊಟದ ಮನೆ, ಅಡಿಗೆ ಮನೆ, ಅಂತರಾಂಗಣಕ್ಕೆಲ್ಲಾ ಸಲೀಸಾಗಿ ಮಾತನಾಡಿಸಿಕೊಂಡು ಹೋಗಿಬಿಡುವಳು. ಜ್ಞಾನಿ ಕರ್ಮಿಗಳಿಗೆ ತಡೆಯುಂಟು, ಭಕ್ತನು ಸೀದಾ ಸ್ವಾಮಿಯ ಪಾದ ಮೊರೆಹೊಕ್ಕು ಅಂತರ್ಗತನಾಗಿ ಬಿಡುವನು. ಇದು ನಡುವಳಿಕೆಯೋ ಇದು ಸಂಪ್ರದಾಯವೋ ಎಂದು ಯೋಚಿಸಿ ಇತ್ಯರ್ಥಮಾಡಿ ವ್ಯವಹಾರ ಮಾಡುವ ಕರ್ತೃ, ಜ್ಞಾನಿ. ಅವುಗಳ ತಡೆಯೇ ಇಲ್ಲದ ತಾಯಿಯ ಮಡಿಲು ಸೇರಿಬಿಡುವ ಮಗುವಿನಂತೆ ಒಂದಾಗಿಬಿಡುವನು ಸ್ವಾಮಿಯ ಶರಣುಹೋಗುವ ಭಕ್ತ. ಮಗುವು ತಾಯಿಯಲ್ಲಿ ಧಾವಿಸುವಂತೆ ಭಕ್ತಿಮಾರ್ಗ; ಮಗನು ತಂದೆಯ ಹತ್ತಿರಕ್ಕೆ ಹೋಗುವಂತೆ ಜ್ಞಾನಿಯ ಮಾರ್ಗ.

ಶ್ರೀಮದ್ಭಗವದ್ಗೀತೆ ಎನ್ನುವ
ಉಪನಿಷತ್ತಿನ, ಬ್ರಹ್ಮವಿದ್ಯೆಯ, ಯೋಗಶಾಸ್ತ್ರದ
ಶ್ರೀ ಕೃಷ್ಣಾರ್ಜುನ ಸಂವಾದದಲ್ಲಿ
ಭಕ್ತಿಯೋಗವೆನ್ನುವ ಹನ್ನೆರಡನೆಯ ಅಧ್ಯಾಯ ಸಮಾಪ್ತಿ

---

ಶ್ರೀ ಸತ್ಯನಾರಾಯಣ ಪ್ರೆಸ್, ಅರಳೇಪೇಟೆ, ಬೆಂಗಳೂರು-೨.

# ತಿದ್ದುಪಡಿ

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| ೫ | ೧೩ | ಪಿಂಡಾಡೋತ್ಸತ್ತಿ | ಪಿಂಡಾಂಡೋತ್ಪತ್ತಿ |
| ೬ | ೧೨ | ತಸ್ಮೈತಸ್ಮೈನಮೋ | ತಸ್ಮೈತಸ್ಯೈನಮೋ |
| ೧೪ | ೨ | ಧಾಮುವನ್ನೈದ | ಧಾಮುವನ್ನೈದಿದ |
| ೩೨ | ೧೮ | ಬಿಡುತ್ತಾ. | ಬಿಡುತ್ತಾನೆ. |
| ೪೯ | ೧೬ | ಪ್ರತಿಕ್ಷಣದಲ್ಲೂ | ಪ್ರತಿಕಣದಲ್ಲೂ |
| ೫೦ | ೪ | ಹೊಂದುವವನು | ಹೊಂದುವನು |
| ೫೩ | ೧೯,೩೦ | ಕಂಠದಲ್ಲಿ | ಕಠದಲ್ಲಿ |
| ೫೭ | ೧೧ | ಸಾಯುಬೇಕಲ್ಲಾ | ಸಾಯುಬೇಕೆಲ್ಲಾ |
| ೫೯ | ೮ | ಮುಂತಾದುವುಗಳು | ಮುಂತಾದವುಗಳು |
| ೭೮ | ೧೭ | ವಿಲ್ಲದಿದ್ದರೋ | ವಿಲ್ಲದಿದ್ದರೂ |
| ೮೦ | ೧೧ | ಮಾಡುತ್ತಿದ್ದವೆ | ಮಾಡುತ್ತಿದ್ದೇವೆ |
| ೮೧ | ೨೩ | ತೋರಿಸುವುದಲ್ಲ | ತೋರಿಸುವುದಿಲ್ಲ, |
| ೮೪ | ೧೪ | ಬಂದಧ್ಯಾನವೇ | ಒಂದಧ್ಯಾಯುವೇ |
| ೯೬ | ೯ | ಇವುಗಳೆಲ್ಲಮುದರಿಂದ | ಇವುಗಳೆಲ್ಲವುಗಳಿಂದ |
| ೯೬ | ೨೫ | ಕಾಮ್ಯಯು ಜ್ಞಾಗಳಿಂದ | ಕಾಮ್ಯಯಜ್ಞಯಾಗಾದಿಗಳಿಂದ |
| ೧೦೧ | ೬ | ಸೋವಿನ | ಗೋವಿನ |
| ೧೦೯ | ೨೨ | ಸದಾಚಾರಗಳನ್ನು | ಸದಾಚಾರಿಗಳನ್ನು |
| ೧೧೮ | ೧೫ | ಕೇಳುತ್ತಿರುವುದು | ಹೇಳುತ್ತಿರುವುದು |
| ,, | ೨೧ | ಕೇಳುವುದಿಲ್ಲವೇ | ಹೇಳುವುದಿಲ್ಲವೇ |
| ೧೩೨ | ೧೪ | ಅಚಿಂಧ್ಯೈಶ್ವರ್ಯ | ಅಚಿಂತೈತ್ವರ್ಯ |
| ೧೬೯ | ೪ | ಸೀತಾಮತೆ | ಸೀತಾಮಾತೆ |
| ,, | ೧೨ | ಪ್ರತಿರ್ವತಾ | ಪತಿವ್ರತಾ |
| ೧೭೨ | ೩ | ಸೃಷ್ಠಿ | ಸೃಷ್ಟಿ |
| ೧೭೩ | ೮ | ಪ್ರಧಾನ | ಪ್ರದಾನ |
| ೧೮೭ | ೧೩ | ಹೇಳಿದ | ಹೇಳದ |
| ೨೦೫ | ೨೨ | ಆಧಾತ್ಮ | ಆಧ್ಯಾತ್ಮ |

| ಪುಟ | ಪಂಙ್ತಿ | ತಪ್ಪು | ಸರಿ |
|---|---|---|---|
| ೨೦೬ | ೮ | ಪ್ರಫುಲ | ಪ್ರಫುಲ್ಲ |
| ೨೪೦ | ೨೧ | ದೀವ್ಯ | ದಿವ್ಯ |
| ೨೪೮ | ೨೩ | ಸಜ್ಞನ | ಸಜ್ಜನ |
| ೨೪೯ | ೧೨ | ಮುಕ್ಕರ್ಮ | ಮತ್ಕರ್ಮ |
| ,, | ೧೭ | ಫಲಾಪೀಕ್ಷೆರಹಿತ | ಫಲಾಪೇಕ್ಷಾರಹಿತ |
| ೨೩೮ | ೧೩ | ಕರಣಮಾಡಿರುವಷ್ಟೆ | ಕರಣಮಾಡಿರುವರಷ್ಟೆ |
| ೨೬೫ | ೧೬ | ನ್ನು ಪಾಸಸುವುದೇ, | ನ್ನು ಪಾಪಿಸುವನೇ |
| ೨೬೯ | ೨೬ | ಆ ಮಾಗದಲ್ಲಿ | ಆ ಮಾರ್ಗದಲ್ಲಿ |
| ೨೭೦ | ೪ | ಪತಿತೊಧಾರಿ | ಪತಿತೊದ್ಧಾರಿ |
| ,, | ೧೨ | ವಾನನಾದರೂ | ವಾನರನಾದರೂ |
| ೨೮೧ | ೨೬ | ಚಿತ್ತಂ | ಚಿತ್ತಂ |
| ೨೯೦ | ೧೮ | ನಿಜಾಂತರ್ಗತಿ | ನಿಜಾಂತರ್ಗತ |
| ೨೯೧ | ೯ | ಕರ್ಮ ಸಫಲ | ಕರ್ಮದ ಫಲ |
| ೨೯೬ | ೧೬ | ಮೈತೀಭಾವ | ಮೈತ್ರೀಭಾವ |
| ೨೯೭ | ೧೧ | ದೇಹವಿರವವರೆಗೂ | ದೇಹವಿರುವವರೆಗೂ |
| ೩೦೧ | ೧೭ | ಮಾಡುತ್ತಾರೇನ್ನುವರಿವು | ಮಾಡುತ್ತಾರೆನ್ನುವರಿವು |
| ೩೧೩ | ೫ | ಸಂತೋಷವೂ | ಸಂತೋಷವೂ |
| ೩೨೨ | ೬ | ತ್ಯಾಗಮಾಡೆಂದು | ತ್ಯಾಗಮಾಡಿಸೆಂದು |

ನಾರಾಯಣ ಸಾಹಿತ್ಯ'ದಲ್ಲಿನ ಲಘುರೂಪವಾದ "ಕಾಪಾಡಿದವರ್ಯಾರೂ, ಶಿವ್ನೂ, ಕಾರಾಗೃಹದ ನೆನಪುಗಳು" ಇವುಗಳಲ್ಲಿನ ಹರಟೆ ಹಾಸ್ಯರೂಪವಾದ ಕಥೆಗಳನ್ನು, ಓದುಗರನೇಕರು ಮೆಚ್ಚಿ ಹರ್ಷಿಸಿರುವರು.

ಇತರರು ಕೆಲವರು "ಪಾದುಕಾಪಹರಣ ಪಾದುಕಾ ಪ್ರಭಾವ, ಕೇಳದವರ" ಇವುಗಳಲ್ಲಿನ ಪೌರಾಣಿಕ ಚಿತ್ರಗಳು, ಕವನಗಳನ್ನೂ ಚಮತ್ಕಾರ ಸನ್ನಿವೇಶಗಳನ್ನೂ ಆದರಿಸಿ ಆನಂದಿಸಿರುವರು.

ಗೀತೆಯಲ್ಲಿ 'ಏನಿದೆ' ಯಂತೂ ಓದುಗರ ಉಪಯೋಗಕ್ಕಿಂತಾ ನನ್ನ ಸ್ವಂತ ಆತ್ಮಾರಾಮುಕ್ಕೆ ಜೀವನ ವಿರಾಮ ಸದ್ವಿನಿಯೋಗಕ್ಕೇ ಬರದೆನೆಂಬ ಭಾವನೆ.

ವಾಚಕ ಮಹಾಶಯ, ಇವುಗಳಲ್ಲಿ ನಿಮಗ್ಯಾವುದು ಮೆಚ್ಚಿಗೆಯದು ಹೇಳಿ—

ಸಿರಿಗನ್ನಡದಡಿ ಪಾಮರ ಉಪಾಸಕ

**ನಾರಾಯಣ**

# ನಾರಾಯಣ ಸಾಹಿತ್ಯ (ಸಿದ್ಧವಾಗಿವೆ)

| | | ರೂ. | ಅ. |
|---|---|---|---|
| ೧ | ಪಾದುಕಾ ಪ್ರಭಾವ (ಪೌರಾಣಿಕ ದೃಶ್ಯಗಳು, ಕವನಗಳು) | ೦ | ೮ |
| ೨ | ಕೇಳದವರ, (ಕವನಗಳು) | ೧ | ೦ |
| ೩ | ಕಾಪಾಡಿದವರ್‍ಯಾರು (ವಿನೋದ ವೃತ್ತಿ ಜೀವನದ ಕಥೆಗಳು) | ೧ | ೮ |
| ೪ | ಕಾರಾಗೃಹದ ನೆನಪುಗಳು (ಕಥೆಗಳು) | ೨ | ೦ |
| ೫ | ಪಾದುಕಾಪಹರಣ (ಪ್ರಬಂಧಗಳು, ಕವನಗಳು) | ೧ | ೦ |
| ೬ | ತಿಪ್ಪೂ (ವಿನೋದ ಹುಡುಗಾಟದ ಹರಟೆ) | ೧ | ೪ |
| ೭ | ಗೀತೆಯಲ್ಲಿ ಏನಿದೆ (ಕರ್ಮಕಾಂಡ) | ೨ | ೮ |
| ೮ | ಗೀತೆಯಲ್ಲಿ ಏನಿದೆ (ಉಪಾಸನಾಕಾಂಡ) | ೩ | ೦ |

ಅಚ್ಚಿಗೆ ಸಿದ್ಧವಾಗಿ, ಬರಲಿರುವವು—ಎದುರು ನೋಡಿ.......

೯ ಗೀತೆಯಲ್ಲಿ ಏನಿದೆ (ಜ್ಞಾನಕಾಂಡ)

೧೦ ನರಸು, ನರಸು (ನರ್ಸ್ ಜೀವನದ ನವೀನ ಕಾದಂಬರಿ)

ದೊರಕುವ ಸ್ಥಳ......

ವಿಚಾರ ಸಾಹಿತ್ಯ, ಬಳೇಪೇಟೆ, ಬೆಂಗಳೂರು ೨

ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು ೨

ಡಾ|| ಬಿ. ನಾರಾಯಣರಾವ್
೯೮, ಬಸವೇಶ್ವರಗುಡಿ ಬೀದಿ, ಬಸವನಗುಡಿ, ಬೆಂಗಳೂರು

ಉಷಾ ಪುಸ್ತಕ ಭಂಡಾರ, ಮೈಸೂರು

ಚೇತನ ಪುಸ್ತಕಾಲಯ, ಮೈಸೂರು

ಕಾವ್ಯಾಲಯ, ಮೈಸೂರು

ಇಂಡಿಯನ್ ಪ್ರೆಸ್, ಬೆಂಗಳೂರು ೨